# ಕರ್ನಾಟಕ ಸಾಮ್ರಾಜ್ಯ

ಸಂಪುಟ ೨



ಶ್ರೀ ವಿದ್ಯಾರಣ್ಯಮಹಾಸ್ವಾಮಿಗಳು

...ರ್ತೃ:—ರಾ. ಹ. ದೇಶಪಾಂಡೆ, ಎಂ.ಎ.

೧೯೨೯

ಶ್ರೀ ವಿದ್ಯಾರಣ್ಯ ಪುಸ್ತಕಮಾಲೆ ೬, ೭

# ಕರ್ನಾಟಕ ಸಾಮ್ರಾಜ್ಯ

## ಎರಡನೆಯ ಸಂಪುಟ

---

ಮುಂಬಯಿ ವಿಶ್ವವಿದ್ಯಾಲಯದ ಗೌರವ ಸಭಾಸದರಾದ
**ರಾಮಚಂದ್ರ ಹಣುಮಂತ ದೇಶಪಾಂಡೆ, ಎಂ.ಎ.**
ಯವರು ಬರೆದುದನ್ನು

ಶ್ರೀ ವಿದ್ಯಾರಣ್ಯ ಪ್ರಕಾಶಕ ಸಂಸ್ಥೆಯ ಆಡಳತೆಗಾರರಾದ
**ಶ್ರೀಪಾದ ರಾಮಚಂದ್ರ ದೇಶಪಾಂಡೆ, ಬಿ.ಎಸ್‌ಸಿ.**
ಯವರು ಪ್ರಸಿದ್ಧಮಾಡಿದರು.

ಮೊದಲನೆಯಾವೃತ್ತಿ



ಬೆಂಗಳೂರು ಸಿಟಿ:
ಬೆಂಗಳೂರು ಪ್ರೆಸ್, ಮೈಸೂರು ರೋಡ್
೨೯




[ಬೆಲೆ: ೩ ರೂ. ೪ ಆ.

# ರಾ. ಹ. ದೇಶಪಾಂಡೆಯವರು
# ಬರೆದ ಪುಸ್ತಕಗಳು

---

| | | | ರೂ. | ಆ. | ಪೈ. |
|---|---|---|---|---|---|
| ೧. ಚರಿತ್ರಸಂಗ್ರಹ, ಪೂರ್ವಾರ್ಧ, | ಸಚಿತ್ರ | .. | ೧ | ೪ | ೦ |
| ೨. ಅಕ್ಬರ ಚಕ್ರವರ್ತಿ ಚರಿತ್ರೆ, ೩ನೆಯ ಮುದ್ರಣ | ,, | .. | ೧ | ೧ | ೦ |
| ೩. ಕಥೆಗಳನ್ನೊಳಗೊಂಡ ಬೀರಬಲ್ಲನ ಚರಿತ್ರೆ | ,, | .. | ೧ | ೬ | ೦ |
| ೪. ಛತ್ರಪತಿ ಶಿವಾಜಿ ಮಹಾರಾಜ | ,, | .. | ೨ | ೧೨ | ೦ |
| ೫. ಧರ್ಮಸ್ಥಾಪಕರೂ ಧರ್ಮಸುಧಾರಕರೂ | ,, | .. | ೦ | ೬ | ೦ |
| ೬. ಹೈದರಲ್ಲಿ ಟೀಪುಸುಲ್ತಾನ | ,, | .. | ೦ | ೫ | ೦ |
| ೭. ನಾನಾಫಡನವೀಸ | ,, | .. | ೦ | ೪ | ೦ |
| ೮. ಮೊಗಲ್ಬಾದಶಾಹಿ, ಪೂರ್ವಾರ್ಧ | ,, | .. | ೦ | ೧೪ | ೦ |
| ೯. ಗ್ರೇಟ ಬ್ರಿಟನ್ನ ಐರ್ಲಂಡ ದೇಶಗಳ ಸಂಕ್ಷಿಪ್ತ ವರ್ಣನೆ | ,, | .. | ೦ | ೬ | ೦ |
| ೧೦. ಕರ್ನಾಟಕ ಸಾಮ್ರಾಜ್ಯ, ಸಂಪುಟ ೧ | ,, | .. | ೨ | ೪ | ೦ |
| ಸದರ ಭಾಗ ೧ | ,, | .. | ೧ | ೨ | ೦ |
| ,, ,, ೨ | ,, | .. | ೧ | ೨ | ೦ |
| ೧೧. ಕರ್ನಾಟಕ ಸಾಮ್ರಾಜ್ಯ, ಸಂಪುಟ ೩, ಭಾಗ ೧ | ,, | .. | ಸಿದ್ಧವಾಗಿದೆ. | | |

# ಮುನ್ನುಡಿ

---

ಈ ಸಂಪುಟದಲ್ಲಿ ರಾಷ್ಟ್ರಕೂಟ (೭೫೭-೯೭೩), ಕಲ್ಯಾಣದ ಚಾಳುಕ್ಯ (೯೭೩-೧೧೮೯) ಈ ಎರಡು ಕರ್ನಾಟಕ ಅರಸುಮನೆತನಗಳ ಶಕ್ಯವಿದ್ದಷ್ಟು ಸಮಗ್ರವಾದ ಚರಿತ್ರವನ್ನು ಬರೆದಿರುತ್ತೇನೆ. ಈ ಕಾಲದ ಶಾಸನಗಳು ವಿಪುಲವಾಗಿ ದೊರೆದುದರಿಂದ ನನ್ನ ಬರಹಕ್ಕೆ ಆಧಾರವಾದ ಅವುಗಳ ಭಾಗಗಳನ್ನು ಅಲ್ಲಲ್ಲಿ ಕೊಟ್ಟಿರುತ್ತೇನೆ. ಇದರಿಂದ ವಾಚಕರಿಗೆ ಶಾಸನಗಳ ಪರಿಚಯವು ಹೆಚ್ಚಾಗಿ, ಅವುಗಳನ್ನು ಓದುವ ಅಭಿಲಾಷೆಯು ಅವರಲ್ಲಿ ಹುಟ್ಟಬೇಕೆಂಬುದೇ ನನ್ನ ಉದ್ದೇಶವು. 'ತಾ ಬಲ, ಜಗ ಬಲ' ಎಂಬ ಕನ್ನಡ ಗಾದೆಯೂ, 'ಸ್ವಾವಲಂಬನವು ಯಶಸ್ಸಿನ ಮೊದಲನೆಯ ಮೆಟ್ಟು' ಎಂಬ ಇಂಗ್ಲಿಷ ಗಾದೆಯೂ, 'ದೈವವನ್ನು ಬದಿಗೊತ್ತಿ, ಆತ್ಮ ಶಕ್ತಿಯಿಂದ ಪೌರುಷಮಾಡಬೇಕು' ಎಂಬ ಸಕ್ಕದ ಗಾದೆಯೂ, 'ಪ್ರಯತ್ನಾಂತೀ ಪರಮೇಶ್ವರ' ಎಂಬ ಮರಾಟಿ ಗಾದೆಯೂ ವಾಚಕರಿಗೆ ಗೊತ್ತಿದ್ದ ಮಾತುಗಳಾದರೂ ಕೃತಿಯಲ್ಲಿ ತಂದ ಸಿದ್ಧಾಂತಗಳಾಗಿಲ್ಲೆಂದು ಹಳಹಳಿಸುತ್ತೇನೆ. ಆದಕಾರಣ ನನ್ನ ಬಂಧುಗಳಲ್ಲಿ ಹೆಚ್ಚು ಜನರು ಶಾಸನ ಪುರಾಣ ಲೇಖಗಳನ್ನು ಶೋಧಿಸಿ, ಓದಿ, ನಮ್ಮ ಪೂರ್ವಜರ ಇತಿಹಾಸವನ್ನು ಪೂರ್ಣಮಾಡಬೇಕೆಂದು ಅಂಗಲಾಚಿ ಬೇಡಿಕೊಳ್ಳುತ್ತೇನೆ.

ಈ ಸಂಪುಟವನ್ನು ಬರೆಯುವಾಗ ಉಪಯೋಗಿಸಿದ ಗ್ರಂಥಗಳ, ಮಾಸಪತ್ರಿಕೆಗಳ, ಲೇಖಗಳ ಹೆಸರುಗಳನ್ನು ಸಂದರ್ಭಾನುಸಾರವಾಗಿ ಅಲ್ಲಲ್ಲಿ ಕೊಟ್ಟಿರುತ್ತೇನೆ. ಈ ಎಲ್ಲ ಬರಹಗಾರರಿಗೆ ನನ್ನ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ.

ಈ ಚರಿತ್ರೆಯಲ್ಲಿ ಉದ್ಭವಿಸಿದ ಗಡಚಾದ ಪ್ರಶ್ನೆಗಳನ್ನು ಬಿಡಿಸುವುದರಲ್ಲಿಯೂ ಶಾಸನಗಳಲ್ಲಿದ್ದ ಬಿಡಿಮಾತುಗಳನ್ನು ಸರಿಯಾಗಿ ಪೋಣಿಸುವುದರಲ್ಲಿಯೂ ನಾನು ಮಾಡಿದ ತಪ್ಪುಗಳನ್ನು ತೋರಿಸಿ ನನ್ನನ್ನು

ಪ್ರೋತ್ಸಾಹಿಸಬೇಕೆಂದು ವಿದ್ವಾಂಸರನ್ನೂ ಈ ಗ್ರಂಥದ ಭಾಗಗಳನ್ನು ಸಾಲೆಗಳಲ್ಲಿ ಪಠ್ಯಪುಸ್ತಕವಾಗಿ ನಿಯಮಿಸಿ ನಮ್ಮ ಪೂರ್ವಜರು ಮಾಡಿದ ಶೌರ್ಯ ಧೈರ್ಯ ಬುದ್ಧಿಸಾಮರ್ಥ್ಯದ ಅಗಾಧ ಕೃತ್ಯಗಳ ಮನವರಿಕೆಯು ಎಲ್ಲ ಕನ್ನಡ ಬಾಲಕರಿಗೆ ಆಗುವಂತೆ ಮಾಡಬೇಕೆಂದು ಕರ್ನಾಟಕದ ಎಲ್ಲ ಭಾಗಗಳ ವಿದ್ಯಾಧಿಕಾರಿಗಳನ್ನೂ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ.

ಈ ಸಂಪುಟವು ಸಿದ್ಧವಾಗಿ ಒಂದು ವರ್ಷವಾಯಿತು. ಆದರೆ ಹಣದ ಅಡಚಣೆಯು ಮೂಲಕ ಇದನ್ನು ಈವರೆಗೆ ಮುದ್ರಿಸಲಿಕ್ಕಾಗಲಿಲ್ಲ. ಈ ನಿರರ್ಥಕವಾದ ತಡದ ಬಗ್ಗೆ ವಾಚಕರು ನನ್ನನ್ನು ಕ್ಷಮಿಸುವರೆಂದು ನಂಬಿದ್ದೇನೆ.

ಮಾಳಮಡ್ಡಿ, ಧಾರವಾಡ<br>ಶಕ ೧೮೫೧ ಶುಕ್ಲ ಸಂವತ್ಸರ ಜ್ಯೇಷ್ಠ ಶುದ್ಧ ೨<br>ರವಿವಾರ ೯ ಜೂನ ೧೯೨೯ ಇಸ್ವಿ

**ರಾ. ಹ. ದೇಶಪಾಂಡೆ**

———

# ವಿಷಯಾನುಕ್ರಮಣಿಕೆ

## ಭಾಗ ೨

# ಚಿತ್ರಗಳು

# ತಪ್ಪೊಪ್ಪು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೩೧ | ೧೨ | ದಂತಿಗುರ್ಗ | ದಂತಿದುರ್ಗ |
| ,, | ೧೩ | ಹಟ್ಟಿದ | ಹುಟ್ಟಿದ |
| ೮೭ | ೧೪ | ಗೋವಿಂದ | ನೃಪತುಂಗ |
| ೧೩೯ | ೧೦ | ತಪ್ಪು ಗಾಣಿಕೆ | ಕಪ್ಪು ಗಾಣಿಕೆ |
| ೩೩೧ | ೧೯ | ೧೧೮೩ | ೧೧೬೩ |

# ಕರ್ನಾಟಕ ಸಾಮ್ರಾಜ್ಯ

## ೨ನೆಯ ಸಂಪುಟ, ಭಾಗ ೧



## ೧ ನೆಯ ಅಧ್ಯಾಯ

### ರಾಷ್ಟ್ರಕೂಟರು ಯಾರು?

ಈ ಗ್ರಂಥದ ೧ನೆಯ ಸಂಪುಟದಲ್ಲಿ ಬಾದಾಮಿಯ ಚಾಳುಕ್ಯ ಚಕ್ರವರ್ತಿಯಾದ ೨ನೆಯ ಕೀರ್ತಿವರ್ಮನಿಂದ ರಾಷ್ಟ್ರಕೂಟ ದಂತಿದುರ್ಗನು ಸಾಮ್ರಾಜ್ಯವನ್ನು ಕಿತ್ತಿಕೊಂಡನೆಂದು ಬರೆದಿರುತ್ತೇವಷ್ಟೇ. ಈ ರಾಷ್ಟ್ರಕೂಟರು ಯಾರು? ಇವರು ಎಲ್ಲಿದ್ದರು? ರಾಷ್ಟ್ರಕೂಟ ಶಬ್ದವು ಒಂದೇ ಮನೆತನದ ಅಡ್ಡಹೆಸರೋ ಅಥವಾ ಹಲವು ಮನೆತನಗಳ ಗುಂಪಿನ ಹೆಸರೋ? ಇವರು ಚಾಳುಕ್ಯ ಸಾಮ್ರಾಜ್ಯವನ್ನು ಹೇಗೆ ಸೆಳೆದುಕೊಂಡರು? ಹೆಸರುವಾಸಿಯಾದ ಕರ್ನಾಟಕ ದಂಡನ್ನು ಸೋಲಿಸುವಷ್ಟು ಸಾಮರ್ಥ್ಯವು ದಂತಿದುರ್ಗನಿಗೆ ಎಲ್ಲಿಂದ ಬಂತು? ೨ನೆಯ ಕೀರ್ತಿವರ್ಮನು ಭೀಮಾನದಿ ಕಾಳಗದಲ್ಲಿ ರಾಷ್ಟ್ರಕೂಟರನ್ನು ೭೫೭ರಲ್ಲಿ ಸೋಲಿಸಿದರೂ ಅದೇ ವರುಷ ಅವನು ರಾಜ್ಯಭ್ರಷ್ಟನಾಗಲಿಕ್ಕೆ ಕಾರಣವೇನು? ಚಾಳುಕ್ಯ ಚಕ್ರವರ್ತಿಗಳು ಎಲ್ಲರಿಗೂ ಬೇಸರಾಗಿದ್ದರೇನು? ಅವರ ಶೂರರಾದ ದಳವಾಯಿಗಳೂ ವಂಶಪರಂಪರಾಗತರಾದ ಮಂಡಲೇಶ್ವರರೂ ಇಂತಹ ಇಕ್ಕಟ್ಟಿನ ಸಮಯದಲ್ಲಿ ಅವರ ಬೆನ್ನುಕಟ್ಟದೆ ಹಗೆಗಳನ್ನು ಕೂಡಿದರೇನು? ಪ್ರಜೆಗಳು ಅವರ ಪಕ್ಷ ಹಿಡಿದು ಬಡಿದಾಡಲಿಲ್ಲವೇನು? ಅರಮನೆಯಲ್ಲಿಯಾಗಲಿ ರಾಜಧಾನಿಯಲ್ಲಿಯಾಗಲಿ ರಾಜ್ಯದಲ್ಲಿಯಾಗಲಿ ಒಳಸಂಚು ನಡೆದಿರಬಹುದೇನು? ಈ ಮೊದಲಾದ ಪ್ರಶ್ನೆಗಳನ್ನು ಬಿಡಿಸುವುದೇ ಈ ಅಧ್ಯಾಯದ ಮುಖ್ಯ ಉದ್ದೇಶವಾಗಿರುತ್ತದೆ.

ಈ ರಾಷ್ಟ್ರಕೂಟರು ಯಾರಾಗಿದ್ದರೆಂಬ ಬಗ್ಗೆ ಹಲವು ಇತಿಹಾಸಕಾರರು ಈ ಮೊದಲೇ ತಂತಮ್ಮ ವಿಚಾರಗಳನ್ನು ಬರೆದಿಟ್ಟಿರುತ್ತಾರಷ್ಟೇ. ಆ ಅಭಿಪ್ರಾಯಗಳನ್ನು ನಮ್ಮ ಪ್ರಿಯ ವಾಚಕರ ಮುಂದಿರಿಸಿ, ಬಳಿಕ ಅವುಗಳೊಳಗಿದ್ದ ಸತ್ಯಾಂಶಗಳನ್ನು ಒಟ್ಟುಗೂಡಿಸಿ ನಮಗೆ ಯೋಗ್ಯ ಕಂಡ ಅಭಿಪ್ರಾಯವನ್ನು ಕೊಡುವೆವು.

೧. ಕ್ರಿ. ಶ. ೭೫೩ರಲ್ಲಿ ರಾಷ್ಟ್ರಕೂಟ ಬಣದ ಮುಖ್ಯಸ್ಥನಾದ ದಂತಿದುರ್ಗನೆಂಬವನು ವಾತಾಪಿಯನ್ನು ಹಿಡಿದುಕೊಂಡು ಅದರ ನೆರೆಯ ಪ್ರದೇಶವನ್ನು ಗೆದ್ದು, ಚಾಳುಕ್ಯ ಚಕ್ರವರ್ತಿಯಾದ ೨ನೆಯ ಕೀರ್ತಿವರ್ಮನನ್ನು ರಾಜ್ಯಭ್ರಷ್ಟನಾಗಿ ಮಾಡಿದನೆಂತಲೂ ಮುಂದೆ ಅವನ ಕಕ್ಕನಾದ ೧ನೆಯ ಕೃಷ್ಣನು ಚಾಳುಕ್ಯರ ಉಳಿದ ರಾಜ್ಯವನ್ನು ಸೆಳೆದುಕೊಂಡು, ರಾಷ್ಟ್ರಕೂಟ ಅರಸುಮನೆತನವನ್ನು ಸ್ಥಾಪಿಸಿದನೆಂತಲೂ ವ್ಹಿನ್ಸೆಂಟ ಸ್ಮಿಥರು ಬರೆಯುತ್ತಾರೆ*.

೨. ಡಾ॥ ಭಾಂಡಾರಕರರು ಬರೆಯುವುದೇನಂದರೆ:—ರಾಷ್ಟ್ರಕೂಟರು ಯದುವಂಶದ ಸಾತ್ಯಕಿ ಶಾಖೆಯವರಾಗಿದ್ದರೆಂತಲೂ ರಟ್ಟನೆಂಬ ಮೂಲಪುರುಷನಿಗೆ ರಾಷ್ಟ್ರಕೂಟನೆಂಬ ಮಗನಿದ್ದನೆಂತಲೂ ಮಧ್ಯಪ್ರಾಂತದ ವರ್ಧೆಯ ಶಾಸನಗಳಲ್ಲಿ ಬರೆದಿದೆ. ಆದರೆ ಈ ಹೆಸರುಗಳು ಕಾಲ್ಪನಿಕವಾದುವೆಂಬುದಕ್ಕೆ ಸಂದೇಹವಿಲ್ಲ. ಮೌರ್ಯ ಅಶೋಕನ ಕಾಲದಿಂದ ಮಹಾರಾಷ್ಟ್ರದಲ್ಲಿ ವಾಸಮಾಡಿಕೊಂಡಿದ್ದ ರಟ್ಟರೆಂಬ ಕ್ಷತ್ರಿಯರ ಮುಖ್ಯ ಶಾಖೆಯೇ ರಾಷ್ಟ್ರಕೂಟ ಮನೆತನವಾಗಿರಬಹುದು. ಅಯ್ಹೊಳೆಯ ರವಿಕೀರ್ತಿಯ ಶಾಸನದಲ್ಲಿ ಹೇಳಿದ ಗೋವಿಂದನು ಈ ರಾಷ್ಟ್ರಕೂಟ ಮನೆತನದ ಅರಸನಾಗಿದ್ದನು. ಏಳೂರಿನ ದಶಾವತಾರ ಗುಡಿಯ ಶಾಸನದಿಂದ ಇಂದ್ರರಾಜನು ಇವನ ತಂದೆಯಾಗಿದ್ದನೆಂತಲೂ ದಂತಿವರ್ಮನು ಇವನ ಅಜ್ಜನಾಗಿದ್ದನೆಂತಲೂ ತಿಳಿದುಬರುತ್ತದೆ. ಈ ಇಂದ್ರರಾಜನು ಚಾಳುಕ್ಯ ಮನೆತನದ ಅರಸುಮಗಳನ್ನು ಮದುವೆಯಾದನು. ಇವರಿಂದ ಹುಟ್ಟಿದ ದಂತಿದುರ್ಗನೇ ಕರ್ನಾಟಕ ದಂಡನ್ನು

---

* ಭರತಖಂಡದ ಪ್ರಾಚೀನೇತಿಹಾಸ, ಪು. ೪೨೭—೪೨೮.

ಸುಲಭವಾಗಿ ಸೋಲಿಸಿ ೨ ನೆಯ ಕೀರ್ತಿವರ್ಮನಿಂದ ಚಾಳುಕ್ಯ ಸಾಮ್ರಾಜ್ಯವನ್ನು ಸೆಳೆದುಕೊಂಡನು*.

೩. ಲುಯಿರಾಯಿಸರು ಈ ವಿಷಯವನ್ನು ಕುರಿತು ಬರೆಯುವುದೇನಂದರೆ:—ರಾಷ್ಟ್ರಕೂಟರು ಅಥವಾ ರಟ್ಟರು ಬುನಾದಿಯಿಂದ ದಕ್ಷಿಣಾಪಥದಲ್ಲಿ ವಾಸಮಾಡಿಕೊಂಡಿದ್ದವರೇ ಸರಿ. ಇವರು ರಜಪುತ ರಾಠೋರ ಮನೆತನಕ್ಕೆ ಹೊಂದಿದವರಾಗಿರಬಹುದು. ಈಗಿನ ರಡ್ಡಿಯರು ಇವರ ವಂಶದವರೆಂದು ಕೆಲವರು ಊಹಿಸುತ್ತಾರೆ. ರಾಷ್ಟ್ರಕೂಟರ ರಾಜ್ಯವನ್ನು ಕನ್ನಡದಲ್ಲಿ ರಟ್ಟವಾಡಿಯೆಂತಲೂ ತಮಿಳದಲ್ಲಿ ಇರಟ್ಟಪಾಡಿಯೆಂತಲೂ ಕರೆಯುತ್ತಿದ್ದರು. ಇವರ ಮೊದಲಿನ ರಾಜಧಾನಿಯು ನಾಸಿಕ ಜಿಲ್ಲೆ ಮೋರಖಂಡ(ಮಯೂರಖಂಡಿ)ವಾಗಿತ್ತು. ೯ ನೆಯ ಶತಮಾನದಲ್ಲಿ ನಿಜಾಮನ ರಾಜ್ಯದಲ್ಲಿದ್ದ **ಮಳಖೇಡ** (ಮಾನ್ಯಖೇಟ)ವು ಇವರ ರಾಜಧಾನಿಯಾಯಿತು†.

೪. ಡಾ|| ಫ್ಲೀಟರು ಈ ವಿಷಯವನ್ನು ಹೆಚ್ಚು ಪರಿಶೋಧಿಸಿ ತಮ್ಮ ವಿಚಾರಗಳನ್ನು ಪ್ರಕಟಿಸಿರುತ್ತಾರಷ್ಟೇ. ಅವರು ಬರೆಯುವುದೇನಂದರೆ:—

(ಅ) ೯೧೫ ನೆಯ ಇಸ್ವಿಯ ೩ ನೆಯ ಇಂದ್ರನ ನವಸರಿಯ ಶಾಸನದಲ್ಲಿ ರಾಷ್ಟ್ರಕೂಟರು ಸೋಮವಂಶದ ಯದುಕುಲದ ಸಾತ್ಯಕಿಯ ಶಾಖೆಯವರಾಗಿದ್ದರೆಂದು ಬರೆದಿರುತ್ತದಷ್ಟೇ. ಆದರೆ ಆ ಕಾಲದಲ್ಲಿ ದಕ್ಷಿಣಾಪಥದ ಎಲ್ಲ ಅರಸುಮನೆತನದವರಿಗೆ ತಮ್ಮ ತಮ್ಮ ಮನೆತನದ ಮೂಲಪುರುಷರು ಪುರಾಣಪ್ರಸಿದ್ಧರಾದ ಮಹಾಪುರುಷರ ವಂಶದವರಾಗಿದ್ದರೆಂದು ಹೇಳಿಕೊಳ್ಳುವ ಹುಚ್ಚೇ ಹಿಡಿದಿತ್ತೆಂದು ಬರೆದರೆ ಅತಿಶಯೋಕ್ತಿಯಾಗಲಾರದು. ಆದಕಾರಣ ಯದುಸಾತ್ಯಕಿಯರು ರಾಷ್ಟ್ರಕೂಟರ ಪೂರ್ವಜರಾಗಿದ್ದರೆಂಬುದು ಜಂಬದ ಸುಳ್ಳು ಕಲ್ಪನೆಯೆಂದು ಧಾರಾಳವಾಗಿ ಹೇಳಬಹುದು.

---

* ದಕ್ಷಿಣಾಪಥದ ಪ್ರಾಚೀನೇತಿಹಾಸ, ಪು. ೧೯೪.

† ಶಾಸನಗಳಿಂದ ತಿಳಿದು ಬರುವ ಮೈಸೂರು ಕೊಡಗು ಪ್ರಾಂತಗಳು, ಪು. ೬೬.

(ಇ) ಕರ್ನಾಟಕ ತೆಲಂಗಣಗಳಲ್ಲಿ ರಡ್ಡಿ ವರ್ಗದ ಜನರು ಹೇರಳ ವಾಗಿರುತ್ತಾರಷ್ಟೇ. ರಡ್ಡಿ ಶಬ್ದವು ರಟ್ಟ ಶಬ್ದದ ಅಪಭ್ರಂಶವಾಗಿರುವಂತೆ ರಾಷ್ಟ್ರಕೂಟ ಶಬ್ದವು ರಟ್ಟ ಶಬ್ದದ ಸಂಸ್ಕೃತ ರೂಪವಾಗಿರಬಹುದೆಂದು ಡಾ॥ ಬರ್ನೆಲ್ಲರು ಅಭಿಪ್ರಾಯಪಡುತ್ತಾರೆ. ಅತ್ತಿವರ್ಮನ ಗುಂಟೂರ ಶಾಸನವು ಬಹಳ ಹಳೆ ಶಾಸನವಾಗಿದ್ದು, ಅದರಲ್ಲಿ ರಟ್ಟ ಶಬ್ದವು ಕಂಡು ಬರುತ್ತದೆ. ಅದು ರಾಷ್ಟ್ರಕೂಟರ ಶಾಸನವೆಂದು ಸಿದ್ಧವಾದರೆ, ಡಾ॥ ಬರ್ನೆಲ್ಲರ ಅಭಿಪ್ರಾಯವನ್ನು ಬಲಪಡಿಸುತ್ತದೆಂದು ಹೇಳಬಹುದು.

(ಉ) ರಠೋಡ (ದ) ಎಂಬ ರಜಪುತ ಕುಲದ ಹೆಸರಿನ ಸಂಸ್ಕೃತ ರೂಪವೇ ರಾಷ್ಟ್ರಕೂಟವಾಗಿರಬಹುದೆಂದು ಕೆಲವರು ಊಹಿಸುತ್ತಾರೆ. ಈ ಊಹೆಯು ನಿಜವಾದರೆ, ರಾಜಸ್ಥಾನ ಕನೋಜ ಪ್ರಾಂತಗಳು ಇವರ ಮೂಲಸ್ಥಾನವಾಗಲಿಕ್ಕೆ ಬೇಕಾಯಿತು. ಆದರೆ ರಟ್ಟರಾಗಲಿ ರಡ್ಡಿಯ ರಾಗಲಿ ಆ ನಾಡಿನಲ್ಲಿ ಈಗ ಔಷಧಕ್ಕಾದರೂ ದೊರೆಯುವುದಿಲ್ಲ. ಇಷ್ಟೇ ಅಲ್ಲ ; ಮಧ್ಯಪ್ರಾಂತದಲ್ಲಿಯೂ ಮುಂಬಯಿ ಇಲಾಖೆಯ ಉತ್ತರ ಭಾಗದಲ್ಲಿಯೂ ರಡ್ಡಿಯರು ಇರುವುದಿಲ್ಲ. ಆದ್ದರಿಂದ ಈ ಮತದ ಪ್ರಕಾರ ರಾಷ್ಟ್ರಕೂಟರೆಂಬುದೇ ಈ ಮನೆತನದವರ ಮೂಲ ಹೆಸರಾಗಿರ ಬೇಕು. ಹಿಂದಿನಿಂದ ರಟ್ಟ ಎಂಬ ಸಂಕ್ಷಿಪ್ತರೂಪವು ರಾಷ್ಟ್ರಕೂಟ ಶಬ್ದದಿಂದ ಆಗಿರಬಹುದು.

(ಎ) ರಾಷ್ಟ್ರಕೂಟರ ಹಳೆ ಶಾಸನಗಳಲ್ಲಿ ಉದಾಹರಣಾರ್ಥವಾಗಿ ಅಭಿಮನ್ಯುವಿನ (?) ಶಾಸನದಲ್ಲಿಯೂ ನಂದರಾಜನ ಮುಲ್ತಾಯಿ ಶಾಸನದಲ್ಲಿಯೂ ದಂತಿದುರ್ಗನ ಸಾಮಾನಗಡದ ಶಾಸನದಲ್ಲಿಯೂ ರಾಷ್ಟ್ರಕೂಟ ಶಬ್ದದ ಉಪಯೋಗವೇ ಇರುತ್ತದೆ. ರಾಷ್ಟ್ರಕೂಟರು ತಮ್ಮ ಶಾಸನಗಳಲ್ಲಿ ರಟ್ಟ ಶಬ್ದವನ್ನು ಉಪಯೋಗಿಸಿದ ಉದಾ ಹರಣೆಯು ಈವರೆಗೆ ಒಂದು ಮಾತ್ರ ದೊರೆತಿರುತ್ತದೆ. ೧ ನೆಯ ಅಮೋಘವರ್ಷನು (೮೧೫—೮೭೮) ತನ್ನದೊಂದು ಶಾಸನದಲ್ಲಿ ರಟ್ಟ ಶಬ್ದವನ್ನು ಉಪಯೋಗಿಸಿರುತ್ತಾನೆ*. ಇದಲ್ಲದೆ ಪೂರ್ವ ಚಾಳುಕ್ಯ

---

* ಇಂಡಿಯನ್ ಅಂಟಿಕ್ವೆರಿ, ಸಂ. ೧೨, ಪು. ೨೨೦.

ಅರಸನಾದ ೧ ನೆಯ ಅಮ್ಮ್ರಸು ತನ್ನದೊಂದು ಶಾಸನದಲ್ಲಿ ರಾಷ್ಟ್ರ ಕೂಟರನ್ನು ರಟ್ಟರೆಂದು ಕರೆದಿರುತ್ತಾನೆ. ಆದರೆ ಮುಂದೆ ತಾವು ರಾಷ್ಟ್ರಕೂಟರ ವಂಶದವರೆಂದು ಹೇಳಿಕೊಳ್ಳುತ್ತಿದ್ದ ಸವದತ್ತಿ ರಟ್ಟರು ಮಾತ್ರ ಅಪರೂಪವಾಗಿ ರಾಷ್ಟ್ರಕೂಟ ಶಬ್ದವನ್ನು ಉಪಯೋಗಿಸಿದ್ದಾರೆ.

(ಬ) ಲಟ್ಟಲೂರ ಅಥವಾ ಲಟ್ಟನೂರಪುರಪರಮೇಶ್ವರ ಎಂಬುದು ರಾಷ್ಟ್ರಕೂಟರ ವಂಶಪರಂಪರವಾದ ಬಿರುದಾಗಿತ್ತು. ಸವದತ್ತಿಯ ರಟ್ಟರಾದರೂ ಲಟ್ಟನೂರಪುರವರೇಶ್ವರವೆಂಬ ಬಿರುದನ್ನು ಧರಿಸುತ್ತಿದ್ದರು. ಈ ಲಟ್ಟನೂರು ಎಲ್ಲಿದೆಂಬುದು ಇನ್ನೂ ಗೊತ್ತಾಗಿಲ್ಲ. ಕೊಲ್ಹಾಪುರ ಸಂಸ್ಥಾನದ ಸ್ಥಿತಿ ಗತಿಯನ್ನು ವಿವರಿಸಿದ ಗ್ರ್ಯಾಹ್ಯಾಮರೆಂಬವರು ಬೆಳಗಾವಿ ಜಿಲ್ಲೆಯ ಅಥಣಿಯೇ ಈ ಲಟ್ಟನೂರು ಆಗಿರಬಹುದೆಂದು ಸೂಚಿಸುತ್ತಾರೆ. ಆದರೆ ಈ ಸೂಚನೆಗೆ ಆಧಾರಗಳೇನು ಇನ್ನೂ ದೊರೆತಿಲ್ಲ. ಮಧ್ಯಪ್ರಾಂತದ ಬಲಸಾರ ಜಿಲ್ಲೆಯಲ್ಲಿದ್ದ ರತನಪುರವು ಈ ಲಟ್ಟಲೂರು ಆದರೆ, ರಾಷ್ಟ್ರಕೂಟರು ಮಧ್ಯ ಪ್ರಾಂತದವರಾಗಿರಬಹುದು.

(ಕ) ಪೂರ್ವಕಾಲದಲ್ಲಿ ಗ್ರಾಮಕೂಟರೆಂಬ ಹಳ್ಳಿಯ ವಂಶಪರಂಪರರಾದ ಅಧಿಕಾರಿಗಳಿದ್ದಂತೆ ರಾಷ್ಟ್ರಕೂಟರೆಂಬ ಪ್ರಾಂತಾಧಿಕಾರಿಗಳು ಇದ್ದಿರಬಹುದು. ಮುಂದೆ ಅವರೇ ಅರಸರಾದ್ದರಿಂದ ತಮ್ಮ ಪೂರ್ವದ ಮನೆತನದ ಹೆಸರನ್ನು ಇಟ್ಟುಕೊಂಡಿರಬಹುದು.

ಮೇಲೆ ಕೊಟ್ಟ ೪ ಅಭಿಪ್ರಾಯಗಳಲ್ಲಿ ಡಾ॥ ಫ್ಲೀಟರ ಬರಹವೇ ಹೆಚ್ಚು ವಿವರವುಳ್ಳುದಾದ್ದರಿಂದ ಅದೇ ಹೆಚ್ಚು ವಿಚಾರಾರ್ಹವಾಗಿರುತ್ತದೆಂಬುದಕ್ಕೆ ಸಂದೇಹವಿಲ್ಲ. ವ್ಹಿನ್ಸೆಂಟ ಸ್ಮಿಥರು ರಾಷ್ಟ್ರಕೂಟರು ಯಾರೆಂಬ ಪ್ರಶ್ನದ ಗೋಜಿಗೆ ಹೋಗಿಲ್ಲ. ಡಾ॥ ಭಾಂಡಾರಕರರ ಬರಹದಲ್ಲಿ ಮರಾಟಿಗರ ಅಭಿಮಾನವು ಐತಿಹಾಸಿಕ ನಿಷ್ಪಕ್ಷಪಾತವನ್ನು ಮೀರಿರುತ್ತದೆಂದು ಸಂಶಯವು ಬರುತ್ತದೆ. ಲುಯಿರಾಯಿಸರು ರಾಷ್ಟ್ರಕೂಟರು ಯಾರಾಗಿದ್ದರೆಂಬ ಪ್ರಶ್ನೆಯ ಊಹಾಪೋಹವನ್ನು ಮಾಡದೆ, ಡಾ॥ ಫ್ಲೀಟರ ಒಂದು ಸೂಚನೆಯನ್ನು ಮಾತ್ರ ಸ್ವೀಕರಿಸಿರು

ತ್ತಾರೆ. ಆದ್ದರಿಂದ ಡಾ॥ ಫ್ಲೀಟರು ಮಾಡಿದ ೬ ಸೂಚನೆಗಳ ಸಾಧಕ ಬಾಧಕ ಪ್ರಮಾಣಗಳನ್ನು ಕೊಟ್ಟು, ಅವುಗಳೊಳಗೆ ಯಾವ ಸೂಚನೆಯು ಆ ಕಾಲದ ಪರಿಸ್ಥಿತಿಗೆ ಹೆಚ್ಚು ಅನುಗುಣವಾದುದು, ಹೆಚ್ಚು ಸಯುಕ್ತಿಕ ವಾದುದು, ಹೆಚ್ಚು ಸಮರ್ಪಕವಾದುದು, ಹೆಚ್ಚು ಗ್ರಾಹ್ಯವಾದುದು ಎಂಬುದನ್ನು ನಿರ್ಣಯಿಸಲಿಕ್ಕೆ ಯತ್ನಿಸುವಾ.

(ಅ) ರಾಷ್ಟ್ರಕೂಟರು ಯದುಕುಲದ ಸಾತ್ಯಕಿ ಶಾಖೆಯವರೆಂಬ ಕಲ್ಪನೆಯು ಅವರು ಅರಸರಾಗಿ ೧೫೦ ವರ್ಷ ಆಳಿದ ಬಳಿಕ ಅವರ ಸ್ತುತಿ ಪಾಠಕರು ಹುಟ್ಟಿಸಿದ ಕಟ್ಟುಕಥೆಯೆಂದು ನಿಸ್ಸಂದೇಹವಾಗಿ ಹೇಳ ಬಹುದು. ಆದಕಾರಣ ಈ ಸೂಚನೆಯು ತೀರ ಅಗ್ರಾಹ್ಯವಾಗಿರುತ್ತದೆ.

(ಇ) ರಡ್ಡಿ ಶಬ್ದವು ರಟ್ಟ ಶಬ್ದದ ಅಪಭ್ರಂಶವಾಗಿರಬಹುದು. ಆದರೆ ರಾಷ್ಟ್ರಕೂಟ ಶಬ್ದವು ರಟ್ಟ ಶಬ್ದದ ಸಂಸ್ಕೃತ ರೂಪವೆಂದು ನಿಶ್ಚಯಿಸಲಿಕ್ಕೆ ನಮಗೆ ಸಾಕಷ್ಟು ಆಧಾರಗಳು ಇನ್ನೂ ದೊರೆತಿಲ್ಲ. ರಟ್ಟ ಶಬ್ದವನ್ನು ಉಪಯೋಗಿಸಿದ ೭ ನೆಯ, ೮ ನೆಯ ಅಥವಾ ೯ ನೆಯ ಶತಮಾನಗಳ ಹೆಚ್ಚಿನ ಒಂದೆರಡು ಶಾಸನಗಳು ದೊರೆತರೆ ಡಾ॥ ಬರ್ನೆಲ್ಲರ ಊಹೆಯು ಸಿದ್ಧಾಂತವಾಗಬಹುದು.

(ಉ) ರಹ್ಟೋರ ಅಥವಾ ರಹ್ಟೋದ ಶಬ್ದದಿಂದ ರಾಷ್ಟ್ರಕೂಟ ಶಬ್ದವಾಯಿತೆಂಬುದಾಗಲಿ ಆ ಶಬ್ದದ ಸಂಸ್ಕೃತ ರೂಪವು ರಾಷ್ಟ್ರಕೂಟ ವೆಂಬುದಾಗಲಿ ಅಬದ್ಧ ವಿಚಾರವೆಂದು ನನ್ನ ಅಲ್ಪಮತಿಗೆ ತೋರುತ್ತದೆ. ರಾಷ್ಟ್ರಕೂಟ ಶಬ್ದವು ರಾಷ್ಟ್ರ (ನಾಡು) + ಕೂಟ (ಒಡೆಯ ಅಥವಾ ಗುಂಪು) ಈ ಎರಡು ಶಬ್ದಗಳ ತತ್ಪುರುಷ ಸಮಾಸವಾದ್ದರಿಂದ ಅದಕ್ಕೂ ರಾಹ್ಟೋರ ಶಬ್ದಕ್ಕೂ ಏನೂ ಸಂಬಂಧವಿದ್ದಂತೆ ತೋರುವದಿಲ್ಲ. ಇದಲ್ಲದೆ ರಾಜಸ್ಥಾನದಲ್ಲಿಯಾಗಲಿ ಕನೋಜ ಪ್ರಾಂತದಲ್ಲಿಯಾಗಲಿ ಮುಂಬಯಿ ಇಲಾಖೆಯ ಉತ್ತರ ಭಾಗದಲ್ಲಿಯಾಗಲಿ ರಟ್ಟರು ಅಥವಾ ರಡ್ಡಿಯರೆಂಬವರು ಒಬ್ಬರಾದರೂ ಸಿಕ್ಕುವುದಿಲ್ಲ. ಆದ್ದರಿಂದ ಉತ್ತರಾ ಪಥಕ್ಕೂ ರಾಷ್ಟ್ರಕೂಟರಿಗೂ ಏನೂ ಸಂಬಂಧವಿದ್ದಿಲ್ಲೆಂದು ಧಾರಾಳ ವಾಗಿ ಹೇಳಬಹುದು.

(ಎ) ನಮ್ಮ ತಾಯ್ನಾಡಿನಲ್ಲಿ ಸಂಸ್ಕೃತದ ಪ್ರಾಬಲ್ಯವು ೮ನೆಯ ಶತಮಾನದಿಂದ ದಿನದಿನಕ್ಕೆ ಹೆಚ್ಚಾಗುತ್ತ ನಡೆಯಿತೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಏಕೆಂದರೆ ಸಾಮಾನಗಡ ಪಟ್ಟದ ಕಲ್ಲುಗಳ ೭೫೪ನೆಯ ಇಸ್ವಿಯ ಶಾಸನಗಳೇ ಕರ್ನಾಟಕದಲ್ಲಿ ಎಲ್ಲಕ್ಕೂ ಮೊದಲಿನ ನಾಗರೀ ಲಿಪಿಯ ಶಾಸನಗಳಾಗಿರುತ್ತವೆ. ಆದ್ದರಿಂದ ರಾಷ್ಟ್ರಕೂಟ ಶಬ್ದವು ೮ನೆಯ ಶತಮಾನದಲ್ಲಿ ಸಂಸ್ಕೃತ ಪಂಡಿತರು ಹೊಸತಾಗಿ ಮಾಡಿದ ಸಂಸ್ಕೃತ ಸಾಮಾಸಿಕ ಅಭಿಧಾನವಾಗಿರಬಹುದೆಂದು ಕಂಡುಬರುತ್ತದೆ. ಏಕೆಂದರೆ ೮ನೆಯ ಶತಮಾನದ ಮಧ್ಯ ಭಾಗಕ್ಕಿಂತ ಮೊದಲೇ ರಾಷ್ಟ್ರಕೂಟ ಶಬ್ದವು ಪ್ರಚಾರದಲ್ಲಿದ್ದರೆ ಆ ಕಾಲದ ಯಾವದಾದರೊಂದು ಶಾಸನದಲ್ಲಿ ಆ ಶಬ್ದವು ಬರಬಹುದಾಗಿತ್ತು. ಆದ್ದರಿಂದ ರಾಷ್ಟ್ರಕೂಟ ಶಬ್ದವು ಯಾವುದೋ ಒಂದು ರೂಢಿಯಲ್ಲಿದ್ದ ದೇಶ್ಯಶಬ್ದದ ಸಂಸ್ಕೃತ ರೂಪವಾಗಿರಬಹುದೆಂದು ಅನುಮಾನಮಾಡಲಿಕ್ಕೆ ಅನುವು ದೊರೆಯುತ್ತದೆ.

(ಒ) ಲಟ್ಟನೂರು ರತನಪುರವಾಗುವ ಸಂಭವವಿಲ್ಲ. ಅದು ಅಥಣಿಯಲ್ಲೆಂದು ಡಾ॥ ಫ್ಲೀಟರು ಅಭಿಪ್ರಾಯಪಡುತ್ತಾರೆ. ಆದ್ದರಿಂದ ಈ ವಿಷಯವಾಗಿ ಏನೂ ಹೇಳಲಿಕ್ಕೆ ಬರುವುದಿಲ್ಲ.

(ಕ) ಗ್ರಾಮಕೂಟರೆಂಬ ಗ್ರಾಮಾಧಿಕಾರಿಗಳಿದ್ದಂತೆ ರಾಷ್ಟ್ರಕೂಟರೆಂಬ ರಾಷ್ಟ್ರಾಧಿಕಾರಿಗಳು ಇದ್ದಿರಬಹುದು. ನಮ್ಮ ತಾಯ್ನಾಡಿನಲ್ಲಿ ಬಹು ಪುರಾತನ ಕಾಲದಿಂದ **ಗವುಡರು*** **ನಾಡುಗವುಡರು** ಎಂಬ ಅಧಿಕಾರಿಗಳಿರುತ್ತಾರಷ್ಟೇ. ಈ ಹೆಸರುಗಳು ಎಂದಿನಿಂದ ರೂಢಿಯಲ್ಲಿ ಬಂದವೆಂಬುದನ್ನು ಗೊತ್ತುಮಾಡುವುದು ಅಸಾಧ್ಯವಾದ ಕೆಲಸವೆಂದು ಕಂಡುಬರುತ್ತದೆ. ೭ನೆಯ ಮತ್ತು ೮ನೆಯ ಶತಮಾನದ ಅಥವಾ ಅದಕ್ಕೂ ಪೂರ್ವದ ಒಂದೆರಡು ಶಾಸನಗಳಲ್ಲಿ ಗವುಡ ನಾಡುಗವುಡ ಶಬ್ದಗಳು ಸಿಕ್ಕರೆ ನಾಡುಗವುಡ ಶಬ್ದದ ಸಂಸ್ಕೃತ ರೂಪವೇ

* ಕವಿ (=ಮುಸುಕು, ಮುತ್ತಿಗೆ, ದಾಳಿ)+ಉಡ (ನಿಷೇಧಾರ್ಥಕ ಪ್ರತ್ಯಯ)=ಕವುಡ=ಗವುಡ. ಕಿವುಡ ಶಬ್ದದಲ್ಲಿ ನಿಷೇಧಾರ್ಥಕ ಉಡ ಪ್ರತ್ಯಯವಿದೆ. ಕಿವಿ+ಉಡ=ಕಿವುಡ=ಕಿವಿಯಿಲ್ಲದವ.

ರಾಷ್ಟ್ರಕೂಟ ಶಬ್ದವೆಂದು ಧಾರಾಳವಾಗಿ ಹೇಳಬಹುದು. ಆದರೆ ಈ ಊಹೆಯು ಸಿದ್ಧಾಂತವಾಗಬೇಕಾದರೆ, ನಮ್ಮ ತಾಯ್ನಾಡಿನೊಳಗೆ ನಾಡುಗವುಡ ಶಬ್ದವು ರಾಷ್ಟ್ರಕೂಟ ಶಬ್ದಕ್ಕಿಂತ ಮೊದಲೇ ಪ್ರಚಾರ ದಲ್ಲಿತ್ತೆಂಬುದನ್ನು ಸಿದ್ಧಮಾಡಿಕೊಡುವ ಭಾರವು ನಮ್ಮ ತಲೆಯ ಮೇಲಿರುತ್ತದೆಂಬುದನ್ನು ನಾವು ಮರೆಯಕೂಡದು.

ರಾಷ್ಟ್ರಕೂಟರು ಯಾರಾಗಿದ್ದರೆಂಬ ಬಗ್ಗೆ ಇಷ್ಟು ವಿಚಾರ ವಾಯಿತು. ಇನ್ನು ೮ನೆಯ ಶತಮಾನದ ಮಧ್ಯದಲ್ಲಿ ಇವರು ಎಲ್ಲಿ ಆಳುತ್ತಿದ್ದರು? ಇವರು ಚಾಳುಕ್ಯ ಸಾಮ್ರಾಜ್ಯವನ್ನು ಹೇಗೆ ಕಿತ್ತಿ ಕೊಂಡರು? ಹೆಸರುವಾಸಿಯಾದ ಕರ್ನಾಟಕ ದಂಡನ್ನು ಮುರಿಬಡಿಯು ವಷ್ಟು ಶಕ್ತಿಯು ದಂತಿದುರ್ಗನಿಗೆ ಹೇಗೆ ಬಂತು? ಎಂಬ ಪ್ರಶ್ನೆಗಳ ಬಗ್ಗೆ ವಿಚಾರಮಾಡುವಾ.

ಎಂಟನೆಯ ತಶಮಾನದ ಆರಂಭದಲ್ಲಿ ರಾಷ್ಟ್ರಕೂಟರು ಎಲ್ಲಿ ಆಳುತ್ತಿದ್ದರೆಂಬ ಬಗ್ಗೆ ಶಾಬ್ದಪ್ರಮಾಣಗಳು ಇನ್ನೂ ದೊರೆತಿಲ್ಲ. ಆದ ಕಾರಣ ಇವರು ಎಲ್ಲಿಯವರೆಂಬುದನ್ನು ಅನುಮಾನದಿಂದಲೇ ಕಂಡು ಹಿಡಿಯಬೇಕಾಗಿದೆ. ಇವರು ಕರ್ನಾಟಕದ ಬಡಗಣ ಅಥವಾ ಮೂಡಣ ಬಡಗಣ ಭಾಗದಲ್ಲಿ ಬಹುಶಃ ಆಳುತ್ತಿದ್ದರೆಂದು ಅನುಮಾನ ಮಾಡ ಬಹುದು. ಕೆಳಗೆ ಕೊಟ್ಟ ಕಾರಣಗಳು ಈ ಅನುಮಾನವನ್ನು ಬಲ ಪಡಿಸುತ್ತವೆ:—

೧. ಕೊಲ್ಹಾಪುರ ಸಂಸ್ಥಾನವು ಕರ್ನಾಟಕದ ಭಾಗವಾಗಿದ್ದು ಕೊಲ್ಹಾಪುರದ ನೆರೆಯಲ್ಲಿದ್ದ ಸಾಮಾನಗಡದಲ್ಲಿ ರಾಷ್ಟ್ರಕೂಟ ದಂತಿ ದುರ್ಗನ ಶಾಸನವು ಸಿಕ್ಕಿರುತ್ತದೆ.

೨. ಭೀಮಾನದಿಯು ಕರ್ನಾಟಕದ ಉತ್ತರ ಭಾಗದಲ್ಲಿ ಹರಿ ಯುತ್ತದಷ್ಟೇ. ೭೫೭ರಲ್ಲಿ ಈ ಹೊಳೆಯ ದಂಡೆಯ ಮೇಲೆ ೨ನೆಯ ಕೀರ್ತಿವರ್ಮನ ಜಯಶಾಲಿಯಾದ ದಂಡು ಪಾಳೆಯವನ್ನು ಹಾಕಿ ಕೊಂಡಿತ್ತೆಂದು ವಕ್ಕಲೇರಿ ಶಾಸನದಲ್ಲಿ ಬರೆದಿದೆ. ಈ ಭೀಮಾನದಿಯ ಕಾಳೆಗದಲ್ಲಿ ಕೀರ್ತಿವರ್ಮನು ರಾಷ್ಟ್ರಕೂಟರನ್ನು ಸೋಲಿಸಿರಬಹು ದೆಂಬುದಕ್ಕೆ ಸಂದೇಹವಿಲ್ಲ.

೨. ಮಂಗಳೇಶನು ಸತ್ತ ಬಳಿಕ ಅಪ್ಪಾಯಿಕ ಗೋವಿಂದರೆಂಬ ವರಿಬ್ಬರು ಬಾದಾಮಿಯ ಮೇಲೆ ದಂಡೆತ್ತಿ ಬಂದರಷ್ಟೇ. ಇವರು ರಾಷ್ಟ್ರಕೂಟರಾಗಿದ್ದರೆ, ಕರ್ನಾಟಕದ ಉತ್ತರ ಮತ್ತು ಈಶಾನ್ಯ ಭಾಗಗಳಿಂದ ಬಂದಿದ್ದರೆಂದು ಹೇಳಬಹುದು.

೪. ಈ ರಾಷ್ಟ್ರಕೂಟರು ಅಥವಾ ನಾಡುಗವುಡರು ಬಾದಾಮಿ ಚಾಳುಕ್ಯರ ಬುನಾದಿಯ ರಾಜಧಾನಿಯಾದ ಬಾದಾಮಿಯನ್ನೇ ತಮ್ಮ ರಾಜಧಾನಿಯಾಗಿ ಇಟ್ಟುಕೊಳ್ಳದೆ, ನಮ್ಮ ತಾಯ್ನಾಡಿನ ಈಶಾನ್ಯ ಭಾಗದಲ್ಲಿದ್ದ ಮಳಖೇಡವನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡರು.

೫. ಗಂಗರಸನಾದ ಶ್ರೀಪುರುಷನು ರಟ್ಟರ ಬಂಡಾಯವನ್ನು ಮುರಿದನೆಂದು ಈ ಗ್ರಂಥದ ೧ನೆಯ ಸಂಪುಟ, ೧ನೆಯ ಭಾಗದ ೭೯ ನೆಯ ಪುಟದಲ್ಲಿ ಬರೆದಿದ್ದೇವೆ.

ಮೇಲೆ ಕೊಟ್ಟ ೫ ಕಾರಣಗಳು ರಾಷ್ಟ್ರಕೂಟರ ವಾಸಸ್ಥಾನದ ಬಗ್ಗೆ ನಾವು ಮಾಡಿದ ಅನುಮಾನವನ್ನು ಎಷ್ಟುಮಟ್ಟಿಗೆ ಪುಷ್ಟೀಕರಿಸುತ್ತವೆಂಬುದನ್ನು ವಾಚಕಮಹಾಶಯರೇ ವಿಚಾರಮಾಡಬಹುದು. ಇನ್ನು ಬಲಾಢ್ಯವಾದ ಚಾಳುಕ್ಯ ಸಾಮ್ರಾಜ್ಯವನ್ನು ಚಿಕ್ಕೊಡೆಯರಾದ ರಾಷ್ಟ್ರಕೂಟರು ಹೇಗೆ ಕಿತ್ತಿಕೊಂಡರೆಂಬುದರ ಸಾಧಕ ಬಾಧಕ ಪ್ರಮಾಣಗಳನ್ನು ಹುಡುಕುವಾ.

ನಮ್ಮ ತಾಯ್ನಾಡಿನ ಈಶಾನ್ಯದಲ್ಲಿ ಅಥವಾ ಉತ್ತರದಲ್ಲಿದ್ದ ರಾಷ್ಟ್ರಕೂಟರು ಸ್ವತಂತ್ರ ಅರಸರಾಗಿದ್ದಿಲ್ಲೆಂಬುದಕ್ಕೆ ಸಂದೇಹವಿಲ್ಲ. ಅವರು ಚಾಳುಕ್ಯ ಚಕ್ರವರ್ತಿಗಳ ಮಂಡಲೇಶ್ವರರಾಗಿರಲಿಕ್ಕೆ ಬೇಕು. ಅವರು ಚಾಳುಕ್ಯ ಸಾರ್ವಭೌಮರ ಕಯ್ಕೆಳಗಿನವರಾಗಿದ್ದು ತಮ್ಮ ಒಡೆಯರ ಮೇಲೆ ಏಕೆ ತಿರುಗಿಬಿದ್ದರೆಂಬುದನ್ನು ತಿಳಿದುಕೊಳ್ಳಲಿಕ್ಕೆ ನಮಗೆ ಸಾಧನವೇ ಇಲ್ಲ. ಚಾಳುಕ್ಯ ರಾಷ್ಟ್ರಕೂಟರ ನಡುವೆ ಏನು ಕಾರಣ ಜಗಳ ಬಂತು? ಆ ಜಗಳವು ತುಸುದರಲ್ಲಿ ನೊಂದದೆ ಏನು ಕಾರಣ ಪ್ರಕೋಪಕ್ಕೆ ಹೋಯಿತು? ತಮ್ಮ ಒಡೆಯರಾದ ಚಾಳುಕ್ಯರ ಮೂಲೋತ್ಪಾಟನವನ್ನು ಮಾಡುವಷ್ಟು ಸಿಟ್ಟಾಗಲಿ ಧೈರ್ಯವಾಗಲಿ

ರಾಷ್ಟ್ರಕೂಟರಿಗೆ ಹೇಗೆ ಬಂತು? ಈ ಜಗಳದಲ್ಲಿ ಚಾಳುಕ್ಯರ ದಳವಾಯಿಗಳೂ ಮಂಡಲೇಶ್ವರರೂ ತಮ್ಮ ಯಜಮಾನರನ್ನು ತೊರೆದು ಅವರ ಹಗೆಗಳನ್ನು ಕೂಡಿದರೋ ಅಥವಾ ತಟಸ್ಥರಾಗಿ ನಿಂತರೋ? ಸಾಮ್ರಾಜ್ಯದಲ್ಲಿ ಚಾಳುಕ್ಯರ ವಿರುದ್ಧವಾಗಿ ದೊಡ್ಡದೊಂದು ಒಳಸಂಚು ನಡೆದು ಆ ಸಂಚುಗಾರರೊಳಗೆ ರಾಷ್ಟ್ರಕೂಟರು ಮುಕ್ಕಂಡರಾದರೋ? ಚಾಳುಕ್ಯ ಸಾರ್ವಭೌಮನಿಗೆ ಹತ್ತಿಹೊಂದಿದವರೂ ಅವನ ರಹಸ್ಯಾಧಿಕಾರಿಗಳೂ ಈ ಒಳಸಂಚನ್ನು ಕೂಡಿದರೇನು? ಅವರು ನಿಜವಾಗಿ ಕೂಡಿದ್ದರೆ, ಹಾಗೆ ಕೂಡಲಿಕ್ಕೆ ಕಾರಣವೇನು? ಚಾಳುಕ್ಯ ಸಾರ್ವಭೌಮರು ತಮಗೆ ಮಾಡಿದ ಯಾವುದಾದರೊಂದು ದೊಡ್ಡ ಅನ್ಯಾಯದ ಸೇಡು ತೀರಿಸಿಕೊಳ್ಳುವ ಉಬ್ಬಿನಿಂದಲೋ? ರಾಜ್ಯತೃಷ್ಣೆಯಿಂದಲೋ? ಮಹತ್ವಾಕಾಂಕ್ಷೆಯಿಂದಲೋ? ಹೆಂಗಸರ ಈರ್ಷಾಸ್ಪರ್ಧೆಗಳಿಂದಲೋ? ಮತ್ತಾವ ಕಾರಣದಿಂದಲೋ? ಎಂಬುದನ್ನು ವಿಚಾರಿಸುವಾ.

ಈ ಚಾಳುಕ್ಯ ರಾಷ್ಟ್ರಕೂಟರ ಕಡಿದಾಟದ ಕಾರಣವನ್ನು ಕುರಿತು ನಾವು ಯಾವ ಅನುಮಾನವನ್ನು ಮಾಡಿದರೂ ಅದಕ್ಕೆ ಸಾಕಷ್ಟು ಆಧಾರಗಳು ದೊರೆಯುವುದಿಲ್ಲೆಂದು ನಿಸ್ಸಂದೇಹವಾಗಿ ಹೇಳಬಹುದು. ಮಿಷ್ಟಾನ್ನವು ಸಿಕ್ಕದೆ ಇದ್ದಾಗ ಒಣರೊಟ್ಟಿ ಕಾರವನ್ನು ತಿಂದು ತೃಪ್ತರಾಗಿ ಸಂತೋಷಬಡುವುದು ನಮ್ಮ ಕರ್ತವ್ಯವಲ್ಲವೇ? ಅದರಂತೆಯೇ ಈ ರಾಜ್ಯಕ್ರಾಂತಿಯ ವಿಷಯದಲ್ಲಿ ನಮಗೆ ಸಾಕಷ್ಟು ಪ್ರಮಾಣಗಳು ಇಲ್ಲದಿದ್ದಾಗ ನಮಗೆ ಸಿಕ್ಕಬಹುದಾದ ಅಲ್ಪ ಸ್ವಲ್ಪ ಪ್ರಮಾಣಗಳನ್ನು ಒಟ್ಟುಗೂಡಿಸಿ ಅವುಗಳಿಂದ ಹೊರಡುವ ಅನುಮಾನವನ್ನು ಮಾಡಿ ಐತಿಹಾಸಿಕ ರಥವನ್ನು ಮುಂದಕ್ಕೆ ಎಳೆಯುವುದು ನನ್ನ ಪವಿತ್ರವಾದ ಕರ್ತವ್ಯವೆಂದು ತುಂಬಾ ನಂಬಿದ್ದೇನೆ.

ಈ ರಾಜ್ಯಕ್ರಾಂತಿಯ ವಿಷಯವಾಗಿ ನಮಗೆ ತಿಳಿದುಬರುವ ಸಂಗತಿಗಳನ್ನು ಕೆಳಗೆ ಕೊಡುತ್ತೇವೆ:—

೧. ರಾಷ್ಟ್ರಕೂಟ ಮನೆತನದ ದಂತಿದುರ್ಗನೇ ಮೊದಲು ಕರ್ನಾಟಕ ದಂಡನ್ನು ಸೋಲಿಸಿ, ೨ನೆಯ ಕೀರ್ತಿವರ್ಮನ ಸಾಮ್ರಾಜ್ಯದ ದೊಡ್ಡ ಭಾಗವನ್ನು ಕಿತ್ತಿಕೊಂಡನು.

೨. ಈ ದಂತಿದುರ್ಗನು ರಾಷ್ಟ್ರಕೂಟ ೨ನೆಯ ಇಂದ್ರನಿಂದ ಒಬ್ಬ ಚಾಳುಕ್ಯ ಅರಸುಮಗಳಲ್ಲಿ ಹುಟ್ಟಿದವನಾಗಿದ್ದನು.

೩. ಮೊದಲು ಈ ದಂತಿದುರ್ಗನು ೨ನೆಯ ಕೀರ್ತಿವರ್ಮನ ಸಾಮ್ರಾಜ್ಯದ ಮಧ್ಯ ಮತ್ತು ದಕ್ಷಿಣ ಭಾಗಗಳನ್ನು ಹಿಡಿದುಕೊಂಡನು. ಬಳಿಕ ರಾಷ್ಟ್ರಕೂಟ ೧ನೆಯ ಕೃಷ್ಣನು ಚಾಳುಕ್ಯ ಸಾಮ್ರಾಜ್ಯದ ಉಳಿದ ಭಾಗಗಳನ್ನು ಕಿತ್ತಿಕೊಂಡು ಚಾಳುಕ್ಯರನ್ನು ಅಡಗಿಸಿಬಿಟ್ಟನು*.

೪. ಲಾಟ ಪ್ರಾಂತವನ್ನು ಮತ್ತೊಬ್ಬ ರಾಷ್ಟ್ರಕೂಟನು ಹಿಡಿದುಕೊಂಡನು*.

೫. ಭೀಮಾನದಿಯ ಕಾಳಗದಲ್ಲಿ ೨ನೆಯ ಕೀರ್ತಿವರ್ಮನಿಂದ ಸೋತವನು ೧ನೆಯ ಕೃಷ್ಣನೇ ಆಗಿರಬಹುದು (೭೫೭).

೬. ರಾಷ್ಟ್ರಕೂಟ ಕೃಷ್ಣನು ದಂತಿದುರ್ಗನನ್ನಾಗಲಿ ಅವನು ಸತ್ತ ಬಳಿಕ ಅವನ ಸ್ಥಾನಾಪನ್ನನನ್ನಾಗಲಿ ಸೋಲಿಸಿ ಅವನ ಅಧಿಕಾರವನ್ನೆಲ್ಲ ಸೆಳೆದುಕೊಂಡು ತನ್ನ ಮನೆತನವನ್ನು ನೆಲೆಗೊಳಿಸಿದನು.

೭. ಮೊದಲನೆಯ ಕೃಷ್ಣನು ರಾಹಪ್ಪ ಅಥವಾ ರಾಹಪ್ಯನೆಂಬ ಒಬ್ಬ ದೊಡ್ಡ ಗೃಹಸ್ಥನನ್ನು ಸೋಲಿಸಿ ಸಾರ್ವಭೌಮತ್ವವನ್ನು ಪಡೆದನು†.

೮. ರಾಷ್ಟ್ರಕೂಟ ಮನೆತನವು ಒಂದೇ ಆಗಿರದೆ ಒಂದಕ್ಕೊಂದು ಸಂಬಂಧವಿಲ್ಲದ ಹಲವು ಮನೆತನಗಳು ಚಾಳುಕ್ಯ ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಲ್ಲಿದ್ದವು. ನಾಗರಖಂಡದಲ್ಲಿ ನಾಲ್ಗಾವುಂಡನಾದ ನಾಗಾರ್ಜುನನೆಂಬವನು ಶಕ ೮೩೪ರಲ್ಲಿ ಸಾಯಲು ಅವನ ಹೆಂಡತಿಯಾದ ಜಕ್ಕಿಯಬ್ಬೆ ಎಂಬವಳು ಅವತಪ್ರೂರಿಸ ನಾಲ್ಗಾವುಂಡಳಾದಳೆಂತಲೂ ಆಕೆಯು ಸತ್ತ ಬಳಿಕ ಆಕೆಯ ಮಗಳು ನಾಲ್ಗಾವುಂಡಳಾದಳೆಂತಲೂ ಸಿಕಾರಪುರದ ೨೧೯ ನಂಬರಿನ ಶಾಸನದಲ್ಲಿ ಬರೆದಿದೆ. ಈ ಅಧಿಕಾರವು ಹೆಂಗಸರಿಗೆ

* ಮುಂಬಯಿ ಇಲಾಖೆಯ ಗ್ಯಾಜಿಟಿಯರ, ಸಂ. ೧, ಭಾ. ೨, ಪು. ೩೮೨–೩೮೯.

† ಮುಂಬಯಿ ಇಲಾಖೆಯ ಗ್ಯಾಜಿಟಿಯರ, ಸಂ. ೧, ಭಾ. ೨, ಪು. ೩೯೧.

ನಿರ್ವಿವಾದವಾಗಿ ಬರುತ್ತಿದ್ದುದರಿಂದ ನಾಲ್ಗಾವುಂಡರು ಬಹು ಪುರಾತನ ಕಾಲದಿಂದ ಕರ್ನಾಟಕದಲ್ಲಿದ್ದರೆಂದು ಹೇಳಬಹುದು.

ನಾವು ಈಗ ರಾಷ್ಟ್ರಕೂಟರು ಚಾಳುಕ್ಯ ಸಾರ್ವಭೌಮರ ಸಾಮ್ರಾಜ್ಯವನ್ನು ಹೇಗೆ ಸೆಳೆದುಕೊಂಡರೆಂಬುದನ್ನು ಅನುಮಾನದಿಂದ ಕಂಡುಹಿಡಿಯಬೇಕಾಗಿರುತ್ತದಷ್ಟೇ. ಈ ಅನುಮಾನವು ನಿರ್ದುಷ್ಟವಾಗ ಬೇಕಾದರೆ ಅದು ಎರಡು ಲಕ್ಷಣಗಳಿಂದ ಕೂಡಿರಲಿಕ್ಕೆಬೇಕು. ಮೇಲೆ ಕೊಟ್ಟ ೮ ಸಂಗತಿಗಳನ್ನು ಒಳಗೊಂಡಿರುವುದೇ ಅದರ ಮೊದಲನೆಯ ಲಕ್ಷಣವು. ಇಂತಹ ದೊಡ್ಡ ರಾಜ್ಯಕ್ರಾಂತಿಯನ್ನು ಯಶಸ್ವಿಯಾಗಿ ಮಾಡುವಷ್ಟು ಸಾಮರ್ಥ್ಯವುಳ್ಳದ್ದಾಗಿರುವುದೇ ಅದರ ಎರಡನೆಯ ಲಕ್ಷಣವು. ಇಂತಹ ಅನುಮಾನವು ಯಾವುದು ?

ರಾಷ್ಟ್ರಕೂಟ ಶಬ್ದವು ನಾಡುಗವುಡ ಶಬ್ದದ ಸಂಸ್ಕೃತ ರೂಪ ವಾಗಿರಲಿ, ನಾಡುಗವುಡ ಶಬ್ದವು ರಾಷ್ಟ್ರಕೂಟ ಶಬ್ದದ ಕನ್ನಡ ರೂಪ ವಾಗಿರಲಿ, ನಾಡುಗವುಡ ಅಥವಾ ರಾಷ್ಟ್ರಕೂಟರೆಂಬ ನಾಡಧಿಕಾರಿಗಳು ೮ ನೆಯ ಶತಮಾನದಲ್ಲಿ ಕರ್ನಾಟಕ ಸಾಮ್ರಾಜ್ಯದಲ್ಲಿ ಹಬ್ಬಿದ್ದರೆನ್ನಲಿಕ್ಕೆ ಸಂದೇಹವಿಲ್ಲ. ಡಾ॥ ಫ್ಲೀಟರು ತಮ್ಮ ಇತಿಹಾಸದಲ್ಲಿ ೪–೫ ರಾಷ್ಟ್ರ ಕೂಟ ಮನೆತನಗಳನ್ನು ಉದಾಹರಿಸುತ್ತಾರೆ. ಮಂಗಳೇಶನು ಸತ್ತ ಬಳಿಕ ಬಾದಾಮಿಯ ಮೇಲೆ ದಂಡೆತ್ತಿ ಬಂದ ಗೋವಿಂದನು ಸೊಲ್ಲಾಪುರ ವಿಜಾಪುರ ಜಿಲ್ಲೆಗಳಲ್ಲಿದ್ದ ಒಂದು ರಾಷ್ಟ್ರಕೂಟ ಮನೆತನಕ್ಕೆ ಸೇರಿದ್ದನು. ಮದ್ರಾಸ ಇಲಾಖೆ ಗುಂಟೂರ ಜಿಲ್ಲೆಯ ತಾಮ್ರ ಶಾಸನದಲ್ಲಿ ಹೇಳಿದ ಅತ್ತಿವರ್ಮರಾಜನು ಮತ್ತೊಂದು ರಾಷ್ಟ್ರಕೂಟ ಮನೆತನಕ್ಕೆ ಸೇರಿ ದವನೂ ಶಿವೋಪಾಸಕನೂ ಆಗಿದ್ದನು. ಮಾಳವ ಪ್ರಾಂತದೊಳಗೆ ಮಾನಪುರವೆಂಬಲ್ಲಿ ಮತ್ತೊಂದು ರಾಷ್ಟ್ರಕೂಟ ಮನೆತನವಿತ್ತು. ಆ ಮನೆತನದವನಾದ ಅಭಿಮನ್ಯುವೆಂಬವನು ಒಬ್ಬ ಬ್ರಾಹ್ಮಣನಿಗೆ ಒಂದು ಹಳ್ಳಿಯನ್ನು ದಾನಕೊಟ್ಟನೆಂದು ಒಂದು ತಾಮ್ರಶಾಸನದಲ್ಲ ಬರೆದಿದೆ. ಈ ರಾಷ್ಟ್ರಕೂಟರ ಲಾಂಛನವು ಸಿಂಹವಾದ್ದರಿಂದ ಇವರು ಮಳಖೇಡ ರಾಷ್ಟ್ರಕೂಟರಿಂದ ಭಿನ್ನರಾಗಿದ್ದರೆಂದು ಹೇಳಬಹುದು. ಮಧ್ಯಪ್ರಾಂತದ ಬೇಟೂಳ ಜಿಲ್ಲೆಯಲ್ಲಿ ಮತ್ತೊಂದು ರಾಷ್ಟ್ರಕೂಟ ಮನೆತನವಿತ್ತು.

ಅದಕ್ಕೆ ಸೇರಿದ ಯುದ್ಧಾಸುರಸಂದರಾಜನೆಂಬವನು ಒಬ್ಬ ಬ್ರಾಹ್ಮಣ ನಿಗೆ ಒಂದು ಗ್ರಾಮವನ್ನು ದಾನಕೊಟ್ಟನೆಂತಲೂ (೭೦೯), ಆ ಮನೆ ತನದ ಲಾಂಛನವು ಮಳಖೇಡದವರ ಲಾಂಛನದಂತೆ ಗರುಡವಾಗಿ ತ್ತೆಂತಲೂ ಮುಲ್ತಾಯಿಯ ಶಾಸನದಿಂದ ತಿಳಿದು ಬರುತ್ತದೆ*.

ಈ ಮೇರೆಗೆ ಕರ್ನಾಟಕದ ಈಶಾನ್ಯದಲ್ಲಿ ಒಂದು, ಗುಂಟೂರಿನಲ್ಲಿ ಮತ್ತೊಂದು, ಪಾಳವೆಯಲ್ಲಿ ಮೂರನೆಯದು ಮಧ್ಯ ಪ್ರಾಂತದಲ್ಲಿ ೪ ನೆಯದು ಮಳಖೇಡದಲ್ಲಿ ೫ ನೆಯದು—ಹೀಗೆ ೫ ರಾಷ್ಟ್ರಕೂಟ ಮನೆತನಗಳು ೮ ನೆಯ ಶತಮಾನದಲ್ಲಿ ಇದ್ದವೆಂದು ಹೇಳಬಹುದು. ಈ ರಾಷ್ಟ್ರಕೂಟ ಅಥವಾ ನಾಡುಗವುಡ ಮನೆತನಗಳು ನಮ್ಮ ತಾಯ್ನಾಡಿನಲ್ಲಿ ಇನ್ನೂ ಎಷ್ಟಿದ್ದವೆಂಬುದನ್ನು ಗೊತ್ತುಹಚ್ಚುವ ಉದ್ದೇಶದಿಂದ ಶಾಸನಗಳನ್ನು ಪರಿಶೋಧಿಸಿದರೆ ೭ ನೆಯ ಮತ್ತು ೮ ನೆಯ ಶತಮಾನಗಳಲ್ಲಿ ಕರ್ನಾಟಕದೊಳಗೆ ಹಲವು ನಾಡುಗವುಡ ಮನೆತನಗಳಿದ್ದವೆಂದು ಕಂಡು ಬರಬಹುದು.

ಈ ನಾಡುಗವುಡ (ರಾಷ್ಟ್ರಕೂಟ)ರ ಉತ್ಪತ್ತಿಯು ಹೇಗಾಯಿತು? ಚಾಳುಕ್ಯರ ರಾಜ್ಯಭಾರದಲ್ಲಿ ಇವರಿಗೆ ಯಾವ ಅಧಿಕಾರವಿತ್ತು? ಎಂಬೆರಡು ಪ್ರಶ್ನಗಳು ಇಲ್ಲಿ ತಲೆದೋರುತ್ತವೆ.

ಮೌರ್ಯ ಚಂದ್ರಗುಪ್ತನ ಕಾಲದಲ್ಲಿ ಮಗಧ ಚಕ್ರವರ್ತಿಯು ನಿಯಮಿಸಿ ಕಳುಹಿದ ಪುಷ್ಯಗುಪ್ತನೆಂಬ ವೈಶ್ಯ ಜಾತಿಯ **ರಾಷ್ಟ್ರೀಯ** ನೆಂಬ ಒಬ್ಬ ಮೇಲಧಿಕಾರಿಯು ಸೌರಾಷ್ಟ್ರದಲ್ಲಿ ಸುದರ್ಶನವೆಂಬ ಸರೋವರವನ್ನು ಕಟ್ಟಿಸಿದನೆಂದು ಜುನಾಗಡದ ಶಿಲಾಲೇಖದಲ್ಲಿ ಬರೆದಿದೆ. ಈ ಚಂದ್ರಗುಪ್ತನ ರಾಷ್ಟ್ರೀಯನು ಪ್ರಾಂತಾಧಿಪತಿಯಾಗಿದ್ದನೆಂದು ಡಾ॥ ಕಿಲ್ಹಾರ್ನರು ಅಭಿಪ್ರಾಯಪಡುತ್ತಾರೆ. ಆದರೆ ಈ ಅರ್ಥವು ಸರಿಯಾದ್ದಲ್ಲೆಂತಲೂ ಈ ರಾಷ್ಟ್ರೀಯರು, ಮಗಧ ಸಾಮ್ರಾಟನು ತನ್ನ ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಿಗೆ ನಿಯಮಿಸಿದ ಮೇಲಧಿಕಾರಿಗಳಾಗಿದ್ದರೆಂತಲೂ ಇವರು ರಾಷ್ಟ್ರಪಾಲರಷ್ಟು ಅಧಿಕಾರವುಳ್ಳವರಾಗಿದ್ದ

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೩೮೬.

ರೆಂತಲೂ ಪಂಡಿತ ಹೇಮಚಂದ್ರರಾಯ ಚೌಧ್ರಿಯವರು ಬರೆಯುತ್ತಾರೆ*. ನಮ್ಮ ತಾಯ್ನಾಡಾದ ಕುಂತಳದೇಶವು ನಂದ ಮೌರ್ಯರ ಸಾಮ್ರಾಜ್ಯಕ್ಕೆ ಸೇರಿದ್ದರಿಂದ ಇಲ್ಲಿಯಾದರೂ ಕೆಲ ರಾಷ್ಟ್ರೀಯರು ಅಲ್ಲಲ್ಲಿ ವಾಸ ಮಾಡಿಕೊಂಡು ಇದ್ದಿರಬಹುದು. ಮುಂದೆ ಈ ಮೌರ್ಯವಂಶವು ನಷ್ಟವಾದ ಬಳಿಕ ಕರ್ನಾಟಕದಲ್ಲಿದ್ದ ರಾಷ್ಟ್ರೀಯರು ರಾಷ್ಟ್ರಕೂಟ † ಅಥವಾ ನಾಡುಗವುಡ ಎಂಬ ಅಡ್ಡಹೆಸರಿನಿಂದ ಕೆಲಕೆಲವು ಗ್ರಾಮಗಳ ಮುಖ್ಯಸ್ಥರಾಗಿ, ತಂತಮ್ಮ ವಶದಲ್ಲಿದ್ದ ಹಳ್ಳಿಗಳ ಕಂದಾಯವನ್ನು ಆಳುವ ಅರಸರಿಗೆ ಪ್ರತಿವರ್ಷ ಕಳುಹಿಸಿ, ಅವರಿಗೆ ಬೇಕಾದಾಗ ದಂಡಾಳುಗಳನ್ನು ಪೂರೈಸಿ, ಯುದ್ಧಕಾಲದಲ್ಲಿ ತಂತಮ್ಮ ಚಿಕ್ಕ ದಂಡುಗಳೊಡನೆ ಅವರಿಗೆ ನೆರವಾಗುತ್ತಿದ್ದರೆಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

ಮೇಲೆ ಕೊಟ್ಟ ವಿವರಣೆಯು ಸರಿಯಾಗಿದ್ದರೆ, ಕರ್ನಾಟಕ ಸಾಮ್ರಾಜ್ಯದಲ್ಲಿ ಹಲವು ರಾಷ್ಟ್ರಕೂಟ ಅಥವಾ ನಾಡುಗವುಡ ಮನೆತನಗಳು ಚಾಳುಕ್ಯ ರಾಜ್ಯಭಾರಕ್ಕೆ ಆಧಾರಸ್ಥಂಭವಾಗಿದ್ದವೆಂದು ಧಾರಾಳವಾಗಿ ಹೇಳಬಹುದು. ಈ ನಾಡುಗವುಡ (ರಾಷ್ಟ್ರಕೂಟ)ರು ಏನು ಕಾರಣ ತಮ್ಮ ಒಡೆಯರಾದ ಚಾಳುಕ್ಯರ ಮೇಲೆ ತಿರುಗಿಬಿದ್ದರೆಂಬುದನ್ನು ಊಹಿಸಲಿಕ್ಕೆ ನಮಗೆ ಎಳ್ಳಷ್ಟಾದರೂ ಆಧಾರವು ದೊರೆಯುವುದಿಲ್ಲ. ವಿಜಯಾದಿತ್ಯ ೨ ನೆಯ ವಿಕ್ರಮಾದಿತ್ಯ ಕೀರ್ತಿವರ್ಮರು ಶಿವೋಪಾಸಕರಾದ್ದರಿಂದಲೋ? ತಮ್ಮ ಮನೆತನದ ಕನ್ಯೆಯರನ್ನು ಬಿಟ್ಟು ವಿಕ್ರಮಾದಿತ್ಯನು ಚೇದಿ ಮನೆತನದ ಕನ್ಯೆಯರನ್ನು ಮದುವೆಮಾಡಿಕೊಂಡುದರಿಂದಲೋ? ಚಾಳುಕ್ಯರ ರಾಜ್ಯಭಾರಕ್ರಮವು ಹುಳಿತು ಹೊಲಸಾದ್ದರಿಂದಲೋ? ಅರಮನೆಯಲ್ಲಿ ಎರಡಿಟ್ಟಾದ್ದರಿಂದಲೋ? ನಾಡುಗವುಡ (ರಾಷ್ಟ್ರಕೂಟ)ರೊಳಗೆ ಒಕ್ಕಟ್ಟು ಬೆಳೆದು ರಾಜ್ಯತೃಷ್ಣೆಯು ಹೆಚ್ಚಾದ್ದರಿಂದಲೋ? ಬೇರೆ ಮತ್ತಾವ ಕಾರಣದಿಂದಲೋ? ಕೆಲ ರಾಷ್ಟ್ರಕೂಟ

---

* ಪ್ರಾಚೀನ ಭರತಖಂಡದ ರಾಜಕೀಯ ಇತಿಹಾಸ, ಪು. ೧೫೨–೧೫೩.

† ರಾಷ್ಟ್ರೀಯರ ಕೂಟ = ರಾಷ್ಟ್ರಕೂಟ.

ಮನೆತನಗಳು ಒಟ್ಟುಗೂಡಿ ಚಾಳುಕ್ಯ ಕೀರ್ತಿವರ್ಮನಿಂದ ಸಾಮ್ರಾಜ್ಯವನ್ನು ಸೆಳೆದುಕೊಳ್ಳಲಿಕ್ಕೆ ಒಳಸಂಚನ್ನು ಮಾಡತೊಡಗಿರಬಹುದು. ರಾಷ್ಟ್ರಕೂಟ ದಂತಿದುರ್ಗನು ಚಾಳುಕ್ಯರ ಸಮೀಪದ ಆಪ್ತನೂ, ಶೂರನೂ, ಸಾಹಸಿಯೂ ಆದ್ದರಿಂದ ಅವರ ದಂಡನಾಯಕನಾಗಲಿ ಮಂಡಲೇಶ್ವರನಾಗಲಿ ಆಗಿರಬಹುದು. ಅವನು ಅತಿಸ್ವಾರ್ಥಿಯೂ ಹೆಬ್ಬಯಕೆಯವನೂ ಆದ್ದರಿಂದ ಈ ಒಳಸಂಚಿನಲ್ಲಿ ಮುಖ್ಯ ಭಾಗವನ್ನು ಸ್ವಾಭಾವಿಕವಾಗಿ ತೆಗೆದುಕೊಂಡಿರಬಹುದು. ಅವನು ವಿಶ್ವಪ್ರಯತ್ನಮಾಡಿ ತನ್ನ ಮುರಿಪೊತ್ತಿನಿಂದ ಕೆಲ ದಂಡನಾಯಕರನ್ನೂ ಮಂತ್ರಿಗಳನ್ನೂ ಒಡೆಕೊಂಡು ೨ನೆಯ ಕೀರ್ತಿವರ್ಮನು ರಾಜಧಾನಿಯನ್ನು ಬಿಟ್ಟು ಹೊರಗೆ ಹೋದಾಗ ಅದನ್ನು ಹಿಡಿದುಕೊಂಡು ರಾಜಧಾನಿಯ ತೆಂಕಲಿಗಿದ್ದ ಪ್ರದೇಶವನ್ನೆಲ್ಲ ತನ್ನ ಸ್ವಾಧೀನಮಾಡಿಕೊಂಡನು*. ಈ ಭಯಂಕರವಾದ ಸುದ್ದಿಯನ್ನು ಕೇಳಿ ಕೀರ್ತಿವರ್ಮನು ಅಡಬಡಿಸಿ ದಂಡೆತ್ತಿ ಬರಲು, ಜಾಣನಾದ ದಂತಿದುರ್ಗನು ಅವನ ದಳವಾಯಿಗಳೊಳಗೆ ಕೆಲವರನ್ನು ಫಿತೂರುಮಾಡಿಕೊಂಡು ಅವನನ್ನು ಸೋಲಿಸಿ ಹಿಂದಕ್ಕಟ್ಟಿಬಿಟ್ಟನು !!!

ಗೂಳಿ ಬಿದ್ದರೆ ಆಳಿಗೊಂದು ಕಲ್ಲೆಂಬ ಗಾದೆಯು ಎಲ್ಲ ಓದುವವರಿಗೆ ಗೊತ್ತಿದ್ದ ಮಾತೇ ಸರಿ. ದಂತಿದುರ್ಗನು ರಾಜಧಾನಿಯನ್ನು ಹಿಡಿದುಕೊಂಡು ಕೀರ್ತಿವರ್ಮನನ್ನು ಸೋಲಿಸಿದನೆಂಬ ಸುದ್ದಿಯು ರಾಜ್ಯದಲ್ಲೆಲ್ಲ ಹರಡಿದ ಕೂಡಲೆ ಸಾಮಂತರೂ ದಳವಾಯಿಗಳೂ ಗ್ರಾಮಸ್ಥರೂ ತಂತಮ್ಮ ಸ್ವಾರ್ಥದ ಎಣಿಕೆಯಲ್ಲಿ ಮುಳುಗಿದರು. ಕೆಲ ಸ್ವಾರ್ಥಪರರಾದ ಸಾಹಸಿಗಳು ಇದೇ ಸುಸಂಧಿ ಎಂದೆಣಿಸಿ, ರಾಜನಿಷ್ಠೆಯನ್ನು ಬದಿಗೊತ್ತಿ ರಾಷ್ಟ್ರಕೂಟರನ್ನು ಸೇರಿದರು; ಮತ್ತೆ ಕೆಲವರು ಸ್ವಹಿತ ರಾಜಭಕ್ತಿ ಕೃತಜ್ಞತೆಗಳ ಕಡಿದಾಟದಲ್ಲಿ ಸುಚ್ಚುಸುರಿಯಾಗಿ ಏನು ಮಾಡಬೇಕೆಂಬುದನ್ನು ಮುಂಗಾಣದೆಯೂ ಶತ್ರುಗಳನ್ನು ಕೂಡಲಿಕ್ಕೆ ಎದೆಗೊಳ್ಳದೆಯೂ ತಟಸ್ಥರಾಗಿ ನಿಂತರು. ತುಸು ಜನರು ಮಾತ್ರ ಒಂದುದು

---

* ೨ನೆಯ ಕೀರ್ತಿವರ್ಮನು ಕಂಚಿಪಟ್ಟಣವನ್ನು ಹಿಡಿಯಲಿಕ್ಕೆ ಹೋದಾಗ ರಾಷ್ಟ್ರಕೂಟರ ಅರಸನಾದ ದಂತಿದುರ್ಗನು ಬಾದಾಮಿಯನ್ನು ಹಿಡಿದನು. ಎಂ. ಗಣಪತಿರಾವ ಐಗಳವರ. ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಪು. ೬೫.

ಬರಲಿ ಕೃತಘ್ನರೂ ರಾಜದ್ರೋಹಿಗಳೂ ಎಂದು ಹೀಯಾಳಿಸಿಕೊಳ್ಳುವುದಕ್ಕಿಂತ ಸ್ವಾಮಿಭಕ್ತರೆಂದು ಹೆಸರುವಾಸಿಯಾಗಿ ಅಳಿಯುವುದೇ ಲೇಸೆಂದೆಣಿಸಿ, ಕೀರ್ತಿವರ್ಮನ ಸಲುವಾಗಿ ಸಾಯಲಿಕ್ಕೆ ಸಿದ್ಧರಾದರು. ಈ ಮೇರೆಗೆ ನಾನಾ ತರದ ವಿಚಾರಗಳು ತನ್ನ ಅನುಯಾಯಿಗಳ ಮನಸ್ಸನ್ನು ಅಲ್ಲೋಲಕಲ್ಲೋಲವಾಗಿ ಮಾಡುತ್ತಿರುವಾಗ ಕೀರ್ತಿವರ್ಮನ ಮನಸ್ಸು ಎಷ್ಟು ಅಸ್ಥಿರವಾಗಿತ್ತೆಂಬುದನ್ನು ವಾಚಕರೇ ಊಹಿಸಬಹುದು. ಸಾಹಾಯ್ಯಮಾಡುತ್ತೇನೆಂದು ಬಂದವರು ಸಾಹಾಯ್ಯಕರಾಗುವರೋ ಘಾತಕರಾಗುವರೋ ಎಂಬ ಸಂಶಯವು ಅವನನ್ನು ತಲ್ಲಣಿಸತೊಡಗಿತು. ರಾಜಧಾನಿಯಲ್ಲಿದ್ದ ಕೆಲ ಪ್ರಮುಖರನ್ನು ಒಡೆಕೊಂಡು ಬಾದಾಮಿಯ ಮೇಲೆ ದಂಡೆತ್ತಿಹೋಗುವುದೇ ತಾರಣೋಪಾಯವೆಂದು ಕೆಲವರು ಸೂಚಿಸಿದರು. ತನ್ನ ಮನೆತನದ ಶತ್ರುಗಳಾದ ಕಂಚಿ ಪಲ್ಲವರ ನೆರವನ್ನು ಕೇಳಬೇಕೆಂದು ಮತ್ತೆ ಕೆಲವರು ಅಭಿಪ್ರಾಯಪಟ್ಟರು. ಚೇದಿಯ ದಂಡು ಬರುವ ವರೆಗೆ ಹೇಗಾದರೂ ಕಾಲಹರಣ ಮಾಡಬೇಕೆಂದು ಬೇರೆ ಕೆಲವರು ಹೇಳಿದರು. ಬಾದಾಮಿಯು ತೆಂಕಣ ಭಾಗದಲ್ಲಿದ್ದರೆ ಒಂದು ಕಡೆ ಬಾವಿ ಮತ್ತೊಂದು ಕಡೆ ಕೆರೆ ಆಗುತ್ತದೆಂತಲೂ ತೆಂಕಲಲ್ಲಿದ್ದ ಪಲ್ಲವರೂ ಬಡಗಲಲ್ಲಿದ್ದ ರಾಷ್ಟ್ರಕೂಟರೂ ಎಡೆಬಿಡದೆ ಕಾಡುವರೆಂತಲೂ ಈ ಗಂಡಾಂತರದಿಂದ ಪಾರಾಗುವುದಕ್ಕೋಸ್ಕರ ಭೀಮಾ ತೀರಕ್ಕೆ ಹೋಗಿ ದಂಡನ್ನು ಬೆಳಿಸಿಕೊಂಡು ಬಾದಾಮಿಯ ಮೇಲೆ ಸಾಗಿ ಬರುವುದೇ ಕ್ಷೇಮಕರವಾದ ಉಪಾಯವೆಂದು ಕೀರ್ತಿವರ್ಮನ ನಂಬಿಗಸ್ಥರಾದ ಅಧಿಕಾರಿಗಳು ತಮ್ಮ ಸಲಹೆಯನ್ನು ಕೊಟ್ಟರು. ಮುಂದೆ ಏನು ಮಾಡಬೇಕೆಂಬುದು ತಿಳಿಯದೆ, ವಿಚಾಸಮೇಷ ಮಾಡುತ್ತ ದಿಕ್ಕೆಟ್ಟ ಕೀರ್ತಿವರ್ಮನು ಕುಳಿತಿರುವಾಗ, ದಂತಿದುರ್ಗನು ಅವನ ಮೇಲೆ ದಂಡೆತ್ತಿ ಬರಲು ಹೊರಟಿದ್ದಾನೆಂಬ ಸುದ್ದಿಯು ಬಂತು. ಕೂಡಲೆ ಅವನು ತನ್ನ ವಿಶ್ವಾಸಿಕರ ಸೂಚನೆಯನ್ನು ಸ್ವೀಕರಿಸಿ, ಭೀಮಾನದಿಯ ತೀರದ ಕಡೆಗೆ ಹೊರಟನು. ಅಲ್ಲಿ ತನ್ನ ದಂಡನ್ನು ಬೆಳಿಸಿಕೊಂಡು ಭೀಮಾನದಿಯ ಕಾಳೆಗದಲ್ಲಿ ರಾಷ್ಟ್ರಕೂಟ ದಂಡನ್ನು ಸೋಲಿಸಿದ (೭೫೭) ಸಂಗತಿಯನ್ನು ಹಿಂದೆ ಬರೆದಿರುತ್ತೇವೆ. ಕಾಲಮೂಲಗಳು ತಿರುಗಿ

ಬಿದ್ದಾಗ ಈ ಒಂದು ಸೊಟ್ಟ ಗೆಲವಿನಿಂದ ಆಗುವುದೇನು? ರಾವಣನ ಹೊಟ್ಟೆಗೆ ಕಾಸಿನ ಸುಂಟೆಯಿಂದ ಆಗುವ ಪ್ರಯೋಜನವೇನು?

ಇನ್ನು ಈ ಚಾಳುಕ್ಯ ಸಾರ್ವಭೌಮರ ವಿರುದ್ಧವಾಗಿ ನಡಿಸಿದ ಒಳಸಂಚಿನಲ್ಲಿ ಯಾವ ಯಾವ ರಾಷ್ಟ್ರಕೂಟರು ಅಥವಾ ನಾಡುಗವುಡರು ಒಟ್ಟುಗೂಡಿದ್ದರೆಂಬ ಪ್ರಶ್ನೆಯೊಂದು ಮಾತ್ರ ಉಳಿಯಿತು. ಈ ಒಳಸಂಚಿನಲ್ಲಿ ೫ ಮಂದಿ ರಾಷ್ಟ್ರಕೂಟರು ಕೂಡಿದ್ದರೆಂದು ಹೇಳಬಹುದು:—೧. ಚಾಳುಕ್ಯ ಚಕ್ರವರ್ತಿಯ ಸೋದರಳಿಯನಾದ ದಂತಿದುರ್ಗನು, ೨. ರಾಷ್ಟ್ರಕೂಟ ಕೃಷ್ಣನು, ೩. ರಾಷ್ಟ್ರಕೂಟ ೨ನೆಯ ಕಕ್ಕರಾಜನು, ೪. ನಾಡುಗವುಡನೂ ಚಾಳುಕ್ಯ ದಳವಾಯಿಯೂ ಆದ ರಾಹಪ್ಪನು, ೫. ಸಿಲಾಹಾರಮನೆತನದ ಸಣಪಾಲನು ಈ ಐವ್ವರೊಳಗೆ ದಂತಿದುರ್ಗನು ಚಾಳುಕ್ಯ ಸಾರ್ವಭೌಮನ ಆಪ್ತನೂ ರಾಜಧಾನಿಯಲ್ಲೇ ವಾಸಮಾಡಿಕೊಂಡಿರುವವನೂ ಹೆಚ್ಚು ಸಾಹಸಿಯೂ ತಂತ್ರಗಾರನೂ ಆದ್ದರಿಂದ ಸ್ವಾಭಾವಿಕವಾಗಿ ಸಂಚುಗಾರರ ಮುಖ್ಯಸ್ಥನಾದನು. ಇವನು ಹಲವು ಚಾಳುಕ್ಯ ಸರದಾರರನ್ನು ಒಡೆದುಕೊಂಡು ಬಾದಾಮಿಯನ್ನು ಹಿಡಿದುಕೊಂಡನೆಂದು ಮೇಲೆ ಬರೆದಿರುತ್ತೇವಷ್ಟೇ. ಇವನು ಫಿತೂರಮಾಡಿಕೊಂಡವರೊಳಗೆ **ರಾಹಪ್ಪ** ಅಥವಾ ರಾಹಪ್ಯನೆಂಬವನು ಚಾಳುಕ್ಯರ ಪ್ರಮುಖ ದಳವಾಯಿ ಆಗಿದ್ದನೆಂದು ತೋರುತ್ತದೆ. ಇವನ ಮತ್ತು ಸಣಪುಲ್ಲನ ನೆರವಿನಿಂದ ದಂತಿದುರ್ಗನು ಬಾದಾಮಿಯ ನೆರೆನಾಡನ್ನು ತನ್ನ ಕಯ್ವಶಮಾಡಿಕೊಂಡು ಕೀರ್ತಿವರ್ಮನನ್ನು ಬಡಗಲಿಗೆ ಅಟ್ಟಿದನೆಂದು ಹೇಳಬಹುದು (೭೫೪)*. ಮುಂದೆ ಕೀರ್ತಿವರ್ಮನು ದಾರಿಯಲ್ಲಿ ದಂಡನ್ನು ಕೂಡಿಸುತ್ತ ವಿಜಾಪುರ ಜಿಲ್ಲೆ ಇಂಡಿ ತಾಲೂಕಿಗೆ ಹೋಗಿ ಅಲ್ಲಿ ಭೀಮಾನದಿಯ ಕಾಳೆಗದಲ್ಲಿ ರಾಷ್ಟ್ರ

* ಡಾ|| ಫ್ಲೀಟರ ಬರಹದಲ್ಲಿ ಒಂದಕ್ಕೊಂದು ವಿರುದ್ಧವಾದ ೨ ಮಾತುಗಳಿರುತ್ತವೆ. ದಂತಿದುರ್ಗನು ಮಧ್ಯ ಮತ್ತು ದಕ್ಷಿಣ ಭಾಗಗಳಿಂದ ಚಾಳುಕ್ಯರನ್ನು ಓಡಿಸಿದನೆಂದು ೩೮೨ನೆಯ ಪುಟದಲ್ಲಿಯೂ ದಕ್ಷಿಣ ಭಾಗದ ಹೊರತು ಉಳಿದ ಎಲ್ಲ ಚಾಳುಕ್ಯರಾಜ್ಯವನ್ನು ಹಿಡಿದುಕೊಂಡನೆಂದು ೩೮೯ನೆಯ ಪುಟದಲ್ಲಿಯೂ ಬರೆದಿದೆ. ೧ನೆಯ ಬರಹವೇ ಸರಿಯಾದ್ದೆಂದು ನನಗೆ ತೋರುತ್ತದೆ.

ಕೂಟರ ದಂಡನ್ನು ಸೋಲಿಸುವಷ್ಟರಲ್ಲಿ, ದಂತಿದುರ್ಗ ರಾಹಪ್ಪರು ಅಲ್ಲಿಗೆ ದಂಡೆತ್ತಿ ಹೋದರು. ಸಾದಾನೆಯನ್ನು ಬಿಟ್ಟು ಕಾಡಾನೆಯನ್ನು ಬಲೆಯಲ್ಲಿ ಹಿಡಿಯುವಂತೆ, ದಂತಿದುರ್ಗನು ರಾಹಪ್ಪನ ಮುಖಾಂತರ ವಾಗಿ ಕೀರ್ತಿವರ್ಮನ ದಳವಾಯಿಗಳನ್ನು ಒಡೆದುಕೊಂಡುದರಿಂದ ಕಂಗೆಟ್ಟ ಕೀರ್ತಿವರ್ಮನು ದಿಕ್ಕೆಟ್ಟು ಓಡಿ ಹೋದುದರಿಂದ ಚಾಳುಕ್ಯರ ಕಾಟವೇ ಅಳಿದು ಹೋದಂತಾಯಿತು.

ಯಾವುದಾದರೊಂದು ಸಾಮ್ರಾಜ್ಯವನ್ನಾಗಲಿ ರಾಜ್ಯವನ್ನಾಗಲಿ ಮನೆತನವನ್ನಾಗಲಿ ಮುಳುಗಿಸಲಿಕ್ಕೆ ಒಟ್ಟುಗೂಡಿದ ಜನರು ತಮ್ಮ ಬಯಕೆಯು ಪೂರೈಸಿದ ಕೂಡಲೆ ತಮಗೆ ದೊರೆತ ಸಂಪತ್ತನ್ನು ಹಂಚಿ ಕೊಳ್ಳುವಾಗ ಕಡಿದಾಡುತ್ತಾರೆಂಬುದು ಅನುಭವಸಿದ್ಧವಾದ ಮಾತಾಗಿ ರುತ್ತದಷ್ಟೇ. ಹಿಂದೆ ಆಗಿ ಹೋದ ಎಲ್ಲ ರಾಜ್ಯಕ್ರಾಂತಿಗಳಲ್ಲಿ ಒಟ್ಟು ಗೂಡಿದ ಕ್ರಾಂತಿಕಾರಕ ಪ್ರಮುಖರೊಳಗೆ ದಂಡಿನ ಬೆಂಬಲವು ಪೂರ್ಣ ವಾಗಿದ್ದವನೇ ಉಳಿದವರನ್ನು ಮೂಲೆಗೊತ್ತಿ ಎಲ್ಲ ರಾಜ್ಯ ಸಂಪತ್ತಿಗೆ ತಾನೇ ಒಡೆಯನಾಗಿರುತ್ತಾನೆಂಬುದನ್ನು ಮರೆಯಕೂಡದು. ಇಂಗ್ಲಂ ಡದ ರಾಜ್ಯಕ್ರಾಂತಿಯಲ್ಲಿ ಕ್ರಾಮುವೆಲ್ಲನೂ ಫ್ರಾನ್ಸದ ರಾಜ್ಯಕ್ರಾಂತಿ ಯಲ್ಲಿ ನೆಪೋಲಿಯನ್ ಬೊನಾಪಾರ್ಟನೂ ತಮ್ಮ ಸಾಹಾಯಕರೊಡನೆ ದೊರಕಿಸಿದ ಸರ್ವಾಧಿಕಾರವನ್ನು ತಮ್ಮ ಕಯ್ಯಲ್ಲೇ ಇಟ್ಟುಕೊಳ್ಳ ಲಿಲ್ಲವೇ? ಅದರಂತೆಯೇ ಕೃಷ್ಣಕರ್ಕರಾಜ ಸಣಫುಲ್ಲ ರಾಹಪ್ಪರ ನೆರವಿ ನಿಂದ ಸಿಕ್ಕ ಸಾಮ್ರಾಜ್ಯಕ್ಕೆ ದಂಡಿನ ಬೆಂಬಲವಿದ್ದ ದಂತಿದುರ್ಗನು ತಾನೇ ಒಡೆಯನೆಂದು ಸಾರಿದನು (೭೫೭).

ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ ಎಂಬ ಗಾದೆಯನ್ನು ಓದುವವರು ಕೇಳಿರಬಹುದು. ತಮ್ಮ ಕೆಲಸವಿದ್ದಾಗ ಬೇಕಾದ ಜನರು, ಆ ಕೆಲಸವು ತೀರಿದ ಬಳಿಕ, ಬೇಸರಾಗುತ್ತಾರೆಂಬುದೇ ಈ ಗಾದೆಯ ಮಾತಿನ ಅಭಿಪ್ರಾಯವು. ದಂತಿದುರ್ಗನಿಗೆ ಇಷ್ಟು ದಿವಸ ಅವಶ್ಯವಾಗಿದ್ದ ಕೃಷ್ಣಕರ್ಕರಾಜ ಸಣಫುಲ್ಲರ ನೆರವು ಈಗ ಬೇಡಾಯಿತು. ತನ್ನ ಶೌರ್ಯ ಸಾಹಸಗಳಿಂದ ದೊರಕಿಸಿದ ಸಾಮ್ರಾಜ್ಯದೊಳಗೆ ಇವ ರನ್ನು ಏಕೆ ಪಾಲುಗೂಡಿಸಿಕೊಳ್ಳಬೇಕೆಂಬ ದುರಾಶೆಯು ಅವನಲ್ಲಿ

ತಲೆದೋರಿತು. ಇಡಿ ಸಾಮ್ರಾಜ್ಯಕ್ಕೆ ತಾನೇ ಒಡೆಯನಾಗಬೇಕೆಂಬ ಹೆಬ್ಬಯಿಕೆಯು ಅವನಲ್ಲಿ ಹುಟ್ಟಿತು. ಆದ್ದರಿಂದ ಸಂಚುಗಾರರಲ್ಲಿ ಹುಟ್ಟಿದ ದುಸಮುಸು ಮನಸ್ತಾಪ–ವೈಮನಸ್ಸುಗಳಲ್ಲಿ ಪರಿಣಮಿಸಿತು. ಈ ಬಡಿದಾಟವು ಹೇಗೆ ಮುಗಿಯಿತೆಂಬುದನ್ನು ನಿಶ್ಚಯವಾಗಿ ಹೇಳಲಾರೆವು. ಏಕೆಂದರೆ ಈ ವಿಷಯಕ್ಕೆ ಸಂಬಂಧಿಸಿದ ೩ ಶಾಸನಗಳಲ್ಲಿ ೩ ಭಿನ್ನ ಭಿನ್ನ ತರದ ಬರಹಗಳಿರುತ್ತವೆ. ದಂತಿದುರ್ಗನು ಸಂತತಿಯಿಲ್ಲದೆ ಸತ್ತನೆಂದು ಒಂದರಲ್ಲಿಯೂ, ದಂತಿದುರ್ಗನ ತರುವಾಯ ಕೃಷ್ಣನು ಚಾಳುಕ್ಯ ಸಾಮ್ರಾಜ್ಯಕ್ಕೆ ಒಡೆಯನಾದನೆಂದು ಮತ್ತೊಂದರಲ್ಲಿಯೂ, ದಂತಿದುರ್ಗನು ಕೆಟ್ಟದಾರಿಯನ್ನು ಹಿಡಿದುದರಿಂದ ಅವನ ಆಪ್ತನಾದ ಕೃಷ್ಣನು ಅವನನ್ನು ಬದಿಗೊತ್ತಿ ಎಲ್ಲ ರಾಜ್ಯವನ್ನು ತಾನೇ ಆಕ್ರಮಿಸಿದನೆಂದು ೩ನೆಯ ಶಾಸನದಲ್ಲಿಯೂ ಬರೆದಿದೆ*. ಕಡಬದ ಒಂದು ಶಾಸನವು ದಂತಿದುರ್ಗನನ್ನು **ವೈರಮೇಘ**ನೆಂದು ಕರೆಯುತ್ತದೆ. ಇದರಿಂದ ದಂತಿದುರ್ಗ ಕೃಷ್ಣರ ನಡುವೆ ಕಡುದ್ವೇಷವುಂಟಾಗಿತ್ತೆಂದು ಹೇಳಬಹುದು. ದಂತಿದುರ್ಗನು ಸ್ವಾಭಾವಿಕವಾಗಿ ಸತ್ತಿರಬಹುದು ಅಥವಾ ಕೃಷ್ಣನು ಅವನಿಂದ ಸರ್ವಾಧಿಕಾರವನ್ನು ಕಿತ್ತಿಕೊಂಡಿರಬಹುದು. ಈ ಎರಡರಲ್ಲಿ ಯಾವುದೇ ಮಾತು ನಿಜವಾಗಿರಲಿ, ದಂತಿದುರ್ಗನ ತರುವಾಯ ಕೃಷ್ಣನೇ ಚಾಳುಕ್ಯ ಸಾಮ್ರಾಜ್ಯಕ್ಕೆ ಒಡೆಯನಾದನೆಂದು ಧಾರಾಳವಾಗಿ ಹೇಳಬಹುದು.

ಇನ್ನೊಂದು ಸಣ್ಣ ಪ್ರಶ್ನವು ಇಲ್ಲಿ ತಲೆದೋರುತ್ತದೆ. ರಾಷ್ಟ್ರಕೂಟ ಕೃಷ್ಣನು ದಂತಿದುರ್ಗನ ಕಕ್ಕನಾಗಿದ್ದನೆಂದು ಡಾ॥ ಫ್ಲೀಟರು ಬರೆಯುತ್ತಾರೆ. ಆದರೆ ಈ ಬರಹಕ್ಕಿದ್ದ ಆಧಾರವನ್ನು ಅವರು ಕೊಟ್ಟಿಲ್ಲ. ಇವರಿಬ್ಬರು ರಾಷ್ಟ್ರಕೂಟರು ಅಥವಾ ನಾಡುಗವುಡರಾಗಿದ್ದರೂ ಒಂದೇ ಮನೆತನದವರಾಗಿದ್ದರೂ ಅವಿಭಕ್ತ ಕುಟುಂಬದವರಾಗಿದ್ದರೆಂದು ನಾನು ಒಡಂಬಡಲಾರೆನು. ಏಕೆಂದರೆ ಮೇಲೆ ಉದಾಹರಿಸಿದ ಒಂದು ಶಾಸನದಲ್ಲಿ ಕೃಷ್ಣನು ದಂತಿದುರ್ಗನ ಆಪ್ತನಾಗಿದ್ದನೆಂದು ಬರೆದಿದೆ ಹೊರತು ದೊಡ್ಡಪ್ಪ ಅಥವಾ ಚಿಕ್ಕಪ್ಪನಾಗಿದ್ದನೆಂದು

* ಇಂಡಿಯನ್ ಆಂಟಿಕ್ವರಿ, ಸಂ. ೧೩, ಪು. ೧೬೩, ೧೮೭, ೨೮೭.

ಹೇಳಿಲ್ಲ. ಇದಲ್ಲದೆ ಕೃಷ್ಣ ದಂತಿದುರ್ಗರು ಒಂದೇ ಅವಿಭಕ್ತ ಕುಟುಂಬ ದವರಾಗಿದ್ದರೆ, ಕೃಷ್ಣನು ದಂತಿದುರ್ಗನ ಚಿಕ್ಕಪ್ಪನಾಗಲಿ ದೊಡ್ಡಪ್ಪ ನಾಗಲಿ ಆಗಿರಲಿಕ್ಕೆ ಬೇಕು. ಅವನು ದೊಡ್ಡಪ್ಪನಾಗಿದ್ದರೆ ಅವನು ರಾಜ್ಯಕ್ರಾಂತಿಯ ಸೂತ್ರಧಾರನೇ ಆಗಿರಬೇಕಲ್ಲವೇ? ದಂತಿದುರ್ಗನು ಅವನ ಕಯ್ಕೆಳಗಿನವನಾಗಿ ಅವನು ಹೇಳಿದಷ್ಟು ಕೆಲಸಮಾಡುವವ ನಾದ್ದರಿಂದ ಚಾಳುಕ್ಯ ಸಾಮ್ರಾಜ್ಯವು ಅವನ ಕಯ್ಸೇರಲಾರದು. ಆದರೆ ಅದು ಅವನ ಕಯ್ಸೇರಿತ್ತೆಂತಲೂ ಕೃಷ್ಣನು ಅದನ್ನು ಕಸಿದು ಕೊಂಡನೆಂತಲೂ ಶಾಸನಗಳು ಸಾರುತ್ತಿರುವುದರಿಂದ ಅವನು ದೊಡ್ಡಪ್ಪನಾಗಿದ್ದಿಲ್ಲೆಂದು ನಿಶ್ಚಯವಾಗಿ ಹೇಳಬಹುದು. ಕೃಷ್ಣನು ದಂತಿದುರ್ಗನ ಚಿಕ್ಕಪ್ಪನಾಗಿದ್ದರೆ ದಂತಿದುರ್ಗನೇ ಹಿರಿಯ ಮನೆತನ ದವನಾದ್ದರಿಂದ ಅವನು ಚಾಳುಕ್ಯ ಸಾಮ್ರಾಜ್ಯವನ್ನು ತನ್ನ ಮಕ್ಕಳಿ ಗಾಗಲಿ ಬೇರೆ ಬಾಧ್ಯಸ್ಥರಿಗಾಗಲಿ ಕೊಡಲಿಕ್ಕೆ ಮಾಡಿದ ಪ್ರಯತ್ನದಲ್ಲಿ ದೋಷವೇನೂ ಕಂಡುಬರುವುದಿಲ್ಲ. ಆದರೆ ಅವನು ಅಥವಾ ಅವನ ಸ್ಥಾನಾಪನ್ನನು ದೋಷಯುಕ್ತವಾದ ವಿಚಾರಗಳನ್ನು ಮಾಡತೊಡ ಗಿದನೆಂದು ಕೆಲ ಶಾಸನಗಳು ಹೇಳುತ್ತವೆ. ಆದಕಾರಣ ಅವನು ದಂತಿ ದುರ್ಗನ ಚಿಕ್ಕಪ್ಪನಾಗಿದ್ದರೂ ಅವಿಭಕ್ತಕುಟುಂಬದವನಾಗಿರಲಿಕ್ಕಿಲ್ಲ. ಹಾಗಾದರೆ ದಂತಿದುರ್ಗ ಕೃಷ್ಣರ ಸಂಬಂಧವೇನಿರಬಹುದು? ಅವರಿ ಬ್ಬರು ರಾಷ್ಟ್ರಕೂಟ ಅಥವಾ ನಾಡುಗವುಡರೆಂಬ ಒಂದೇ ಅಡ್ಡಹೆಸರಿನ ಒಂದೇ ಮನೆತನದ ವಿಭಕ್ತ ಕುಟುಂಬದವರಾಗಿದ್ದು ಕರ್ಕರಾಜನೆಂಬ ಮತ್ತೊಬ್ಬ ನಾಡುಗವುಡನನ್ನೂ ಸಣಪುಲ್ಲನೆಂಬ ಬೇರೆ ಮನೆತನದ ದಳವಾಯಿಯನ್ನೂ ರಾಹಪ್ಪನೆಂಬ ಚಾಳುಕ್ಯ ದಳವಾಯಿಯನ್ನೂ ಕೂಡಿ ಕೊಂಡು ಚಾಳುಕ್ಯ ಚಕ್ರವರ್ತಿಗಳ ವಿರುದ್ಧವಾಗಿ ಒಳಸಂಚು ನಡಿಸಿ, ಮುಂದೆ ತಂತಮ್ಮೊಳಗೆ ಜಗಳಾಡಿದರೆಂಬುದೇ ನನ್ನ ಅನುಮಾನವು. ಈಗ ನಮ್ಮ ತಾಯ್ನಾಡಿನಲ್ಲಿ ಎಷ್ಟೋ ದೇಸಾಯಿ ದೇಶಪಾಂಡೆ ಮನೆತನ ಗಳಿರುತ್ತವಷ್ಟೇ. ಅವರೆಲ್ಲರು ಒಂದೇ ವಂಶದವರಾಗಿರುತ್ತಾರೆಂದೂ ಒಂದೇ ಅವಿಭಕ್ತಕುಟುಂಬದವರೆಂದೂ ಎಣಿಸುವದು ಎಷ್ಟು ತಪ್ಪೋ, ಅಷ್ಟೇ ಈ ಅಯ್ದು ಅಥವಾ ಮೂರು ಮಂದಿ ಸಂಚುಗಾರರು ಒಂದೇ

ವಂಶದವರೂ ಒಂದೇ ಅವಿಭಕ್ತಕುಟುಂಬದವರೂ ಆಗಿದ್ದರೆಂಬುದು ತಪ್ಪಾದ ವಿಚಾರವು ಇರುತ್ತದೆಂದು ನನ್ನ ತಿಳಿವಳಿಕೆ. ಮುಂದೆ ಹೊಸ ಶೋಧಗಳು ಹೊರಬಿದ್ದಂತೆ ಈ ಅನುಮಾನದಲ್ಲಿ ಹೆಚ್ಚು ಕಡಮೆ ಮಾಡ ಬೇಕಾಗುವುದೆಂಬುದನ್ನು ವಾಚಕರು ಮರೆಯಕೂಡದು.

ದಂತಿದುರ್ಗ ಕೃಷ್ಣರ ಸಂಬಂಧವನ್ನು ಕುರಿತು ಇಷ್ಟು ವಿಚಾರ ವಾಯಿತು. ಇನ್ನು ಈ ಸಂಚುಗಾರರೊಳಗೆ ಕರ್ಕರಾಜನೆಂಬುವ ನೊಬ್ಬನು ಇದ್ದನೆಂದು ಮೇಲೆ ಬರೆದಿರುತ್ತೇವಷ್ಟೇ. ಈ ಕರ್ಕನು ಯಾರು? ಇವನು ದಂತಿದುರ್ಗ ಕೃಷ್ಣರ ಮನೆತನಕ್ಕೆ ಹೊಂದಿದವ ನಾದರೂ ದಂತಿದುರ್ಗನ ಅಜ್ಜನಾದ ಕರ್ಕರಾಜನಿಂದ ಭಿನ್ನನಾಗಿರ ಲಿಕ್ಕೇ ಬೇಕು. ತಂದೆಯು ತನ್ನ ಮಗನಿಗೆ ತನ್ನ ಹೆಸರನ್ನು ಇಡುವ ಸಾಂಪ್ರದಾಯವಿಲ್ಲುದರಿಂದ ಇವನು ಕೃಷ್ಣನ ಅಣ್ಣ ತಮ್ಮನಾಗ ಲಾರನು. ಆದ್ದರಿಂದ ಇವನು ದಂತಿದುರ್ಗನ ವಿಭಕ್ತ ತಮ್ಮನಾಗಿರ ಬಹುದೆಂದು ತೋರುತ್ತದೆ. ಇನ್ನೂ ಈ ಮುವ್ವರು ನಾಡುಗವುಡರು ಎಲ್ಲೆಲ್ಲಿ ಆಳುತ್ತಿದ್ದರೆಂಬ ಪ್ರಶ್ನವು ತಲೆದೋರುತ್ತದೆ. ಇದನ್ನು ಬಿಡಿಸ ಲಿಕ್ಕೆ ಶಾಬ್ದ ಪ್ರಮಾಣಗಳು ನಮಗೆ ಇನ್ನೂ ದೊರೆತಿಲ್ಲ. ಆದರೂ ಈ ಮುವ್ವರು ನಮ್ಮ ತಾಯ್ನಾಡಿನ ಉತ್ತರ ಪೂರ್ವ ಭಾಗಗಳಲ್ಲಿ ನಾಡು ಗವುಡರಾಗಿದ್ದರೆಂದು ಸಾಮಾನ್ಯವಾಗಿ ಹೇಳಿದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

ಇನ್ನು ದಂತಿದುರ್ಗನು ವಿಶ್ವಪ್ರಯತ್ನಮಾಡಿ ಗಳಿಸಿದ ಚಾಳುಕ್ಯ ಸಾಮ್ರಾಜ್ಯವು ಏನು ಕಾರಣ ಕೃಷ್ಣನ ಕಯ್ಸೇರಿತೆಂಬುದನ್ನು ನಿರ್ಣ ಯಿಸಬೇಕಾಗಿದೆ. ದಂತಿದುರ್ಗನು ಕೊನೆಗೆ ಅಪ್ರಿಯನಾದ್ದರಿಂದ ಸರ ದಾರರು ಅವನನ್ನು ಪಟ್ಟದಿಂದ ತಳ್ಳಿ ಅವನ ಕಕ್ಕನಾದ ಕೃಷ್ಣನನ್ನು ಪಟ್ಟದಮೇಲೆ ಕೂಡ್ರಿಸಿದರೆಂದು ಡಾ|| ಫ್ಲೀಟರು ಬರೆಯುತ್ತಾರೆ*. ಆದರೆ ಈ ಅಭಿಪ್ರಾಯವು ನಂಬಲಿಕ್ಕೆ ಯೋಗ್ಯವಾದ್ದಲ್ಲೆಂದು ನನ್ನ ಅಲ್ಪಮತಿಗೆ ತೋರುತ್ತದೆ. ಕಾವಿಯ ಮತ್ತು ನವಸರಿಯ ಶಾಸನ ಗಳಲ್ಲಿ ದಂತಿದುರ್ಗನು ಸತ್ತಬಳಿಕ, ಕೃಷ್ಣನು ಪಟ್ಟವೇರಿದನೆಂದು ಸ್ಪಷ್ಟ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೩೮೯.

ವಾಗಿ ಬರೆದಿದೆ. ೧ನೆಯ ಶತಮಾನದ ಕರ್ಡೆಯ ಶಾಸನದಲ್ಲಿ ದಂತಿದುರ್ಗನು ಮಕ್ಕಳಿಲ್ಲದೆ ಸತ್ತುದರಿಂದ, ಕೃಷ್ಣನು ಪಟ್ಟವೇರಿದನೆಂದು ಬರೆದಿದೆ. ಬಡೋದೆಯ ಒಂದು ಶಾಸನದಲ್ಲಿ ಕೊಟ್ಟ ಕೃಷ್ಣನ ವಂಶಾವಳಿಯಲ್ಲಿ ದಂತಿದುರ್ಗನ ಹೆಸರೇ ಕಂಡುಬರುವುದಿಲ್ಲ. ಅವನು ಬೇರೆ ಮನೆತನದವನಾದ್ದರಿಂದ ಅವನ ಹೆಸರನ್ನು ಬಿಟ್ಟಿರಬಹುದೆಂದು ಡಾ॥ ಭಾಂಡಾರಕರರು ಬರೆಯುತ್ತಾರೆ*. ಅದೇ ಶಾಸನದಲ್ಲಿ ತನ್ನ ಮನೆತನದ ಒಬ್ಬ ಅರಸನು ಕುಮಾರ್ಗಿಯಾಗಿ ಸಾಮ್ರಾಜ್ಯ ವೈಭವವನ್ನು ತನ್ನ ಮನೆತನದಲ್ಲೇ ಇಟ್ಟುಕೊಳ್ಳಲಿಕ್ಕೆ ಎತ್ತುಗಡೆ ಮಾಡತೊಡಗಿದ್ದರಿಂದ ಕೃಷ್ಣನು ಅವನ ಮೂಲೋತ್ಪಾಟನಮಾಡಿ, ಅವನ ಪಟ್ಟವನ್ನು ಕಸಿದುಕೊಂಡನೆಂದು ಹೇಳಿದೆ. ದಂತಿದುರ್ಗನೇ ಈ ಅರಸನಾಗಿದ್ದನೆಂದು ಡಾ॥ ಫ್ಲೀಟರು ಊಹಿಸುತ್ತಾರೆ. ಆದರೆ ಈ ಊಹೆಯು ತಪ್ಪೆಂದು ಧಾರಾಳವಾಗಿ ಹೇಳಬಹುದು. ಏಕೆಂದರೆ, ಈ ದುರ್ಮಾರ್ಗಿಯಾದ ಅರಸನು ದಂತಿದುರ್ಗನ ಮಗನಾಗಿರಬಹುದೆಂತಲೂ ಕರ್ಡೆಯ ಶಾಸನದಲ್ಲಿ ದಂತಿದುರ್ಗನಿಗೆ ಮಕ್ಕಳಿದ್ದಿಲ್ಲೆಂದು ಬರೆದ ಮಾತು ತಪ್ಪಾಗಿರಬಹುದೆಂತಲೂ ಡಾ॥ ಭಾಂಡಾರಕರರು ಅಭಿಪ್ರಾಯಪಡುತ್ತಾರೆ*. ಇದಲ್ಲದೆ ಡಾ॥ ಸುಕ್ಥಣಕರರು ಇತ್ತಲಾಗಿ ಭಾರತ ಶಾಸನ ಮಾಸಪತ್ರಿಕೆ (*Epigraphia Indica*) ಯಲ್ಲಿ ಶೋಧಿಸಿ ಮುದ್ರಿಸಿದ ೧ನೆಯ ಕೃಷ್ಣರಾಜನ ೬೯೪ನೆಯ ಶಕದ ಭಂಡಕ ತಾಮ್ರಶಾಸನದಿಂದ ದಂತಿದುರ್ಗನ ವಿಷಯವಾಗಿ ಡಾ॥ ಫ್ಲೀಟರು ಬರೆದ ಸಂಗತಿಯು ತೀರ ತಪ್ಪಾಗಿರುತ್ತದೆಂದು ಸಿದ್ಧವಾಗುತ್ತದೆ. ಆದಕಾರಣ ಆ ಶಾಸನದ ಮುಖ್ಯ ಭಾಗವನ್ನು ಉದ್ಧರಿಸಿ ಕೆಳಗೆ ಕೊಡುತ್ತೇವೆ:—

೧೪. ..............ತನೂಜಃ ಸದ್ರಾಷ್ಟ್ರಕೂಟ.

೨ನೆಯ ತಗಡು, ೧ನೆಯ ಮಗ್ಗಲು

೧೫. (ಟ) ಕನಕದ್ರಿರಿವೇಂದ್ರರಾಜಃ (॥ ೭ ॥) ತಸ್ಯ ದ್ವಿಜ ಜನಾಶ್ರಾಂತ ಶಾಂತಿವಾಚನ ವಾರಿ

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೧೯೫.

೧೬. ಣಾ ಪ್ರತ್ಯಹಂ ಗುಲ್ಫದಘ್ನೇನ ಜನಶ್ಚರತಿ ಮಂದಿರೇ (॥ ೮ ॥) ಸೇವಾಸಮಾಯಾತ ಬೃಹ

೧೭. ನರೇಂದ್ರವೃಂದಾಭಿವಂದ್ಯಂಘ್ರಿಯುುಗಸ್ಯಾ ಅಮ್ಲಾನವ ಕ್ತ್ರೈಲಸ್ತ್ರಿಜಗತ್ಪ್ರವೀಣೈಃ ಸಂ

೧೮. ಸೇವ್ಯತೇ ಶ್ರೀಃ ಸಜನ್ಯೈರಜಸ್ರಂ (॥ ೯ ॥) ಪೂರಿತಾಶಾಶುಚಿ ರ್ಧ್ವಸ್ತಧ್ವಾಂತ ಜ್ಯೋತ್ಸ್ನೇವ ಮಾತೃತಃ

೧೯. ರಾಜ್ಞೀ ಸೋಮಾನ್ವಯಾ ತಸ್ಯ ಪಿತೃತಶ್ಚ ಚುಲುಕ್ಯಜಾ (॥ ೧೦ ॥) ಶ್ರೀಮದ್ಭವಗಣಾ ನಾಮ ಸಾ

೨೦. ಧ್ವೀನಾಮುಪಮಾಪದಂ ರಕ್ಷಣಾದ್ಭರಣಾಲ್ಲೋಕಂ ಯಾ ಚಕಾರ ನಿರಾಪದಂ (॥ ೧೦ ॥) ಸನಯಂತ

೨೧. ನಯಂ ತಸ್ಯಾಂ ಸ ಲೇಭೆ ಭೂಭೃದುತ್ತಮಃ ನೀತಾವರ್ಥ ಮಿವಾಶೇಷ ಜನತಾ

೨೨. ಪ್ರಾರ್ಥಿತಾಯ ತಿಂ (॥ ೧೨ ॥) ಸ್ಪಷ್ಟ ತೇಜಃ ಸ್ವಧಾ ಮೌಘಃ ಪ್ರಸಾಧಿತ ದಿಗಂತರಾಂ ಶ್ರೀ

೨೩. ದಂತಿದುರ್ಗರಾಜಾಖ್ಯಂ ಸ್ವಕುಲಾಂಭೋಜ ಭಾಸ್ಕರಂ (॥ ೧೩ ॥) ಅಸ್ಯಾಜೌ ರಣಸಿಂಘಸ್ಯ ವಿ

೨೪. ತ್ರಸ್ತಾ ವೈರವಾರಣಾಃ ಸ್ವಲಜ್ಜಾಸ್ತಂಭಮುನ್ಮೂಲ್ಯ ಜ್ಞಾಯಂತೆ ಕ್ವಾಪಿ ನೋಗತಾಃ (॥ ೧೪ ॥) ಸಾಟ್ಟಾ

೨೫. ಲಕಾನಿ ದುರ್ಗಾಣಿ ಹೃದಯ್ಯೈಃ ಸಹ ವಿದ್ವಿಷಾಂ ಪತಂತಿ ಯತ್ರತಾಪೋಗ್ರಕೋಪಾಂಕು

೨೬. ರಸಮುದ್ಭವೇ (॥ ೧೫ ॥) ಮಾತೃಭಕ್ತಿಃ ಪ್ರತಿಗ್ರಾಮಂ ಗ್ರಾಮ ಲಕ್ಷ ಚತುಷ್ಟಯೇ ದದತ್ಯಾ ಭೂಪ್ರದಾ

೨೭. ನಾಪಿ ಯಸ್ಯಮಾತ್ರಾ ಪ್ರಕಾಶಿತಾ (॥ ೧೬ ॥) ಕಾಂಚೀಶ ಕೇರಲ ನರಾಧಿಪ ಚೋಲ ಪಾಂಡ್ಯ ಶ್ರೀಹ

೨೮. ರ್ಷ ವಜ್ರಟ ವಿಭೇದ ವಿಧಾನದಕ್ಷಂ ಯೋ ವಲ್ಲಭಂ ಸಪದಿ ದಂಡಬಲೇನ ಜಿತ್ವಾ ರಾಜಾ

೨ನೆಯ ತಗಡಿನ ೨ನೆಯ ಮಗ್ಗಲು

೨೯. ಧಿರಾಜ ಪರಮೇಶ್ವರತಾಮುವಾಪ (॥ ೧೭ ॥) ಆಸೇತೋ ರ್ವಿಪುಲೋಪಲಾವಲಿಲಸಲ್ಲೋಲೋ

೩೦. ರ್ಮಿರ್ವೇಲಾಜಲಾದಾ ಪ್ರಾಲೇಯ ಕಲಂಕಿತಾಮಲ ಶಿಲಾ ಜಾಲಾತ್ತುಷಾರಾಚಲಾದಾಪೂರ್ವಾಪ

೩೧. ರ ವಾರಿರಾಶಿ ಪುಲಿನಪ್ರಾಂತ ಪ್ರಸಿದ್ಧಾವಧೇಃ ಯೇನೇಯಂ ಜಗತೀ ಸ್ವವಿಕ್ರಮಬಲೇನೈಕಾತ

೩೨. ಪತ್ರೀಕೃತಾ (॥ ೧೮ ॥) ತಸ್ಮಿನ್ದಿವಂ ಪ್ರಯಾತೇ ವಲ್ಲಭ ರಾಜೇಕ್ಷತ ಪ್ರಜಾಬಾಧಃ ಶ್ರೀ ಕಕ್ಕರಾ

೩೩. ಜಸೂನುರ್ಮಹೀಪತಿಃ ಕೃಷ್ಣರಾಜೋಭೂತ್ (॥ ೧೯ ॥).

ದಂತಿದುರ್ಗನ ವಿಷಯವಾಗಿ ಡಾ॥ ಫ್ಲೀಟರು ಮಾಡಿದ ಊಹೆಯು ತೀರ ತಪ್ಪಾಗಿರುತ್ತದೆಂದು ತೋರಿಸುವುದಕ್ಕೆ ಇಷ್ಟು ಉದ್ದವಾದ ಅವತರಣವನ್ನು ಕೊಟ್ಟಿರುತ್ತೇವೆಂಬ ಮಾತು ಸುಜ್ಞರಾದ ವಾಚಕರ ಲಕ್ಷ್ಯಕ್ಕೆ ಕೂಡಲೇ ಬಂದಿರಬಹುದು. ದಂತಿದುರ್ಗನು ದುರ್ಮಾರ್ಗಿಯಾಗಿದ್ದರೆ ಮತ್ತು ಕೃಷ್ಣನು ಅವನನ್ನು ಪಟ್ಟದಿಂದ ತಳ್ಳಿ ತಾನೇ ಚಕ್ರವರ್ತಿಯಾಗಿದ್ದರೆ, ಕೃಷ್ಣನು ತನ್ನ ಸ್ವಂತ ಶಾಸನದಲ್ಲಿ ಅವನ ಹೆಸರನ್ನು ಸ್ವಾಭಾವಿಕವಾಗಿ ಬಿಟ್ಟುಕೊಡುತ್ತಿದ್ದನೆಂಬುದಕ್ಕೆ ಸಂದೇಹವಿಲ್ಲ. ಆದರೆ ಅವನು ಹಾಗೆ ಮಾಡದೆ ಅವನನ್ನು ಮನಃಪೂರ್ವಕವಾಗಿ ಸ್ತುತಿಸಿರುತ್ತಾನೆಂದು ಮೇಲಿನ ಅವತರಣದಿಂದ ಸ್ಪಷ್ಟವಾಗಿ ಕಂಡುಬರುತ್ತದೆ. ಅವನನ್ನು **ಸ್ವಕುಲಾಂಭೋಜಭಾಸ್ಕರ**ನೆಂತಲೂ **ರಣಸಿಂಘ**ನೆಂತಲೂ **ಮಾತೃಭಕ್ತ**ನೆಂತಲೂ ವಲ್ಲಭನನ್ನು ತುಸು ಕಾಲದಲ್ಲಿ ಗೆದ್ದು **ರಾಜಾಧಿರಾಜ ಪರಮೇಶ್ವರ** ಪದವಿಯನ್ನು ದೊರಕಿಸಿದವನೆಂತಲೂ ಜಗತ್ತನ್ನು **ಏಕಾತಪತ್ರೀ** ಮಾಡಿದವನೆಂತಲೂ ಪರಿಪರಿಯಾಗಿ ಹೊಗಳುವ ಕೃಷ್ಣನು ದಂತಿದುರ್ಗನನ್ನು ವಿರೋಧಿಸಿ ಅವನನ್ನು ಪಟ್ಟದಿಂದ ತಳ್ಳಿದವನಾಗಲಿ

ಅವನನ್ನು ಕೊಲ್ಲಿಸಿದವನಾಗಲಿ ಆಗಿರುವ ಸಂಭವವುಂಟೇ? ಎಂದೂ ಇರಲಾರದು. ಆದ್ದರಿಂದ ಡಾ॥ ಭಾಂಡಾರಕರರು ಬರೆಯುವಂತೆ ದಂತಿದುರ್ಗನ ಮಗನಾಗಲಿ ಅವನ ಸ್ಥಾನಾಪನ್ನನಾದ ಮತ್ತೊಬ್ಬ ಆಪ್ತನಾಗಲಿ ದುರ್ವಿಚಾರದವನಾಗಿ ಸ್ವಾರ್ಥಪರನಾದ್ದರಿಂದ ಉಳಿದ ೪ ಮಂದಿ ಸಂಚುಗಾರರು—ಕೃಷ್ಣ ಕರ್ಕ ಸಣಫುಲ್ಲ ರಾಹಪ್ಪರು ಒಟ್ಟುಗೂಡಿ ಅವನ ಪಟ್ಟವನ್ನು ಕಸಿದುಕೊಂಡು, ಅದನ್ನು ಕೃಷ್ಣನಿಗೆ ಕೊಟ್ಟರೆಂದು ನಿರ್ಣಯಿಸಲಿಕ್ಕೆ ಏನೂ ಅಡ್ಡಿಯಿಲ್ಲ. ಮೇಲೆ ಕೊಟ್ಟ ಅವತರಣದಲ್ಲಿ ಕೃಷ್ಣನಿಗೆ ಕೊಟ್ಟ **ಕ್ಷತಪ್ರಜಾಬಾಧ** ಎಂಬ ವಿಶೇಷಣದಿಂದ ದಂತಿದುರ್ಗನ ತರುವಾಯ ಆದ ಚಕ್ರವರ್ತಿಯು ದುರ್ನಡತೆಯುವನಾಗಿದ್ದನೆಂದು ಊಹಿಸಬಹುದು.

ಇನ್ನು ಡಾ॥ ಫ್ಲೀಟರು ಶ್ರಮಬಟ್ಟು ತಯಾರಿಸಿದ ಮಳಖೇಡದ ರಾಷ್ಟ್ರಕೂಟರ ಅರಸುಮನೆತನದ ವಂಶಾವಳಿಯನ್ನು ಕೊಟ್ಟು ಈ ಅಧ್ಯಾಯವನ್ನು ಮುಗಿಸುವೆವು. ಕಂಸಗಳಲ್ಲಿ ಕೊಟ್ಟ ಅಂಕಿಗಳು ಆಳಿದ ಅರಸರ ಅನುಕ್ರಮ ಸಂಖ್ಯೆಗಳಾಗಿರುತ್ತವೆ.

ಡಾ॥ ಫ್ಲೀಟರು ಕೊಟ್ಟ ಮಳಖೇಡದ ರಾಷ್ಟ್ರಕೂಟ (ನಾಡುಗವುಡ)ರ ವಂಶಾವಳಿಯು:—




(೩) ೨ ನೆಯ ಗೋವಿಂದ
(೪) ಧಾರಾವರ್ಷ ಕಲಿವಲ್ಲಭ ನಿರುಪಮ ಧ್ರುವ
ಗುಜರಾಥದ ೨ ನೆಯ ಮನೆತನ
(೫) ಪ್ರಭೂತವರ್ಷ ಶ್ರೀವಲ್ಲಭ ಜಗತ್ತುಂಗ ೩ ನೆಯ ಗೋವಿಂದ (ರಾಣಿ ಗಾಮುಂಡಬ್ಬೆ) ೭೮೪–೮೧೫
ಇಂದ್ರರಾಜ.
ಸುವರ್ಣವರ್ಷ ಕರ್ಕರಾಜ ೮೧೧–೧೨
ಪ್ರಭೂತವರ್ಷ ಗೋವಿಂದ ರಾಜ, ೮೧೨–೮೨೭
(೬) ನೃಪತುಂಗ ಮಹಾರಾಜ ಶರ್ವ ೧ ನೆಯ ಅಮೋಘವರ್ಷ, ೮೧೫–೮೭೮
ಧಾರಾವರ್ಷ ನಿರುಪಮ ಧ್ರುವರಾಜ, ೮೩೪–೩೫
ಅಕಾಲವರ್ಷ ಶುಭತುಂಗ
(೭) ಅಕಾಲವರ್ಷ ಶುಭತುಂಗ ೨ ನೆಯ ಕೃಷ್ಣ ೮೮೮–೯೧೨
ಧಾರಾವರ್ಷ ನಿರುಪಮ ಧ್ರುವರಾಜ, ೮೬೬–೬೭
ಮತ್ತೊಬ್ಬ ಮಗ
ಗೋವಿಂದರಾಜ
೨ ನೆಯ ಜಗತ್ತುಂಗ
ದಂತಿವರ್ಮ (?)
ಅಕಾಲವರ್ಷ ಕೃಷ್ಣರಾಜ, ೮೮೮
ಪಟ್ಟದರಾಣಿ ಲಕ್ಷ್ಮಿಯಿಂದ
೨ ನೆಯ ರಾಣಿ ಗೋವಿಂದಾಂಬೆಯಿಂದ
ನಿತ್ಯವರ್ಷ ೩ ನೆಯ ಇಂದ್ರ ರಾಣಿವಿಜಯಾಂಬೆ. ೯೧೫–೯೧೭
ಅಮೋಘವರ್ಷ ವಡ್ಡಿಗ ರಾಣಿ ಕುಂದಕದೇವಿ
೨ ನೆಯ ಅಮೋಘವರ್ಷ
ಪ್ರಭೂತವರ್ಷ, ಸುವರ್ಣವರ್ಷ ನೃಗತುಂಗ ೪ ನೆಯ ಗೋವಿಂದ ೯೧೮–೯೩೩




ಮೊದಲಿನ ಗುಜರಾಥದ ಮನೆತನವು:—




---

## ೨ ನೆಯ ಅಧ್ಯಾಯ

### ರಾಷ್ಟ್ರಕೂಟ (ನಾಡುಗವುಡ)ರ ರಾಜ್ಯಸಂಪಾದನೆಯೂ ಒಳಜಗಳವೂ

ರಾಷ್ಟ್ರಕೂಟ ದಂತಿದುರ್ಗನು ಬೇರೆ ನಾಲ್ಕು ಮಂದಿ ಪ್ರಮುಖ ಸರದಾರರೊಡನೆ ಒಳಸಂಚು ನಡಿಸಿ, ಚಾಳುಕ್ಯ ಸಾರ್ವಭೌಮನಾದ ೨ನೆಯ ಕೀರ್ತಿವರ್ಮನ ಸಾಮ್ರಾಜ್ಯವನ್ನು ಸೆಳೆದುಕೊಂಡು, ಎಲ್ಲ ರಾಜ್ಯಸಂಪತ್ತನ್ನು ತಾನೇ ನುಂಗಬೇಕೆಂಬ ದುರಾಶೆಗೆ ಒಳಗಾಗಿ, ತನಗೆ ನೆರವಾದ ಸಂಚುಗಾರರನ್ನು ಬದಿಗೊತ್ತಿ ತಾನೊಬ್ಬನೇ ಇಡಿ ಸಾಮ್ರಾಜ್ಯಕ್ಕೆ ಒಡೆಯನಾಗಲಿಕ್ಕೆ ಹವಣಿಸಿದನೆಂದು ಹಿಂದಿನ ಅಧ್ಯಾಯದಲ್ಲಿ ಬರೆದಿರುತ್ತೇವಷ್ಟೇ. ಈ ದಂತಿದುರ್ಗನು ಮೂಲಿಗೊತ್ತಿದ ೪ ಮಂದಿ ಸಂಚುಗಾರರೊಳಗೆ ಕರ್ಕರಾಜನೆಂಬುವನು ಉಳಿದ ಮೂವ್ವರಂತೆ ದಂತಿದುರ್ಗನೊಡನೆ ಕಡಿದಾಡಲಿಕ್ಕೆ ಟೊಂಕ ಕಟ್ಟದೆ, ಲಾಟ ಪ್ರಾಂತದ ಮೇಲೆ ದಂಡೆತ್ತಿಹೋಗಿ, ಅಲ್ಲಿ ಆಳುತ್ತಿದ್ದ ಚಾಳುಕ್ಯ ಮಂಡಲೇಶ್ವರನನ್ನು ಗೆದ್ದು ಅವನಿಂದ ಆ ಪ್ರಾಂತವನ್ನು ಕಿತ್ತಿಕೊಂಡು ಅಲ್ಲಿ ತನ್ನ ಮನೆತನವನ್ನು ಸ್ಥಾಪಿಸಿದನು (೭೫೭)*.

೨ ನೆಯ ಕೀರ್ತಿವರ್ಮನ ವಿರುದ್ಧವಾಗಿ ಎದ್ದ ೫ ಮಂದಿ ಸಂಚುಗಾರರು ಯಾವ ಯಾವ ಪ್ರಾಂತಗಳ ನಾಡುಗವುಡರಾಗಿದ್ದರೆಂಬುದನ್ನು ನಿಶ್ಚಯಿಸಲಿಕ್ಕೆ ನಮಗೆ ಸಾಕಷ್ಟು ಆಧಾರಗಳು ಇನ್ನೂ ದೊರೆತಿಲ್ಲ. ದಂತಿದುರ್ಗನ ಶಾಸನವು ಸಾಮಾನಗಡದಲ್ಲಿ ದೊರೆತುದರಿಂದ ಅವನು ಜಮಖಂಡಿ ಅಥಣಿ ಮಿರಜಿ ಪ್ರಾಂತದ ನಾಡುಗವುಡನಾಗಿದ್ದನೆಂತಲೂ, ಸಣಫುಲ್ಲನು ನಂದಗಡ ಸಾವಂತವಾಡಿ ಪ್ರಾಂತದ ನಾಡುಗವುಡನಾಗಿದ್ದನೆಂತಲೂ, ರಾಹಪ್ಪನು ಲಕ್ಷ್ಮೇಶ್ವರ ಕೊಪ್ಪಳ ಗದಗ ಪ್ರಾಂತದ ನಾಡುಗವುಡನಾಗಿದ್ದನೆಂತಲೂ, ಕರ್ಕರಾಜನು ಮಂಗಳವಾಡಿ ಪಂಢರಪುರ ಪ್ರಾಂತದ ನಾಡುಗವುಡನಾಗಿದ್ದನೆಂತಲೂ, ರಾಷ್ಟ್ರಕೂಟ ಕೃಷ್ಣನು

---

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೩೮೯.

ನಿಜಾಮ ಕರ್ನಾಟಕದ ಲಿಂಗಸೂರ ಸುರಪೂರ ಮಳಖೇಡ ಪ್ರಾಂತದ ನಾಡುಗವುಡನಾಗಿದ್ದನೆಂತಲೂ ಊಹಿಸಿದರೆ ದೊಡ್ಡ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

ಇನ್ನು ಆರಂಭದ ರಾಷ್ಟ್ರಕೂಟ ಅರಸರು ಎಷ್ಟೆಷ್ಟು ಕಾಲ ಆಳಿದರೆಂಬುದನ್ನೂ ಅವರ ಆಳಿಕೆಯಲ್ಲಿ ಯಾವ ಯಾವ ಮಹತ್ವದ ಸಂಗತಿಗಳು ಒದಗಿದವೆಂಬುದನ್ನೂ ವಿವರಿಸುವೆವು.

## ೧. ದಂತಿದುರ್ಗ ಅಥವಾ ೨ ನೆಯ ದಂತಿವರ್ಮ

(೭೫೪-೭೫೮)

ದಂತಿದುರ್ಗನೇ ರಾಷ್ಟ್ರಕೂಟ (ನಾಡುಗವುಡ) ಅರಸುಮನೆತನದ ಮೂಲಸ್ಥಾಪಕನೆಂದು ಧಾರಾಳವಾಗಿ ಹೇಳಬಹುದು. ಏಕೆಂದರೆ, ಇವನ ತರುವಾಯ ಆಳಿದ ಅರಸರೆಲ್ಲ ತಂತಮ್ಮ ಶಾಸನಗಳಲ್ಲಿ ತಮ್ಮ ಹಿಂದಿನ ಅರಸರ ಪಾದಗಳನ್ನು ಧ್ಯಾನಿಸಿ ಪಟ್ಟವೇರಿದರೆಂದು ಬರೆದಿದ್ದು, ಇವನ ಶಾಸನದಲ್ಲಿ ಆ ಪ್ರಕಾರ ಬರೆದಿಲ್ಲ. ಇವನಿಗೆ **ಖಡ್ಗಾವಲೋಕ** (ಕತ್ತಿಯಂತೆ ಹದನಾದ ದೃಷ್ಟಿಯುಳ್ಳವ), **ಸಾಹಸತುಂಗ, ವೀರಮೇಘ** ಎಂಬ ಬಿರುದುಗಳಿದ್ದವು. ಈ ಖಡ್ಗಾವಲೋಕ ಎಂಬ ಬಿರುದಿನ ಅರ್ಥವು ಸರಿಯಾಗಿ ತಿಳಿಯುವುದಿಲ್ಲ. ಇದರಿಂದ ಅವನ ಕ್ರೌರ್ಯವಾಗಲಿ ಶೌರ್ಯವಾಗಲಿ ಸಾಮರ್ಥ್ಯವಾಗಲಿ ವಿಶೇಷವಾಗಿ ಬೋಧವಾಗುತ್ತಿರಬಹುದು. ಇವನ ಕಾಲದ ಒಂದು ಶಾಸನವು ಮಾತ್ರ ದೊರೆತಿರುತ್ತದೆ. ಅದೇ ೬೭೫ ನೆಯ ಶಕದ ರಥಸಪ್ತಮಿಯ ಸಾಮಾನಗಡದ ಶಾಸನವು. ಅದರಲ್ಲಿ ಬರೆದ ಸಂಗತಿಗಳನ್ನು ಈ ಮೊದಲೇ* ತಿಳಿಸಿರುವುದರಿಂದ ಅವುಗಳನ್ನು ಮತ್ತೆ ಇಲ್ಲಿ ಬರೆಯುವ ಕಾರಣವಿಲ್ಲ. ಇವನಿಗೆ ಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಪರಮಭಟ್ಟಾರಕ ಎಂಬ ಬಿರುದುಗಳಿದ್ದವು. ಇವನ ಆನೆಗಳು ಮಹಿ ಮಹಾನದಿ ರೇವಾ (ನರ್ಮದಾ) ಈ ೩ ಹೊಳೆಗಳ ದಂಡೆಗಳನ್ನು ಕೆಡವಿದವೆಂತಲೂ, ಇವನು ಹೆಸರುವಾಸಿಯಾದ ೨ ನೆಯ ಕೀರ್ತಿವರ್ಮನ ಕರ್ನಾಟಕ ದಂಡನ್ನು ಸೋಲಿಸಿ ಸಾರ್ವ

---

* ಕರ್ನಾಟಕ ಸಾಮ್ರಾಜ್ಯ, ಸಂ. ೧, ಪು. ೩೦೨, ೩೦೩.

ಭೌಮತ್ವವನ್ನು ಪಡೆದನೆಂತಲೂ, ಸಂಧುಭೂಪ(?)ನನ್ನೂ ಶೇಷ(ನಾಗ)ರನ್ನೂ ಸೋಲಿಸಿ, ಕಂಚಿ ಕಲಿಂಗ ಕೋಸಲ ಶ್ರೀಶೈಲ ಮಾಳವೆ ಲಾಟ ಟಂಕ ಈ ಪ್ರಾಂತಗಳ ಅರಸರನ್ನು ಗೆದ್ದು, ತನ್ನ ಮಹಾರಾಜಾಧಿರಾಜತ್ವವನ್ನು ಪೂರ್ಣಗೊಳಿಸಿಕೊಂಡನೆಂತಲೂ ಲೇಖಗಳಿವೆ. ಈ ಬರಹಗಳಲ್ಲಿ ಮಿಥ್ಯಾವರ್ಣನೆಗಳೂ ಅತಿಶಯೋಕ್ತಿಗಳೂ ತುಂಬಿರುತ್ತವೆಂದು ಮೇಲೇ ಕಾಣಿಸುತ್ತದೆ. ಕಡಬದ ಶಾಸನದಲ್ಲಿ ಇವನನ್ನು ವೈರಮೇಘನೆಂದು ಕರೆದಿರುತ್ತಾರೆ. ಈ ಉಪನಾಮದ ಉದ್ದೇಶವೇನಿತ್ತೆಂಬುದು ಗೊತ್ತಾಗುವುದಿಲ್ಲ. ಇವನು ತನ್ನ ಆಪ್ತರು ಸಾಹಾಯಕರಾದ ಸಂಚುಗಾರರು ಸ್ನೇಹಿತರು ಇವರೆಲ್ಲರ ಕೂಡ ದ್ವೇಷಕಟ್ಟಿಕೊಂಡು ಎಲ್ಲರಿಗೂ ಬೇಡಾದವನಾದ್ದರಿಂದ ವೈರಮೇಘನೆಂದು ಕರೆಯಲ್ಪಟ್ಟಿರಬಹುದೆಂದು ಊಹಿಸಬಹುದು. ಇವನು ಎಲ್ಲರಿಗೂ ಬೇಸರಾದ್ದರಿಂದ ರಾಷ್ಟ್ರಕೂಟ ಕೃಷ್ಣನು ಇವನನ್ನು ತಳ್ಳಿ ಪಟ್ಟವೇರಿದನೆಂದು ಡಾ|| ಫ್ಲೀಟರು ಬರೆಯುತ್ತಾರೆ.

## ೨. ಮೊದಲನೆಯ ಕೃಷ್ಣ ಅಥವಾ ಕನ್ನೇಶ್ವರ

(೭೫೮–೭೭೮)

ದಂತಿದುರ್ಗನ ತರುವಾಯ ಇಡಿ ಚಾಳುಕ್ಯ ಸಾಮ್ರಾಜ್ಯಕ್ಕೆ ೧ನೆಯ ಕೃಷ್ಣನೇ ಒಡೆಯನಾಗಿ ತನ್ನ ಮನೆತನದಲ್ಲೇ ರಾಜ್ಯಭಾರವನ್ನಿಟ್ಟುಕೊಂಡನೆಂಬುದಕ್ಕೆ ಸಂದೇಹವಿಲ್ಲ. ಆದರೆ ದಂತಿದುರ್ಗನು ಅತಿಸಾಹಸ ಶೌರ್ಯಗಳಿಂದಲೂ ದೀರ್ಘ ಪ್ರಯತ್ನದಿಂದಲೂ ಗೆದ್ದುಕೊಂಡ ರಾಜ್ಯವು ಹೇಗೆ ಕೃಷ್ಣನ ಕಯ್ಸೇರಿತೆಂಬುದು ವಾದಗ್ರಸ್ತ ವಿಷಯವಾಗಿರುತ್ತದೆ. ಡಾ|| ಭಾಂಡಾರಕರ ಫ್ಲೀಟರು ದಂತಿದುರ್ಗನು ಸ್ವಾರ್ಥಪರನಾದ್ದರಿಂದ ಕೃಷ್ಣನು ಅವನನ್ನು ಮೂಲೆಗೊತ್ತಿ, ಸರ್ವಾಧಿಕಾರವನ್ನು ಅವನಿಂದ ಸೆಳೆದುಕೊಂಡನೆಂದು ಬರೆಯುತ್ತಾರೆ. ಈ ಅಭಿಪ್ರಾಯವು ಸರಿಯಾದ್ದೆಂದು ನನಗೆ ತೋರುವುದಿಲ್ಲ. ಕೃಷ್ಣನು ದಂತಿದುರ್ಗನ ಕಕ್ಕನಾಗಿದ್ದಿಲ್ಲ ಮತ್ತು ಅವನಿಂದ ರಾಜ್ಯವನ್ನು ಕಸಿದುಕೊಳ್ಳುವಷ್ಟು ಸಾಮರ್ಥ್ಯವೂ ಅವನಲ್ಲಿದ್ದಿಲ್ಲ. ದಂತಿದುರ್ಗನ ಸ್ವಾರ್ಥಬುದ್ಧಿಯನ್ನು ಕಂಡು ಕೃಷ್ಣ

ಕರ್ಕರಾಜ ರಾಹಪ್ಪ ಸಣಫುಲ್ಲ ಈ ನಾಲ್ವರು ಸಂಚುಗಾರರು ಒಟ್ಟು ಗೂಡಿ ದಂತಿದುರ್ಗನ ದಳವಾಯಿಗಳನ್ನು ಒಡೆದುಕೊಂಡು ಅವನನ್ನು ಸೋಲಿಸಿ ಅವನಿಂದ ರಾಜ್ಯಾಧಿಕಾರವನ್ನು ಕಿತ್ತಿಕೊಂಡರೆಂಬುದೇ ನನ್ನ ಅನುಮಾನವು. ದಂತಿದುರ್ಗನು ಕಾಳಗದಲ್ಲಿ ಮಡಿದಿರಬಹುದು ಅಥವಾ ಸ್ವಾಭಾವಿಕವಾಗಿ ಸತ್ತಿರಬಹುದು. ಬಳಿಕ ಕರ್ಕರಾಜನು ಗುಜರಾಥದ ಮೇಲೆ ದಂಡೆತ್ತಿ ಹೋಗಿ, ಲಾಟ ಪ್ರಾಂತವನ್ನೂ ಗುಜರಾಥದ ಕೆಲಭಾಗ ವನ್ನೂ ಗೆದ್ದುಕೊಂಡು, ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕ ಎಂಬ ಬಿರುದುಗಳನ್ನು ಧರಿಸಿ, ಅಲ್ಲಿಯೊಂದು ತನ್ನ ಮನೆತನ ವನ್ನು ಸ್ಥಾಪಿಸಿದನೆಂದು ಸುರತ ಜಿಲ್ಲೆ ಥಾರೋಲಿಯ ೨೪ ಸಪ್ಟಂಬರ ೭೫೭ ನೆಯ ಇಸ್ವಿಯ ತಾಮ್ರಶಾಸನದಿಂದ ಕಂಡುಬರುತ್ತದೆ.

ಇತ್ತ ೨ ನೆಯ ಕೀರ್ತಿವರ್ಮನ ಉಳಿದ ರಾಜ್ಯವನ್ನೆಲ್ಲ ಕೃಷ್ಣ ಸಣ ಫುಲ್ಲ ರಾಹಪ್ಪರು ತಮ್ಮ ಸ್ವಾಧೀನಮಾಡಿಕೊಂಡ ಬಳಿಕ, ದಂತಿಗುರ್ಗ ನಲ್ಲಿ ಹುಟ್ಟಿದ ರಾಜ್ಯಲೋಭವೇ ಕೃಷ್ಣನಲ್ಲಿ ತಲೆದೋರಿತು. ಆದ್ದರಿಂದ ಅವನು ಸಣಫುಲ್ಲನನ್ನು ತನ್ನ ಕಡೆಗೆ ಮಾಡಿಕೊಂಡು ರಾಹಪ್ಪನೊಡನೆ ಜಗಳ ಹೂಡಿದನು. ಕೊನೆಗೆ ರಾಹಪ್ಪನು ಪೂರ್ಣವಾಗಿ ಸೋತು ಕೀರ್ತಿ ವರ್ಮನಂತೆ ಓಡಿಹೋದ್ದರಿಂದ ಚಾಳುಕ್ಯ ಸಾರ್ವಭೌಮತ್ವವು ರಾಷ್ಟ್ರ ಕೂಟ ಕೃಷ್ಣನ ವಶವಾಯಿತು (೭೫೮?). ರಾಹಪ್ಪನನ್ನು ನೆರೆಸೋಲಿಸಿ ಓಡಿಸಿದ್ದರಿಂದ ಕೃಷ್ಣನು ನಿಃಶತ್ರುವಾದ್ದಲ್ಲದೆ ರಾಹಪ್ಪನಲ್ಲಿದ್ದ ಅನೇಕ ಪಾಲಿಧ್ವಜ ಮುಂತಾದ ಅಧಿರಾಜಚಿಹ್ನಗಳು ಕೃಷ್ಣನ ಕಯ್ಸೇರಿದವು*.

ಹೊಳೆಗಳನ್ನೂ ಕೋಡುಗಳುಳ್ಳ ಪ್ರಾಣಿಗಳನ್ನೂ ಕತ್ತಿಹಿಡಿದವ ರನ್ನೂ ಹೆಂಗಸರನ್ನೂ ಅರಸರನ್ನೂ ನಂಬಕೂಡದೆಂಬ ಅನುಭವದ ಮಾತನ್ನು ಒಂದು ಸಂಸ್ಕೃತ ಶ್ಲೋಕವು ಹೇಳುತ್ತದಷ್ಟೇ†. ಈ ನೇಮದಂತೆ ದಂತಿದುರ್ಗನನ್ನು ನಂಬಿ, ಕೃಷ್ಣ, ಕರ್ಕರಾಜ, ರಾಹಪ್ಪ, ಸಣಫುಲ್ಲರು ಮೋಸಗೊಂಡರು. ಮುಂದೆ ಕೃಷ್ಣನನ್ನು ನಂಬಿ ಕರ್ಕರಾಜ

---

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೩೯೧.

† ನದೀನಾಂ ಚ ನಖೀನಾಂ ಚ ಶೃಂಗೀಣಾಂ ಖಡ್ಗಪಾಣಿನಾಂ।
ವಿಶ್ವಾಸೋ ನೈವ ಕರ್ತವ್ಯೋ ಸ್ತ್ರೀಣಾಂ ರಾಜಕುಲೇಷು ಚ ॥ ಸುಭಾಷಿತ.

ರಾಹಪ್ಪರು ವೋಸಹೋದರೂ, ಸಿಲಾಹಾರ ಮನೆತನದ ಸಣಫುಲ್ಲನಿಗೆ ಲಾಭವಾದುದು ಈ ನೇಮಕ್ಕೆ ಅಪವಾದವಾಗಿತ್ತೆಂದು ಹೇಳಬಹುದು. ಏಕೆಂದರೆ ೧ನೆಯ ಕೃಷ್ಣನು ಸಣಫುಲ್ಲನು ತನಗೆ ಮಾಡಿದ ಉಪಕಾರ ವನ್ನು ನೆನಿಸಿ, ಅವನಿಗೆ ಸಹ್ಯಾದ್ರಿಘಟ್ಟ ಸಮುದ್ರಗಳ ನಡುವಿದ್ದ ಎಲ್ಲ ಪ್ರದೇಶವನ್ನು ಸ್ವತಂತ್ರವಾಗಿ ಆಳಲಿಕ್ಕೆ ಕೊಟ್ಟನು. ಆದ್ದರಿಂದ ಸಣಫುಲ್ಲನು ಸಿಲಾಹಾರ ಅರಸುಮನೆತನವನ್ನು ಅಲ್ಲಿ ಸ್ಥಾಪಿಸಿದನು. ಈ ಸಿಲಾಹಾರ ರಾಜ್ಯದ ಪೂರ್ವ ಪಶ್ಚಿಮ ಮೇರೆಗಳು ಗೊತ್ತಾದರೂ ಉತ್ತರ ದಕ್ಷಿಣ ಮೇರೆಗಳು ಗೊತ್ತಾಗುವುದಿಲ್ಲ. ರಾಷ್ಟ್ರಕೂಟ ಸಾರ್ವಭೌಮರು ಆಳುವ ವರೆಗೆ ಈ ಸಣಫುಲ್ಲನ ವಂಶಜರು ಅಲ್ಲಿ ಆಳಿದರು. ಮುಂದೆ ಕಲ್ಯಾಣದ ಚಾಳುಕ್ಯ ಮನೆತನದ ಇರಿವಬೆಡಂಗ ಸತ್ಯಾಶ್ರಯನು ಈ ಮನೆತನದ ಕಡೆಯ ಅರಸನಾದ ರಟ್ಟರಾಜನನ್ನು ಸೋಲಿಸಿ ಅವನನ್ನು ತನ್ನ ಮಂಡಲಿಕನಾಗಿ ಮಾಡಿಕೊಂಡನು (೧೦೦೮).

ರಾಷ್ಟ್ರಕೂಟ ಕೃಷ್ಣನು ಬಾದಾಮಿ ಚಾಳುಕ್ಯ ಮನೆತನದ ಕೊನೆಯ ಚಕ್ರವರ್ತಿಯಾದ ೨ನೆಯ ಕೀರ್ತಿವರ್ಮನನ್ನೂ ಅವನನ್ನು ಅಡಗಿಸಲಿಕ್ಕೆ ತನಗಿಂತ ಮೊದಲು ವಿಶ್ವಪ್ರಯತ್ನಮಾಡಿದ ದಂತಿದುರ್ಗ ರಾಹಪ್ಪ ಕರ್ಕರಾಜರನ್ನೂ ಮೂಲೆಗೊತ್ತಿ, ತಾನೇ ಸಾರ್ವಭೌಮ ನಾದನೆಂದು ಮೇಲೆ ಬರೆದಿರುತ್ತೇವಷ್ಟೇ. ೮೦೭ ನೆಯ ಇಸ್ವಿಯ ವಾಣಿಯ ಶಾಸನದಲ್ಲಿ ಇವನು ಬಹು ಭದ್ರವಾದ ಚಾಳುಕ್ಯ ರಾಜ್ಯ ಲಕ್ಷ್ಮಿಯನ್ನು ಕಿತ್ತಿಕೊಂಡು ಬಂದನೆಂತಲೂ ೮೧೨ ನೆಯ ಇಸ್ವಿಯ ಬಡೋದೆಯ ಶಾಸನದಲ್ಲಿ ಹುರುಪಿನಿಂದ ಕಾದಲಿಕ್ಕೆ ಬಂದ ಚಾಳುಕ್ಯ ಹಂದಿಯನ್ನು ತಾನು ಜಿಂಕೆಯಾಗಿ ಇರಿದು ಓಡಿಸಿಬಿಟ್ಟನೆಂತಲೂ ಬರೆ ದಿದೆ. ಇದರಿಂದ ದಂತಿವರ್ಮನಿಂದ ಸೋತು ಓಡಿಹೋದ ೨ನೆಯ ಕೀರ್ತಿ ವರ್ಮನಾಗಲಿ ಅವನ ಮಕ್ಕಳಾಗಲಿ ಮತ್ತೆ ರಾಜ್ಯವನ್ನು ತಿರುಗಿ ತೆಗೆದುಕೊಳ್ಳಲಿಕ್ಕೆ ಪ್ರಯತ್ನಮಾಡಿ ನಿಷ್ಫಲರಾದರೆಂದು ಅನುಮಾನ ಮಾಡಬಹುದು. ಇವನು **ಶುಭತುಂಗ, ಅಕಾಲವರ್ಷ, ಶ್ರೀವಲ್ಲಭ** ಎಂಬ ಬಿರುದುಗಳನ್ನು ಧರಿಸಿ ೭೫೮(?) ರಿಂದ ೭೮೨(?)ರ ವರೆಗೆ ೨೫ ವರ್ಷ ಆಳಿದನೆಂದು ಊಹಿಸಬಹುದು.

ಈ ಜಗತ್ತಿನಲ್ಲಿ ದಿನಾಲು ಲಕ್ಷಾವಧಿ ಜನರು ಹುಟ್ಟುತ್ತಾರಷ್ಟೇ. ಇವರೆಲ್ಲರೂ ನಿಜವಾಗಿ ಹುಟ್ಟಿದವರೆಂದು ಹೇಳುವುದು ಸರಿಯೋ ಅಲ್ಲವೋ ಎಂಬ ಪ್ರಶ್ನವನ್ನೆತ್ತಿ, ಒಬ್ಬ ಕವಿಯು ಬರೆಯುವುದೇನೆಂದರೆ:—ಒಂದೇ ಸಮನೆ ತಿರುಗುವ ಈ ಸಂಸಾರಚಕ್ರದಲ್ಲಿ ಸತ್ತವರೆಲ್ಲರು ತಿರುಗಿ ಹುಟ್ಟಿ ಬರುತ್ತಿದ್ದರೂ ತಮ್ಮ ಹುಟ್ಟುನಾಡಿನ ಏಳ್ಗೆಯನ್ನು ಮಾಡುವವರು ಮಾತ್ರ ನಿಜವಾಗಿ ಹುಟ್ಟಿದವರಾಗಿರುತ್ತಾರೆ*; ಉಳಿದವರೆಲ್ಲರು ಹುಟ್ಟಿದ್ದು ವ್ಯರ್ಥವೇ ಸರಿ. ಅಥವಾ ಅವರು ತಾಯ್ನೆಲವು ಕೊಡುವ ಅನ್ನವನ್ನು ತಿಂದು ಹಾಳುಮಾಡುವುದರಿಂದ ಭೂಭಾರಕರಾಗಿರುತ್ತಾರೆಂದು ಬರೆಯಲಿಕ್ಕೆ ಅಡ್ಡಿಯಿಲ್ಲ. ನಮ್ಮ ತಾಯ್ನಾಡಿನೊಳಗೆ ಈವೊತ್ತಿನವರೆಗೆ ಎಷ್ಟೋ ಮಂದಿ ದಿಟವಾಗಿ ಹುಟ್ಟಿದವರು ಆಗಿಹೋದರು. ನಿಜವಾಗಿ ಹುಟ್ಟಿದ ಈ ಪುಣ್ಯಶಾಲಿಗಳೊಳಗೆ ಸಾವಿರಾರು ತರಗತಿಯ ಮಹಾತ್ಮರು ಆಗಿಹೋದರೆಂಬುದನ್ನು ಮರೆಯಕೂಡದು. ಶ್ರೀರಾಮನ ಪರಮಭಕ್ತನಾದ ಹನುಮಾನನಿಂದ ಶಿಲ್ಪಕಲಾಕೋವಿದನಾದ ಜಕ್ಕಣಾಚಾರ್ಯನ ವರೆಗೆ ನಿಜವಾಗಿ ಹುಟ್ಟಿದ ಜನರು ಎಷ್ಟು ವರ್ಗದವರಿದ್ದರೆಂಬುದನ್ನು ವಾಚಕರೇ ಊಹಿಸಬಹುದು. ಜಕ್ಕಣಾಚಾರ್ಯನಿಗಿಂತ ಕೆಳಗಿನ ತರಗತಿಗಳು ನೂರಾರು ಇರುತ್ತವೆಂಬುದನ್ನಾದರೂ ಮರೆಯಕೂಡದು. ಈ ಕೆಳಗಿನ ತರಗತಿಗಳಲ್ಲಿ ಒಂದಕ್ಕೆ ರಾಷ್ಟ್ರಕೂಟ ಕೃಷ್ಣನು ಸೇರಿದ್ದರಿಂದ ಅವನು ನಿಜವಾಗಿ ಹುಟ್ಟಿದವನಾಗಿದ್ದನೆಂದು ಬರೆಯಲಿಕ್ಕೆ ಸಂತೋಷಪಡುತ್ತೇನೆ.

ನಮ್ಮ ತಾಯ್ನಾಡಾದ ಕರ್ನಾಟಕವು ಶ್ರೀ ಪರಮೇಶ್ವರನ ಪ್ರಾಣಲಿಂಗದಂತೆ ೫ ಭಾಗಗಳಲ್ಲಿ—೧. ಮುಂಬಯಿ ಕರ್ನಾಟಕ, ೨. ಮೈಸೂರು ಕರ್ನಾಟಕ, ೩. ನಿಜಾಮ ಹೈದರಾಬಾದ ಕರ್ನಾಟಕ, ೪. ಮದ್ರಾಸ ಕರ್ನಾಟಕ, ೫. ಕೊಡಗು ಪ್ರಾಂತ—ವಿಭಾಗಿಸಲ್ಪಟ್ಟಿರುತ್ತದಷ್ಟೇ. ೩ ನೆಯ ಭಾಗವಾದ ನಿಜಾಮ ಹೈದರಾಬಾದ ಕರ್ನಾಟಕದಲ್ಲಿ ಉತ್ತರ ಅಕ್ಷಾಂಶ ೨೦" ೨' ಪೂರ್ವರೇಖಾಂಶ ೭೫" ೧೩' ರ ಮೇಲೂ,

* ಪರಿವರ್ತಿನಿ ಸಂಸಾರೇ ಮೃತಃ ಕೋ ವಾ ನ ಜಾಯತೇ ।
ಸ ಜಾತೋ ಯೇನ ಜಾತೇನ ಯಾತಿ ದೇಶಃ ಸಮುನ್ನತಿಮ್ ॥ ಸುಭಾಷಿತ.

ದೌಲತ್ತಾಬಾದಿನಿಂದ ೭ ಮೈಲುಗಳ ಮೇಲೂ, ಅವರಂಗಾಬಾದಿನಿಂದ ೧೩ ಮೈಲುಗಳ ಮೇಲೂ **ಏಳೂರು** ಅಥವಾ **ವೇರೂಳು*** ಎಂಬ ಗ್ರಾಮ ವಿರುತ್ತದಷ್ಟೇ. ಈ ಹಳ್ಳಿಯ ಮಗ್ಗುಲಲ್ಲಿ ಉತ್ತರದಿಂದ ದಕ್ಷಿಣಕ್ಕೆ ೧½ ಮೈಲು ಹಬ್ಬಿದ ಒಂದು ಸಣ್ಣ ಗುಡ್ಡದ ಸಾಲಿರುತ್ತದೆ. ಈ ಸಾಲಿನ ದಕ್ಷಿಣ ಭಾಗದಲ್ಲಿ ಬೌದ್ಧರ ೧೨ ಚೈತ್ಯಾಲಯಗಳೂ, ಮಧ್ಯದಲ್ಲಿ ೧೭ ಬ್ರಾಹ್ಮಣರ ಗುಡಿಗಳೂ, ಉತ್ತರದಲ್ಲಿ ೫ ಜೈನ ಗವಿಗಳೂ ಇರುತ್ತವೆ. ವಿಸ್ತಾರ ಸೌಂದರ್ಯ ಕಲ್ಪನಾಶಕ್ತಿ ಚಿತ್ರೋಲ್ಲೇಖನ ಹಸ್ತಕೌಶಲ್ಯ ಗಳಲ್ಲಿ ಬ್ರಾಹ್ಮಣರ ಗವಿಗಳೇ ಮೇಲಾದವೆಂದು ನಿಶ್ಚಯವಾಗಿ ಹೇಳ ಬಹುದು. ಇವುಗಳ ಎದುರಿಗೆ ದಾರಿಗುಂಟ ಕಲ್ಲಿನಲ್ಲಿ ಕಟೆದ ಗೋಡೆ ಗಳೂ ಹೆಬ್ಬಾಗಿಲುಗಳೂ ಇರುವುದರಿಂದ ಇವು ಗವಿಗಳಾಗಿರಬಹು ದೆಂಬ ಕಲ್ಪನೆಯು ಹಾದಿಕಾರರ ಮನಸ್ಸಿನಲ್ಲಿ ಹುಟ್ಟುವುದಿಲ್ಲ. ಈ ಎಲ್ಲ ಬ್ರಾಹ್ಮಣ ಗುಡಿಗಳ ಮುಂಭಾಗದಲ್ಲಿ ಪಡಸಾಲೆಗಳಿರುವುದರಿಂದ ಇವು ಬೌದ್ಧ ಚೈತ್ಯಾಲಯಗಳಂತೆ ಗವಿಗಳಿದ್ದ ಹಾಗೆ ತೋರದೆ, ಬೈಲಲ್ಲಿ ಕಟ್ಟಿಸಿದ ಗುಡಿಗಳಂತೆ ಕಾಣುತ್ತವೆ. ಇದಲ್ಲದೆ ಗುಡ್ಡದ ಕಲ್ಲುಗಳನ್ನು ಒಳಮಗ್ಗುಲಲ್ಲಿಯೂ ಹೊರಮಗ್ಗುಲಲ್ಲಿಯೂ ಸಮನಾಗಿ ಕಟೆದುದರಿಂದ ಈ ಗುಡಿಗಳು ಗುಡ್ಡದಲ್ಲಿ ಕೊರೆದವುಗಳೆಂಬ ಕಲ್ಪನೆಯು ಯಾರ ಮನಸ್ಸಿನಲ್ಲಿಯೂ ಬರುವುದಿಲ್ಲ.

ಏಳೂರು ಗುಡ್ಡದ ಸಾಲಿನ ನಡುವಿದ್ದ ೧೭ ಬ್ರಾಹ್ಮಣಗುಡಿಗಳಲ್ಲಿ **ಕೈಲಾಸ**ವೆಂಬ ಗುಡಿಯೇ ಎಲ್ಲಕ್ಕೂ ಶ್ರೇಷ್ಠವಾದುದು.

ಈ ಕೈಲಾಸ ಗುಡಿಯು ನಮ್ಮ ಪೂರ್ವಜರ ಶಿಲ್ಪಕಲೆಯ ಅತ್ಯದ್ಭುತ ವಾದ ಮತ್ತು ಮನೋಹರವಾದ ಕುರುಹು ಆಗಿರುತ್ತದೆಂದು ಬರೆದರೆ ಅತಿ ಶಯೋಕ್ತಿಯಾಗಲಾರದು. ಈ ಗುಡಿಯ ಸೌಂದರ್ಯವೂ ವೈಲಕ್ಷಣ್ಯವೂ ಎಲ್ಲ ಪ್ರಯಾಣಿಕರ ಮನಸ್ಸನ್ನು ಎಳೆದುಕೊಂಡಷ್ಟು ಮತ್ತಾವ ಭರತ ವರ್ಷದ ಗುಡಿಯು ಎಳೆದುಕೊಳ್ಳುವುದಿಲ್ಲೆಂದು ಶಿಲ್ಪಜ್ಞರಾದ ಫರ್ಗು

---

* ಛತ್ರಪತಿ ಸಿವಾಜಿ ಮಹಾರಾಜನ ಅಜ್ಜನಾದ ಮಾಲೋಜಿಯು ಇದೇ ಹಳ್ಳಿಯ ಗವುಡನಾಗಿದ್ದನು.

ಸನ್ನೆಂಬವರು ತಮ್ಮ ಹಳೆ ಕಟ್ಟಡಗಳ ಇತಿಹಾಸದಲ್ಲಿ ಬರೆಯುತ್ತಾರೆ. ಮುಂಬಯಿ ಇಲಾಖೆಯ ಹಳೆಕಟ್ಟಡಗಳ ಮೇಲ್ವಿಚಾರಕರಾದ ಬರ್ಜೆಸ್ಸೆಂಬ



ವೇರೂಳದ ಕೈಲಾಸ ಗುಡಿಯು

ವರು ಈ ಕೈಲಾಸದ ವಿಷಯವಾಗಿ ಬರೆಯುವುದೇನಂದರೆ:—ಈ ಅಗಾಧವಾದ ಶಿವಾಲಯವನ್ನು ಒಂದೇ ಕಲ್ಲಿನಲ್ಲಿ ಕಟೆದುದನ್ನು ನೋಡಿದ

ಕೂಡಲೆ ಪ್ರೇಕ್ಷಕರ ಹೃದಯದಲ್ಲಿ ಆನಂದಾಶ್ಚರ್ಯಗಳು ಒಮ್ಮೆಲೆ ಉಕ್ಕೇರುತ್ತವೆ. ಈ ಗುಡಿಯ ಮುಂದೆ ಕಲ್ಲಿನಲ್ಲಿ ಕಟೆದ ಒಂದು ಪರದೆ ಗೋಡೆಯು ಇರುತ್ತದೆ. ಅದರ ಮೇಲೆ ಬ್ರಹ್ಮ ವಿಷ್ಣು ಮಹೇಶ್ವರ ಮುಂತಾದ ಪೌರಾಣಿಕ ದೇವತೆಗಳ ಸ್ಥೂಲವಾದ ಚಿತ್ರಗಳು ಕೊರೆಯಲ್ಪಟ್ಟಿವೆ. ಈ ಪರದೆಯ ಗೋಡೆಯಲ್ಲಿದ್ದ ಹೆಬ್ಬಾಗಿಲಿಂದ ಒಳಗೆ ಹೋಗಲು ಅತಿಭವ್ಯವಾದ ಮತ್ತು ಮನೋಹರವಾದ ಕೈಲಾಸದ ಗುಡಿಯು ಕಣ್ಣುಮುಂದೆ ಬಂದು ನಿಲ್ಲುತ್ತದೆ. ಇದರ ಅಗಲಳತೆ ೧೫೪ ಅಡಿ, ಉದ್ದಳತೆ ೨೭೬ ಅಡಿ, ಎತ್ತರ ಸುಮಾರು ೧೦೭ ಅಡಿ. ಒಳಗೆ ಹೊಕ್ಕ ಕೂಡಲೆ ಕಮಲಪುಷ್ಪದ ಮೇಲೆ ನಿಂತಿದ್ದ ಶ್ರೀಲಕ್ಷ್ಮಿಯ ಮೂರ್ತಿಯೂ ಅದರ ಹತ್ತಿರಿದ್ದ ಆನೆಗಳೂ ಕಂಗೊಳಿಸುತ್ತವೆ. ತುಸು ಮುಂದೆ ಹೋಗಿ, ದಕ್ಷಿಣದಲ್ಲೊಂದು ಉತ್ತರದಲ್ಲೊಂದು ಹೀಗೆ ಎರಡು ದೊಡ್ಡ ಕಲ್ಲಿನ ಆನೆಗಳನ್ನು ನೋಡಬಹುದು. ತೆಂಕಲಲ್ಲಿದ್ದ ಆನೆಯು ಬಹಳ ಮುಕ್ಕಾಗಿದೆ. ನಾಲ್ಕು ಹೆಜ್ಜೆ ಮುಂದರಿಯಲು ತುಸು ಎತ್ತರದ ಮೇಲೆ ಮನೋಹರವಾದ ಗರ್ಭಗುಡಿಯು ಕಂಗೊಳಿಸುತ್ತದೆ. ಅದು ೧೬೪ ಅಡಿ ಉದ್ದ ಮತ್ತು ೧೦೯ ಅಡಿ ಅಗಲವಾಗಿದ್ದು, ಅದರೊಳಗೆ ನಟ್ಟನಡುವೆ ಶಿವ ಪಾರ್ವತಿಯರ ಸುಂದರವಾದ ಮೂರ್ತಿಗಳೂ ಅವುಗಳ ಸುತ್ತಲು ಬ್ರಹ್ಮ ವಿಷ್ಣು ಮುಂತಾದ ಪೌರಾಣಿಕ ದೇವತೆಗಳೂ ಧ್ಯಾನಸ್ಥರಾಗಿ ಕುಳಿತಿರುತ್ತಾರೆ. ಗರ್ಭಗುಡಿಯ ಮುಂದೆ ತುಸು ಅಂತರದ ಮೇಲೆ ಒಂದು ಕಲ್ಲಿನ ಮಂಟಪವಿರುತ್ತದೆ. ಅದರೊಳಗೆ ಈಶ್ವರನ ವಾಹನನಾದ ನಂದಿಯು ಕುಳಿತಿದ್ದು, ಅವನ ಎಡಕ್ಕೂ ಬಲಕ್ಕೂ ಒಂದೊಂದು ಉದ್ದವಾದ ಧ್ವಜ ದಂಡಗಳೂ ಅವುಗಳ ಮೇಲೆ ಈಶ್ವರನ ಆಯುಧವಾದ ತ್ರಿಶೂಲಗಳೂ ಇರುತ್ತವೆ. ಈ ತ್ರಿಶೂಲಗಳ ತುದಿಯಿಂದ ಅಳೆದರೆ, ಈ ದಂಡಗಳ ಉದ್ದಳತೆಯು ೪೯ ಅಡಿಗಳಾಗುವುದು*.

ಈ ಅವರ್ಣನೀಯ ಮತ್ತು ಅಪ್ರತಿಮವಾದ ಕೈಲಾಸ ದೇವಸ್ಥಾನವನ್ನು ರಾಷ್ಟ್ರಕೂಟ ಅಥವಾ ನಾಡುಗವುಡ ಕೃಷ್ಣನು ಏರ್ಪಡಿಸಿದ

---

* ಇಂಪೀರಿಯಲ್ ಗ್ಯಾಜಟಿಯರ ಆಫ್ ಇಂಡಿಯಾ, ಸಂ. ೪, ಪು. ೩೪೮—೫೧.

ಗುಡ್ಡದಲ್ಲಿ ಕೊರೆಯಿಸಿದನೆಂಬ ಸಂಗತಿಯನ್ನು ಡಾ॥ ಭಾಂಡಾರಕರರು ಮೊದಲು ಕಂಡುಹಿಡಿದರೆಂದು ಬರೆಯಲಿಕ್ಕೆ ಅತ್ಯಾನಂದವಾಗುತ್ತದೆ. ಮಧ್ಯಪ್ರಾಂತದೊಳಗೆ ವರ್ಹಾಡ ನಾಗಪುರಗಳ ನಡುವೆ ವರ್ಧಾ ಎಂಬ ಜಿಲ್ಲೆ ಇರುತ್ತದಷ್ಟೇ. ಅಲ್ಲಿ ಸಿಕ್ಕ ಶಾಸನಗಳಲ್ಲಿ ಕೃಷ್ಣರಾಜನು ಎಷ್ಟೋ ಶಿವಾಲಯಗಳನ್ನು ಕಟ್ಟಿಸಿದನೆಂತಲೂ ಅವು ಕೈಲಾಸ ಪರ್ವತವನ್ನು ಹೋಲುತ್ತವೆಂತಲೂ ಬರೆದಿದೆ. ಇದಲ್ಲದೆ ಬಡೋದೆಯ ಶಾಸನದಲ್ಲಿ ಏಲಾಪುರ ಗುಡ್ಡದೊಳಗೆ ಕೃಷ್ಣರಾಜನು ಒಂದು ಅದ್ಭುತವಾದ ಗುಡಿಯನ್ನು ಕಟ್ಟಿಸಿದನೆಂತಲೂ ದೇವತೆಗಳು ವಿಮಾನದಲ್ಲಿ ಹೋಗುವಾಗ ಅದನ್ನು ನೋಡಿ ಅಚ್ಚರಿಗೊಂಡು "ಮನುಷ್ಯಕೃತಿಯು ಇಷ್ಟು ಸುಂದರವಾಗಲಾರದು; ಆದ್ದರಿಂದ ಇದು ಶಿವನ ಸ್ವಯಂಭುವಾದ ಗುಡಿಯಾಗಿರಲಿಕ್ಕೆ ಬೇಕು" ಎಂದು ತಂತಮ್ಮೊಳಗೆ ಹಾಕಿಯಾಡುತ್ತಿದ್ದರೆಂತಲೂ ಈ ಗುಡಿಯನ್ನು ಗುಡ್ಡದಲ್ಲಿ ಕೊರೆದು ಚಿತ್ರಗಳನ್ನು ಕಟೆದ ಶಿಲ್ಪಿಯು ತನ್ನಿಂದ ಇಂತಹ ಮತ್ತೊಂದು ಗುಡಿಯನ್ನು ಕೊರೆಯುವುದು ಆಗಲಿಕ್ಕಿಲ್ಲೆಂದು ಸಾರಿ ಹೇಳುತ್ತಿದ್ದನೆಂತಲೂ ಇಂತಹ ಅದ್ಭುತವಾದ ಗುಡಿಯನ್ನು ತಾನು ಹೇಗೆ ಕೊರೆದೆನೆಂದು ಸೋಜಿಗಗೊಳ್ಳುತ್ತಿದ್ದನೆಂತಲೂ ಶಿಲ್ಪಿಯು ಕೃತ್ರಿಮ ಗಂಗಾಪ್ರವಾಹದಿಂದಲೂ ಕಾಲಕೂಟ ವಿಷದಿಂದಲೂ ಈಶ್ವರನನ್ನು ಅಲಂಕರಿಸಿದ್ದರೂ ಚಿನ್ನ ಮಾಣಿಕ ಬೆಲೆಯುಳ್ಳ ಹರಳುಕಲ್ಲುಗಳಿಂದ ಕೃಷ್ಣನು ತನ್ನ ಸ್ವಂತ ಕಯ್ಯಿಂದ ಶ್ರೀ ಶಂಭುವಿನ ಮೂರ್ತಿಯನ್ನು ಸಿಂಗರಿಸಿದನೆಂತಲೂ ವರ್ಣನೆ ಇದೆ. ಡಾ॥ ಫರ್ಗುಸನ್ ಬರ್ಜೆಸ್ಸರು ಕಟ್ಟಡದ ರಚನಾಕ್ರಮದಿಂದ ಊಹಿಸಿದ ಕಾಲವು ಶಾಸನಗಳಿಂದ ನಿರ್ಧರಿಸಿದ ಕಾಲಕ್ಕೆ ಸಮವಾಗಿರುತ್ತದೆಂತಲೂ ಈ ಕೈಲಾಸ ದೇವಾಲಯವು ೭೫೩ರಿಂದ ೭೭೫ರ ವರೆಗೆ ಕೃಷ್ಣರಾಜನಿಂದ ಕೊರೆಯಿಸಲ್ಪಟ್ಟಿತೆಂತಲೂ ಡಾ॥ ಭಾಂಡಾರಕರರು ಬರೆಯುತ್ತಾರೆ*.

ಬಡೋದೆಯ ೮೧೧-೧೨ನೆಯ ಇಸ್ವಿಯ ರಾಷ್ಟ್ರಕೂಟ ಶಾಸನದಲ್ಲಿದ್ದ ಏಲಾಪುರದಿಂದ ಏಳೂರಾಯಿತೆಂದು ಡಾ॥ ಭಾಂಡಾರಕರರು

---

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೧೯೫–೯೬.

ಅಭಿಪ್ರಾಯಪಡುತ್ತಾರಷ್ಟೇ. ಈ ಅಭಿಪ್ರಾಯವನ್ನು ಡಾ॥ ಫ್ಲೀಟರು ಅನುಮೋದಿಸುವುದಿಲ್ಲ. ಏಲಾಪುರವು ಏಳೂರಿನ ಸಂಸ್ಕೃತ ರೂಪ ವಾಗಿರುತ್ತದೆಂಬುದೇ ಅವರ ಮತವು. ಬಡೋದೆಯ ಶಾಸನಕ್ಕಿಂತ ಮೊದಲಿನ ಲೇಖಗಳಲ್ಲಿ ಅಂದರೆ ವರಾಹಮಿಹಿರನ ಬೃಹತ್ಸಂಹಿತೆಯಲ್ಲಿ ಯೂ ಅಜಂತೆಯ ನೆರೆಯಲ್ಲಿದ್ದ ಘಟೋತ್ಕಚ ಗವಿಯಲ್ಲಿದ್ದ ಶಿಲಾ ಲೇಖದಲ್ಲಿಯೂ ಕಾರ್ಲೆಯ ಚೈತ್ಯ ಗವಿಯಲ್ಲಿದ್ದ ಶಾಸನದಲ್ಲಿಯೂ ವ(ವೆ)ಲ್ಲೂರು ವ(ವೆ)ಲ್ಲೂರಕ ಎಂಬ ಹೆಸರುಗಳಿರುವುದರಿಂದ **ಏಳೂರೇ** ಈ ಕೈಲಾಸ ಗುಡ್ಡವಿದ್ದ ಊರಿನ ಮೂಲ ಹೆಸರಾಗಿರಬೇಕೆಂದು ಡಾ॥ ಫ್ಲೀಟರು ಪೂರ್ಣವಾಗಿ ನಂಬುತ್ತಾರೆ*.

ನಾವು ಯಾವುದಾದರೊಂದು ಸ್ಥಿರಾಸ್ತಿಯನ್ನು ದೊರಕಿಸ ಬೇಕಾದರೆ ಎಷ್ಟು ಶ್ರಮಬಡಬೇಕಾಗುತ್ತದೆಂಬುದೂ ಅದು ದೊರೆತ ಬಳಿಕ ಅದನ್ನು ಅನುಭೋಗಿಸುವಾಗ ಎಷ್ಟು ತೊಂದರೆಗಳು ಬರುತ್ತ ವೆಂಬುದೂ ವಾಚಕರಿಗೆ ಗೊತ್ತಿದ್ದ ಮಾತುಗಳೇ ಸರಿ. ರಾಷ್ಟ್ರಕೂಟ ಕೃಷ್ಣನಂತೂ ಚಾಳುಕ್ಯ ಸಾಮ್ರಾಜ್ಯವನ್ನೇ ಸಂಪಾದಿಸಿದ್ದನು. ಆದ್ದ ರಿಂದ ಅವನು ತನಗೆ ಸಿಕ್ಕ ಸಾಮ್ರಾಜ್ಯವನ್ನು ಇಟ್ಟುಕೊಳ್ಳಲಿಕ್ಕೆ ಹಲವು ಜನರೊಡನೆ ಕಾದಬೇಕಾಯಿತೆಂಬುದರಲ್ಲಿ ಸೋಜಿಗವೇನೂ ಕಂಡುಬರುವುದಿಲ್ಲ. ಅವನು ತನ್ನನ್ನು ವಿರೋಧಿಸಿದ ರಾಹಪ್ಪನನ್ನು ಸೋಲಿಸಿ ತನಗೆ ಅನುಕೂಲನಾದ ಸಣಫುಲ್ಲನಿಗೆ ದಕ್ಷಿಣ ಕೊಂಕಣಟ ರಾಜ್ಯವನ್ನು ಕೊಟ್ಟನೆಂದು ಹಿಂದೆ ಬರೆದಿರುತ್ತೇವಷ್ಟೇ. ತಂತಮ್ಮ ಅಧಿಕಾರಾಸ್ತಿಗಳೆಂಬ ಪಕ್ಕಗಳು ನಾಶಹೊಂದುವುವೆಂಬ ಭಯದಿಂದ ಎಷ್ಟೋ ಅರಸರೆಂಬ ಗುಡ್ಡಗಳು ಚಾಳುಕ್ಯ ವಂಶವೆಂಬ ಸಮುದ್ರವನ್ನು ಸೇರಿದವೆಂತಲೂ ಕೃಷ್ಣರಾಜನು ತನ್ನ ಅನುಯಾಯಿ ಮಂತ್ರಿಗಳೆಂಬ ದೇವತೆಗಳ ನೆರವಿನಿಂದ ಆ ಚಾಳುಕ್ಯ ಕಡಲನ್ನು ಮಥಿಸಿ ಅದರಿಂದ ಹೊರಟ ರಾಜ್ಯಲಕ್ಷ್ಮಿಯನ್ನು ಪಡೆದನೆಂತಲೂ ವಾಣಿದಿಂಡೋರಿ, ರಾಧನಪುರ ಈ ಎರಡು ಊರುಗಳಲ್ಲಿ ದೊರೆತ ಶಾಸನಗಳಲ್ಲಿ ಬರೆದಿದೆ.

---

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೩೯೧, ಟಿಪ್ಪಣಿ ೬.

ಬಾದಾವಿ ಚಾಳುಕ್ಯರು ತಮ್ಮ ನಷ್ಟ ರಾಜ್ಯವೈಭವವನ್ನು ತಿರುಗಿ ದೊರಕಿಸಲಿಕ್ಕೆ ಪ್ರಯತ್ನ ಮಾಡಿದರೆಂತಲೂ ಜಾಗರೂಕನಾದ ಕೃಷ್ಣನು ಅವರನ್ನು ಮುರಿಬಡಿದು, ಅವರ ಮನೋರಥವನ್ನು ನಿಷ್ಫಲವಾಗಿ ಮಾಡಿದನೆಂತಲೂ ಈ ಬರಹದಿಂದ ಊಹಿಸಬಹುದು. 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪ ಭಾರತ'ವೆಂಬ ಕನ್ನಡ ಗ್ರಂಥವು ಈ ಊಹೆಯನ್ನು ಕೆಲಮಟ್ಟಿಗೆ ಪುಷ್ಟೀಕರಿಸುತ್ತದೆಂದು ಹೇಳಬಹುದು. ಏಕೆಂದರೆ ಅದರಲ್ಲಿ ತನ್ನ ಆಶ್ರಯದಾತನ ವಂಶಾವಳಿಯನ್ನು ಕೊಡುವಾಗ ಸಾರ್ವಭೌಮನಾದ ೧ ನೆಯ ಯುದ್ಧಮಲ್ಲನ ಮಗನಾದ ೧ ನೆಯ ಅರಿಕೇಸರಿಯು ವಂಗವಿಷಯದ ಮಂತ್ರಿಗಳನ್ನೊಡಗೊಂಡು ಬಬ್ಬ ನಿರುಪಮದೇವನ ರಾಜ್ಯವನ್ನೊಳನುಗ್ಗಿದನೆಂದು ಆದಿಪಂಪನು ಬರೆಯುತ್ತಾನೆ. ಆದಿಪಂಪನು ಬಾದಾವಿ ಚಾಳುಕ್ಯ ಮನೆತನದ ಕೊನೆಯ ಸಾರ್ವಭೌಮನಾದ ೨ ನೆಯ ಕೀರ್ತಿವರ್ಮನನ್ನೇ ಮೊದಲನೆಯ ಯುದ್ಧಮಲ್ಲನೆಂತಲೂ ಅವನಿಂದ ರಾಜ್ಯವನ್ನು ಕಿತ್ತಿಕೊಂಡ ರಾಷ್ಟ್ರಕೂಟ ಕೃಷ್ಣನ ೨ ನೆಯ ಮಗನಾದ ಧ್ರುವನನ್ನು ನಿರುಪಮದೇವನೆಂತಲೂ ಕರೆದಿದ್ದರೆ, ಕೀರ್ತಿವರ್ಮನ ಮಗನಾದ ೧ ನೆಯ ಅರಿಕೇಸರಿಯು ತನ್ನ ತಂದೆಯ ರಾಜ್ಯವನ್ನು ತಿರುಗಿ ತೆಗೆದುಕೊಳ್ಳುವ ಉದ್ದೇಶದಿಂದ ತನ್ನ ಸಾಹಾಯಕರೊಡನೆ ದಂಡೆತ್ತಿ ಬಂದು ಧ್ರುವನಿಂದ ಸೋತು ತಿರುಗಿ ಹೋದನೆಂದು ಧಾರಾಳವಾಗಿ ಹೇಳಬಹುದು.

ಈ ಮೇರೆಗೆ ಯುದ್ಧದಲ್ಲಿ ಎಡೆಬಿಡದೆ ತೊಡಗಿರುವಾಗ ರಾಷ್ಟ್ರಕೂಟ ಕೃಷ್ಣರಾಜನು ಮೇಲೆ ವಿವರಿಸಿದ ಅತ್ಯದ್ಭುತವಾದ ಕೈಲಾಸ ದೇವಾಲಯವನ್ನು ಕೊರೆಯಿಸುವ ಆಲೋಚನೆಯನ್ನು ಮಾಡಿದ್ದೂ ಆ ಕೆಲಸದಲ್ಲಿ ತೊಡಗಿದ್ದೂ ಅತ್ಯಾಶ್ಚರ್ಯಕರವಾದ ಸಂಗತಿಗಳಾಗಿರುತ್ತವೆಂದು ಎಲ್ಲರು ಒಡಂಬಡಬಹುದು. ಈ ಕಾಲಕ್ಕೆ ನಮ್ಮಲ್ಲಿ ಉಂಟಾದ ವಿಚಾರಕ್ರಾಂತಿಯೇ ಈ ಅತ್ಯಾಶ್ಚರ್ಯದ ಮುಖ್ಯ ಕಾರಣವೆಂದು ಧಾರಾಳವಾಗಿ ಹೇಳಬಹುದು. ಆ ಕಾಲದ ಈಶ್ವರ ಭಕ್ತಿಗೂ ಈಗಿನ ಈಶ್ವರ ಭಕ್ತಿಗೂ ಭೂಮ್ಯಾಕಾಶದಷ್ಟು ಅಂತರವಿರುವುದರಿಂದ ಈ ಕೈಲಾಸದ ಕಟ್ಟಡವು ಅತಿಸೋಜಿಗವಾದ್ದೆಂದು ನಮಗೆ ಕಾಣಿಸು

ತ್ತದೆ. ಚಾಳುಕ್ಯ ಸಾರ್ವಭೌಮರ ಸಂಪತ್ತು ದೊರೆತರೆ ಅದನ್ನೆಲ್ಲ ಈ ಕೈಲಾಸದ ಗುಡಿಯ ಕಟ್ಟಡಕ್ಕೆ ವೆಚ್ಚಮಾಡುವೆನೆಂದು ಕೃಷ್ಣರಾಜನು



ಕೈಲಾಸ ಗುಡಿಯೊಳಗಿನ ದೇವಸಭೆ

ಪರಮೇಶ್ವರನಿಗೆ ಹರಕೆ ಬೇಡಿಕೊಂಡುದರಿಂದ ತನಗೆ ಬಂದ ತೊಂದರೆಗಳನ್ನೆಲ್ಲ ಬದಿಗೊತ್ತಿ, ಅವನು ಈ ಅತ್ಯದ್ಭುತವಾದ ಕೈಲಾಸ ದೇವಾಲಯ

ವನ್ನು ಕೊರೆಯಿಸಿ ಮುಗಿಸಿರಬಹುದೆಂದು ನನ್ನ ಅಲ್ಪಮತಿಗೆ ತೋರು ತ್ತದೆ. ಈ ಊಹೆಯು ಎಷ್ಟುಮಟ್ಟಿಗೆ ಸರಿಯಾದ್ದೆಂಬುದನ್ನು ವಾಚಕರೇ ನಿರ್ಣಯಿಸಬಹುದು.

ಈ ಕೃಷ್ಣರಾಜನಿಗೆ ಎಷ್ಟು ಮಂದಿ ಹೆಣ್ಣುಮಕ್ಕಳಿದ್ದರೆಂಬುದಾಗಲಿ ಅವರನ್ನು ಯಾರಿಗೆ ಕೊಟ್ಟಿತ್ತೆಂಬುದಾಗಲಿ ಇನ್ನೂ ಗೊತ್ತಾಗಿಲ್ಲ. ಇವನಿಗೆ ೨ ಗಂಡುಮಕ್ಕಳಿದ್ದರು. ಹಿರಿಯವನ ಹೆಸರು **ಗೋವಿಂದ,** ಕಿರಿಯವನ ಹೆಸರು **ಧೋರ** ಅಥವಾ ಧ್ರುವ. ಇವರಿಬ್ಬರ ವಿಷಯವಾಗಿ ಇನ್ನು ಬರೆಯುವೆವು.

## ೩. ೨ ನೆಯ ಗೋವಿಂದ

(೭೭೮–೭೮೩)

ಕೃಷ್ಣರಾಜನ ತರುವಾಯ ಅವನ ಹಿರಿಮಗನಾದ ಗೋವಿಂದನು ಪಟ್ಟವೇರಿದನೆಂಬುದು ವಾದಗ್ರಸ್ತ ವಿಷಯವಾಗಿರುತ್ತದೆ. ಈ ಸಂಬಂಧ ದಿಂದ ಡಾ॥ ಫ್ಲೀಟರು ಬರೆಯುವುದೇನಂದರೆ:—“ಮೈಸೂರು ಸಂಸ್ಥಾನ ತುಮಕೂರು ಜಿಲ್ಲೆ ಕಡಬದ ಶಾಸನದಲ್ಲಿ ಇವನಿಗೆ **ಪ್ರಭೂತವರ್ಷ**ನೆಂಬ ಬಿರುದು ಇರುತ್ತದೆ. ಆದರೆ ಈ ಶಾಸನವು ನಿಜವಾದುದೆಂಬುದಕ್ಕೆ ಸಂಶಯ ಬರುತ್ತದೆ. ಕೆಲ ಶಾಸನಗಳಲ್ಲಿ ಇವನನ್ನು ವಲ್ಲಭನೆಂದು ಕರೆದಿರುತ್ತಾರೆ. ಇವನು ಪಟ್ಟವೇರಿದ ಸ್ವಲ್ಪ ಕಾಲದಲ್ಲೇ ಇವನ ತಮ್ಮ ನಾದ ಧ್ರುವನು ಇವನಿಂದ ಪಟ್ಟವನ್ನು ಕಿತ್ತಿಕೊಂಡನೆಂದು ಡಾ॥ ಬುಲ್ಹ ರರು ಅಭಿಪ್ರಾಯಪಡುತ್ತಾರೆ. ಗೋವಿಂದನು ವಿಷಯಾಸಕ್ತನಾಗಿ ರಾಜಕಾರ್ಯದಲ್ಲಿ ಮನಸು ಹಾಕದೆ, ಎಲ್ಲ ರಾಜ್ಯಭಾರವನ್ನು ತನ್ನ ತಮ್ಮನಾದ ಧ್ರುವನಿಗೆ ಒಪ್ಪಿಸಿದ್ದರಿಂದ, ಧ್ರುವನು ಅನಾಯಾಸವಾಗಿ ಅವನಿಂದ ಪಟ್ಟವನ್ನು ಸೆಳೆದುಕೊಂಡನೆಂದು ೯೪೦ ನೆಯ ಇಸ್ವಿಯ ಮಧ್ಯಪ್ರಾಂತದ ವರ್ಧಾ ಜಿಲ್ಲೆಯ ದೇವಲಿಯ ಶಾಸನದಲ್ಲಿ ಬರೆದಿರುತ್ತದೆ. ಈ ಶಾಸನವೇ ಡಾ॥ ಬುಲ್ಹರರ ಅಭಿಪ್ರಾಯಕ್ಕೆ ಆಧಾರವಾಗಿರಬಹುದು. ಆದರೆ ಇದಕ್ಕೂ ಮೊದಲಿನ ಕಾಲದ ಶಾಸನಗಳಲ್ಲಿ ಧ್ರುವನು **ಜ್ಯೇಷ್ಠೋಲ್ಲಂಘನ** ಮಾಡಿ ಪಟ್ಟವೇರಿದನೆಂದು ಬರೆದುದರಿಂದಲೂ

ಇದಕ್ಕೂ ಹಿಂದಿನ ಶಾಸನಗಳಲ್ಲಿ ಗೋವಿಂದನ ಹೆಸರೇ ಇಲ್ಲುದರಿಂದಲೂ ಗೋವಿಂದನು ಪಟ್ಟವೇರಲಿಲ್ಲೆಂದು ನಿಶ್ಚಯವಾಗಿ ಹೇಳಬಹುದು. ಈ ಗೋವಿಂದನು ತನ್ನ ಪಿತ್ರಾರ್ಜಿತ ಗದ್ದಿಗೆಯನ್ನು ದೊರಕಿಸುವುದ ಕ್ಕೋಸ್ಕರ ತನ್ನ ಮನೆತನದ ಹಗೆಗಳಾದ ಮಾಳವ, ಕಾಂಚಿ, ವೆಂಗಿ, ಗಂಗವಾಡಿ ಈ ನಾಡುಗಳ ಅರಸರ ನೆರವನ್ನು ತೆಗೆದುಕೊಂಡನೆಂದು ಹೈದರಾಬಾದ ಸಂಸ್ಥಾನಕ್ಕೆ ಸೇರಿದ ಪೈಠಣದ ೭೯೬ ನೆಯ ಇಸ್ವಿಯ ಶಾಸನವು ಹೇಳುತ್ತದಷ್ಟೇ. ಈ ಹೇಳಿಕೆಯು ಅವನು ಪಟ್ಟವೇರ ಲಿಲ್ಲೆಂಬ ಮಾತನ್ನು ಬಲಪಡಿಸುತ್ತದೆ ಹೊರತು ಅದನ್ನು ಅಲ್ಲಗಳೆ ಯುವುದಿಲ್ಲ*."

ಈ ವಿಷಯವನ್ನು ಕುರಿತು ಡಾ॥ ಭಾಂಡಾರಕರರು ತಮ್ಮ ದಕ್ಷಿ ಣದ ಇತಿಹಾಸದಲ್ಲಿ ಬರೆಯುವುದೇನಂದರೆ:—ಕೃಷ್ಣರಾಜನ ತರುವಾಯ ಅವನ ಹಿರಿಮಗನಾದ ೨ ನೆಯ ಗೋವಿಂದನು ಪಟ್ಟವೇರಿದನು. ವಾಣಿ ದಿಂಡೋರಿ, ರಾಧನಪುರ ಇವುಗಳಲ್ಲಿದ್ದ ಶಾಸನಗಳಲ್ಲಿ ಇವನ ಹೆಸರು ಇರುವುದಿಲ್ಲ. ಇವನು ಅಲ್ಪಕಾಲ ಆಳಿದ್ದರಿಂದ ಬಡೋದೆಯ ಶಾಸನವು ದಂತಿದುರ್ಗನ ಹೆಸರನ್ನು ಬಿಟ್ಟಂತೆ ಈ ಎರಡು ಶಾಸನಗಳು ಗೋವಿಂದನ ಹೆಸರನ್ನು ಬಿಟ್ಟಿರಬಹುದು. ಚಿಕ್ಕವನಾದ ಧ್ರುವನು ತನ್ನ ಅಣ್ಣನಾದ ಗೋವಿಂದನನ್ನು ಸಕಾರಣವಾಗಿ ಮೂಲೆಗೊತ್ತಿ ಪಟ್ಟವೇರಿದನೆಂದು ಈ ಎರಡು ಶಾಸನಗಳು ಹೇಳುತ್ತವೆ. ಗೋವಿಂದನನ್ನು ಹಾರು ಹೊಡೆದ ಕಾರಣವನ್ನು ವರ್ಧೆಯ ಶಾಸನವು ಸ್ಪಷ್ಟವಾಗಿ ಕೊಡುತ್ತದೆ. ಗೋವಿಂದನು ಅತಿವಿಷಯಾಸಕ್ತನಾಗಿ ರಾಜ್ಯಭಾರವನ್ನೆಲ್ಲ ತನ್ನ ತಮ್ಮನಾದ ನಿರುಪಮ(ಧ್ರುವ)ನಿಗೆ ಒಪ್ಪಿಸಿದ್ದರಿಂದ ಜರೆಯಲ್ಪಟ್ಟ ರಾಜ್ಯಲಕ್ಷ್ಮಿಯು ಅವನ ಕಯ್ಬಿಟ್ಟಳೆಂದು ಈ ಶಾಸನದಲ್ಲಿ ಬರೆದಿದೆ. ಪದಚ್ಯುತನಾದ ಗೋವಿಂದನು ಪಟ್ಟವನ್ನು ತಿರುಗಿ ದೊರಕಿಸಲಿಕ್ಕೆ ನೆರೆ ಯರಸರ ನೆರವಿನಿಂದ ದಂಡೆತ್ತಿಬರಲು, ಧ್ರುವನು ಅವನನ್ನು ಸೋಲಿಸಿ ಅಟ್ಟಿ, ಸಾರ್ವಭೌಮನೆಂದು ಹೊಗಳಿಸಿಕೊಂಡನು. ಕೃಷ್ಣನ ತರುವಾಯ ಗೋವಿಂದನು ಪಟ್ಟವೇರಿದನೆಂಬುದಕ್ಕೆ ಮತ್ತೊಂದು ಆಧಾರವಿರುತ್ತದೆ.

---

* ಮುಂಬಯಿ ಇಲಾಖೆಯ ಗ್ಯಾಜಿಟಿಯರ, ಸಂ. ೧, ಭಾ. ೨, ಪು. ೩೯೩.

ಶಕ ೭೦೫ (೭೮೩ ನೆಯ ಇಸ್ವಿ)ರಲ್ಲಿ ಬರೆದ ಹರಿವಂಶವೆಂಬ ಜೈನರ ಪುರಾಣದ ಕೊನೆಯಲ್ಲಿ ಕೃಷ್ಣನ ಮಗನಾದ **ವಲ್ಲಭ**ನು ದಕ್ಷಿಣವನ್ನು ಆಳುತ್ತಿದ್ದನೆಂದು ಬರೆದಿದೆ. ಕಾವಿ, ಪೈಠಣ ಈ ಊರುಗಳ ಶಾಸನಗಳಲ್ಲಿ ೨ ನೆಯ ಗೋವಿಂದನನ್ನು **ವಲ್ಲಭ**ನೆಂದು ಕರೆದಿರುತ್ತಾರೆ. ಕೃಷ್ಣನ ೨ ನೆಯ ಮಗನಾದ ಧ್ರುವನಿಗೆ ಕಲಿವಲ್ಲಭನೆಂಬುದೊಂದು ಬಿರುದಿತ್ತು. ಆದ್ದರಿಂದ ಹರಿವಂಶದಲ್ಲಿ ಹೇಳಿದ ಕೃಷ್ಣನ ಮಗನಾದ ವಲ್ಲಭನು ೨ ನೆಯ ಗೋವಿಂದನೇ ಆಗಿದ್ದನೆಂತಲೂ ಅವನೇ ೭೮೩ರಲ್ಲಿ ಕರ್ನಾಟಕದ ಸಾರ್ವಭೌಮನಾಗಿ ಆಳುತ್ತಿದ್ದನೆಂತಲೂ ಹೇಳಬಹುದು*.

ಮೈಸೂರು ಸಂಸ್ಥಾನದ ಶಾಸನ ಶೋಧಕರಾದ ಮೆ॥ ರಾಯಿಸ ಸಾಹೇಬರು ಈ ಸಂಬಂಧದಿಂದ ಬರೆಯುವುದೇನಂದರೆ:—ಮೈಸೂರು ಸಂಸ್ಥಾನ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲೂಕಿನ ಚಿಕ್ಕಮಧುರೆಯ ಗ್ರಾಮದ ಮಲ್ಲೇಶ್ವರ ದೇವಸ್ಥಾನದ ಮುಂದೆ ನಿಂತಿರುವ ಕಂಬದ ಪಶ್ಚಿಮ ಭಾಗದ ಮೇಲಿರುವ ಶಾಸನದಲ್ಲಿ ಅಕಾಲವರ್ಷ(ಕೃಷ್ಣ)ನ ಮಗನಾದ "ಜಗತ್ತುಂಗ ಪ್ರಭೂತವರ್ಷ ಪ್ರತಾಪಾವಲೋಕ ಶ್ರೀ ವಲ್ಲಹ ಪೃಥಿವೀ ರಾಜ್ಯಂ ಗೆಯ್ಯೆ" ಎಂದು ಬರೆದಿರುತ್ತದೆ†. ಈ ಶ್ರೀ ವಲ್ಲಹನು ೨ ನೆಯ ಗೋವಿಂದನೇ ಆಗಿರಲಿಕ್ಕೆ ಬೇಕು. ಇದಲ್ಲದೆ ೭೮೩ರಲ್ಲಿ ಆದ ಜೈನ ಹರಿವಂಶದಲ್ಲಿ ಕೃಷ್ಣನ ಮಗನಾದ ವಲ್ಲಭನು ದಕ್ಷಿಣವನ್ನು ಆಳುತ್ತಿದ್ದನೆಂದು ಬರೆದಿದೆ. ಪಲ್ಲವ ನೊಳಂಬ ಅರಸನಾದ ಸಿಂಗಪೋಟನ ಗಂಡು ಹೆಣ್ಣುಮಕ್ಕಳು ಗೋವಿಂದನ ಸಾಮಂತರಾಗಿದ್ದರೆಂದೂ ಈ ಪಲ್ಲವ ನೊಳಂಬ ಸಿಂಗಪೋಟನು ಗಂಗರಸನಾದ ಶಿವಮಾರ ಸೈಗೊಟ್ಟನ ಸಮಕಾಲೀನನಾಗಿದ್ದನೆಂದೂ ಚಳ್ಳಕೆರೆಯ ೮ ನೆಯ ಶಾಸನದಿಂದ ಕಂಡು ಬರುತ್ತದೆ. ಈ ಶಿವಮಾರನು ಗೋವಿಂದನ ಬೆನ್ನುಕಟ್ಟಿ ಸೋತು ಧ್ರುವನ ಸೆರೆಯಾಳಾದ ಸಂಗತಿಯು ಇತಿಹಾಸ ಪ್ರಸಿದ್ಧವಾಗಿರುತ್ತದೆ‡.

---

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೧೯೬–೯೭.

† ಕರ್ನಾಟಕದ ಶಾಸನ ಸಂಗ್ರಹ, ಸಂ. ೧೧, ಪು. ೨೭೭.

‡ ರಾಯಿಸರು ಬರೆದ "ಶಾಸನಗಳಿಂದ ತಿಳಿಯುವ ಮೈಸೂರು ಕೊಡಗು ಪ್ರಾಂತಗಳು", ಪು. ೬೮.

ಮೇಲಿನ ಬರಹದಿಂದ ಡಾ|| ಬುಹ್ಲರ, ಡಾ|| ಭಾಂಡಾರಕರ, ಮೆ|| ರಾಯಿಸ ಈ ಮೂವ್ವರು ಗೋವಿಂದನು ಪಟ್ಟವೇರಿದನೆಂತಲೂ ಡಾ|| ಫ್ಲೀಟರು ಒಬ್ಬರು ಮಾತ್ರ ಅವನು ಆಳಲಿಲ್ಲೆಂತಲೂ ಪ್ರತಿಪಾದಿಸು ತ್ತಾರೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಡಾ|| ಫ್ಲೀಟರು ಹೆಸರುವಾಸಿ ಯಾದ ಶಾಸನ ಪಂಡಿತರು. ಅವರು ನಮ್ಮ ತಾಯ್ನಾಡಿನ ಇತಿಹಾಸ ವನ್ನು ಬೆಳಕಿಗೆ ತರಲಿಕ್ಕೆ ಮಾಡಿದಷ್ಟು ಪ್ರಯತ್ನವನ್ನು ಬೇರೊಬ್ಬರು ಮಾಡಿಲ್ಲೆಂದರೆ ಅತಿಶಯೋಕ್ತಿಯಾಗಲಾರದು. ಆದರೆ ಸತ್ಯವು ಎಲ್ಲ ಸದ್ಗುಣಗಳಲ್ಲಿ ಶ್ರೇಷ್ಠತಮವಾದ್ದರಿಂದಲೂ ಅದೇ ಪರಮೇಶ್ವರ ಸ್ವರೂಪಿ ಯಾದ್ದರಿಂದಲೂ ಅದು ಯಾವ ತರದ ದಾಕ್ಷಿಣ್ಯಕ್ಕೆ ಎಂದೂ ಒಳಗಾಗ ಲಾರದೆಂಬ ಮಾತನ್ನು ಮರೆಯಕೂಡದು. ಆದಕಾರಣ ಈ ನಾಲ್ಕು ಜನ ಪಂಡಿತರ ಅಭಿಪ್ರಾಯಗಳಲ್ಲಿದ್ದ ಸತ್ಯಾಂಶಗಳನ್ನು ಒಟ್ಟುಗೂಡಿಸಿ ಅದರಿಂದ ಹೊರಡುವ ಅನುಮಾನವೇ ಕೊನೆಯ ಸಿದ್ಧಾಂತವೆಂದು ನಿರ್ಣ ಯಿಸಲಿಕ್ಕೆ ಯತ್ನಿಸುವಾ. ಗೋವಿಂದನು ಪಟ್ಟವೇರಲಿಲ್ಲೆಂಬುದಕ್ಕೆ ಡಾ|| ಫ್ಲೀಟರು ಕೊಟ್ಟ ಕಾರಣಗಳನ್ನು ಒಂದೊಂದಾಗಿ ವಿಚಾರಿಸಿ ನೋಡುವಾ.

೧. ಕಡಬದ ಶಾಸನದ ಬಗ್ಗೆ ಡಾ|| ಫ್ಲೀಟರು ಸಂಶಯಗೊಂಡು ತಮ್ಮ ಸಂಶಯಕ್ಕೆ ೪ ಕಾರಣಗಳನ್ನು ಒಂದು ಅಡಿಟಿಪ್ಪಣಿಯಲ್ಲಿ ಕೊಡುತ್ತಾರೆ. ಆ ಕಾರಣಗಳಾವವೆಂದರೆ:—೧. ಈ ಶಾಸನವು ದಂತಿ ದುರ್ಗನನ್ನು ಹೆಸರುಗೊಂಡು ಕರೆಯದೆ ವೈರಮೇಘನೆಂದು ಕರೆಯು ತ್ತದೆ. ಇದಕ್ಕೆ ಪ್ರತ್ಯಂತರವಾದ ಶಾಸನಗಳು ಇಲ್ಲ. ೨. ಮೊದಲನೆಯ ಕೃಷ್ಣನನ್ನು ಅಕಾಲವರ್ಷ ಕನ್ನರನೆಂದು ಕರೆಯದೆ ಅಕಾಲವರ್ಷ ಕನ್ನೇಶ್ವರನೆಂದು ಕರೆದಿದೆ. ೩. ಗೋವಿಂದನನ್ನು ಹೆಸರುಗೊಂಡು ಕರೆಯದೆ, ಪ್ರಭೂತವರ್ಷನೆಂಬ ಬಿರುದಿನಿಂದ ಕರೆಯುತ್ತದೆ. ಈ ಬಿರುದಿಗೆ ಪ್ರತ್ಯಂತರವಾಗಿ ಬೇರೆ ಯಾವ ಶಿಲಾ ಲೇಖವೂ ದೊರೆತಿಲ್ಲ. ೪. ಈ ಶಾಸನದ ಕಾಲವು ಅಂಕೆಯಲ್ಲಿದ್ದು ಅದರ ಗಣನೆಯು ಸರಿಯಾಗಿ ಆಗುವುದಿಲ್ಲ. ಪೂರ್ವ ಚಾಳುಕ್ಯ ಮನೆತನದ ೨ ನೆಯ ಅಮ್ಮನ ಪಟ್ಟಾ ಭಿಷೇಕದ ೯೪೫ ನೆಯ ಇಸ್ವಿಯ ಶಾಸನದಲ್ಲಿ ಮೊಟ್ಟಮೊದಲು ಅಂಕಿ

ಗಳಿಂದ ಶಕವನ್ನು ತೋರಿಸಲಾರಂಭಿಸಿದರೆಂಬ ತಿಳಿವಳಿಕೆಗೆ ಇದು ವಿರುದ್ಧವಾಗಿರುತ್ತದೆ.

ಈ ನಾಲ್ಕು ಕಾರಣಗಳು ಬಲಿಷ್ಠವಾದವೆಂದು ನಾನು ಒಡಂಬಡಲಾರೆನು. ಪ್ರತಿಯೊಂದು ಮಾತಿಗೆ ಪ್ರತ್ಯಂತರವಾಗಿ ಶಾಸನಗಳು ದೊರೆಯುವ ಸಂಭವವಿಲ್ಲೆಂದು ಡಾ॥ ಫ್ಲೀಟರ ಬರಹದಿಂದಲೇ ಸಿದ್ಧವಾಗಬಹುದು. ಕನ್ನರದ ಬದಲು ಕನ್ನೇಶ್ವರವೆಂದು ಬರೆದುದು ಹಸ್ತದೋಷವೇ ಸರಿ. ಹಿಂದೆ ಉದಾಹರಿಸಿದ ಚೆಳ್ಳಕೆರೆಯ ಶಾಸನದಲ್ಲಿ ಗೋವಿಂದನಿಗೆ ಪ್ರಭೂತವರ್ಷನೆಂಬ ಬಿರುದು ಇರುತ್ತದೆ. ಅಂಕಿಗಳಿಂದ ಶಕವನ್ನು ಹೇಳಿದ ಮೊದಲನೆಯ ಶಾಸನವು ಅಮ್ಮನ ಶಾಸನವೇ ಆಗಿರುತ್ತದೆಂದು ಇನ್ನೂ ಯಾರೂ ಸಮರ್ಪಕವಾಗಿ ನಿರ್ಣಯಮಾಡಿಲ್ಲ.

೨. ಕಾವಿ, ಪೈಠಣ ಶಾಸನಗಳಲ್ಲಿಯೂ ಹರಿವಂಶದಲ್ಲಿಯೂ ಗೋವಿಂದನಿಗೆ ವಲ್ಲಭನೆಂಬ ಬಿರುದನ್ನು ಕೊಟ್ಟಿರುತ್ತಾರೆಂದು ಡಾ॥ ಭಾಂಡಾರಕರರು ಬರೆಯುತ್ತಾರೆ. ಈ ಮಾತನ್ನು ಅಲ್ಲಗಳೆಯಲಿಕ್ಕೆ ಡಾ॥ ಫ್ಲೀಟರಿಗೆ ಆಧಾರಗಳೇನೂ ಇದ್ದಂತೆ ತೋರುವುದಿಲ್ಲ. ಆದ್ದರಿಂದ ಗೋವಿಂದನು ಪಟ್ಟವೇರಿದನೆಂದು ಡಾ॥ ಫ್ಲೀಟರು ಒಡಂಬಡಬೇಕಾಗುವುದು. ಆದರೆ ಅವರು ಒಂದು ಅಡಿಟಿಪ್ಪಣಿಯಲ್ಲಿ ಹರಿವಂಶದ ಶ್ಲೋಕದ ಬಗ್ಗೆ ಒಂದು ಸಣ್ಣ ಆಕ್ಷೇಪಣೆಯನ್ನು ತೆಗೆದುಕೊಂಡಿರುತ್ತಾರೆ. ಆದಕಾರಣ ಆ ಶ್ಲೋಕವನ್ನು ಕೆಳಗೆ ಕೊಟ್ಟು ಅವರ ಆಕ್ಷೇಪಣೆಯನ್ನು ವಿಚಾರ ಮಾಡುವೆವು:—

ಶಾಕೇಷ್ವಬ್ದಶತೇಷು ಸಪ್ತಸು ದಿಶಂ ಪಂಚೋತ್ತರೇಷೂತ್ತರಾಂ
ಪಾತೀಂದ್ರಾಯುಧನಾಮ್ನಿ ಕೃಷ್ಣನೃಪಜೇ ಶ್ರೀ ವಲ್ಲಭೇ ದಕ್ಷಿಣಾಂ॥
ಪೂರ್ವಾಂ ಶ್ರೀಮದವಂತಿಭೂಭೃತಿ ನೃಪೇ ವತ್ಸಾದಿ(ಧಿ)ರಾಜೇಽಪರಾಂ।
ಸೌರ್ಯಾ(ರಾ)ಣಾಮಧಿಮಂಡಲೇ(ಲಂ)ಜಯಯುತೇ ವೀರೇ ವರಾಹೇಽವತಿ ॥

ಮೇಲೆ ಕೊಟ್ಟ ಶ್ಲೋಕದ ೨ನೆಯ ಪಾದದ ಅರ್ಥದ ವಿಷಯವಾಗಿ ಡಾ। ಭಾಂಡಾರಕರ ಫ್ಲೀಟರ ಮತಭೇದವಿರುತ್ತದೆ. ಇಂದ್ರಾಯುಧ

ನೆಂಬವನು ಉತ್ತರದಲ್ಲಿಯೂ ಕೃಷ್ಣನ ಮಗನಾದ ಶ್ರೀವಲ್ಲಭ (ಗೋವಿಂದ) ನು ದಕ್ಷಿಣದಲ್ಲಿಯೂ ಆಳುತ್ತಿದ್ದರೆಂದು ಡಾ॥ ಭಾಂಡಾರಕರರು ಅರ್ಥ ಮಾಡುತ್ತಾರೆ. ಶ್ರೀವಲ್ಲಭನು ದಕ್ಷಿಣದಲ್ಲಿಯೂ ಕೃಷ್ಣನ ಮಗನಾದ ಇಂದ್ರಾಯುಧನು ಉತ್ತರದಲ್ಲಿಯೂ ಆಳುತ್ತಿದ್ದರೆಂದು ಡಾ॥ ಫ್ಲೀಟರು ಅರ್ಥ ಮಾಡುತ್ತಾರೆ*. ಈ ಎರಡು ಅರ್ಥಗಳಲ್ಲಿ ಡಾ॥ ಭಾಂಡಾರಕರರ ಅರ್ಥವು ಸರಳವಾದುದೆಂತಲೂ ಡಾ॥ ಫ್ಲೀಟರ ಅರ್ಥವು ಕ್ಲಿಷ್ಟವಾದು ದೆಂತಲೂ ನನಗಂತೂ ತೋರುತ್ತದೆ. ಹರಿವಂಶದ ಕರ್ತನು ದಕ್ಷಿಣ ನಿವಾಸಿಯಾದ್ದರಿಂದ ಅವನಿಗೆ ದಕ್ಷಿಣದ ಅರಸನ ಗೊತ್ತಿದ್ದಷ್ಟು ಉತ್ತರದ ಅರಸನ ಗೊತ್ತಿದ್ದಿಲ್ಲೆಂದು ಧಾರಾಳವಾಗಿ ಹೇಳಬಹುದು. ಆದ್ದರಿಂದ ಅವನು "ಉತ್ತರದಲ್ಲಿ ಇಂದ್ರಾಯುಧನೆಂಬ **ಹೆಸರಿನ** ಅರಸನು ಆಳು ತ್ತಿದ್ದನೆಂದು ಮೇಲೆ ಕೊಟ್ಟ ಶ್ಲೋಕದಲ್ಲಿ ಬರೆದು, ತನ್ನ ಅಪರಿಚಯವನ್ನು ವ್ಯಕ್ತಗೊಳಿಸಿರುತ್ತಾನೆ. ಇಂತು ಗೊತ್ತಿಲ್ಲದವನ ತಂದೆಯ ಹೆಸರನ್ನು ಕವಿಯು ಹೇಳಿರುತ್ತಾನೆಂಬುದು ಸರ್ವಾಪದ್ಧವಲ್ಲವೇ? ಇದಲ್ಲದೆ ಹರಿ ವಂಶವು ೭೮೩ರಲ್ಲಿ ಆಗಿದ್ದರೆ ಆ ವರ್ಷ ೨ನೆಯ ಗೋವಿಂದನ ಹೊರತು ಬೇರೊಬ್ಬನು ಶ್ರೀವಲ್ಲಭನಾಗಲಾರನು. ಆದ್ದರಿಂದ ೭೮೩ರಲ್ಲಿ ೨ನೆಯ ಗೋವಿಂದನು ರಾಷ್ಟ್ರಕೂಟ ಪಟ್ಟವನ್ನೇರಿದ್ದನೆಂದು ನಿಸ್ಸಂದೇಹವಾಗಿ ಹೇಳಬಹುದು. ಡಾ॥ ಫ್ಲೀಟರ ಅನ್ವಯಕ್ಕೆ ಮತ್ತೊಂದು ತೊಡರುಂಟು. ಇಂದ್ರಾಯುಧನು ಮತ್ತೊಬ್ಬ ಕೃಷ್ಣರಾಜನ ಮಗನಾಗಿದ್ದರೆ ಮಾತ್ರ **ಕೃಷ್ಣನೃಪಜೆ ಇಂದ್ರಾಯುಧನಾಮ್ನಿ** ಎಂದು ಅನ್ವಯಮಾಡಬಹುದು. ಆದರೆ ಈ ಇಂದ್ರಾಯುಧನು ಯಾರು? ಇವನ ರಾಜಧಾನಿ ಯಾವುದು? ಇವನ ತಂದೆ ಯಾರು? ಎಂಬ ಬಗ್ಗೆ ಡಾ॥ ಫ್ಲೀಟರು ಏನೂ ಬರೆದಿಲ್ಲ. ಕರ್ಮಧರ್ಮಸಂಯೋಗದಿಂದ ಈ ಇಂದ್ರಾಯುಧನ ತಂದೆಯು ಕೃಷ್ಣರಾಜನಾಗಿದ್ದರೂ ಡಾ॥ ಫ್ಲೀಟರ ಅನ್ವಯವು ಸರಿಯಾದ್ದಲ್ಲೆಂದು ಹೇಳಬಹುದು.

---

* ಮುಂಬಯಿ ಇಲಾಖೆಯ ಗ್ಯಾಜಿಟಿಯರ, ಸಂ. ೧, ಭಾ. ೨, ಪು. ೩೯೫, ಅಡಿಟಿಪ್ಪಣಿ ೧.

೩. ಧ್ರುವನು ಜ್ಯೇಷ್ಠೋಲ್ಲಂಘನ ಮಾಡಿದನೆಂದು ಕೆಲ ಶಾಸನಗಳಲ್ಲಿ ಬರೆದಿರುವುದರಿಂದ ಗೋವಿಂದನು ಪಟ್ಟವೇರಲಿಲ್ಲೆಂದು ಡಾ|| ಫ್ಲೀಟರು ಊಹಿಸುತ್ತಾರೆ. ಗೋವಿಂದನು ಪಟ್ಟವೇರಿದ ಬಳಿಕ ಅವನ ತಮ್ಮನಾದ ಧ್ರುವನು ಪಟ್ಟವನ್ನು ಸೆಳೆಕೊಳ್ಳುವುದಾದರೂ ಜ್ಯೇಷ್ಠೋಲ್ಲಂಘನವಾಗುವುದರಿಂದ ಈ ಊಹೆಯಲ್ಲಿ ಅರ್ಥವಿಲ್ಲೆಂದು ಹೇಳಬಹುದು.

೪. ಇತ್ತಲಾಗಿನ ಕೆಲ ಶಾಸನಗಳಲ್ಲಿ ಗೋವಿಂದನ ಹೆಸರನ್ನು ಬಿಟ್ಟುದರಿಂದ ಅವನು ಪಟ್ಟವೇರಲಿಲ್ಲೆಂದು ಡಾ|| ಫ್ಲೀಟರು ತರ್ಕಿಸುತ್ತಾರೆ. ಈ ತರ್ಕವಾದರೂ ಸಬಲವಾದ್ದೆಂದು ಹೇಳಲಾರೆವು. ಬಾದಾವಿ ಚಾಳುಕ್ಯ ಮನೆತನದಲ್ಲಿ ೨ನೆಯ ಪುಲಿಕೇಶಿಯ ಹಿರಿಯ ಮಗನಾದ ಚಂದ್ರಾದಿತ್ಯನ ಹೆಸರನ್ನು ಶಾಸನಗಳು ಬಿಟ್ಟಿಲ್ಲವೇ? ಅದೇಕೆ, ರಾಷ್ಟ್ರಕೂಟ (ನಾಡುಗವುಡ) ಅರಸುಮನೆತನದ ಸ್ಥಾಪಕನಾದ ದಂತಿದುರ್ಗನ ಹೆಸರನ್ನೇ ಬಡೋದೆಯ ಶಾಸನವು ಬಿಟ್ಟಿಲ್ಲವೇ? ಶಾಸನಗಳನ್ನು ಬರೆಯಿಸುವವರಾಗಲಿ ಬರೆಯುವವರಾಗಲಿ ಆಳುವ ಅರಸರ ದಾಕ್ಷಿಣ್ಯಕ್ಕೆ ಒಳಗಾದವರಾದ್ದರಿಂದ ಅಲ್ಪಕಾಲ ಪಟ್ಟದ ಮೇಲಿದ್ದ ಮತ್ತು ಆಳುವ ಅರಸರಿಗೆ ಬೇಡಾದವರ ಹೆಸರನ್ನು ಶಾಸನಗಳಲ್ಲಿ ಬಿಡುತ್ತಾರೆಂಬುದರಲ್ಲಿ ಆಶ್ಚರ್ಯವೇನು?

೫. ಗೋವಿಂದನು ತನ್ನ ಪಿತ್ರಾರ್ಜಿತ ಪಟ್ಟವನ್ನು ದೊರಕಿಸುವುದಕ್ಕೋಸ್ಕರ ಹಗೆನಾಡಿನ ಅರಸರ ನೆರವು ತೆಗೆದುಕೊಂಡುದು ಅವನು ಪಟ್ಟವೇರಲಿಲ್ಲೆಂಬ ತಮ್ಮ ಅನುಮಾನವನ್ನು ಬಲಪಡಿಸುತ್ತದೆಂದು ಡಾ|| ಫ್ಲೀಟರು ಬರೆಯುತ್ತಾರೆ. ಈ ಮಾತಿನ ಅರ್ಥವು ನನಗೆ ಸರಿಯಾಗಿ ತಿಳಿಯಲೊಲ್ಲದು. ಧ್ರುವನು ತಂದೆ ಸತ್ತಕೂಡಲೇ ಪಟ್ಟವನ್ನು ಹಿಡಿದುಕೊಂಡಿರಬಹುದು; ಅಥವಾ ಗೋವಿಂದನನ್ನು ಪಟ್ಟದಿಂದ ತಳ್ಳಿ ತಾನು ಅರಸಾಗಿರಬಹುದು. ಹೇಗಾದರೂ ಗೋವಿಂದನು ಮಾಡಿದ ಪ್ರಯತ್ನವು ಸ್ವಾಭಾವಿಕವಾದ್ದಲ್ಲವೇ? ನೀರೊಳಗೆ ಮುಳುಗುವವನು ಕಡ್ಡಿಯನ್ನು ಹಿಡಿಯುತ್ತಾನೆಂಬ ಪಾಶ್ಚಿಮಾತ್ಯ ಗಾದೆಯನ್ನು ವಾಚಕರು ಕೇಳಿರಬಹುದು.

೭. ಕೃಷ್ಣರಾಜನು ಜೀವಂತನಾಗಿರುವಾಗ ತನ್ನ ಹಿರಿ ಮಗನಾದ ಗೋವಿಂದನು ರಾಜ್ಯಭಾರವನ್ನು ಮಾಡಲಿಕ್ಕೆ ಯೋಗ್ಯನೆಂದು ನಿರ್ಣಯಿಸಿ, ಅವನಿಗೆ ಯುವರಾಜ ಪಟ್ಟವನ್ನು ಕೊಟ್ಟನು.

೭. ಡಾ|| ಕಿಲ್ಹಾರ್ನರು ಗೋವಿಂದನು ಪಟ್ಟವೇರಿದನೆಂತಲೂ ಅವನಿಗೆ ಪ್ರಭೂತವರ್ಷ, ವಿಕ್ರಮಾವಲೋಕ ಎಂಬ ಬಿರುದುಗಳಿದ್ದವೆಂತಲೂ ತಮ್ಮ ರಾಷ್ಟ್ರಕೂಟ ವಂಶಾವಳಿಯಲ್ಲಿ ಬರೆಯುತ್ತಾರೆ.

ಮೇಲೆ ಕೊಟ್ಟ ೭ ಕಾರಣಗಳಿಂದ ಕೃಷ್ಣರಾಜನ ತರುವಾಯ ಅವನ ಜ್ಯೇಷ್ಠಪುತ್ರನಾದ ಗೋವಿಂದನು ಪಟ್ಟವೇರಿದನೆಂದು ನಿಶ್ಚಯವಾಗಿ ಅನುಮಾನ ಮಾಡಬಹುದು*. ಡಾ|| ಭಾಂಡಾರಕರರು ಊಹಿಸುವಂತೆ ಇವನು ೭೮೩ರಿಂದ ೭೮೪ರ ವರೆಗೆ ಸುಮಾರು ಒಂದು ವರುಷ ಆಳಿರಬಹುದೆಂದು ತೋರುತ್ತದೆ. ಇವನು ಸಿವಾಜಿ ಮಹಾರಾಜನ ಮಗನಾದ ಸಂಬಾಜಿಯಂತೆ ವಿಷಯಾಸಕ್ತನೂ ಅವಿವೇಕಿಯೂ ಆಗಿದ್ದನು. ಪಟ್ಟವೇರಿದ ಬಳಿಕ ಇವನಿಗೆ ಸಂಪತ್ತೂ ಪ್ರಭುತ್ವವೂ ದೊರೆದುದರಿಂದ ಇವನ ಎಚ್ಚರಗೇಡಿತನವು ಮಿತಿಮೀರಿ ಬೆಳೆಯಿತು. ಈ ಒಂದೊಂದು ಕಾರಣದಿಂದಲೇ ಎಷ್ಟೋ ಕೇಡಾಗಬಹುದು. ಈ ನಾಲ್ಕು ಕಾರಣಗಳು ಒಟ್ಟುಗೂಡಿದ ಬಳಿಕಂತೂ ಕೇಳುವುದೇ

---

* ಇದನ್ನು ಬರೆದು ೧-೨ ತಿಂಗಳಾದ ಬಳಿಕ ನನ್ನ ಮಿತ್ರರಾದ ಮ|| ನೆಲಮಂಗಲ ಲಕ್ಷ್ಮೀನಾರಾಯಣರಾಯ, ಎಂ.ಎ. ಯವರು ಮುದ್ರಿಸಿದ ನಾಸಿಕ ವಿಷಯದ ಒಂದು ಶಾಸನವನ್ನು ತೋರಿಸಿದರು. ಅದರಲ್ಲಿ ಬರೆದುದೇನಂದರೆ:—ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಶ್ರೀ ಪ್ರಭೂತವರ್ಷ ಗೋವಿಂದನು ಆಳುವಾಗ ಅವನ ತಮ್ಮನಾದ ಕರ್ಕರಾಜನು ನಾಸಿಕ ವಿಷಯದ ರಕ್ಕುಲ್ಲ ಗ್ರಾಮವನ್ನು ಒಬ್ಬ ಬ್ರಾಹ್ಮಣನಿಗೆ ದಾನಕೊಟ್ಟನು. ಈ ಲೇಖದಿಂದ ಕೃಷ್ಣನ ತರುವಾಯ ಅವನ ಹಿರಿ ಮಗನಾದ ೨ನೆಯ ಗೋವಿಂದನು ಪಟ್ಟವೇರಿದನೆಂಬುದಕ್ಕೆ ಸಂದೇಹವಿಲ್ಲ. ೬೯೨ ನೆಯ ಶಕದ ಅಲಾಸದ ತಾಮ್ರ ಶಾಸನದಿಂದ ೨ನೆಯ ಗೋವಿಂದನು ಆ ಕಾಲಕ್ಕೆ ಯುವರಾಜನಾಗಿದ್ದನೆಂದು ಸ್ಪಷ್ಟವಾಗಿ ತಿಳಿಯುತ್ತದೆ. ೭೦೧ ನೆಯ ಶಕದ ನಾಸಿಕ ವಿಷಯದ ಶಾಸನದಿಂದಲೂ ೭೦೫ ನೆಯ ಶಕದ ಹರಿವಂಶವೆಂಬ ಜೈನ ಗ್ರಂಥದಿಂದಲೂ ೨ನೆಯ ಗೋವಿಂದನು ೭೭೮ರಿಂದ ೭೮೪ರವರೆಗೆ ಆಳಿದನೆಂದು ಊಹಿಸಬಹುದು. ಆದರೆ ಶ್ರೀವಲ್ಲಭ ಎಂಬ ಬಿರುದು ೨ನೆಯ ಗೋವಿಂದ ಧ್ರುವ ಇವರಿಬ್ಬರಿಗೂ ಇತ್ತೋ ಹೇಗೆ ಎಂಬ ಸಂಶಯವು ಮಾತ್ರ ಇನ್ನೂ ಉಳಿಯುತ್ತದೆ.

ನಿದೇ?* ಈ ಸರ್ವಾನರ್ಥವು ಎರಡು ಬಗೆಯಿಂದ ಪರಿಣಮಿಸಬಹುದು. ಸ್ವಸಂರಕ್ಷಣ ದಕ್ಷನಾದ ತಗಲಖ ಮಹಮ್ಮದನಂತಹ ಅವಿವೇಕಿಯು ಅರಸನಾದರೆ ಪ್ರಜೆಗಳ ಗೋಳಾಟಕ್ಕೆ ಪರಿಮಿತಿಯೇ ಇಲ್ಲ. ಸಂಭಾಜಿಯಂತಹ ತಿಳಿಗೇಡಿಯು ನೆಲದೆರೆಯನಾದರೆ ಅವನು ತುಸು ಕಾಲದಲ್ಲೇ ರಾಜ್ಯಕ್ಕೂ ಪ್ರಾಣಕ್ಕೂ ಎರವಾಗುವನೆಂಬುದಕ್ಕೆ ಸಂದೇಹವಿಲ್ಲ. ಪಟ್ಟವೇರಿದ ಬಳಿಕ ೨ನೆಯ ಗೋವಿಂದನು ವಿಷಯಾಸಕ್ತನಾಗಿ ನೂರಾರು ಹರೆಯದ ಚನ್ನೆಯರೊಡನೆ ಚಲ್ಲಾಟವಾಡುತ್ತ ಕಾಲಕಳೆಯಲಾರಂಭಿಸಿದ್ದರಿಂದ ವಿವೇಕಿಯೂ ಕಾರ್ಯದಕ್ಷನೂ ಶೂರನೂ ಜಾಣನೂ ಆದ ಧ್ರುವನು ಎಲ್ಲ ರಾಜ್ಯಸೂತ್ರಗಳನ್ನು ತನ್ನ ಕಯ್ಯಲ್ಲಿ ತೆಗೆದುಕೊಂಡು, ಮುಖ್ಯ ರಾಜ್ಯಾಧಿಕಾರಿಗಳನ್ನು ತನ್ನ ಕಡೆಗೆ ಒಡೆಕೊಂಡು, ತಾನೇ ಸಾರ್ವಭೌಮನಾದನು. ತನ್ನ ದುಂದುಗಾರಿಕೆಗೆ ಬೇಕಾದಷ್ಟು ಹಣವು ದೊರೆಯದ ಹಾಗೆ ಆದಕೂಡಲೆ ಅವನು ಸಿಟ್ಟಿಗೆದ್ದು ಎಲ್ಲರನ್ನು ಬಾಯಿಗೆ ಬಂದಂತೆ ಬಿಯ್ದು ಕೋಶಾಧಿಕಾರಿಯನ್ನು ಕರೆಯಿಸಿದನು, ತಮ್ಮನಿಗೆ ಬರಹೇಳಿದನು; ದಳವಾಯಿಗಳನ್ನು ಕರೆಕಳುಹಿದನು. ನಿರ್ಮಾಲ್ಯನಾದ ಗೋವಿಂದನ ಮಾತು ಕೇಳುವವರಾರು? ಯಾರೂ ತನ್ನ ಮಾತು ಕೇಳದ್ದನ್ನು ಕಂಡು ವಿಷಯಾಸಕ್ತತೆಯಿಂದ ಅವನ ಕಣ್ಣಿನ ಮೇಲೆ ಬೆಳೆದ ಪರೆಯು ಕಳಚಿ ಬಿತ್ತು. ಅವನಿಗೆ ಅರವು ಬಂತು, ತನ್ನ ನಿಜಸ್ಥಿತಿಯ ಜ್ಞಾನವಾಯಿತು, ತಾನು ಅರಸನಾಗಿರದೆ ಸೆರೆಯಾಳಾಗಿರುತ್ತೇನೆಂಬ ತಿಳಿವಳಿಕೆಯು ಹುಟ್ಟಿತು.

**ದಾರಿದ್ರ್ಯಮ್ ಪರಮಾಂಜನಮ್** ಎಂದು ಹಿರಿಯರು ಹೇಳುವ ಮಾತು ಸುಳ್ಳಲ್ಲ. ದುಂದುಗಾರಿಕೆಗೆ ಸಾಕಷ್ಟು ಹಣ ಸಿಕ್ಕದ ಹಾಗೆ ಆದ ಕೂಡಲೆ ಗೋವಿಂದನಿಗೆ ತುಸು ಎಚ್ಚರ ಬಂತು. ಬೇಕಾದಷ್ಟು ಹಣ ಬಾರದ ಹಾಗೆ ಆದುದನ್ನು ಕಂಡು ಸೂಳೆಯರು ತಪ್ಪಿಸತೊಡಗಿದರು. ಗೋವಿಂದನ ಮೆಯ್ಮೇಲಿದ್ದ ಚಿನ್ನ ಹರಳುಕಲ್ಲುಗಳ ಒಡವೆಗಳೆಲ್ಲ ಕಯ್ಬಿಟ್ಟವು. ಬಳಿಕ ಅವನು ತನ್ನ ಹೆಂಡಂದಿರ ಆಭರಣಗಳನ್ನು ತನ್ನ

* ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕತಾ।
ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಂ ॥ ಸುಭಾಷಿತ.

ಪ್ರೀತಿಯು ಹೆಂಗಸರಿಗೆ ಕೊಡಲಾರಂಭಿಸಿದಸು. ಅವಾದರೂ ಎಷ್ಟು ದಿವಸ ಪೂರೈಸುವವು? ಕೊನೆಗೆ ಹಣವಿಲ್ಲದವನು ಹೆಣಕ್ಕಿಂತ ಕಡೆ ಎಂಬ ಗಾದೆಯು ಅನುಭವವು ಅವನಿಗೆ ಬಂತು. ಅವನ ಮಾತು ಯಾರೂ ಕೇಳದಹಾಗಾದರು. ಕಡೆಗೆ ಅವನು ತನ್ನ ಸಂಗಡಿಗರೊಡನೆ ಸಂಚು ಮಾಡಿ, ಹೆಂಗಸಿನ ವೇಷ ಹಾಕಿಕೊಂಡು ಒಂದು ಮೇಣೆಯಲ್ಲಿ ಕುಳಿತು ಕಾವಲುಗಾರರನ್ನು ತಪ್ಪಿಸಿ ಅರಮನೆಯಿಂದ ಓಡಿಹೋದನು. ಗೊತ್ತು ಮಾಡಿದ ಸ್ಥಳವನ್ನು ಮುಟ್ಟಿದ ಬಳಿಕ ತನ್ನ ಹೆಣ್ಣು ಸೋಗನ್ನು ಬಿಟ್ಟು, ತನ್ನ ಉಡಿಗೆತೊಡಗಿಗಳನ್ನು ಧರಿಸಿ ತನ್ನ ನಂಬಿಗಸ್ತರಾದ ಜನರೊಡನೆ ಆಲೋಚಿಸಿ, ಪೂರ್ವ ಚಾಳುಕ್ಯರ ರಾಜಧಾನಿಯಾದ ವೆಂಗಿಯ ದಾರಿಯನ್ನು ಹಿಡಿದನು. ಹೊಟ್ಟೆಯುರಿದ ಚಾಳುಕ್ಯರು ಅವನಿಗೆ ಆಶ್ರಯ ಕೊಟ್ಟು ಮನಮುಟ್ಟಿ ಆದರಿಸಿದರು (೭೮೪).

## ೪. ಧ್ರುವ

(೭೮೪–೭೯೪ ?)

ಗೋವಿಂದನು ಅರಮನೆಯಿಂದ ಓಡಿಹೋದ ೫–೬ ದಿವಸಗಳ ಬಳಿಕ ಧ್ರುವನಿಗೆ ಆ ಸುದ್ದಿಯು ಹತ್ತಿತು. ಅವನು ಕಾವಲುಗಾರರನ್ನು ದಂಡಿಸಿ ಗದರಿಸಿ, ಗೋವಿಂದನನ್ನು ಹುಡುಕಿ ತರಲಿಕ್ಕೆ ಸ್ವಾರರನ್ನು ನಾಲ್ಕೂ ಕಡೆಗೆ ಕಳುಹಿದನು. ಅವರು ಹಸಿವೆ ನಿದ್ದೆ ನೀರಡಿಕೆ ಎನ್ನದೆ ಎಷ್ಟು ಅಡಬಡಿಸಿಕೊಂಡು ಹೋದರೂ ಗೋವಿಂದನು ಅವರಿಗೆ ಸಿಕ್ಕಲಿಲ್ಲ. ಆದ್ದರಿಂದ ಅವರು 'ಉಧೋ ಲಕ್ಷ್ಮಣ' ಎಂದು ತಿರುಗಿ ಬಂದು ಗೋವಿಂದನು ವೆಂಗಿಗೆ ಹೋದನೆಂಬ ಸುದ್ದಿಯನ್ನು ನಿವೇದಿಸಿದರು. ಈ ಸುದ್ದಿಯು ನಿಜವಾಗಿರಬಹುದೆಂದು ತೋರಿದ್ದರಿಂದ ಧ್ರುವನು ಚಾರರನ್ನು ವೆಂಗಿಗೆ ಕಳುಹಿ, ಮುಂದೆ ಬರುವ ದಾಳಿಯನ್ನು ಅಡ್ಡಯಿಸಲಿಕ್ಕೆ ಯುದ್ಧ ಸನ್ನಾಹವನ್ನು ಮಾಡತೊಡಗಿದನು.

ಬುದ್ಧಿವಂತರು ತಮ್ಮ ಕಾಲವನ್ನು ಕಾವ್ಯಶಾಸ್ತ್ರಗಳನ್ನು ನೋಡುವುದರಲ್ಲಿ ಕಳೆಯುತ್ತಾರೆ ಮತ್ತು ದಡ್ಡರು ತಮ್ಮ ಆಯುಷ್ಯವನ್ನು ವ್ಯಸನದಲ್ಲಿಯೂ ನಿದ್ದೆಯಲ್ಲಿಯೂ ಜಗಳದಲ್ಲಿಯೂ ಹಾಳುಮಾಡಿ




 

ಕೂಳ್ಳುತ್ತಾರೆಂಬ ಮಾತು ಯಥಾಸ್ಥಿತವಾಗಿರುತ್ತದೆ. ದುರ್ವ್ಯಸನಗಳು ಒಮ್ಮೆ ಮನುಷ್ಯನಲ್ಲಿ ಸೇರಿದ ಬಳಿಕ ಅವುಗಳನ್ನು ಬಿಡುವುದು ದುಸ್ಸಾಧ್ಯವೇ ಸರಿ. ಅವುಗಳನ್ನು ಬಿಡುವುದಕ್ಕೆ ಮನುಷ್ಯನು ಮಾಡಿದ ದೃಢ ನಿಶ್ಚಯಗಳು ಕೂಡಲೆ ಕ್ಷಣಿಕ ನಿಶ್ಚಯಗಳಾಗುತ್ತವೆ. ವ್ಯಸನಗಳಿಗೆ ವಶವರ್ತಿಗಳಾದ ಇಂದ್ರಿಯಗಳು ಮನುಷ್ಯನನ್ನು ಆಯಾ ವ್ಯಸನಗಳಿಗೆ ಎಡೆಬಿಡದೆ ಎಳೆಯುತ್ತಿರುವುದರಿಂದ ಅವುಗಳನ್ನು ಮುರಿಬಡಿಯುವಷ್ಟು ಸಾಮರ್ಥ್ಯವು ಸಾಮಾನ್ಯ ಜನರ ಆತ್ಮದಲ್ಲಿರುವುದಿಲ್ಲ. ಈ ನಿಯಮಕ್ಕೆ ಅನುಗುಣವಾಗಿ ಗೋವಿಂದನ ವಿಷಯಾಸಕ್ತತೆಯು ವೆಂಗಿಯಲ್ಲಿ ಮತ್ತೆ ತಲೆ ಎತ್ತಿತು. ತನ್ನ ದುರವಸ್ಥೆಯ ಪರಿವೆಯೇ ಇಲ್ಲದಾದ್ದರಿಂದ ಅವನು ಅಗ್ಗದ ಸೂಳೆಯರ ಸಂಗಮದಲ್ಲಿ ಕಾಲಹರಣಮಾಡಲಾರಂಭಿಸಿದನು. ಅವನ ವಿಪರೀತ ವೃತ್ತಿಯನ್ನು ಕಂಡು ಚಾಳುಕ್ಯರು ಅಸಹ್ಯಗೊಂಡರು. ಇಂತಹ ದತ್ತಗೇಡಿಯಾದ ಹೇಡಿಯ ಬೆನ್ನುಕಟ್ಟುವುದು ಸರಿಯಲ್ಲೆಂದು ಚಾಳುಕ್ಯರಿಗೆ ಹೊಳೆಯಿತು. ದತ್ತಗೇಡಿಯಾದ ಗೋವಿಂದನಿಗೆ ಪಟ್ಟಗಟ್ಟುವ ವಿಚಾರವು ಅವರ ಕನಸುಮನಸಿನಲ್ಲಿದ್ದಿಲ್ಲ. ಗೋವಿಂದನ ನೆವನಮಾಡಿ ತಮ್ಮ ಪಿತ್ರಾರ್ಜಿತ ಸಾಮ್ರಾಜ್ಯವನ್ನು ತಿರುಗಿ ದೊರಕಿಸುವ ಹೆಬ್ಬಯಕೆಯು ಅವರ ಮನಸ್ಸಿನಲ್ಲಿ ಕುದಿಯುತ್ತಿತ್ತು. ಆದ್ದರಿಂದ ಅವರು ಗೋವಿಂದನ ಕುಂದುಕೊರತೆಗಳನ್ನು ಲಕ್ಷ್ಯಕ್ಕೆ ತಾರದೆ, ತಮ್ಮೊಬ್ಬರಿಂದ ರಾಷ್ಟ್ರಕೂಟರನ್ನು ಪೂರ್ಣವಾಗಿ ಗೆಲ್ಲುವುದಾಗಲಿಕ್ಕಿಲ್ಲೆಂದೆಣಿಸಿ, ಕಾಂಚಿ, ಗಂಗಮಂಡಲ, ಮಾಳವೆ ಈ ನಾಡುಗಳ ಅರಸರಿಗೆ ನೆರವಾಗುವುದಕ್ಕೋಸ್ಕರ ಗೋವಿಂದನಿಂದ ಪತ್ರ ಬರೆಯಿಸಿ ಆ ಪತ್ರಗಳೊಡನೆ ತಮ್ಮ ರಾಯಭಾರಿಗಳನ್ನು ಕಳುಹಿದರು. ರಾಷ್ಟ್ರಕೂಟರ ರಾಜ್ಯವನ್ನು ಹರಿದು ಹಂಚಿಕೊಳ್ಳುವ ಹವಣಿಕೆಯುಳ್ಳ ಈ ಅರಸರು ನೆರವಾಗುವುದಕ್ಕೆ ಒಡಂಬಟ್ಟು, ತಂತಮ್ಮ ದಂಡುಗಳೊಡನೆ ಹೊರಡಲಿಕ್ಕೆ ಸಿದ್ಧರಾದರು. ನಾಲ್ಕೂ ದಂಡುಗಳು ಇಂತಹ ಸ್ಥಳದಲ್ಲಿ ಒಟ್ಟುಗೂಡಿ, ಧ್ರುವನ ಮೇಲೆ ಸಾಗಿಹೋಗಬೇಕೆಂದು ಗೊತ್ತಾಯಿತು. ಅರ್ಜುನನು ಉತ್ತರ ಕುಮಾರನನ್ನು ರಥದಲ್ಲಿ ಕೂಡ್ರಿಸಿಕೊಂಡು ಯುದ್ಧಕ್ಕೆ ಹೊರಟಂತೆ, ವೆಂಗಿಯ ಚಾಳುಕ್ಯರು ಗೋವಿಂದನನ್ನು ರಥ

ದಲ್ಲಿ ಕೂಡ್ರಿಸಿಕೊಂಡು ಅವನ ತಮ್ಮನಾದ ಧ್ರುವನೊಡನೆ ಕಾದಲಿಕ್ಕೆ ಹೊರಟರು.

ಅತ್ತ ಎದೆಗಾರನೂ, ಶೂರನೂ, ದೂರದರ್ಶಿಯೂ, ಜಾಣನೂ, ಸಾಹಸಿಯೂ ಆದ ಧ್ರುವನು ಚಾರರಿಂದ ಮೇಲೆ ಹೇಳಿದ ನಾಲ್ಕೂ ನಾಡುಗಳ ದಂಡಿನ ಸುಳಿದಾಟವನ್ನು ಕೇಳಿ, ಅವು ಒಟ್ಟುಗೂಡುವುದ ರೊಳಗೇ ಅವುಗಳನ್ನು ಬೇರೆ ಬೇರೆಯಾಗಿ ಮುರಿಬಡಿಯಬೇಕೆಂದು ನಿಶ್ಚಯಿಸಿ, ಮೂರು ಮಂದಿ ನಂಬಿಗಸ್ತರಾದ ದಳವಾಯಿಗಳನ್ನು ಕಂಚಿಯ ಪಲ್ಲವರನ್ನೂ ತಳೆಕಾಡಿನ ಗಂಗರನ್ನೂ ಉಜ್ಜಯಿನಿಯ ಮಾಳವೆ ಯರನ್ನೂ ತಡೆಯಲಿಕ್ಕೆ ಕಳುಹಿ, ತಾನು ಸುರಿತ ದಂಡಾಳುಗಳೊಡನೆ ವೆಂಗಿಯ ಚಾಳುಕ್ಯರನ್ನು ಅಡ್ಡವಿಸಲಿಕ್ಕೆ ಹೊರಟನು. ಈ ನಾಲ್ಕು ದಂಡಿನ ತುಕ್ಕಡಿಗಳು ಎಲ್ಲೆಲ್ಲಿ ಹಗೆಗಳನ್ನು ಕಂಡರೆಂಬುದಾಗಲಿ, ಯಾವ ಯಾವ ಸ್ಥಳಗಳಲ್ಲಿ ಕಾಳೆಗಗಳು ಆದವೆಂಬುದಾಗಲಿ ಅವುಗಳ ಪರಿಣಾಮವು ಏನಾಯಿತೆಂಬುದಾಗಲಿ ತಿಳಿದುಕೊಳ್ಳಲಿಕ್ಕೆ ಶಾಬ್ದಪ್ರಮಾಣಗಳು ನಮಗೆ ಇನ್ನೂ ದೊರೆತಿಲ್ಲ. ಆದ್ದರಿಂದ ಈ ಎಲ್ಲ ವಿವರಗಳನ್ನು ಅನುಮಾನದಿಂದಲೇ ಕಂಡುಹಿಡಿಯಬೇಕಾಗಿದೆ.

ಧ್ರುವನು ಚಾಳುಕ್ಯರ ದಂಡನ್ನು ಕಂಡಕೂಡಲೆ ವೀರಾವೇಶದಿಂದ ಅದರ ಮೇಲೆ ಬಿದ್ದು, ಅದನ್ನು ಸದೆಬಡಿದು ಓಡಿಸಿ ಬೆನ್ನಟ್ಟಿದನು. ಮುಂದೆ ಒಂದೆರಡು ಕಾಳೆಗಗಳಲ್ಲಿ ಚಾಳುಕ್ಯರನ್ನು ಸೋಲಿಸಿ, ಅವರು ತನ್ನ ರಾಜ್ಯಬಿಟ್ಟು ತಿರುಗಿಹೋದ ಬಳಿಕ ಅವರನ್ನು ಬೆನ್ನಟ್ಟುವುದರಿಂದ ಏನೂ ಪ್ರಯೋಜನವಿಲ್ಲೆಂದೆಣಿಸಿ, ಜಯಭೇರಿ ಹೊಡಿಸುತ್ತ ಹಿಂದಿರು ಗಿದನು. ಅಷ್ಟರೊಳಗೆ ಗಂಗರ ಒಡೆಯನಾದ ಶಿವಮಾರ ಸೈಗೊಟ್ಟನು ಅವನನ್ನು ಎದುರಿಸಲಿಕ್ಕೆ ತಾನು ಕಳುಹಿದ ದಳವಾಯಿಯನ್ನು ಸೋಲಿಸಿ ರಾಜಧಾನಿಯ ಮೇಲೆ ಏರಿ ಬರುತ್ತಾನೆಂದು ಸುದ್ದಿ ಬಂತು. ಕೂಡಲೆ ದಕ್ಷನಾದ ಧ್ರುವನು ತನ್ನ ದಂಡನ್ನು ಅತ್ತಕಡೆಗೆ ತಿರುವಿದನು. ಗಂಗರ ದಂಡು ಕಣ್ಣಿಗೆ ಬಿದ್ದಕೂಡಲೆ ಯುದ್ಧಕಲಾಕೋವಿದನಾದ ಧ್ರುವನು ಒಂದು ಮರಡಿಯ ಮೇಲೆ ಪಾಳೆಯವನ್ನು ಬಿಟ್ಟು, ಗೆಲವಿನಿಂದ ಉಬ್ಬಿದ ಗಂಗರನ್ನು ತನ್ನ ಮರಡಿಯ ಕೆಳಗಿನ ತಗ್ಗಿನಲ್ಲಿ ಯುಕ್ತಿಯಿಂದ ಬರಮಾಡಿ

ಕೊಂಡು ಕೂಡಲೆ ಅವರನ್ನು ಸುತ್ತುಗಟ್ಟಿ ಹುರುಪಿನಿಂದ ಕಾದು, ಶಿವಮಾರನನ್ನು ಸೆರೆಹಿಡಿದನು. ಈ ಜಾಣತನದ ಗೆಲವಿನಿಂದ ಅವನ ಕೀರ್ತಿಯು ಎಲ್ಲ ಕಡೆಯಲ್ಲಿಯೂ ಹಬ್ಬಿದ್ದಲ್ಲದೆ, ಅವನ ಹೆದರಿಕೆಯು ಎಲ್ಲ ಹಗೆಗಳ ಹೃದಯದಲ್ಲಿ ಮನೆಮಾಡಿಕೊಂಡು ನಿಂತಿತು (೭೮೬ ?).

ಶಿವಮಾರ ಸೈಗೊಟ್ಟನು ಹೆಬ್ಬಯಕೆಯವನಾಗಿರುತ್ತಾನೆಂಬ ಸಂಶಯದಿಂದಲೋ ಅವನಿಂದ ತನ್ನ ಒಡೆತನಕ್ಕೆ ಅಡ್ಡಿಯು ಬರಬಹುದೆಂಬ ಹೆದರಿಕೆಯಿಂದಲೋ ಧ್ರುವನು ಬಹುದಿವಸ ಬಾಳಿದ ಗಂಗರ ಅರಸುಮನೆತನವನ್ನು ಕಿತ್ತಿಹಾಕಬೇಕೆಂದು ನಿಶ್ಚಯಿಸಿದನು. ಆದ್ದರಿಂದ ಅವನು ತನ್ನ ಕಯ್ಯಲ್ಲಿ ಸಿಕ್ಕ ಶಿವಮಾರನನ್ನು ಬಿಕ್ಕಟ್ಟಿನ ಕಾವಲಲ್ಲಿರಿಸುವುದಕ್ಕೋಸ್ಕರ ರಾಜಧಾನಿಗೆ ಕಳುಹಿ, ತಾನು ಗಂಗರ ರಾಜಧಾನಿಯಾದ ತಲೆಕಾಡಿಗೆ ದಂಡೆತ್ತಿ ಹೋದನು. ಅರಸನಿಲ್ಲದ ನಾಡಿನಲ್ಲಿ ದಾಳಿಗಾರರನ್ನು ಅಡ್ಡಯಿಸುವರಾರು? ಧ್ರುವನ ದಂಡಯಾತ್ರೆಯು ಅನಾಯಾಸವಾಗಿ ಜಯಯಾತ್ರೆಯಾಯಿತು. ಅವನು ತಲೆಕಾಡಿಗೆ ಬಂದ ಕೂಡಲೆ ನಗರರಕ್ಷಕನು ಕೋಟೆಯ ಹೆಬ್ಬಾಗಿಲಿನ ಕಯ್ಯನ್ನು ಒಪ್ಪಿಸಿ ಶರಣು ಬಂದನು.

ಗಂಗರ ವಿಸ್ತಾರವಾದ ರಾಜ್ಯವು ಅನಾಯಾಸವಾಗಿ ತನ್ನ ಕಯ್ಗೆ ಸಿಕ್ಕುದನ್ನು ನೋಡಿ ಧ್ರುವನಿಗೆ ಬಹಳ ಸಂತೋಷವಾಯಿತು. ಅವನ ರಾಜ್ಯಲೋಭವು ಹೆಚ್ಚಿದ್ದರಿಂದ ಅವನ ರಾಜನೀತಿಯು ಅಡಗಿತು. ಆದ್ದರಿಂದ ತನ್ನ ಕಿರಿಮಗನಾದ ಗೋವಿಂದನ ಮೇಲಿನ ಕಕ್ಕುಲತೆಯಿಂದಲೋ ಅವನೇ ಯುವರಾಜನಾಗಲಿಕ್ಕೆ ತಕ್ಕವನೆಂಬ ತಿಳಿವಳಿಕೆಯಿಂದಲೋ ಮತ್ತಾವದಾದರೊಂದು ರಾಜಕಾರಣದಿಂದಲೋ ಧ್ರುವನು ತನ್ನ ಹಿರಿಮಗನಾದ **ಕಂಬ** ಅಥವಾ **ಸ್ತಂಭ** ಎಂಬವನನ್ನು ತೆರವಾದ ಗಂಗವಾಡಿಯ ಪಟ್ಟದ ಮೇಲೆ ಕೂಡ್ರಿಸಿದನೆಂದು ರಾಯಿಸ ಸಾಹೇಬರು ಬರೆಯುತ್ತಾರೆ*. ಈ ರಣಾವಲೋಕ ಕಂಬಯ್ಯನು ೭೮೯ರಿಂದ ೮೧೦ರ ವರೆಗೆ ಗಂಗ ಮಂಡಲವನ್ನು ಸ್ವತಂತ್ರವಾಗಿ ಆಳಿದನೆಂದು ಮೈಸೂರ

* ಶಾಸನಗಳಿಂದ ತಿಳಿಯುವ ಮೈಸೂರು ಕೊಡಗು ಪ್ರಾಂತಗಳು, ಪು. ೮೦.

ಸಂಸ್ಥಾನದ ಹೆಗ್ಗಡದೇವನಕೋಟೆ*, ಸೊರಬ, ನೆಲಮಂಗಲ, ಗುಬ್ಬಿ ಈ ನಾಲ್ಕು ಊರುಗಳ ಶಾಸನಗಳಿಂದ ರಾಯಿಸ ಸಾಹೇಬರು ಊಹಿಸುತ್ತಾರೆ. ಆದರೆ ಈ ಕಂಬಯ್ಯನು ಧ್ರುವನ ಹಿರಿಮಗನಾಗಿದ್ದನೆಂಬುದಕ್ಕೆ ಅವರು ಯಾವ ಆಧಾರವನ್ನು ಕೊಡುವುದಿಲ್ಲ. ಡಾ॥ ಭಾಂಡಾರಕರರಾಗಲಿ ಡಾ॥ ಫ್ಲೀಟರಾಗಲಿ ಇವನು ಧ್ರುವನ ಮಗನಾಗಿದ್ದನೆಂದು ಒಪ್ಪಿಕೊಂಡಿಲ್ಲ. ಆದಕಾರಣ ಇದು ವಾದಗ್ರಸ್ತ ವಿಷಯವಾಗಿರುತ್ತದೆಂಬುದನ್ನು ಮರೆಯಕೂಡದು. ಕಂಬಯ್ಯನು ಧ್ರುವನ ಮಗನೆಂಬುದಕ್ಕೆ ಆಧಾರವು ದೊರೆಯದಿದ್ದರೆ, ಅವನು ಹೊಸತಾಗಿ ಧ್ರುವನು ನಿಯಮಿಸಿದ ಮಂಡಲೇಶ್ವರನಾಗಿದ್ದನೆಂದು ಹೇಳಬಹುದು.

ಗಂಗ ಮಂಡಲದ ಕಟ್ಟುಪಾಡಿನ ಕೆಲಸವು ಪೂರಾ ಮುಗಿದ ಬಳಿಕ ಧ್ರುವನು ಪಲ್ಲವರ ಪಾರುಪತ್ಯ ಮಾಡಲಿಕ್ಕೆ ಹೊರಟನು. ಚಾಳುಕ್ಯ ಗಂಗರು ಹಿಂತೆಗೆದುದರಿಂದ ಪಲ್ಲವರು ಹತಾಶರಾಗಿದ್ದರು. ಅದಲ್ಲದೆ ಕರ್ನಾಟಕ ದಂಡಿನ ಕಲಿತನದ ಮತ್ತು ಧ್ರುವನ ಯುದ್ಧಕೌಶಲ್ಯದ ಕೀರ್ತಿಯು ಅವರ ಕಿವಿಯಲ್ಲಿ ತುಂಬಿತ್ತು. ಆದ್ದರಿಂದ ಪಲ್ಲವರು ಕಡಿದಾಡಿ ಕಷ್ಟಬಡುವುದಕ್ಕಿಂತ ಶರಣುಹೋಗಿ ಸಂಧಿಯನ್ನು ಮಾಡಿಕೊಳ್ಳುವುದೇ ಲೇಸೆಂದೆಣಿಸಿದರು. ಧ್ರುವನು ಕಂಚಿಯ ಮಾರ್ಗವಾಗಿ ಅರ್ಧದಾರಿ ಹೋಗುವಷ್ಟರಲ್ಲಿ ಒಬ್ಬ ರಾಯಭಾರಿಯು ಕಪ್ಪಗಾಣಿಕೆಯನ್ನೂ ಧೈಲಿಯನ್ನೂ ತೆಗೆದುಕೊಂಡುಬಂದು ಒಡಂಬಡಿಕೆಯನ್ನು ಬೇಡಿಕೊಂಡನು. ಧ್ರುವನಿಗೂ ಒಪ್ಪಂದವೇ ಬೇಕಾಗಿತ್ತು. ಏಕೆಂದರೆ ಉತ್ತರದಲ್ಲಿ ಮಾಳವೆಯರ ಪುಂಡಾಟವು ಹೆಚ್ಚಾಗಿರುತ್ತದೆಂಬ ಸುದ್ದಿಯು ಆಗತಾನೇ ಬಂದಿತ್ತು. ಆದ್ದರಿಂದ ಧ್ರುವನು ಕಪ್ಪಗಾಣಿಕೆಯನ್ನೂ ೫೦ ಆನೆಗಳನ್ನೂ ಇಸಕೊಂಡು ಪಲ್ಲವರೊಡನೆ ಒಪ್ಪಂದಮಾಡಿಕೊಂಡು ಉಜ್ಜಯಿನಿಯ ದಾರಿಯನ್ನು ಹಿಡಿದನು.

---

* ಸ್ವಸ್ತಿಶ್ರೀ ಧಾರಾವರಿಷ ಶ್ರೀವಲ್ಲ....ಥುವೀ ರಾಜ್ಯಕೆಯ ಕಂಭರಸರ ತೊಂಬತ್ತರುಸಾಸಿ....ದಿಯರಸರ..ಕರ್ನಾಟಕ ಶಾಸನ ಸಂಗ್ರಹ, ಸಂ. ೪, ಭಾಗ ೨, ಪು. ೨೧೫,.ಶಾಸನ ೯೩ ನೆಯದು.

ಚಾಳುಕ್ಯರೊಡನೆ ಕಾದಲಿಕ್ಕೆ ಹೊರಡುವುದಕ್ಕಿಂತ ಮೊದಲು ಮಾಳವೆಯರನ್ನು ತಡೆಯಲಿಕ್ಕೆ ಧ್ರುವನು ಒಂದು ದಂಡನ್ನು ಕಳಿಸಿದ್ದ ನೆಂದು ಮೇಲೆ ಬರೆದಿರುತ್ತೇವಷ್ಟೇ. ಈ ಕಾಲಕ್ಕೆ **ವತ್ಸರಾಜ**ನೆಂಬ ಹೆಬ್ಬಯಕೆಯುಳ್ಳ ಪರಾಕ್ರಮಿಯಾದ ಅರಸನು ಉಜ್ಜಯಿನಿಯಲ್ಲಿ ಆಳು ತ್ತಿದ್ದನು. ಅವನು ಗೌಡನಾಡ(ಬಂಗಾಳ)ನ್ನು ಒಳನುಗ್ಗಿ, ಅಲ್ಲಿಯ ಅರಸನನ್ನು ಸೋಲಿಸಿ, ಅವನಿಂದ ಎರಡು ಶ್ವೇತಛತ್ರಗಳನ್ನು ಸೆಳೆದು ಕೊಂಡಿದ್ದನು. ಈ ಗೆಲವಿನಿಂದ ಉಬ್ಬಿದ ವತ್ಸರಾಜನು ಗೋವಿಂದ ಚಾಳುಕ್ಯರ ಆಮಂತ್ರಣವನ್ನು ಸ್ವೀಕರಿಸಿ, ಕರ್ನಾಟಕದ ಮೇಲೆ ದಂಡೆತ್ತಿ ಹೊರಡುವಷ್ಟರಲ್ಲಿ ಧ್ರುವನು ಕಳುಹಿದ ದಂಡು ಅವನನ್ನು ಎದುರಿಸಿತು. ಮಾಳವೆಯ ದಂಡು ದೊಡ್ಡದಾದ್ದರಿಂದ ಜಾಣನಾದ ಧ್ರುವನ ದಳ ವಾಯಿಯು ಕಾದಲಿಕ್ಕೆ ಅನುವಾಗದೆ, ವತ್ಸರಾಜನ ದಂಡಿಗೆ ಅನ್ನ ಸಾಮಗ್ರಿಯು ದೊರೆಯದಂತೆಯೂ, ಅದರ ಗತಿಯು ಕುಂಠಿಸುವಂತೆಯೂ ನಾನಾ ತರದ ಹಂಚಿಕೆಗಳನ್ನು ಮಾಡತೊಡಗಿದನು. ಮುಂದೆ ಒಂದು ಕಾಳಗದಲ್ಲಿ ಧ್ರುವನ ಪಡೆವಳನು ಸೋತನು. ಈ ಸುದ್ದಿಯು ಬಂದುದ ರಿಂದಲೇ ಧ್ರುವನು ಲಗುಬಗೆಯಿಂದ ಪಲ್ಲವರೊಡನೆ ಒಪ್ಪಂದ ಮಾಡಿ ಕೊಂಡು ಮಾಳವೆಯ ದಂಡನ್ನು ಮುರಿಬಡಿಯಲಿಕ್ಕೆ ಅವಸರದಿಂದ ಹೊರಟನು.

ಧ್ರುವನು ಕಾರ್ಯದಕ್ಷನೂ ಕರ್ತವ್ಯೈಕದೃಷ್ಟಿಯೂ ಆಗಿದ್ದನೆಂಬು ದಕ್ಕೆ ಅಡ್ಡಿಯಿಲ್ಲ. ಮೇಲೆ ಬರೆದ ಸೋಲಿನ ಸುದ್ದಿಯು ಬಂದ ಕೂಡಲೆ ಅವನು ವತ್ಸರಾಜನ ದುಷ್ಕೃತಸವನ್ನು ಹೀಯಾಳಿಸಿ, ತನ್ನ ದಂಡಿನವರನ್ನು ಹುರಿದುಂಬಿಸಿ, ದಣಿವು ಸಿದ್ದೆ ನೀರಡಿಕೆಗಳನ್ನು ಬದಿಗೊತ್ತಿ, ಬಡ ಸಿಪಾಯಿಯಂತೆ ಮಾರ್ಗಕ್ರಮಣಮಾಡಿ, ಅತ್ಯಲ್ಪಕಾಲದಲ್ಲೇ ತನ್ನ ದಳ ವಾಯಿಯನ್ನು ಕೂಡಿದ್ದರಿಂದ, ಸೋಜಿಗಗೊಂಡ ಮಾಳವೆಯರು ಅವನ ಪ್ರೌಢಪ್ರತಾಪವನ್ನೂ ಅದ್ಭುತ ಸಾಹಸವನ್ನೂ ಕೇಳಿ ಬೆಚ್ಚಿ ಬೆದರಿದರು. ತನ್ನ ದಣಿದ ದಂಡಿಗೆ ೨-೩ ದಿವಸಗಳ ವಿಶ್ರಾಂತಿಯನ್ನು ಕೊಟ್ಟು, ಮಾಳವೆಯರ ಹೆದರಿಕೆಯನ್ನು ಹೆಚ್ಚಿಸುವುದಕ್ಕೋಸ್ಕರ ಅವರ ಪಾಳೆ ಯದ ಮೇಲೆ ಕೂಡಲೇ ಬೀಳಬೇಕೆಂದು ತನ್ನ ದಂಡಿಗೆ ಕಟ್ಟಪ್ಪಣೆ

ಯನ್ನಿತ್ತನು. ರಾಷ್ಟ್ರಕೂಟರ ದೊಡ್ಡ ದಂಡನ್ನೂ ಅವರ ಅರಸನ ಅತ್ಯ ದ್ಭುತ ಯುದ್ಧಕೌಶಲ್ಯ ಸಾಹಸಗಳನ್ನೂ ಪ್ರತ್ಯಕ್ಷವಾಗಿ ನೋಡಿ, ಅಂಜಿ, ಮುಂದೆ ಏನು ಮಾಡಬೇಕೆಂದು ಉಮ್ಮಳಿಸುತ್ತಿದ್ದ ಮಾಳವೆಯರು ಶತ್ರುಗಳು ಅಕಸ್ಮಾತ್ತಾಗಿ ತಮ್ಮ ಮೇಲೆ ರಭಸದಿಂದ ಬಿದ್ದುದನ್ನು ಕಂಡು ಹವ್ಹಾರಿ ಕಂಗೆಟ್ಟು ಕಾಲಿಗೆ ಬುದ್ಧಿಹೇಳಿದರು. ವತ್ಸರಾಜನಿಗಂತೂ* ತನ್ನ ಪೋಷಾಕು ಹಾಕಿಕೊಳ್ಳಲಿಕ್ಕೆ ಹೊತ್ತು ದೊರೆಯಲಿಲ್ಲ. ಅವನು ಒಂದು ಬತ್ತಲಗುದುರೆಯನ್ನೇರಿ ಪ್ರಾಣವುಳಿಸಿಕೊಳ್ಳಲಿಕ್ಕೆ ಎತ್ತ ಹೋದನೋ ಗೊತ್ತಾಗಲಿಲ್ಲ. ವತ್ಸರಾಜನ ಭಾಂಡಾರವೂ ಅವನ ಎರಡು ಶ್ವೇತಛತ್ರಗಳೂ ಅವನ ಉಡಿಗೆತೊಡಿಗೆಯೊಡವೆಗಳೂ ನೂರಾರು ಆನೆಯೊಂಟೆಕುದುರೆಗಳೂ ಸಾವಿರಾರು ದನಗಳೂ ಹೇರಳವಾದ ಅನ್ನ ಸಾಮುಗ್ರಿಯೂ ಧ್ರುವನ ಕಯ್ಸೇರಿದವು. ಈ ಗೆಲವಿನಿಂದ ಅವನ ಕೀರ್ತಿಯು ಮಧ್ಯ ದೇಶದಲ್ಲೆಲ್ಲ ಹಬ್ಬಿತು. ಬಳಿಕ ಧ್ರುವನು ಕೋಸಲದ ಅರಸನನ್ನು ಸೋಲಿಸಿ ಅವನ ಶ್ವೇತಛತ್ರವನ್ನು ಸೆಳೆದುಕೊಂಡನು.

ಕಾವಿನಲ್ಲಿ ಕೊಟ್ಟ ಕಡತವು ಕಾಮಧೇನುವಿಗೆ ಸರಿ ಎಂಬ ಗಾದೆ ಯನ್ನು ಓದುವವರು ಕೇಳಿರಬಹುದು. ಈ ನಾಣ್ಣುಡಿಯಲ್ಲಿ ಧ್ರುವನ ನಂಬಿಕೆಯು ಪೂರ್ಣವಾಗಿದ್ದುದರಿಂದ ಅವನು ಅದರಂತೆ ನಡೆಯಲಿಕ್ಕೆ ಎಳ್ಳಷ್ಟಾದರೂ ಹಿಂದೆ ಮುಂದೆ ನೋಡುತ್ತಿದ್ದಿಲ್ಲ. ಆದ್ದರಿಂದ ದಿಕ್ಕೆಟ್ಟು ಓಡುತ್ತಿದ್ದ ವತ್ಸರಾಜನ ದಂಡನ್ನು ಒತ್ತರದಿಂದ ಬೆನ್ನಟ್ಟಿ, ಅದನ್ನು ಧ್ವಸ್ತಮಾಡಿ, ಅವನ ರಾಜಧಾನಿಯಾದ ಉಜ್ಜಯಿನಿಯನ್ನು ಹಿಡಿದು ಕೊಳ್ಳಬೇಕೆಂದು ನಿಶ್ಚಯಿಸಿದನು. 'ಧೈರ್ಯಂ ಸರ್ವತ್ರ ಸಾಧನಂ' ಎಂಬ ಸಕ್ಕದ ಗಾದೆಯಂತೆ ಅವನ ಉದ್ದೇಶವು ಸಫಲವಾಯಿತು. ಅರಸು ದಂಡುಗಳಿಲ್ಲದ ರಾಜಧಾನಿಯನ್ನು ಕಾಪಾಡುವರಾರು? ಅವನು ಅಲ್ಲಿಗೆ ಬಂದ ಕೂಡಲೆ ರಾಜಧಾನಿಯ ಸಂರಕ್ಷಕನು ಶರಣುಬಂದು ಆ ಪಟ್ಟಣ ವನ್ನು ಅವನಿಗೆ ಒಪ್ಪಿಸಿಬಿಟ್ಟನು. ಬಳಲಿ ಬಂದ ಧ್ರುವನು ವತ್ಸರಾಜನ

* ಇವನ ರಾಜಧಾನಿಯು ಅಲ್ಲಾಬಾದಿನ ಹತ್ತಿರಿದ್ದ ಕೌಶಾಂಬಿಯಾಗಿತ್ತೆಂದು ಡಾ|| ಭಾಂಡಾರಕರರು ಬರೆಯುತ್ತಾರೆ. ಮುಂ. ಇ. ಗ್ಯಾಜಿಟಿಯರ, ಸಂ. ೧, ಭಾ. ೨, ಪು. ೧೯೭.

ಅರಮನೆಯಲ್ಲಿ ಕೆಲದಿವಸ ವಿಶ್ರಾಂತಿ ತೆಗೆದುಕೊಂಡು, ಮಾಳವೆ ಪ್ರಾಂತವನ್ನೆಲ್ಲ ತನ್ನ ಸ್ವಾಧೀನಮಾಡಿಕೊಂಡು, ಪಡವಲಲ್ಲಿದ್ದ ಗುಜರಾಥದ ಮೇಲೆ ದಂಡೆತ್ತಿ ಹೋದನು. ಅವನ ದಂಡಿನ ವೇಗಕ್ಕೆ ಅಚ್ಚರಿಗೊಂಡ ಗುಜ್ಜರು ಮುಂದುಗಾಣದೆ ಬಿಡುಕತೊಡಗಿದರು. ೨–೩ ಕಾಳಗಗಳಲ್ಲಿ ಗುಜರಾಥದ ದಂಡು ಸೋತು ವಿಧ್ವಸ್ತವಾದ್ದರಿಂದ ಇಡಿ ಗುಜರಾಥ ಪ್ರಾಂತವು ಧ್ರುವನ ಕಯ್ಸೇರಿತು. ಆದಕಾರಣ ಅವನು ತನ್ನ ಮಗನಾದ ಇಂದ್ರರಾಜನಿಗೆ ಗುಜರಾಥದ ಪಟ್ಟಗಟ್ಟಿ, ಅವನನ್ನು ಗುಜರಾಥ-ಮಾಳವೆಗಳ ಒಡೆಯನನ್ನು ಮಾಡಿ ಜಯಭೇರಿಯನ್ನು ಹೊಡಿಸುತ್ತ ತಿರುಗಿ ಬಂದನು (೭೯೪?). ಈ ದಿಗ್ವಿಜಯದಲ್ಲಿ ಅವನ ಕಿರಿಮಗನಾದ ಗೋವಿಂದನು ಬಹಳವಾಗಿ ನೆರವಾದ್ದರಿಂದ ಅವನಿಗೆ ಯುವರಾಜಪಟ್ಟ ಸೂಚಕವಾದ ಒಂದು ಕಂಠಿಕೆಯನ್ನು ಕೊಟ್ಟನು.

ಮುಂದೆ ಧ್ರುವನು ಬಹಳ ದಿವಸ ಬಾಳಲಿಲ್ಲ. ದುಡಕಿಯ ಪ್ರಯಾಣಗಳಿಂದಲೂ ಕಾಳಗಗಳ ಕಸಾಲೆಯಿಂದಲೂ ಅವನ ಪ್ರಕೃತಿಯು ಕೆಟ್ಟುದರಿಂದ ಅವನ ಮೆಯ್ಯಲ್ಲಿ ಬೇನೆ ಸೇರಿತು. ಅರಮನೆಯ ರಾಜವೈದ್ಯರು ಎಷ್ಟು ಶ್ರಮಪಟ್ಟರೂ ವಾಸಿಯಾಗಲಿಲ್ಲ. ಮುಂದೆ ತುಸುಕಾಲದಲ್ಲೇ ಅವನು ಕೈಲಾಸವಾಸಿಯಾದನು (೭೯೪?)*.

ಧ್ರುವನ ಅಚ್ಚದ ಹೆಸರು **ಧೋರನೆಂದಿತ್ತು**. ಪಟ್ಟವೇರಿದ ಬಳಿಕ ಅವನು **ನಿರುಪಮ, ಧಾರಾವರ್ಷ, ಕಲಿವಲ್ಲಭ, ಶ್ರೀವಲ್ಲಭ, ಇದ್ಧತೇಜ**—ಎಂಬ ೫ ಬಿರುದುಗಳನ್ನು ಧರಿಸಿದನು. ಅವನು ಎದೆಗಾರನೂ ಜಾಣನೂ ದುಡುಕನೂ ಅದಟನೂ ಆದ್ದರಿಂದ ಅವನ ಆಳಿಕೆಯಲ್ಲಿ ರಾಷ್ಟ್ರಕೂಟರ ರಾಜ್ಯವು ಬಹಳವಾಗಿ ಬೆಳೆಯಿತು. ಈವರೆಗೆ ಗಂಗಮಂಡಲವನ್ನು ಯಾರೂ ಗೆದ್ದಿದ್ದಿಲ್ಲ. ರಾಯಿಸ ಸಾಹೇಬರ ಬರಹದಂತೆ ಧ್ರುವನು ಅದನ್ನು ಗೆದ್ದು ಅದರ ಬಲ್ಲಿದ ಅರಸನಾದ ಶಿವಮಾರನನ್ನು

* ಶಕೆ ೭೧೫(೭೯೩)ರ ದೇವಗಿರಿಯ (ದೌಲತ್ತಾಬಾದು) ಒಂದು ತಾಮ್ರಶಾಸನದಲ್ಲಿ ನಿರುಪಮ ಅಥವಾ ಧ್ರುವನು ಪಾರಿಜಾತನೆಂಬೊಬ್ಬ ಅರಸನನ್ನು ಸೋಲಿಸಿದನೆಂತಲೂ ಗೋವರ್ಧನನೆಂಬ ಮತ್ತೊಬ್ಬನನ್ನು ಸಲುಹಿದನು ಅಥವಾ ಸಂಹರಿಸಿದನೆಂತಲೂ ಬರೆದಿದೆ. ಆದರೆ ಇವರು ಯಾರು? ಎಲ್ಲಿಯವರೆಂಬುದು ಇನ್ನೂ ಗೊತ್ತಾಗಿಲ್ಲ.

ಸೆರೆಯಲ್ಲಿಟ್ಟು ತನ್ನ ಹಿರಿಮಗನಾದ ಕಂಬ ಅಥವಾ ಸ್ತಂಭ ಎಂಬವನಿಗೆ ಆ ವಿಸ್ತಾರವಾದ ರಾಜ್ಯವನ್ನು ಕೊಟ್ಟನು. ರಾಜ್ಯ ಲೋಭದಿಂದ ಕರ್ನಾಟಕವನ್ನೊಳನುಗ್ಗಿದ ಮಹತ್ವಾಕಾಂಕ್ಷಿಯಾದ ವತ್ಸರಾಜನನ್ನು ಸೋಲಿಸಿ ಬೆನ್ನಟ್ಟಿ ಮಾಳವೆ ಗುಜರಾಥ ಪ್ರಾಂತಗಳನ್ನು ಗೆದ್ದು, ತನ್ನ ಎರಡನೆಯ ಮಗನಾದ ಇಂದ್ರರಾಜನಿಗೆ ಆ ಎರಡು ಪ್ರಾಂತಗಳನ್ನು ಕೊಟ್ಟನು. ಆದ್ದರಿಂದ ಅವನ ರಾಜ್ಯವು ನರ್ಮದಾ ನದಿಯಿಂದ ಕಾವೇರಿಯ ವರೆಗೆ ಹಬ್ಬಿತ್ತು.

ರಾಯಿಸ ಸಾಹೇಬರ ಅನುಮಾನವು ಸರಿಯಾದ್ದೆಂದು ಎಣಿಸಿದರೆ ಧ್ರುವನಿಗೆ ವೀರರಾದ ೩ ಮಂದಿ ಗಂಡುಮಕ್ಕಳಿದ್ದರು. ಹಿರಿಯವನು ಕಂಬನು ಅಥವಾ ಸ್ತಂಭನು; ೨ನೆಯವನು ಇಂದ್ರರಾಜನು; ೩ನೆಯವನು ಗೋವಿಂದನು. ಧ್ರುವನು ಸತ್ತಬಳಿಕ ಯುವರಾಜನಾದ ಗೋವಿಂದನು ಪಟ್ಟವೇರಿದ್ದರಿಂದ ಹಿರಿಯಣ್ಣಂದಿರಾದ ಕಂಬೇಂದ್ರ ರಾಜರು ಪಟ್ಟಕ್ಕಿದ್ದ ತಮ್ಮ ಹಕ್ಕುಬಾಧ್ಯತೆಯನ್ನು ಕಾಪಾಡಿಕೊಳ್ಳುವುದಕ್ಕೋಸ್ಕರ ಗೋವಿಂದನೊಡನೆ ಯುದ್ಧ ಹೂಡಿದರು. ಈ ಒಳ ಜಗಳವು ಗೋವಿಂದನ ರಾಜ್ಯಭಾರಕ್ಕೆ ಸಂಬಂಧಿಸಿದ್ದಾದ್ದರಿಂದ ಗೋವಿಂದನ ಆಳಿಕೆಯನ್ನು ವರ್ಣಿಸುವಾಗ ಅದರ ವಿವರವನ್ನು ಕೊಡುವೆವು.

---

# ೩ನೆಯ ಅಧ್ಯಾಯ

## ರಾಷ್ಟ್ರಕೂಟರ ಬೆಳವಣಿಗೆ

### ೫. ಮೂರನೆಯ ಗೋವಿಂದ

(೭೯೪?–೮೧೪)

ಧ್ರುವನ ತರುವಾಯ ಅವನ ೩ನೆಯ ಮಗನೂ ಯುವರಾಜನೂ ಆದ ಗೋವಿಂದನು ೩ನೆಯ ಗೋವಿಂದನೆಂಬ ಹೆಸರಿನಿಂದ ಪಟ್ಟವೇರಿದನು (೭೯೪?). ಇವನು ಕಿರಿಮಗನಾದ್ದರಿಂದ ಇವನ ಅಣ್ಣಂದಿರಾದ ತಲಕಾಡಿನ ರಣಾವಲೋಕ ಕಂಬಯ್ಯನೂ ಗುಜರಾಥದ ಇಂದ್ರರಾಜನೂ ತಮ್ಮ ಹಕ್ಕುಬಾಧ್ಯತೆಗೋಸ್ಕರ ಗೋವಿಂದನೊಡನೆ ಕಾದಲಿಕ್ಕೆ ಅನುವಾದರು. ಇವರಿಬ್ಬರು ಒಟ್ಟುಗೂಡಿ ಒಮ್ಮನಸ್ಸಿನಿಂದ ಒಮ್ಮೆಲೆ ದಂಡೆತ್ತಿ ಬಂದಿದ್ದರೆ, ತನ್ನ ಪಟ್ಟವನ್ನು ಉಳಿಸಿಕೊಳ್ಳುವುದು ಗೋವಿಂದನಿಗೆ ದುಸ್ಸಾಧ್ಯವಾಗಬಹುದಾಗಿತ್ತು. ಆದರೆ ಅವರಲ್ಲಿ ಅಷ್ಟು ಐಕ್ಯವೂ ಮುನ್ನೋಟವೂ ಸ್ವಾರ್ಥತ್ಯಾಗವೂ ಇದ್ದಿಲ್ಲ. ಅವರು ಸೊಕ್ಕಿನಿಂದ ಸ್ವತಂತ್ರವಾಗಿ ಯುದ್ಧ ಹೂಡಿದ್ದರಿಂದ ಅವರನ್ನು ಜಿಡಿ ಕಟ್ಟಿಗೆಯಂತೆ ಮುರಿದು ಚಲ್ಲಲಿಕ್ಕೆ ಗೋವಿಂದನಿಗೆ ತುಂಬಾ ಅನುಕೂಲವಾಯಿತು.

ಗೂಳಿ ಬಿದ್ದರೆ ಆಳಿಗೊಂದು ಕಲ್ಲು ಎಂಬ ಗಾದೆಯ ಮಾತು ಎಲ್ಲ ಓದುವವರಿಗೂ ಗೊತ್ತಿರಬಹುದು. ಮಹಾಪರಾಕ್ರಮಶಾಲಿಯಾದ ಧ್ರುವನು ಬಿದ್ದುಹೋದ ಬಳಿಕ ಅವನ ಮಕ್ಕಳೊಳಗೆ ಜಗಳ ಹುಟ್ಟಿದ್ದರಿಂದ ರಾಷ್ಟ್ರಕೂಟ (ನಾಡುಗವುಡ) ಮನೆತನದ ಹಗೆಗಳೂ ಹೆಬ್ಬಯಕೆಯುಳ್ಳ ಹಲವು ಸಣ್ಣಪುಟ್ಟ ಅರಸರೂ ಹೊಸತಾಗಿ ರಾಷ್ಟ್ರಕೂಟ ಸಾರ್ವಭೌಮನಾದ ಗೋವಿಂದನ ಮೇಲೆ ತಮ್ಮದೊಂದು ಕಲ್ಲು ಎಸೆಯಲಿಕ್ಕೆ ಹುರಿದುಂಬಿ ಎದ್ದು ಕುಳಿತರು. ಒಟ್ಟು ೧೨ ಮಂದಿ ಅರಸರು ಗೋವಿಂದನ ವಿರುದ್ಧವಾಗಿ ಕಾದಿದರೆಂದು ಡಾ॥ ಭಾಂಡಾರಕರರೂ ಡಾ॥ ಫ್ಲೀಟರೂ ಬರೆಯುತ್ತಾರೆ. ಆದರೆ ಈ ೧೨ ಮಂದಿ ಯಾರಾಗಿದ್ದ

ರೆಂಬುದನ್ನು ತಿಳಿಸುವಂತಹ ಶಾಸನವು ಒಂದಾದರೂ ಇನ್ನೂ ದೊರೆತಿಲ್ಲ. ಆದ್ದರಿಂದ ಶಕ್ಯವಿದ್ದಷ್ಟು ಜನರನ್ನು ಅನುಮಾನದಿಂದಲೇ ಕಂಡುಹಿಡಿಯು ಬೇಕಾಗಿದೆ. ಈ ವಿರೋಧಿಗಳೊಳಗೆ ಕಂಬ ಅಥವಾ ಸ್ತಂಭನು ಪ್ರಮುಖ ನಾಗಿದ್ದನೆಂಬುದಕ್ಕೆ ಸಂದೇಹವಿಲ್ಲ. ಇವನಿಗೆ ರಾಷ್ಟ್ರಕೂಟ ಮನೆ ತನದ ಹಗೆಗಳಾದ ಕಂಚಿಯ ಪಲ್ಲವರೂ ವೆಂಗಿಯ ಚಾಳುಕ್ಯರೂ ಬಾದಾವಿ ಚಾಳುಕ್ಯ ವಂಶದ ಸಣ್ಣ ಪುಟ್ಟ ಅರಸರೂ ನೆರವಾಗಿರಬಹುದು. ಗುಜ ರಾಥದ ಇಂದ್ರರಾಜನಿಂದ ಮಾಳವೆ ಪ್ರಾಂತವನ್ನು ತಿರುಗಿ ತೆಗೆದುಕೊಂಡ ವತ್ಸರಾಜನೂ ಲಾಟ ಪ್ರಾಂತದ ಕರ್ಕರಾಜನ ವಂಶಜನಾದ ಅರಸನೂ ಉತ್ತರ ಕೊಂಕಣದ ಸಿಲಾಹಾರ ಮನೆತನದ ಅರಸನೂ ಮತ್ತೆ ಕೆಲವರೂ ಇಂದ್ರರಾಜನಿಗೆ ಸಾಹಾಯಕರಾಗಿರಬಹುದು.

ಮೊಟ್ಟಮೊದಲು ರಣಾವಲೋಕ ಕಂಬಯ್ಯನು ದಂಡೆತ್ತಿ ಬಂದು ಒಳಜಗಳವನ್ನು ಆರಂಭಿಸಿದನು*. ಆ ಕಾಲಕ್ಕೆ ಕಂಚಿ ವೆಂಗಿ ಗುಜರಾಥ ಗಳ ದಂಡಿನ ಸುಳಿದಾಟದ ಸುದ್ದಿಗಳು ಒಂದರ ಹಿಂದೊಂದು ಬರುತ್ತಿದ್ದು ದರಿಂದ ಗೋವಿಂದನು ಕಂಬಯ್ಯನನ್ನು ಎದುರಿಸಲಿಕ್ಕೆ ತಾನೇ ಹೊರಡದೆ ತನ್ನೊಬ್ಬ ಶೂರ ದಳವಾಯಿಯನ್ನು ಅವನ ವಿರುದ್ಧವಾಗಿ ಕಳುಹಿ ದನು. ಪರಾಕ್ರಮಶಾಲಿಯಾದ ಕಂಬಯ್ಯನು ಅವನನ್ನು ಸೋಲಿಸಿ ಓಡಿಸಿ ಬಿಟ್ಟುದರಿಂದ ಗೋವಿಂದನು ಗಾಬರಿಯಾದನು. ಆಗ ಅವನೊಬ್ಬ ಜಾಣನಾದ ಮಂತ್ರಿಯು ಅವನಿಗೆ ಸೂಚಿಸಿದ್ದೇನಂದರೆ:—ಕಂಬಯ್ಯನು ಮಹಾಶೂರನು. ಅವನು ಹಿರಿಯವನಾದ್ದರಿಂದ ಅವನೇ ಪಟ್ಟಕ್ಕೆ ಬಾಧ್ಯಸ್ಥನೆಂದು ಕೆಲ ತಿಳಿಗೇಡಿಗಳು ನಂಬುತ್ತಾರೆ. ಇದಲ್ಲದೆ, ತಾವು ಗಂಗರಸನಾದ ಸಿವಮಾರನನ್ನು ಸೆರೆಯಲ್ಲಿಟ್ಟುದರಿಂದ ಅವನ ಪಕ್ಷದವ ರೆಲ್ಲರು ಹೊಟ್ಟೆಯುರಿದು ಹುರಿದುಂಬಿ ತಮ್ಮ ವಿರುದ್ಧವಾಗಿ ಕಾದಲಿಕ್ಕೆ

---

* ಶ್ರವಣಬೆಳ್ಗೊಳದ ೨೪ನೆಯ ಶಾಸನದಲ್ಲಿ ರಣಾವಲೋಕ ಕಂಬಯ್ಯನು ಪರಮೇಶ್ವರ ಮಹಾರಾಜ ಶ್ರೀವಲ್ಲಭನ ಮಗನಾಗಿದ್ದನೆಂತಲೂ ಅವನಿಗೆ ಮಹಾ ಮಹಾ ಸಾಮಂತಾಧಿಪತಿಯೆಂಬ ಬಿರುದಿತ್ತೆಂತಲೂ ಅವನು 'ಪೃಥ್ವೀರಾಜ್ಯಂ ಗೆಯ್ಯೆ' ಎಂದು ಬರೆದುದರಿಂದಲೂ ಕಂಬಯ್ಯನು ಧ್ರುವನ ಮಗನಾಗಿರಬಹುದೆಂದು ಡಾ|| ಫ್ಲೀಟರು ಅನು ಮಾನ ಮಾಡುತ್ತಾರೆ. ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೩೯೭, ಅಡಿಟಿಪ್ಪಣಿ ೧.

ಜೊಂಕ ಕಟ್ಟಿದ್ದಾರೆ. ಆದ್ದರಿಂದ ತಾವು ಸಿವಮಾರನನ್ನು ಸೆರೆಯಿಂದ ಬಿಡುಗಡೆಮಾಡಿ, ಅವನನ್ನು ತಮ್ಮ ಆಶ್ರಿತನಾಗಲಿಕ್ಕೆ ಒಡಂಬಡಿಸಿ, ಅವನನ್ನು ಮುಂದೆಮಾಡಿ, ಕಾಡತೊಡಗಿದರೆ ಕಂಬಯ್ಯನ ಕಸವು ಕಡಮೆಯಾಗುವುದಲ್ಲದೆ ಅವನ ದಂಡಿನಲ್ಲಿಯೂ ಸರದಾರರೊಳಗೂ ಒಡಕು ಹುಟ್ಟಬಹುದು.

ಈ ಸಲಹೆಯು ಉಳಿದ ಮಂತ್ರಿ ದಂಡನಾಯಕರಿಗೂ ಗೋವಿಂದ ನಿಗೂ ಪಸಂದುಬಿದ್ದುದರಿಂದ ಸಿವಮಾರನು ಬಂಧಮುಕ್ತನಾದನು. ರಾಜತಂತ್ರವು ಅತಿಕುಟಿಲವಾದುದು. ಸೆರೆಮನೆಯಲ್ಲಿ ಕೊಳೆಯುತ್ತಿದ್ದ ಸಿವಮಾರನು ತನ್ನ ಮೊದಲಿನ ರಾಜಚಿಹ್ನಗಳಿಂದೊಡಗೂಡಿ ಸಾರ್ವಭೌಮನಾದ ೩ನೆಯ ಗೋವಿಂದನ ಮಗ್ಗಲಲ್ಲಿ ಬಂದು ಕುಳಿತನು!! ಆ ರಾಜಸಭೆಯಲ್ಲಿ ಒಡಂಬಡಿಕೆಯ ಮಾತುಗಳು ನಡೆದವು. ಎಷ್ಟು ಉಬ್ಬಿಸಿದರೂ ಎಷ್ಟು ಹೆದರಿಸಿದರೂ ಎಷ್ಟು ಆಶೆತೋರಿಸಿದರೂ ಎಷ್ಟು ಬಗೆಯಿಂದ ಹೇಳಿದರೂ ಆ ಸ್ವಾಭಿಮಾನಿಯಾದ ಸಿವಮಾರನು ತನ್ನ ಮನೆತನದ ಸ್ವತಂತ್ರವಾದ ಅರಸುತನದ ಹಕ್ಕನ್ನು ಬಿಟ್ಟು, ರಾಷ್ಟ್ರಕೂಟರ ಮಂಡಲೇಶ್ವರನಾಗಲಿಕ್ಕೆ ಒಡಂಬಡಲಿಲ್ಲ. ಮುಂದೆ ಎರಡು ಮೂರು ದರಬಾರಗಳಲ್ಲಿ ಈ ಮಾತಿನ ಚರ್ಚೆಯಾದರೂ ಆ ಸ್ವಾತಂತ್ರ್ಯಾಭಿಮಾನಿಯು ತನ್ನ ಅರಸುತನವನ್ನು ಬಿಡಲಿಕ್ಕೆ ಒಪ್ಪಲಿಲ್ಲ.

ಎರಡೂ ಕಯ್ಗೂಡಿದ ಹೊರತು ಚಪ್ಪಾಳೆಯಾಗುವುದಿಲ್ಲೆಂಬ ಅನುಭವದ ಗಾದೆಯು ಓದುವವರಿಗೆ ಗೊತ್ತಿದ್ದ ಮಾತೇ ಸರಿ. ವ್ಯಾಪಾರದಲ್ಲಿ ಮಾರುವವನೂ ಕೊಳ್ಳುವವನೂ ಸಂಸಾರದಲ್ಲಿ ಗಂಡನೂ ಹೆಂಡತಿಯೂ ವ್ಯಾಜ್ಯದಲ್ಲಿ ವಾದಿ ಪ್ರತಿವಾದಿಗಳೂ ರಾಜಕಾರ್ಯದಲ್ಲಿ ಇಬ್ಬರು ಅರಸರೂ ಅವರ ರಾಯಭಾರಿಗಳೂ ಕೊಡು ತೆಗೆದುಕೊಳ್ಳುವ ಉದಾರ ಬುದ್ಧಿಯನ್ನು ಸಾಕಷ್ಟು ತೋರಿಸದೆ, ಇಬ್ಬರೂ ಹಟಹಿಡಿದರೆ ಯಾವ ಕೆಲಸವು ಕಯ್ಗೂಡುವುದಿಲ್ಲ. ಇಂತಹ ಸಂದರ್ಭದಲ್ಲಿ ತೆಗೆದುಕೊಳ್ಳುವವನಿಗಿಂತ ಕೊಡುವವನು ವಾಡಿಕೆಯಾಗಿ ಹೆಚ್ಚು ದೋಷಕ್ಕೆ ಪಾತ್ರನಾಗುತ್ತಾನೆಂದು ಸಾಮಾನ್ಯವಾಗಿ ಹೇಳಬಹುದು. ಧೀರೋದಾರನಾದ ಸಿವಮಾರನು ರಾಜ್ಯಭ್ರಷ್ಟನಾಗಿ ಸೆರೆಮನೆಯಲ್ಲಿ ಕೊಳೆಯು

ತ್ತಿದ್ದರೂ ರಾಜ್ಯೈಶ್ವರ್ಯಕ್ಕೆ ಮೋಹಿಸಿ ತನ್ನ ಮನೆತನದ ಸ್ವಾತಂತ್ರ್ಯ ವನ್ನು ಬಿಟ್ಟುಕೊಡುವಷ್ಟು ಕೀಳನಾಗಿದ್ದಿಲ್ಲ. ಹಸಿವೆಯಿಂದ ಬಳಲುವ ಸಿಂಹವು ತನ್ನ ಹತ್ತಿರಿದ್ದ ನರಿಯನ್ನು ಮುಟ್ಟದೆ ಆನೆಯನ್ನು ಹುಡುಕಿ ಕೊಂಡು ತನ್ನ ಕ್ಷುಧಾತೃಪ್ತಿಯನ್ನು ಮಾಡಿಕೊಳ್ಳುವುದಿಲ್ಲವೇ? ಎಷ್ಟು ಸಂಕಟಕ್ಕೆ ಒಳಗಾಗಿದ್ದರೂ ಧೀರಪುರುಷರು ತಂತಮ್ಮ ಯೋಗ್ಯತೆಗೆ ಸರಿಯಾದ ಫಲವನ್ನೇ ಬಯಸುತ್ತಾರೆಂಬ ಮಾತು ಸುಳ್ಳಲ್ಲ*. ಧೀರನಾದ ಶಿವಮಾರನಿಗೆ ತನ್ನ ಮನೆತನದ ಸ್ವಾತಂತ್ರ್ಯವು ಪ್ರಾಣಕ್ಕಿಂತ ಹೆಚ್ಚಾ ಗಿರುವುದನ್ನು ಮನಗಂಡು, ಕಂಬಯ್ಯನನ್ನು ಮುರಿದ ಹೊರತು ಗತ್ಯಂತರ ಎಲ್ಲೆಂದೆಣಿಸಿ, ೩ ನೆಯ ಗೋವಿಂದನು ಗಂಗಮಂಡಲವನ್ನು ಕೃತಾರ್ಥ ವಾಗಿ ತಿರುಗಿ ಕೊಡಲಿಕ್ಕೆ ಒಡಂಬಟ್ಟು ಈ ಒಸಗೆವೋಲೆಗಳನ್ನು ದೆಸೆ ದೆಸೆಗೆ ಕಳುಹಿದನು (೭೯೫?).

ಶಿವಮಾರನು ಸೆರೆಯಿಂದ ಬಿಡುಗಡೆಹೊಂದಿ, ರಾಷ್ಟ್ರಕೂಟ ಸಾರ್ವಭೌಮನೊಡನೆ ತನ್ನ ರಾಜ್ಯವನ್ನು ತಿರುಗಿ ತೆಗೆದುಕೊಳ್ಳಲಿಕ್ಕೆ ಬರುತ್ತಾನೆಂಬ ಸುದ್ದಿಯು ಎಲ್ಲ ಕಡೆಯಲ್ಲಿಯೂ ಹಬ್ಬಿತು. ಅವನು ಪಂಡಿತನೂ ಪ್ರಜಾವತ್ಸಲನೂ ಉದಾರನೂ ಆದ್ದರಿಂದ ಅವನ ಹಿತೈಷಿಗಳು ಕಂಬಯ್ಯನ ದಂಡಿನಲ್ಲಿ ಒಳಸಂಚು ನಡಿಸಿದರು. ಆದಕಾರಣ ಎದೆಗಾರರಾದ ದಂಡಾಳುಗಳೂ, ಶೂರರಾದ ದಳವಾಯಿಗಳೂ, ಜಾಣ ರಾದ ಮಂತ್ರಿಗಳೂ ಏನಾದರು ನೆವನಮಾಡಿ ದಿನಾಲು ಕಂಬಯ್ಯನನ್ನು ಬಿಟ್ಟು ಶಿವಮಾರನನ್ನು ಕೂಡಲಾರಂಭಿಸಿದರು. ಅದನ್ನು ನೋಡಿ ಕಂಬಯ್ಯನು ಹೆದರಿ ಗೋವಿಂದನ ದಂಡನ್ನು ಕೆಣಕದೆ ಹಿಂದಕ್ಕೆ ಸರಿಯ ಲಾರಂಭಿಸಿದನು. ಹೇಗಾದರು ಮಾಡಿ ಶಿವಮಾರನನ್ನು ತನ್ನ ಕಡೆಗೆ ಒಡೆದುಕೊಳ್ಳಬೇಕೆಂಬ ಲವಲವಿಕೆಯು ಅವನಲ್ಲಿ ಹುಟ್ಟಿತು. ದೈವ ಗತಿಯು ಅತಿವಿಚಿತ್ರವಾದುದು. ತುಸು ದಿವಸಗಳ ಹಿಂದೆ ಜೀವವು ಬೇಸರಾದ ಶಿವಮಾರನನ್ನು ರಾಷ್ಟ್ರಕೂಟ ಸಾರ್ವಭೌಮನಾದ

---

* ಸಿಂಹೋ ಜಂಬುಕಮಂಕಮಾಗತಮಪಿ ತ್ಯಕ್ತ್ವಾ ನಿಹಂತಿ ದ್ವಿಪಂ।
ಧೀರಃ ಕೃಚ್ಛ್ರಗತೋ ಽಪಿ ವಾಂಛತಿ ಜನಃ ಸತ್ವಾನುರೂಪಂ ಫಲಮ್॥ ಸುಭಾಷಿತ

ಗೋವಿಂದನು ಗಂಗಮಂಡಲದ ಸಾರ್ವಭೌಮನಾದ ರಣಾವಲೋಕ ಕಂಬಯ್ಯ ಇವರಿಬ್ಬರು ಮನಃಪೂರ್ವಕವಾಗಿ ಓಲಗಿಸತೊಡಗಿದರು!!!

ಒಂದು ದಿನ ಕಂಬಯ್ಯನ ಒಬ್ಬ ಪ್ರಚ್ಛನ್ನ ರಾಯಭಾರಿಯು ಸಿವಮಾರನ ಬಳಿಗೆ ಬಂದು ಅವನ ಆಶ್ರಯವನ್ನು ಬೇಡಿಕೊಂಡನು. ಅವನು ತನ್ನ ಗೊತ್ತಿನ ಮಂತ್ರಿಯ ಮಗನಾದ್ದರಿಂದ ಸಿವಮಾರನು ಅವನನ್ನು ತನ್ನ ಬಳಿಯಲ್ಲಿಟ್ಟುಕೊಂಡು, ಆದರಾತಿಥ್ಯ ಮಾಡಿದನು. ಅವನು ಒಂದು ಸುಸಂಧಿಯನ್ನು ಸಾಧಿಸಿ ತಾನು ತಂದ ಕಂಬಯ್ಯನ ಪತ್ರವನ್ನು ಸಿವಮಾರನಿಗೆ ಕೊಟ್ಟನು. ಅದರಲ್ಲಿ ತಾನೂ ಸಿವಮಾರನೂ ಒಟ್ಟುಗೂಡಿದರೆ ಗೋವಿಂದನನ್ನು ಸುಲಭವಾಗಿ ಪಟ್ಟದಿಂದ ತಳ್ಳಬಹುದೆಂತಲೂ ಬಳಿಕ ಗಂಗಮಂಡಲ ರಾಷ್ಟ್ರಕೂಟ ರಾಜ್ಯಗಳನ್ನು ಸಮನಾಗಿ ಹಂಚಿಕೊಂಡು ಇಬ್ಬರೂ ಸುಖದಿಂದ ಆಳಿದರೆ ಇಬ್ಬರ ಶ್ರೇಯೋಭಿವೃದ್ಧಿಯು ನಿಶ್ಚಯವಾಗಿ ಆಗುವುದೆಂತಲೂ ಬರೆದಿತ್ತು.

ಕಂಬಯ್ಯನ ಕಾಗದವನ್ನು ನೋಡಿದ ಕೂಡಲೆ ಸಿವಮಾರನ ವಿಚಾರಸರಣಿಯು ವ್ಯತ್ಯಸ್ಥವಾಯಿತು. ಇನ್ನೂ ತಾನು ರಾಷ್ಟ್ರಕೂಟ ಸಾರ್ವಭೌಮನ ಸ್ವಾಧೀನದಲ್ಲಿರುತ್ತೇನೆಂಬ ಅರಿವು ತಪ್ಪಿಹೋಯಿತು. ತಾನು ಮೊದಲು ೨ನೆಯ ಗೋವಿಂದನ ಬೆನ್ನುಕಟ್ಟಿದಾಗ ಮಾಡಿದ ಆಲೋಚನೆಗಳೆಲ್ಲ ಹುತ್ತಿನಿಂದ ಇರುವೆಗಳೇಳುವಂತೆ ಅವನ ಮಿದುಳಿನಲ್ಲೆದ್ದು, ಅವನ ಕಣ್ಣುಮುಂದೆ ಕಟ್ಟಿದವು. ದುರದೃಷ್ಟದಿಂದ ಕಳೆದು ಹೋದ ಸಂಧಿಯು ಅನಾಯಾಸವಾಗಿ ಮರಳಿ ಬಂದಿತೆಂದು ಅವನಿಗೆ ಹೊಟ್ಟೆ ಹಿಡಿಯಲಾರದಷ್ಟು ಆನಂದವಾಯಿತು. ಅವನ ಹೆಬ್ಬಯಕೆಯು ಹೆಚ್ಚಿತು. ಸೆರೆಮನೆಯಲ್ಲಿ ಅರೆಜೀವಿಯಾದ ಅವನ ಮಹತ್ವಾಕಾಂಕ್ಷೆಯು ಈಗ ಚೇತರಿಸಿಕೊಂಡೆದ್ದು, ನೆತ್ತರದೊಡನೆ ಅವನ ಶರೀರದಲ್ಲೆಲ್ಲ ನರ್ತನ ಮಾಡತೊಡಗಿತು. ತಾನು ಚಾಳುಕ್ಯ ರಾಷ್ಟ್ರಕೂಟರಂತೆ ತುಸು ದಿವಸಗಳಲ್ಲಿ ಸಾರ್ವಭೌಮನಾಗುವೆನೆಂಬ ಬಯಲಾಶೆಯು ಅವನ ಬುದ್ಧಿಯನ್ನು ಭ್ರಂಶಮಾಡಿತು. ಕೆಲಹೊತ್ತು ಅವನ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಮುಂದೆ ತುಸು ಹೊತ್ತಿನ ಮೇಲೆ ಅವನು ಎಚ್ಚರಗೊಂಡು

ಕಂಬಯ್ಯನ ರಾಯಭಾರಿಗೆ ಹೋಗಲಿಕ್ಕೆ ಸನ್ನೆಮಾಡಿ, ತನ್ನ ಮನಸಿನಲ್ಲಿ ಮಾಡಿದ ಮನೋರಾಜ್ಯದೊಳಗೆ ಮತ್ತೆ ಮುಳುಗಿದನು.

ತನ್ನ ಭಾವೀ ಸಾಮ್ರಾಜ್ಯದ ಅತಿಮನೋಹರವಾದ ಚಿತ್ರವನ್ನು ರೇಖಿಸುತ್ತಿದ್ದಾಗ ಸಿವಮಾರನ ಸೇವಕರು ೩-೪ ಸಾರಿ ಅವನನ್ನು ಜಳಕಕ್ಕೆ ಎಬ್ಬಿಸಿದರು. ಅವನ ಆನಂದಾತಿರೇಕವು ಅವನ ಕಿವಿಗಳನ್ನು ಕಿವುಡಾಗಿ ಮಾಡಿದ್ದರಿಂದ ಅವರ ಬಿನ್ನಹಗಳು ಅವನ ಕರ್ಣರಂಧ್ರದಲ್ಲಿ ಎಷ್ಟು ಮಾತ್ರವೂ ಪ್ರವೇಶಿಸಲಿಲ್ಲ. ಮುಂದೆ ಬಹಳ ಹೊತ್ತಿನ ಮೇಲೆ ಅವನು ಎಚ್ಚತ್ತು ಎದ್ದು ಸ್ನಾನಭೋಜನಾದಿಗಳನ್ನು ಮುಗಿಸಿಕೊಂಡು, ತನ್ನ ಆಪ್ತಮಂತ್ರಿಗಳನ್ನು ಕರಿಸಿ, ಅವರೊಡನೆ ಕಂಬಯ್ಯನ ಕಾಗದದ ಬಗ್ಗೆ ಊಹಾಪೋಹ ಮಾಡತೊಡಗಿದನು.

ಕಂಡುದನ್ನು ಆಡಿದರೆ ಕೆಂಡದಂತಹ ಸಿಟ್ಟು ಎಂಬ ಕನ್ನಡ ನಾಣ್ನುಡಿಯೂ ಅಪ್ರಿಯವಾದ ಪಥ್ಯದ ಮಾತನ್ನು ಹೇಳುವವರೂ ಕೇಳುವವರೂ ಈ ಜಗತ್ತಿನಲ್ಲಿ ದುರ್ಲಭರಾಗಿರುತ್ತಾರೆಂಬ ಸಕ್ಕದ ಗಾದೆಯೂ* ಓದುವವರಿಗೆ ಗೊತ್ತಿರಬಹುದು. ಅಧಿಕಾರಿಗಳ ಅಥವಾ ಹಣವುಳ್ಳವರ ಮನಸ್ಸಿನ ಒಲವನ್ನು ನೋಡಿ ಅವರಂತೆ ಬಾರಿಸುವವರೇ ಇಹಲೋಕದಲ್ಲಿ ಹೆಚ್ಚಾಗಿರುತ್ತಾರೆಂದು ನಿಸ್ಸಂದೇಹವಾಗಿ ಹೇಳಬಹುದು. ನಿರ್ದಾಕ್ಷಿಣ್ಯದಿಂದ ನಿಜವಾದ ಹಿತವನ್ನು ಹೇಳಿ ಅವರ ಸಿಟ್ಟಿಗೆ ಗುರಿಯಾಗುವವರು ಈ ಪ್ರಪಂಚದಲ್ಲಿ ಅಪರೂಪವೇ ಸರಿ. ಪೂರ್ವಜನ್ಮದ ಪುಣ್ಯಪ್ರಭಾವದಿಂದ ಸಿವಮಾರನ ಮಂತ್ರಿಗಳು ಸ್ವಾರ್ಥಪರರಾಗಿರದೆ ಧರ್ಮೈಕದೃಷ್ಟಿಯುಳ್ಳ ಸ್ಪಷ್ಟವಾದಿಗಳಾಗಿದ್ದರು. ಆದ್ದರಿಂದ ಅವರು ಸಿವಮಾರನ ಮನೋರಾಜ್ಯವು ಕನ್ನಡಿಯೊಳಗಿನ ಗಂಟೆಂತಲೂ ಯುದ್ಧದ ಜಯಾಪಜಯಗಳು ಪರಮೇಶ್ವರಾಧೀನವಾದ್ದವೆಂತಲೂ ಮನಸ್ಸಿನಲ್ಲಿ ಮಂಡಿಗೆಮಾಡಿ ದುಡುಕುವುದು ಅತ್ಯಂತ ಭಯಾವಹವಾದ ಕಾರ್ಯ

---

* ಸುಲಭಾಃ ಪುರುಷಾ ರಾಜನ್ ಸತತಂ ಪ್ರಿಯವಾದಿನಃ।
ಅಪ್ರಿಯಸ್ಯ ಚ ಪಥ್ಯಸ್ಯ ಶ್ರೋತಾ ವಕ್ತಾ ಚ ದುರ್ಲಭಃ ॥
ಅಪ್ರಿಯಸ್ಯಾಪಿ ಪಥ್ಯಸ್ಯ ಪರಿಣಾಮಃ ಸುಖಾವಹಃ।
ವಕ್ತಾ ಶ್ರೋತಾ ಚ ಯತ್ರಾಸ್ತಿ ರಮಂತೇ ತತ್ರ ಸಂಪದಃ ॥ ಮಹಾಭಾರತ.

ವೆಂತಲೂ ಮುಚ್ಚುಮರೆಯಿಲ್ಲದೆ ಹೇಳಿದರು. ಸಿವಮಾರನು ಶೂರನೂ ಸಾಹಸಿಯೂ ಪಂಡಿತನೂ ಆಗಿದ್ದರೂ ಅವನಲ್ಲಿ ಹೆಬ್ಬಯಕೆಯೂ, ಹಟ ಮಾರಿತನವೂ, ರಾಜ್ಯಲೋಭವೂ ನೆಲೆಗೊಂಡಿದ್ದವು. ಮಂತ್ರಿಗಳು ಎಷ್ಟು ಪರಿಪರಿಯಿಂದ ತಿಳಿಹೇಳಿದರೂ ಕಂಬಯ್ಯನನ್ನು ಕೂಡುವ ಅವನ ನಿಶ್ಚಯವು ಬದಲಾಗಲಿಲ್ಲ. ಆದ್ದರಿಂದ ಅವನು ಇಂತಹದೊಂದು ದಿವಸ ಇಂತಹ ಊರಿನಲ್ಲಿ ಕಂಬಯ್ಯನನ್ನು ಕೂಡುವೆನೆಂದು ಉತ್ತರ ಬರೆಯಿಸಿ ಆ ಕಾಗದವನ್ನು ರಾಯಭಾರಿಯ ಕಯ್ಯಲ್ಲಿ ಕೊಟ್ಟು, ತಾನು ತನ್ನ ಜನರೊಡನೆ ಗೋವಿಂದನ ಪಾಳೆಯವನ್ನು ಬಿಟ್ಟುಹೋಗಲಿಕ್ಕೆ ಗುಪ್ತ ವಾಗಿ ಜೋಡಣೆಯನ್ನು ಮಾಡತೊಡಗಿದನು.

ಮೂರು ಕಿವಿಗೆ ಬಿದ್ದ ಮಾತು ಮೂರು ಲೋಕಕ್ಕೆ ಮುಟ್ಟುವು ದೆಂಬ ಗಾದೆಯು ಯಥಾರ್ಥವಾದುದೇ ಸರಿ. ಸಿವಮಾರನ ಎಚ್ಚರಗೇಡಿ ತನದಿಂದಲೋ ಅವನ ಮತ್ತು ಅವನ ಮಂತ್ರಿಗಳ ಅಭಿಪ್ರಾಯವು ಭಿನ್ನ ವಾದುದರಿಂದಲೋ ಸ್ವಾರ್ಥಪರನಾದ ಒಬ್ಬ ನೀಚನು ಸಿವಮಾರನ ಗುಪ್ತಾಲೋಚನೆಯನ್ನು ಹೊರಗೆಡವಿದುದರಿಂದಲೋ ಈ ಒಳಸಂಚಿನ ಸುದ್ದಿಯು ಗೋವಿಂದನ ಕಿವಿಗೆ ಹೋಯಿತು. ಅವನು ಸಿವಮಾರನ ಎಲ್ಲ ಸಾಹಾಯಕರು ಸಂಕೇತಸ್ಥಳಕ್ಕೆ ಹೋಗುವ ವರೆಗೆ ಸುಮ್ಮನಿದ್ದು, ಸಿವಮಾರನು ಹೊರಡುವಾಗ ಅವನನ್ನು ಹಿಡಿದು ಮತ್ತೆ ಸೆರೆ ಯಲ್ಲಿಟ್ಟನು !!!

ಈ ಸಮಯದಲ್ಲಿ ಕಂಬಯ್ಯನ ದಂಡಿನ ಕಟ್ಟುಪಾಡುಗಳೆಲ್ಲ ಕೆಟ್ಟು ಹೋಗಿದ್ದವು. ಸಾವಿರಾರು ದಂಡಾಳುಗಳೂ ಹತ್ತಿಪ್ಪತ್ತು ಮಂದಿ ದಳವಾಯಿಗಳೂ ಬಿಟ್ಟು ಹೋದ್ದರಿಂದ ಅವನ ದಂಡಿನಲ್ಲಿ ಸಿಸ್ತು ಉಳಿದಿ ದ್ದಿಲ್ಲ. ಅದೇ ಕಾವಿನಲ್ಲಿ ಗೋವಿಂದನು ಅವನ ದಂಡಿನ ಮೇಲೆ ಬಿದ್ದುದ ರಿಂದ ಅವನು ಸೋತು ಹಿಮ್ಮೆಟ್ಟಬೇಕಾಯಿತು. ಕಂಬಯ್ಯನ ಕಾಟವು ಕುಗ್ಗಿದ್ದರಿಂದಲೂ ಕಾಂಚಿವೆಂಗಿಯ ದಂಡುಗಳ ಪುಂಡಾಟವು ಹೆಚ್ಚಿರುತ್ತ ದೆಂಬ ಸುದ್ದಿಯು ಬಂದುದರಿಂದಲೂ ಅವರ ಸಮಾಚಾರವನ್ನು ತೆಗೆದು ಕೊಳ್ಳುವುದಕ್ಕೋಸ್ಕರ ಗೋವಿಂದನು ದಂಡಿನೊಡನೆ ಅಲ್ಲಿಂದ ಹೊರ ಟನು (೭೯೭?).

ಗೋವಿಂದನ ವಿರುದ್ಧವಾಗಿ ಒಟ್ಟುಗೂಡಿದ ಅರಸರೊಳಗೆ ಕಂಬಯ್ಯನೇ ಪ್ರಮುಖನಾಗಿದ್ದನು. ಅವನು ಗೋವಿಂದನಿಂದ ಸೋತು ಹಿಮ್ಮೆಟ್ಟಿ ಗೋವಿಂದನ ಸಾಮಂತನಾಗಿರಲಿಕ್ಕೆ ಒಡಂಬಟ್ಟ ನೆಂಬ ಸುದ್ದಿಯು ದೇಶದಲ್ಲೆಲ್ಲ ಹರಡಿದ ಕೂಡಲೆ ಪಲ್ಲವರು ಎದೆ ಗುಂದಿದರು. ಏಕಾಕಿಯಾಗಿ ಗೋವಿಂದನನ್ನು ಗೆಲ್ಲುವುದು ತಮ್ಮಿಂದ ಆಗದ ಕೆಲಸವೆಂಬ ತಿಳಿವಳಿಕೆಯು ಅವರಲ್ಲಿ ಹುಟ್ಟಿದ್ದರಿಂದ ಮುಂದೆ ಏನು ಮಾಡಬೇಕೆಂಬ ಆಲೋಚನೆಯನ್ನು ಮಾಡತೊಡಗಿದರು. ಅಷ್ಟರಲ್ಲಿ ಗೋವಿಂದನು ತಮ್ಮ ಮೇಲೆ ದಂಡೆತ್ತಿ ಬರುತ್ತಾನೆಂಬ ಸುದ್ದಿಯು ಬಂದುದರಿಂದ ಅವರು ಗಾಬರಿಯಾಗಿ ಮುಂದುಗಾಣದೆ ತಮ್ಮ ರಾಜ್ಯಕ್ಕೆ ಓಡಿಹೋದರು.

ಪಲ್ಲವರ ಪಲಾಯನದ ಸುದ್ದಿಯನ್ನು ಕೇಳಿ ಗೋವಿಂದನಿಗೆ ಸಂತೋಷವಾಯಿತು. ವೆಂಗಿಯ ಚಾಳುಕ್ಯರು ರಾಜ್ಯಭ್ರಷ್ಟರಾದ ಬಾದಾವಿ ಚಾಳುಕ್ಯರ ಬೆನ್ನುಕಟ್ಟಿ, ತನ್ನ ರಾಷ್ಟ್ರದೊಳಗೆ ಆಗಿಂದಾಗ ಕೊಲೆಸುಲಿಗೆಗಳನ್ನು ಮಾಡುತ್ತಿದ್ದುದರಿಂದ, ಅವರನ್ನು ಹತವೀರ್ಯ ರಾಗಿ ಮಾಡಬೇಕೆಂಬ ಹೆಬ್ಬಯಕೆಯು ಅವನಲ್ಲಿ ಹುಟ್ಟಿತು. ಆದ್ದರಿಂದ ಅವನು ತನ್ನ ದಂಡನ್ನು ಬೆಳಿಸಿ ಸಜ್ಜುಮಾಡಿಕೊಂಡು ಹೋಗಿ ಅವರ ಮೇಲೆ ಬಿದ್ದನು. ಒಂದೆರಡು ದೊಡ್ಡ ಕಾಳೆಗಗಳಾದವು. ಎರಡೂ ದಂಡಿನ ವರು ಹುರುಪಿನಿಂದ ಕಾದಿದರು. ಗೋವಿಂದನ ಜಾಗರೂಕತೆಗೂ ಯುದ್ಧ ಕೌಶಲ್ಯಕ್ಕೂ ಎದೆಗಾರಿಕೆ ದುಡುಕುಗಳಿಗೂ ಮೆಚ್ಚಿದ ಜಯ ಲಕ್ಷ್ಮಿಯು ಅವನ ಕೊರಳೊಳಗೆ ಮಾಲೆಯನ್ನು ಹಾಕಿದಳು. ಚಾಳುಕ್ಯರ ದಂಡು ದಿಕ್ಕೆಟ್ಟು ಓಡತೊಡಗಿತು. ಅದನ್ನು ಬೆನ್ನಟ್ಟಿ ಗೋವಿಂದನು ವೆಂಗಿಯ ಹತ್ತಿರಕ್ಕೆ ಹೋದನು. ಮಹಾಪರಾಕ್ರಮಶಾಲಿಯಾದ ಗೋವಿಂದನ ಗೆಲವಿನಿಂದ ಕೊಬ್ಬೇರಿದ ದಂಡನ್ನು ತಡೆಯುವುದು ತಮ್ಮಿಂದ ಆಗದ ಕೆಲಸವೆಂದು ಅನುಭವದಿಂದ ಮನಗಂಡ ವೆಂಗಿಯ ಅರಸನು ತನ್ನ ಆಪ್ತ ಮಂತ್ರಿಗಳೊಡನೆ ಆಲೋಚಿಸಿ, ಶರಣುಹೋಗ ಬೇಕೆಂದು ನಿಶ್ಚಯಿಸಿ, ಒಡಂಬಡಿಕೆಯನ್ನು ಮಾಡಿಕೊಳ್ಳಲಿಕ್ಕೆ ಒಬ್ಬ ರಾಯಭಾರಿಯನ್ನು ಗೋವಿಂದನ ಬಳಿಗೆ ಕಳುಹಿದನು. ಕೆಲದಿವಸ

ಪಾತುಕತೆಗಳಾದ ಬಳಿಕ ಕೆಳಗೆ ಬರೆದ ಶರ್ತುಗಳಂತೆ ಒಡಂಬಡಿಕೆಯಾಯಿತು :—

೧. ಇನ್ನು ಮುಂದೆ ವೆಂಗಿಯ ಚಾಳುಕ್ಯ ಅರಸನು ಬಾದಾವಿ ಚಾಳುಕ್ಯ ವಂಶದವರ ಬೆನ್ನು ಕಟ್ಟದೆ ರಾಷ್ಟ್ರಕೂಟ ಸಾರ್ವಭೌಮನ ಸ್ನೇಹಿತನಾಗಿ ಆಳಬೇಕು.

೨. ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಹೊಂದಿದ ತನ್ನ ಕೆಲ ಪ್ರದೇಶವನ್ನು ಬಿಟ್ಟುಕೊಡಬೇಕು.

೩. ರಾಷ್ಟ್ರಕೂಟ ಸಾಮ್ರಾಜ್ಯದೊಳಗೆ ಅಲ್ಲಲ್ಲಿ ಕೆಲ ಹಳ್ಳಿಪಳ್ಳಿಗಳ ಒಡೆಯರಾಗಿದ್ದ ಬಾದಾವಿ ಚಾಳುಕ್ಯರ ವಂಶದವರಿಗೆ ರಾಷ್ಟ್ರಕೂಟರು ಯಾವ ತರದ ತೊಂದರೆಯನ್ನೂ ಕೊಡಕೂಡದು.

೪. ವೆಂಗಿಯ ಅರಸನು ರಾಷ್ಟ್ರಕೂಟ ಸಾರ್ವಭೌಮನಿಗೆ ಪ್ರತಿವರ್ಷ ಕೆಲ ಪೊಗದಿಯನ್ನು ತಪ್ಪದೆ ಕೊಡಬೇಕು.

ಈಗ ೫೦ ಅಥವಾ ೬೦ ವರುಷ ಒಂದೇ ಸವನೆ ಕಾದಿದ ವೆಂಗಿಯ ಚಾಳುಕ್ಯರು ಈ ಒಪ್ಪಂದದಿಂದ ತನ್ನ ಗೆಳೆಯರಾಗಿ ನಡೆದುಕೊಳ್ಳಲಿಕ್ಕೆ ಒಡಂಬಟ್ಟುದರಿಂದ ಗೋವಿಂದನಿಗೆ ಪರಮಾನಂದವಾಯಿತು. ಮೂಡಣ ತೆಂಕಣ ಪಡುವಣ ನಾಡುಗಳಲ್ಲಿ ತನ್ನನ್ನು ಎದುರಿಸುವವರು ಯಾರೂ ಉಳಿಯದ್ದರಿಂದ ಬಡಗಣ ಸಂಚುಗಾರರ ಸಮಾಚಾರ ತೆಗೆದುಕೊಂಡು ಉತ್ತರ ಪ್ರಾಂತದ ದಿಗ್ವಿಜಯವನ್ನು ಮಾಡಬೇಕೆಂಬ ಹೆಬ್ಬಯಕೆಯು ಅವನಲ್ಲಿ ತಲೆದೋರಿತು. ಆದ್ದರಿಂದ ಅವನು ತನ್ನ ದಂಡನ್ನು ಬೆಳಿಸಿ; ತನ್ನ ಶೂರರೂ ಸಾಹಸಿಗಳೂ ಚತುರರೂ ಆದ ಎಲ್ಲ ದಳವಾಯಿಗಳನ್ನು ಕರೆಯಿಸಿಕೊಂಡು, ದಂಡಯಾತ್ರೆಗೆ ಬೇಕಾಗುವ ಎಲ್ಲ ಸಾಮುಗ್ರಿಗಳನ್ನು ಒದಗಿಸಿಕೊಂಡು, ಎಲ್ಲ ಜೋಡಣಿಯು ಮುಗಿದ ಬಳಿಕ ದಿಗ್ವಿಜಯಕ್ಕೋಸ್ಕರ ಉತ್ತರಾಭಿಮುಖನಾಗಿ ಹೊರಟನು. ಅವನು ಮೊದಲು ಗುಜರಾಥ ಪ್ರಾಂತವನ್ನೊಳಸುಗ್ಗಿದನು. ಅಲ್ಲಿಯ ಚಾಳುಕ್ಯ ಅರಸನು ಅವನನ್ನು ಎದುರಿಸಿ, ೨–೩ ಕಾಳಗಗಳಲ್ಲಿ ಪೂರ್ಣವಾಗಿ ಸೋತು, ದಿಕ್ಕೆಟ್ಟು ಓಡಿಹೋದ್ದರಿಂದ ಅವನು ತನ್ನ ತಮ್ಮನಾದ ಇಂದ್ರ

ರಾಜನಿಗೆ ಸೌರಾಷ್ಟ್ರದ ಪಟ್ಟಗಟ್ಟಿ, ಲಾಟ ಪ್ರಾಂತವನ್ನು ಗೆದ್ದು ಅದನ್ನು ಗುಜರಾಥಕ್ಕೆ ಜೋಡಿಸಿ, ಮಾಳವ ಪ್ರಾಂತದ ಮೇಲೆ ದಂಡೆತ್ತಿ ಹೋದನು. ಮಾಳವೆಯ ಅರಸನಾದ ವತ್ಸರಾಜನು ಗೋವಿಂದನ ತಂದೆಯಾದ ಧ್ರುವನಿಂದ ಸೋತು, ಕಾಡುಸೇರಿದನೆಂದು ಹಿಂದೆ ಬರೆದಿರುತ್ತೇವಷ್ಟೇ. ಅವನು ತಿರುಗಿ ಬಂದು ತನ್ನ ರಾಜ್ಯವನ್ನು ಮರಳಿ ದೊರಕಿಸಿ ಸಂಚುಗಾರರೊಳಗೆ ಸೇರಿದ್ದರಿಂದ ಅವನ ಪಾರುಪತ್ಯ ಮಾಡುವುದು ಗೋವಿಂದನಿಗೆ ಅವಶ್ಯ ಬಿತ್ತು. ಈ ಮೊದಲೇ ವತ್ಸರಾಜ ನಿಗೆ ಚೆನ್ನಾಗಿ ತಲೆಬಡಿದುದರಿಂದ ಅವನು ರಾಷ್ಟ್ರಕೂಟ ಸಾರ್ವ ಭೌಮನು ದಂಡೆತ್ತಿ ಬರುತ್ತಾನೆಂಬ ಸುದ್ದಿಯು ಬಂದ ಕೂಡಲೆ ಅವನಿಗೆ ಶರಣುಹೋಗಿ, ಅವನ ಆಳಾಗಿ ಮಾಳವೆಯನ್ನು ಆಳಲಿಕ್ಕೆ ಒಡಂಬಟ್ಟು, ವಾರ್ಷಿಕ ಕಪ್ಪವನ್ನು ಕೊಡಲಿಕ್ಕೆ ಒಪ್ಪಿಕೊಂಡು, ಗೋವಿಂದನನ್ನು ಸಮಾಧಾನಮಾಡಿದನು (೮೦೫?).

೮ ನೆಯ ಶತಮಾನದ ಮಧ್ಯದಲ್ಲಿ ರಾಷ್ಟ್ರಕೂಟ ದಂತಿದುರ್ಗನು ಬಾದಾಮಿ ಚಾಳುಕ್ಯರಿಂದ ಸಾಮ್ರಾಜ್ಯವನ್ನು ಸೆಳೆದುಕೊಂಡನಷ್ಟೇ. ಮುಂದೆ ೫೦ ವರುಷ ಈ ರಾಷ್ಟ್ರಕೂಟರ ರಾಜಧಾನಿಯು ಯಾವುದಾಗಿ ತ್ತೆಂಬುದು ಗೊತ್ತಾಗುವುದಿಲ್ಲ. ರಾಷ್ಟ್ರಕೂಟರು ಚಾಳುಕ್ಯರಿಂದ ಸಾಮ್ರಾಜ್ಯವನ್ನು ಕಸಿದುಕೊಂಡುದರಿಂದ ಬಾದಾಮಿಯೇ ಅವರ ರಾಜ ಧಾನಿ ಆಗಿತ್ತೆಂದು ಸಾಧಾರಣವಾಗಿ ಅನುಮಾನಮಾಡಬಹುದು. ಆದರೆ ಅವರು ಅಲ್ಲಿದ್ದ ಕುರುಹುಗಳಾಗಲಿ ಶಾಸನಗಳಾಗಲಿ ಇನ್ನೂ ದೊರೆ ತಿಲ್ಲ. ಮುಂದೆ ರಾಷ್ಟ್ರಕೂಟರ ಪ್ರಸಿದ್ಧ ರಾಜಧಾನಿಯಾದ ಮಳ ಖೇಡವನ್ನು ಎಂದು ಯಾರು ಆರಿಸಿದರೆಂಬುದು ತಿಳಿಯುವುದಿಲ್ಲ. ನಾಸಿಕ ಜಿಲ್ಲೆಯಲ್ಲಿದ್ದ **ಮಯೂರಖಂಡಿ**(ಮಾರಕಿಂಡ)ಯು ರಾಷ್ಟ್ರ ಕೂಟರ ಆರಂಭದ ರಾಜಧಾನಿಯಾಗಿತ್ತೆಂದು ಡಾ॥ ಫ್ಲೀಟರು ಅನುಮಾನ ಮಾಡುತ್ತಾರೆ*. ಆದರೆ ಈ ಅನುಮಾನಕ್ಕೆ ಆಧಾರವೇನೂ ಇದ್ದಂತೆ ಕಾಣುವುದಿಲ್ಲ. ಇದಲ್ಲದೆ ಆ ಪುಂಡಾಟಿಗೆಯ ಕಾಲದಲ್ಲಿ ಕರ್ನಾಟಕ

---

* ಮುಂಬಯಿ ಇಲಾಖೆಯ ಗ್ಯಾಜಿಟಿಯರ, ಸಂ. ೧, ಭಾ. ೨, ಪು. ೩೯೭.

ವನ್ನು ಇಷ್ಟು ದೂರಿನ ರಾಜಧಾನಿಯಿಂದ ಆಳುವುದು ಅಸಂಭವವೇ ಸರಿ. ಆದಕಾರಣ ಮೊಟ್ಟಮೊದಲು ಬಾದಾಮಿಯೂ ಬಳಿಕ ಮಳಖೇಡವೂ ಇವರ ರಾಜಧಾನಿಯಾಗಿತ್ತೆಂದು ಸಾಮಾನ್ಯವಾಗಿ ಹೇಳಿದರೆ ತಪ್ಪಾಗ ಲಿಕ್ಕಿಲ್ಲ. ಏಕೆಂದರೆ ೩ನೆಯ ಗೋವಿಂದನು ಮಯೂರಖಂಡಿಯಲ್ಲಿ ಪಾಳೆಯ ಹಾಕಿಕೊಂಡಿದ್ದಾಗ ಮಳಖೇಡದ ಸುತ್ತಲೂ ಕಟ್ಟಿಸಲಾರಂಭಿ ಸಿದ ಕೋಟೆಯ ಗೋಡೆಯನ್ನು ಮುಗಿಸಬೇಕೆಂದು ವೆಂಗಿಯ ಅರಸನಿಗೆ ಕಟ್ಟಪ್ಪಣೆಯನ್ನಿತ್ತನೆಂದು ರಾಧನಪುರದ ಶಾಸನದಲ್ಲಿ (೮೦೭) ಬರೆದಿದೆ*. ಮಯೂರಖಂಡಿಯು ಪಾಳೆಯದ ತಾಣವಾಗಿತ್ತೇ ಹೊರತು ರಾಜ ಧಾನಿಯಾಗಿದ್ದಿಲ್ಲ.

ಮೇಲೆ ಬರೆದ ಕಟ್ಟಪ್ಪಣೆಯು ಅತಿವಿಚಿತ್ರವಾಗಿರುತ್ತದೆಂದು ಎಲ್ಲ ಓದುವವರು ಒಡಂಬಡಬಹುದು. ಸರಿಕರಾದ ಅರಸರಿಗಾಗಲಿ ಕಪ್ಪ ಕೊಡುವ ಒಡೆಯರಿಗಾಗಲಿ ಈ ತರದ ಹುಕುಮು ಕೊಡುವುದು ಹುಚ್ಚುತನವೆಂದು ಯಾರಾದರೂ ಹೇಳಬಹುದು. ಇಂತಹ ರೀತಿಗೆಟ್ಟ ಕೆಲಸವನ್ನು ಗೋವಿಂದನು ಏಕೆ ಮಾಡಿದನೆಂಬುದನ್ನು ತಿಳಿದುಕೊಳ್ಳ ಲಿಕ್ಕೆ ನಮಗೆ ಸಾಧನವೇ ಇಲ್ಲ. ಈ ಕಾಲಕ್ಕೆ ಅವನು ಗೆಲವಿನಿಂದ ಮದಾಂಧನಾಗಿದ್ದನೆನ್ನಲಿಕ್ಕೆ ಬೇರೆ ಯಾವ ಅವಿವೇಕತನದ ಉದಾಹರ ರಣೆಯು ಇನ್ನೂ ದೊರೆತಿಲ್ಲ. ಗೋವಿಂದನು ಚತುರನೂ ರಾಜ ನೀತಿಜ್ಞನೂ ಆದ್ದರಿಂದ ಅವನು ಹೀಗೆ ಆಜ್ಞೆಯನ್ನು ಕೊಡಲಿಕ್ಕೆ ಏನಾದ ರೊಂದು ಮಹತ್ವದ ಕಾರಣವಿರಬೇಕೆಂದು ಧಾರಾಳವಾಗಿ ಹೇಳ ಬಹುದು. ವೆಂಗಿಯ ಚಾಳುಕ್ಯರು ತಾವು ಕೊಡಲೊಪ್ಪಿದ ಕಪ್ಪವನ್ನು ೨-೩ ವರ್ಷ ಕೊಡದ್ದರಿಂದಲೋ, ಅವರು ದ್ರೋಹಬಗೆದು ಬಾದಾಮಿ ಚಾಳುಕ್ಯರ ವಂಶಜರಾದ ಸಾಮಂತರೊಡನೆ ಒಳಸಂಚು ನಡಿಸಿರುತ್ತಾ ರೆಂದು ವಿಶ್ವಸನೀಯವಾದ ಸುದ್ದಿಯು ಬಂದುದರಿಂದಲೋ ಚಾಳುಕ್ಯ

* ಗೋವಿಂದನ ಕುದುರೆಯ ಶರ್ತಿನ ಸ್ಥಳದ ಸುತ್ತಲು ಎತ್ತರವಾದ ಗೋಡೆ ಯನ್ನು ಕಟ್ಟಿಸಲಿಕ್ಕೆ ಗೋವಿಂದನು ವೆಂಗಿಯ ಅರಸನಿಗೆ ಬರೆದನೆಂದು ರಾ. ಬ. ರಾ. ನರಸಿಂಹಾಚಾರ್ಯರು ತಮ್ಮ ಬೆಂಗಳೂರ ಜಿಲ್ಲಾ ಮನ್ನೆಯ ತಾಮ್ರ ಶಾಸನದ ಲೇಖದಲ್ಲಿ ಬರೆಯುತ್ತಾರೆ.

ರಾಷ್ಟ್ರಕೂಟ ಮನೆತನಗಳ ನಡುವಿದ್ದ ದ್ವೇಷೋದ್ರೇಕದಿಂದಲೋ ಈ ಮೂರೂ ಕಾರಣಗಳಿಂದಲೋ ಗೋವಿಂದನು ಈ ತರದ ಕಟ್ಟಾಣತಿಯನ್ನು ಕೊಟ್ಟಿದ್ದರೂ ಕೊಟ್ಟಿರಬಹುದು. ಕಾರಣವು ಏನೇ ಇರಲಿ, ಗೋವಿಂದನು ಈ ಪ್ರಕಾರದ ಹುಕುಮನ್ನು ಕೊಟ್ಟನೆಂಬುದಕ್ಕೆ ಸಂದೇಹವಿಲ್ಲ. ಆದರೆ ವೆಂಗಿಯ ಅರಸನು ಈ ಅತಿನಿಷ್ಠುರವಾದ ಆಜ್ಞೆಯನ್ನು ಎಷ್ಟುಮಟ್ಟಿಗೆ ಪಾಲಿಸಿದನೆಂಬುದನ್ನು ತಿಳಿದುಕೊಳ್ಳಲಿಕ್ಕೆ ನಮಗೆ ಸಾಧನವೇ ಇಲ್ಲ. ಆದರೂ ಮುಂದೆ ಗೋವಿಂದನು ವೆಂಗಿಯ ಚಾಳುಕ್ಯರೊಡನೆ ಯುದ್ಧವನ್ನು ಹೂಡಿದ್ದರಿಂದ ವೆಂಗಿಯ ಅರಸನು ಗೋವಿಂದನ ಅಪ್ಪಣೆಯನ್ನು ಪಾಲಿಸಲಿಲ್ಲೆಂದು ಸಾಧಾರಣವಾಗಿ ಊಹಿಸಬಹುದು.

೯ ನೆಯ ಶತಮಾನದ ಆರಂಭದಲ್ಲಿ ವೆಂಗಿ ರಾಜ್ಯವನ್ನು ೨ನೆಯ ನರೇಂದ್ರ ಮೃಗರಾಜ ವಿಜಯಾದಿತ್ಯನೆಂಬವನು (೭೯೯-೮೪೩) ಆಳುತ್ತಿದ್ದನೆಂದು ಡಾ॥ ಫ್ಲೀಟರು ಕಂಡುಹಿಡಿದಿದ್ದಾರೆ*. ಇವನು ಶೂರನೂ ಧೀರನೂ ಅತಿಸಾಹಸಿಯೂ ಆಗಿದ್ದನು. ಇವನು ೧೨ ವರ್ಷ ಒಂದೇ ಸವನೆ ಗಂಗ ರಾಷ್ಟ್ರಕೂಟರೊಡನೆ ಹಗಲಿರಳು ೧೦೮ ಕಾಳಗಗಳಲ್ಲಿ ಕಾದಿದನೆಂದು ಪೂರ್ವ ಚಾಳುಕ್ಯರ ಶಾಸನಗಳಿಂದ ಕಂಡುಬರುತ್ತದೆ†. ಈ ವಿಜಯಾದಿತ್ಯನು ತಾನು ಮಯೂರಖಂಡಿಯಿಂದ ಕಳಿಸಿದ ಹುಕುಮನ್ನು ಲೆಕ್ಕಿಸಲಿಲ್ಲೆಂಬ ಸಿಟ್ಟು ಗೋವಿಂದನ ಎದೆಯಲ್ಲಿ ಉರಿಯಲಾರಂಭಿಸಿತು. ಆದಕಾರಣ ಅವನು ತನ್ನ ಉತ್ತರ ದಿಗ್ವಿಜಯವನ್ನು ಆದಷ್ಟು ಬೇಗನೆ ಮುಗಿಸಿಕೊಂಡು ತನ್ನ ತಮ್ಮನಾದ **ಇಂದ್ರರಾಜ**ನಿಗೆ ಲಾಟ ಪ್ರಾಂತದ ಒಡೆತನವನ್ನು ಕೊಟ್ಟು, ತನ್ನ ಪಾಳೆಯವನ್ನು ಕಿತ್ತಿ, ಚಾಳುಕ್ಯ ವಿಜಯಾದಿತ್ಯನ ರಾಜ್ಯದ ಮೇಲೆ ದಂಡೆತ್ತಿ ಹೊರಟನು (೮೧೦?). ಅವನು ವಿಂಧ್ಯಪರ್ವತವನ್ನು ದಾಟುವಾಗ ಅಲ್ಲಿ ಆಳುತ್ತಿದ್ದ **ಮಾರಾಶರ್ವ**ನೆಂಬ ಅರಸನು ಅವನಿಗೆ ಶರಣುಬಂದು ತನ್ನಲ್ಲಿದ ಅತ್ಯಪರೂಪವಾದ ಒಡವೆ

---

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೩೯೬.

† ಇಂಡಿಯನ್ ಆಂಟಿಕ್ವರಿ, ಸಂ. ೨೦, ಪು. ೧೦೧.

ಗಳನ್ನು ಕಾಣಿಕೆಯಾಗಿ ಅರ್ಪಿಸಿದನಂತೆ. ಗೋವಿಂದನು ಮುಂದೆ ಸಾಗಿ ಶ್ರೀಭವನವೆಂಬಲ್ಲಿ * ಮಳೆಗಾಲವನ್ನು ಕಳೆದು, ವೆಂಗಿಯ ಚಾಳುಕ್ಯರ ರಾಜ್ಯವನ್ನೊಳಸುಗ್ಗಿದನು (೮೧೧?). ಎದೆಗಾರನಾದ ವಿಜಯಾದಿತ್ಯನು ತನ್ನ ದಂಡನ್ನು ಸಜ್ಜುಮಾಡಿಕೊಂಡು ಹೋಗಿ, ಅವನನ್ನು ತಡೆಯಲಿಕ್ಕೆ ಯತ್ನಿಸಿದನು. ಹನುಮಂತನ ಮುಂದೆ ಹಾರುವ ಗುಬ್ಬಿಯೇ? ಎಂಬ ಗಾದೆಯಂತೆ ಅವನು ತೋರಿಸಿದ ಸಾಹಸ ಶೌರ್ಯ ಚಾತುರ್ಯಗಳೆಲ್ಲ ವ್ಯರ್ಥವಾದ್ದರಿಂದ ಅವನು ಸೋತು ಹಿಂದಿರುಗಬೇಕಾಯಿತು. ಗೋವಿಂದನು ತನ್ನನ್ನು ಎದುರಿಸಿದ ದಂಡನ್ನು ಸೋಲಿಸುತ್ತ ರಾಜಧಾನಿಯ ಹತ್ತಿರ ಬರಲು, ವಿಜಯಾದಿತ್ಯನು ಹೆದರಿ, ಮುಂಗಾಣದೆ ಅವನಿಗೆ ಶರಣು ಹೋದನು. ಆ ಕಾಲಕ್ಕೆ ಗೋವಿಂದನ ಮನೋರಥವು ಪೂರ್ಣವಾಯಿತು. ತನ್ನ ಮನೆತನದ ಕಡುಹಗೆಯಾದ ಚಾಳುಕ್ಯ ವಿಜಯಾದಿತ್ಯನ ಸೊಕ್ಕು ಮುರಿಯಿತು. ಅವನು ಹಲ್ಲುಕಿತ್ತಿದ ಹಾವಿನಂತೆ ನಿರುಪದ್ರವಿಯಾದನು. ಅವನು ಹೊಸ ರಾಜಧಾನಿಯ ಕೋಟೆಯ ಗೋಡೆಯನ್ನು ಕಟ್ಟಿಸಲಿಕ್ಕೆ ಒಡಂಬಟ್ಟನು. ಬಾಕಿಯುಳಿದ ಕಪ್ಪವನ್ನೆಲ್ಲ ಒಪ್ಪಿಸಿದನು. ಮುಂದೆ ತಾನು ಪ್ರತಿವರ್ಷ ಕೊಡಲೊಪ್ಪಿದ ಪೊಗದಿಯ ಹಣದಿಂದ ಮಳಖೇಡದ ಕೋಟೆಯ ಗೋಡೆಯನ್ನು ಕಟ್ಟಿಸುತ್ತೇನೆಂದು ವಚನಕೊಟ್ಟನು. ೮೦೭ ನೆಯ ಇಸ್ವಿಯ ವಾಣಿದಿಂಡೋರಿ ರಾಧನಪುರಗಳ ಶಾಸನಗಳಲ್ಲಿ ವೆಂಗಿಯ ಅರಸನು ಗೋವಿಂದನ ದಾಸಾನುದಾಸನಾಗಿದ್ದನೆಂದು ಬರೆದ ಮಾತು ಈಗ ಮಾತ್ರ ಅಕ್ಷರಶಃ ನಿಜವಾಯಿತು (೮೧೨?). ಇದೇ ಕಾಲಕ್ಕೆ ಗೋವಿಂದನು ತೆರೆಗಳಿಂದ ಶೋಭಿಸುವ ಗಂಗಾ ಯಮುನಾ ನದಿಗಳ ಮೂರ್ತಿಗಳನ್ನು ವೆಂಗಿಯ ಅರಸನಿಂದ ತೆಗೆದುಕೊಂಡಿರಲಿಕ್ಕೇ ಬೇಕೆಂದು ಡಾ॥ ಫ್ಲೀಟರು ಬರೆಯುತ್ತಾರೆ†. ಈ ಪ್ರತಿಮೆಗಳು ಬಾದಾಮಿ ಚಾಳುಕ್ಯರಿಂದ ವೆಂಗಿಯ ಚಾಳುಕ್ಯರ ಕಡೆಗೆ ಬಂದಿರಬಹುದು. ಆದರೆ ಅವು ಎಂತಹವಿದ್ದವೋ ಅವುಗಳಿಗೆ ಆ ಕಾಲಕ್ಕೆ ಇಷ್ಟು ಮಹತ್ವವನ್ನು ಏಕೆ ಕೊಡುತ್ತಿದ್ದರೋ ಗೊತ್ತಾಗುವುದಿಲ್ಲ.

---

* ಈ ಶ್ರೀಭವನವು ಯಾವ ಸ್ಥಳವೆಂಬುದು ಇನ್ನೂ ಗೊತ್ತಾಗಿಲ್ಲ.

† ಮುಂಬಯಿ ಇಲಾಖೆಯ ಗ್ಯಾಜಿಟಿಯರ, ಸಂ. ೧, ಭಾ. ೨, ಪು. ೩೯೬.

ವೆಂಗಿಯ ವಿಜಯಾದಿತ್ಯನನ್ನು ಪೂರ್ಣವಾಗಿ ಮಣಿಸಿದ ಬಳಿಕ ಗೋವಿಂದನು ಕಂಚಿಯ ಪಲ್ಲವ ಅರಸನ ಪಾರಪತ್ಯ ಮಾಡಲಿಕ್ಕೆ ಹೊರಟನು. ಈ ಕಾಲಕ್ಕೆ **ದಂತಿಗ**ನೆಂಬವನು ಕಂಚಿಯ ಅರಸನಾಗಿದ್ದನು. ಗೋವಿಂದನ ವಿಜಯಯಾತ್ರೆಯ ಸುದ್ದಿಯು ಎಲ್ಲ ದಿಕ್ಕುಗಳಲ್ಲಿ ಹಬ್ಬಿದ್ದರಿಂದ ಅವನು ಗಾಬರಿಯಾಗಿ, ಹೊತ್ತುಗಳೆಯದೆ ಗೋವಿಂದನು ಪಾಳೆಯ ಹಾಕಿಕೊಂಡಿದ್ದ ತುಂಗಭದ್ರಾತೀರಕ್ಕೆ ಹೋಗಿ, ಹೇರಳ ಕಪ್ಪಗಾಣಿಕೆಯನ್ನು ಒಪ್ಪಿಸಿ ಅವನೊಡನೆ ಒಡಂಬಡಿಕೆಯನ್ನು ಮಾಡಿಕೊಂಡನು (೮೧೨ ?).

ಇಷ್ಟು ವರ್ಷ ರಾಷ್ಟ್ರಕೂಟರ ರಾಜಧಾನಿಯು ಯಾವದಾಗಿತ್ತೆಂಬುದಾಗಲಿ ಮಳಖೇಡವು ರಾಜಧಾನಿಗೆ ತಕ್ಕ ತಾಣವೆಂದು ಯಾರು ಆರಿಸಿದರೆಂಬುದಾಗಲಿ ನಿಶ್ಚಯವಾಗಿ ತಿಳಿಯದಿದ್ದರೂ ೩ನೆಯ ಗೋವಿಂದನ ಆಳಿಕೆಯ ಕೊನೆಯ ಭಾಗದಲ್ಲಿ ಮಳಖೇಡವು ರಾಷ್ಟ್ರಕೂಟರ ರಾಜಧಾನಿಯಾಯಿತೆಂಬ ಬಗ್ಗೆ ಸಂದೇಹವಿಲ್ಲ. ಈಗ ಮಳಖೇಡವು ನಿಜಾಮ ಸಂಸ್ಥಾನದಲ್ಲಿ ಒಂದು ಹಾಳು ಹಳ್ಳಿಯಾಗಿದ್ದು ಅಲ್ಲಿ ಮಾಧ್ವಸ್ವಾಮಿಗಳಾದ **ಜಯತೀರ್ಥ**(ಟೀಕಾಚಾರ್ಯ)ರ ವೃಂದಾವನವಿರುತ್ತದೆ. ಪ್ರತಿವರ್ಷ ಜ್ಯೇಷ್ಠವದ್ಯ ೫ಮಿಯ ದಿವಸ ಅವರ ಪುಣ್ಯತಿಥಿಯ ಉತ್ಸವದಿಂದಲೂ ಒಮ್ಮೊಮ್ಮೆ ಉತ್ತರಾದಿಮಠದ ಸ್ವಾಮಿಗಳು ಮಹಾಸಮಾರಾಧನೆಯನ್ನು ಅಲ್ಲಿ ಮಾಡುವುದರಿಂದಲೂ ಆ ಹಳ್ಳಿಯ ಹೆಸರು ಪ್ರತಿವರ್ಷ ಜನರ ಕಿವಿಗೆ ಬೀಳುತ್ತದೆ. ಅದು ೧೭°,೧೦′ ಅಕ್ಷಾಂಶ ೭೭°, ೧೫′ ರೇಖಾಂಶದ ಮೇಲಿದ್ದು, ಸೊಲ್ಲಾಪುರದ ಆಗ್ನೇಯಕ್ಕೆ ೯೦ ಮೈಲಿನ ಮೇಲೆ ಒಂದು ಸಣ್ಣ ಹೊಳೆಯ ತೀರದಲ್ಲಿರುತ್ತದೆ. ಮೂಡಲಿಂದ ಬರುವ ದಂಡನ್ನು ತಡೆಯಲಿಕ್ಕೆ ಮಳಖೇಡವು ಬಹಳ ಅನುಕೂಲವಾಗಿರುತ್ತದೆಂದು ಡಾ॥ ಫ್ಲೀಟರು ಅಭಿಪ್ರಾಯಪಡುತ್ತಾರೆ*. ವೆಂಗಿಯ ಚಾಳುಕ್ಯರೇ ರಾಷ್ಟ್ರಕೂಟರ ಪೂರ್ವ ದಿಕ್ಕಿನ ಶತ್ರುಗಳಾದ್ದರಿಂದ ಅವರ ಎಡೆಬಿಡದ ಉಪಟಳವನ್ನು ತಗ್ಗಿಸಲಿಕ್ಕೆ ಧ್ರುವನಾಗಲಿ ೩ನೆಯ ಗೋವಿಂದ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೩೯೬.

ನಾಗಲಿ ಈ ಮಳಖೇಡವನ್ನು ರಾಜಧಾನಿಯಾಗಲಿಕ್ಕೆ ಯೋಗ್ಯ ಸ್ಥಳವೆಂದು ಗೊತ್ತುಮಾಡಿರಬಹುದು.

ಕಂಚಿಯ ದಂತಿದುರ್ಗನು ಶರಣುಬಂದ ಬಳಿಕ ಗೋವಿಂದನು ಕೇರಳ ನಾಡಿನ ಕಡೆಗೆ ತಿರುಗಿದನು. ಆ ಸುದ್ದಿಯನ್ನು ಕೇಳಿ, ಮಲಬಾರದ ಅರಸನು ಅವನಿದ್ದೆಡೆಗೆ ಬಂದು, ಅವನು ಅಧಿರಾಜನೆಂದೊಡಂಬಟ್ಟು, ಕಪ್ಪ ಕಾಣಿಕೆಯನ್ನಿತ್ತು ಒಡಂಬಡಿಕೆಯನ್ನು ಮಾಡಿಕೊಂಡನು (೮೧೨?). ತಾನು ಮಾಡಿದ ದಿಗ್ವಿಜಯದಿಂದ ಗೋವಿಂದನು ಸಂತುಷ್ಟನಾಗಿ, ಜಯ ಭೇರಿಯನ್ನು ಹೊಡಿಸುತ್ತ ಸಾವಕಾಶವಾಗಿ ತನ್ನ ಹೊಸ ರಾಜಧಾನಿ ಯಾದ ಮಳಖೇಡಕ್ಕೆ ಬಂದು, ಅಲ್ಲಿ ಅರಮನೆ ಗುಡಿಗೋಪುರ ಕಚೇರಿ ಗಳನ್ನು ಸಿಂಗರಿಸುವುದರಲ್ಲಿ ಕೆಲ ಕಾಲವನ್ನು ಕಳೆದನು.

ಸೆರೆಯಿಂದ ಬಿಡುಗಡೆ ಹೊಂದಿದ ಶಿವಮಾರನು ಕಂಬಯ್ಯನೊಡನೆ ಒಳಸಂಚು ನಡಿಸಿದ್ದರಿಂದ ಮತ್ತೆ ಸೆರೆಯಲ್ಲಿಡಲ್ಪಟ್ಟನೆಂತಲೂ, ಕಂಬಯ್ಯನು ಸೋತು ತನ್ನ ತಮ್ಮನಾದ ೩ನೆಯ ಗೋವಿಂದನ ಸಾಮಂತನಾಗಿರಲಿಕ್ಕೆ ಒಡಂಬಟ್ಟನೆಂತಲೂ ಮೇಲೆ ಬರೆದಿರುತ್ತೇವಷ್ಟೆ. ಈ ಕಂಬಯ್ಯನು ೮೦೭ ರಲ್ಲಿ ತೀರಿಕೊಂಡನು. ಅವನ ತರುವಾಯ ಚಾಕಿರಾಜನೆಂಬವನು ಗಂಗವಾಡಿಯ ಸಾಮಂತನಾದನು. ಈ ಚಾಕಿರಾಜನು ಯಾರೆಂಬುದು ಇನ್ನೂ ಗೊತ್ತಾಗಿಲ್ಲ. ರಾಜ ಎಂಬ ಬಿರುದು ಇರುವುದರಿಂದ ಇವನು ರಾಷ್ಟ್ರಕೂಟ ರಾಜಮನೆತನಕ್ಕೆ ಸೇರಿದವನಾಗಿರಲಿಕ್ಕೇ ಬೇಕು. ಇವನು ಕಂಬಯ್ಯನ ಮಗನಾಗಿದ್ದರೂ ಆಗಿರಬಹುದು. ಆದರೆ ಇವನು ೩ನೆಯ ಗೋವಿಂದನ ಸಾಮಂತನಾಗಿದ್ದನೆಂಬುದಕ್ಕೆ ಸಂದೇಹವಿಲ್ಲ. ಏಕೆಂದರೆ, ಇವನ ಬಿನ್ನಹವನ್ನು ಮನ್ನಿಸಿ ೩ನೆಯ ಗೋವಿಂದನು ಒಂದು ಜಿನಗುಡಿಗೆ ಕೆಲ ಭೂಮಿಯನ್ನು ೮೧೨ರಲ್ಲಿ ಕೊಟ್ಟನೆಂದು ಮೈಸೂರು ಸಂಸ್ಥಾನ ಗುಬ್ಬಿಯ ೬೧ನೆಯ ನಂಬರಿನ ಶಾಸನದಿಂದ ಕಂಡುಬರುತ್ತದೆ. ಇದೇ ವರುಷ ಗಂಗವಾಡಿಯು ರಾಷ್ಟ್ರಕೂಟರ ಕಯ್ಬಿಟ್ಟಿತೆಂದು ರಾ. ಬ. ರಾ. ನರಸಿಂಹಾಚಾರ್ಯರು ತಮ್ಮ ಮನ್ನೆ(ಮಾನ್ಯಪುರ)ಯ ತಾಮ್ರಶಾಸನದ ಲೇಖನದಲ್ಲಿ ಬರೆಯುತ್ತಾರೆ. ಆದರೆ ಗಂಗವಾಡಿಯ ಮುಂದಿನ ಇತಿ ಹಾಸವು ಈ ಊಹೆಯನ್ನು ವಿರೋಧಿಸುತ್ತದೆಂದು ಹೇಳಬಹುದು.

ಗಂಗರಸನಾದ ಸಿವಮಾರನು ೩ನೆಯ ಗೋವಿಂದನ ಸೆರೆಮನೆಯಲ್ಲಿ ಕೊಳೆಯುತ್ತಿದ್ದನೆಂದು ಮೇಲೆ ಬರೆದಿರುತ್ತೇವಷ್ಟೇ. ಅವನ ಪಕ್ಷದ ಜನರು ರಾಷ್ಟ್ರಕೂಟ ಅಧಿಕಾರಿಗಳಿಗೆ ಎಡೆಬಿಡದೆ ನಾನಾತರದ ತೊಂದರೆಗಳನ್ನು ಕೊಡುತ್ತಿದ್ದರು. ೮೦೨ರ ಸುಮಾರಕ್ಕೆ ಅವರೆಲ್ಲರೂ ಒಟ್ಟುಗೂಡಿ ದೊಡ್ಡ ಬಂಡಾಯವನ್ನೆಬ್ಬಿಸಿ, ರಾಷ್ಟ್ರಕೂಟರ ಸಾಮಂತನಾದ ಚಾಕಿರಾಜನನ್ನು ಸೋಲಿಸಿ ಓಡಿಸಿಬಿಟ್ಟರು. ೩ನೆಯ ಗೋವಿಂದನು ಪಲ್ಲವ ರಾಜ್ಯದಲ್ಲಿದ್ದಾಗ ಈ ಭಯಂಕರವಾದ ಬಂಡಾಯದ ಸುದ್ದಿಯು ಅವನಿಗೆ ಮುಟ್ಟಿದ್ದರಿಂದ ಅವನು ಮುಂದೆ ಏನು ಮಾಡಬೇಕೆಂಬ ವಿಚಾರದಲ್ಲಿ ಮುಳುಗಿದನು. ತನ್ನ ತಂದೆಯ ಕಾಲದಿಂದ ಗಂಗವಾಡಿಯು ತನ್ನ ಮನೆತನದ ಆಳಿಕೆಗೆ ಒಳಗಾಗಿದ್ದರೂ ಆ ನಾಡಿನಲ್ಲಿ ಸ್ವಾಸ್ಥ್ಯವೂ ಶಾಂತಿಯೂ ಹಬ್ಬಲಿಲ್ಲೆಂದು ಬಹಳವಾಗಿ ಹಳಹಳಿಸಿದನು. ಆ ಪ್ರಾಂತದ ರಾಜ್ಯಭಾರಕ್ರಮದಲ್ಲಿ ಏನಾದರೊಂದು ದೊಡ್ಡ ದೋಷವಿರಬೇಕೆಂದು ಮನಗಂಡನು. ಮಂತ್ರಿ ದಂಡನಾಯಕರೊಡನೆ ಆಲೋಚಿಸಿದನು. ಅವನು ಗಂಗವಾಡಿಯನ್ನು ತನ್ನ ರಾಜ್ಯದ ಭಾಗವಾಗಿಟ್ಟುಕೊಳ್ಳಲಿಕ್ಕೆ ವಿಶ್ವಪ್ರಯತ್ನ ಮಾಡಿದನು. ಎಷ್ಟು ಅಳೆದುಹಾಕಿದರೂ ಎಷ್ಟು ವಿಚಾರ ಮಾಡಿದರೂ ಯಾರ ಆಲೋಚನೆಯನ್ನು ಕೇಳಿದರೂ ಏನೂ ಬಗೆಹರಿಯಲಿಲ್ಲ. ಆದ್ದರಿಂದ ಸಿವಮಾರನನ್ನು ಸೆರೆಯಿಂದ ಮುಕ್ತಮಾಡಿ ಅವನನ್ನು ತನ್ನ ಮಾಂಡಲಿಕನಾಗಿ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು. ಆದರೆ ಸಿವಮಾರನು ಉತ್ಕಟ ಸ್ವಾಭಿಮಾನಿಯೂ ಸ್ವಾತಂತ್ರ್ಯಪ್ರಿಯನೂ ಆದ್ದರಿಂದ ಮಾಂಡಲಿಕನಾಗಲಿಕ್ಕೆ ಎಂದೂ ಒಡಂಬಡಲಾರನೆಂಬುದು ಗೋವಿಂದನಿಗೆ ಹಿಂದಿನ ಅನುಭವದಿಂದ ಗೊತ್ತಾಗಿತ್ತು. ಆದಕಾರಣ ಮಾಂಡಲಿಕತ್ವದ ಪ್ರಸ್ತಾಪ ತೆಗೆಯದೆ ಅವನನ್ನು ಮಾಂಡಲಿಕನಾಗಿ ಮಾಡಲಿಕ್ಕೆ ಒಂದು ಅಪೂರ್ವವಾದ ಹಂಚಿಕೆಯನ್ನು ಹುಡುಕಿ ತೆಗೆಯಲಿಕ್ಕೆ ಅವನು ತನ್ನ ಮಂತ್ರಿಗಳಿಗೆ ಆಜ್ಞಾಪಿಸಿದನು.

ರಾಜತಂತ್ರವು ಅತಿಕುಟಿಲವಾದುದೆಂಬುದು ದಿನಾಲು ನಮ್ಮ ಅನುಭವಕ್ಕೆ ಬರುವ ಮಾತಾಗಿರುತ್ತದಷ್ಟೇ. ಮನುಷ್ಯನ ಚುರುಕು ಬುದ್ಧಿಗೆ ಮಿತಿಯೇ ಇಲ್ಲ. ಅರಸರ ಬಂಡಾರದಲ್ಲಿ ಹೇರಳ ಪಣವು

ಕೂಡಿಬೀಳುವುದರಿಂದ ಅವರು ತಮ್ಮ ನಾಡಿನಲ್ಲಿದ್ದ ಬಲು ಜಾಣರನ್ನು ಅವರು ಬೇಡಿದಷ್ಟು ಹಣ ಕೊಟ್ಟು ತಮ್ಮ ಅಧಿಕಾರಿಗಳಾಗಿ ಇಟ್ಟು ಕೊಳ್ಳುತ್ತಾರೆಂಬ ಸಂಗತಿಯು ಎಲ್ಲರಿಗೂ ಗೊತ್ತಿದ್ದ ಮಾತೇ ಸರಿ. ಕುಶಾಗ್ರಬುದ್ಧಿಯುವನಾದ ಒಬ್ಬ ಮಂತ್ರಿಯು ಗೋವಿಂದನಿಗೆ ಬೇಕಾದ ಹೂಟವನ್ನು ಹುಡುಕಿ ತೆಗೆದನು. ಅದನ್ನು ಕೇಳಿ ಅತಿಸಂತುಷ್ಟನಾದ ಗೋವಿಂದನು ಆ ಮಂತ್ರಿಗೆ ವಸ್ತ್ರಾಭರಣಗಳನ್ನು ಉಚಿತವಾಗಿ ಕೊಟ್ಟು ಗೌರವಿಸಿದನು.

ಮೊದಲು ಗೊತ್ತುಮಾಡಿದಂತೆ ಗೋವಿಂದನ ಒಡ್ಡೋಲಗವು ಕೂಡಿತು. ಪಲ್ಲವ ಅರಸನಾದ ನಂದಿವರ್ಮನೂ ರಾಷ್ಟ್ರಕೂಟ ಪಲ್ಲವ ಮಂತ್ರಿ ದಂಡನಾಯಕರೂ ಸಭೆಯನ್ನಲಂಕರಿಸಿದರು. ಬಂಧಮುಕ್ತ ನಾದ ಸಿವಮಾರನು ರಾಜಾರ್ಹವಾದ ಉಡುಪು ತೊಡವು ಒಡವೆಗಳನ್ನು ಹಾಕಿಕೊಂಡು ಸಾರ್ವಭೌಮನಾದ ಗೋವಿಂದನ ಎಡಬದಿಯಲ್ಲಿ ಕುಳಿ ತಿದ್ದನು. ಪಲ್ಲವ ರಾಜನಾದ ನಂದಿವರ್ಮನು ಅವನ ಬಲಮಗ್ಗಲಲ್ಲಿ ಕುಳಿ ತಿದ್ದನು. ಒಬ್ಬ ರಾಷ್ಟ್ರಕೂಟ ಮಂತ್ರಿಯು ಎದ್ದು ಮೂರು ಮಂದಿ ರಾಜರನ್ನು ಉಚಿತ ಪ್ರಕಾರದಿಂದ ವಂದಿಸಿ, ಸಿವಮಾರನ ಶೌರ್ಯ ಧೈರ್ಯ ಸಾಹಸ ಸ್ವಾಭಿಮಾನ ಸ್ವಾತಂತ್ರ್ಯ ಪ್ರೀತಿ ಕಷ್ಟಸಹಿಷ್ಣುತೆ ಮುಂತಾದ ಗುಣಗಳನ್ನು ಯಥೇಚ್ಛವಾಗಿ ಬಣ್ಣಿಸಿ, ಈ ಗುಣಗಳಿಗೆ ಮೆಚ್ಚಿದ ಗುಣೈಕಪಕ್ಷಪಾತಿಯಾದ ಗೋವಿಂದ ಸಾರ್ವಭೌಮನು ಸಿವಮಾರ ಮಹಾರಾಜನಿಗೆ ಅವನ ರಾಜ್ಯವನ್ನು ಕೃತಾರ್ಥವಾಗಿ ತಿರುಗಿ ಕೊಡುವನೆಂದು ಸಾರಿ ಹೇಳಿದನು. ಈ ಅಪೂರ್ವವಾದ ಸುದ್ದಿಯನ್ನು ಕೇಳಿ ಎಲ್ಲ ಸಭಿಕರು ಸಂತುಷ್ಟರಾದರು. ಸಿವಮಾರನಿಗಂತೂ ಹೊಟ್ಟೆ ಹಿಡಿಸಲಾರದಷ್ಟು ಆನಂದವಾಯಿತು. ಅವನ ಕಣ್ಣಿಂದ ಆನಂದಬಾಷ್ಪ ಗಳು ಪಟಪಟನೇ ಸುರಿದವು. ಬಳಿಕ ಮುಖ್ಯ ಮಂತ್ರಿಯು ಎದ್ದು, ರೀತಿ ಯಂತೆ ತೊಡಮುಡಿದು, "ಮಹಾಪ್ರಭುಗಳೇ, ಈವೊತ್ತಿನ ದಿವಸವು ತಮ್ಮ ಆಳಿಕೆಯ ಮಹೋತ್ಸವ ದಿವಸವೇ ಸರಿ. ಎಲ್ಲ ಪ್ರಜೆಗಳಿಗೆ ಅತ್ಯಾನಂದ ವಾಗಿರುತ್ತದೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ. ಸಿವಮಾರ ಮಹಾರಾಜರನ್ನೂ ಅವರ ವಂಶದವರನ್ನೂ ಅವರ ಪ್ರಜೆಗಳನ್ನೂ ತಮಗೆ ಅತ್ಯಂತ ಋಣಿ

ಯಾಗಿ ಮಾಡಿಕೊಂಡಿರೆಂಬುದಕ್ಕೆ ಸಂದೇಹವಿಲ್ಲ. ತಮ್ಮ ದೂರದೃಷ್ಟಿಗೆ ನೆಲೆಯಿಲ್ಲ, ತಮ್ಮ ಪರೋಪಕಾರಕ್ಕೆ ಪರಿಮಿತಿಯಿಲ್ಲ, ತಮ್ಮ ಉದಾರ ತನಕ್ಕೆ ಅಳತೆಯಿಲ್ಲ, ತಮ್ಮ ಜಸಕ್ಕೆ ಚ್ಯುತಿಯಿಲ್ಲ. ತಮ್ಮ ಕೀರ್ತಿಯು ಆಚಂದ್ರಾರ್ಕವಾಗಿ ಉಳಿಯುವುದು. ತಾವು ಸಿವಮಾರ ಮಹಾರಾಜರ ಮೇಲೆ ಮಹೋಪಕಾರವನ್ನು ಮಾಡಿರುತ್ತೀರಷ್ಟೇ. ಆದರೆ ತಾವು ಈಗ ಅವರ ಮೇಲೆ ಇನ್ನಷ್ಟು ಉಪಕಾರಮಾಡಿ, ತಾವು ಆರಂಭಿಸಿದ ಪರೋಪ ಕಾರಕೃತ್ಯವನ್ನು ಹೆಚ್ಚು ಶ್ರೇಯಸ್ಕರವಾಗಿ ಮಾಡಿಕೊಳ್ಳಬೇಕೆಂದು ಈ ಬಡ ಸೇವಕನ ಸವಿನಯವಾದ ಸೂಚನೆಯುಂಟು. ಸಿವಮಾರ ಮಹಾರಾಜರು ಬಹಳ ವರ್ಷ ತಮ್ಮಲ್ಲಿದ್ದುದರಿಂದ ಕೆಲ ಕೆಡಕರು ಅವರು ತಿರುಗಿ ಬಂದ ಕಾರಣವನ್ನು ಸರಿಯಾಗಿ ತಿಳಿದುಕೊಳ್ಳದೆ ಅಲ್ಲದ ಸಲ್ಲದ ಕುತರ್ಕಗಳನ್ನು ಜನರೊಳಗೆ ಪ್ರಚಾರಗೊಳಿಸಬಹುದು. ಗಂಗರ ರಾಜಧಾನಿಯಾದ ತಳಕಾಡು ಇಲ್ಲಿಂದ ಬಹಳ ದೂರವಾಗಿಲ್ಲ. ಪ್ರಭು ಗಳು ನಂದಿವರ್ಮ ಮಹಾರಾಜರನ್ನು ಸಂಗಡ ಕರೆದುಕೊಂಡು ಸಿವಮಾರ ಮಹಾರಾಜರೊಡನೆ ತಳಕಾಡಿಗೆ ಹೋಗಿ ಅವರ ಪಟ್ಟಬಂಧ ಮಹೋತ್ಸವವನ್ನು ಮಾಡಿಸಿದರೆ, ದುಷ್ಟರ ಬಾಯಿಗೆ ಬೀಗ ಹಾಕಿ ದಂತಾಗುವುದು. ಬಡಾಳಿನ ಬಿನ್ನಹವನ್ನು ಮನ್ನಿಸಲಿಕ್ಕೂ ಅಲ್ಲಗಳೆಯ ಲಿಕ್ಕೂ ಮಹಾಪ್ರಭುಗಳು ಸಮರ್ಥರೇ ಇದ್ದೀರಿ" ಎಂದು ದಂಡವತ್ ಪ್ರಣಾಮಮಾಡಿದನು.

ಮುಖ್ಯ ಮಂತ್ರಿಯು ಮಾತಾಡುವಾಗ ಎಲ್ಲ ಸಭಿಕರು ಚಿತ್ರದಲ್ಲಿ ಬರೆದ ಗೊಂಬೆಗಳಂತೆ ಸ್ತಬ್ಧವಾಗಿ ಕುಳಿತಿದ್ದರು. ಅವನ ಭಾಷಣವು ಮುಗಿದ ಕೂಡಲೆ ಗೋವಿಂದನು ಸಿವಮಾರನ ಕಡೆಗೂ ನಂದಿವರ್ಮನ ಕಡೆಗೂ ನೋಡಿದನು. ಅವರಿಬ್ಬರ ನಗೆಮೋರೆಯನ್ನು ನೋಡಿ ಅವನಿಗೆ ಹುರುಪು ಬಂತು. ಎಲ್ಲ ಸಭಿಕರು ಎವೆಯಿಕ್ಕದೆ ಸಿಂಹಾಸನ ವನ್ನು ನೋಡುತ್ತಿರುವಾಗ, ಗೋವಿಂದನು—"ಮಂತ್ರಿ ಶ್ರೇಷ್ಠರೇ, ತಮ್ಮ ಸೂಚನೆಯು ಅತಿಸಯುಕ್ತಿಕವಾದುದು. ನಾವು ತಳಕಾಡಿಗೆ ಹೊರಡುವೆವು. ನಂದಿವರ್ಮ ಮಹಾರಾಜರು ನಮ್ಮ ಸಂಗಡ ಬರುವರು. ಪ್ರಯಾಣದ ಸಿದ್ಧತೆಯನ್ನು ಜಾಗ್ರತೆಯಾಗಿ ಮಾಡಿಸಿರಿ" ಎಂದು

ಉಸುರಿದ ಕೂಡಲೆ ಎಲ್ಲರು ಜಯ ಜಯಕಾರಮಾಡಿದರು. ಮತ್ತು ಸಭೆಯು ಮುಗಿಯಿತು.

ಚಂಚು ಪ್ರವೇಶ ಮುಸಲ ಪ್ರವೇಶ ಎಂಬ ಸಕ್ಕದ ಗಾದೆಯನ್ನು ವಾಚಕರು ಕೇಳಿರಬಹುದು. ಕೂದಲೆಳೆಯಿಂದ ಕುತ್ತಿಗೆ ಕೊಯ್ಯುವುದೆಂಬ ಮಾತಾದರೂ ಇದೇ ತರದ ಜಾಣ್ಮೆಯನ್ನು ವ್ಯಕ್ತಗೊಳಿಸುತ್ತದೆ. ಈ ತರದ ಜಾಣತನವು ರಾಜಕಾರ್ಯದಲ್ಲಿ ಉಪಯೋಗವಾದಷ್ಟು ಬೇರೆ ಯಾವ ವ್ಯವಹಾರದಲ್ಲಿಯೂ ಆಗುವುದಿಲ್ಲ. ರಾಜಕಾರ್ಯಧುರಂಧರರಿಗೆ ಕಚ್ಚುವ ಹಲ್ಲೊಂದು, ತೋರಿಸುವ ಹಲ್ಲು ಮತ್ತೊಂದು, ಹೀಗೆ ಎರಡು ಹಲ್ಲುಗಳಿರುತ್ತವೆ. ಅವರು ತಮ್ಮ ಮುಖ್ಯವಾದ ಉದ್ದೇಶವನ್ನು ಮರೆಮಾಡಿ ಬಚ್ಚಿಟ್ಟು, ಪ್ರಜಾಹಿತವನ್ನೇ ಮಾಡುತ್ತೇವೆಂದು ನಟಿಸುತ್ತಾರೆ. ಪ್ರಸಿದ್ಧ ಸಂಸ್ಕೃತ ಕವಿಯಾದ ಭವಭೂತಿಯು ವರ್ಣಿಸುವಂತೆ ಇಂತಹ ವಿದ್ವಾಂಸರು ಎಲ್ಲ ಜನರನ್ನು ಕಪಟದಿಂದ ಮೋಸಗೊಳಿಸಿ, ತಮ್ಮ ಸ್ವಾರ್ಥವನ್ನು ಸಾಧಿಸಿಕೊಂಡು; ತಟಸ್ಥರಾಗಿ ಮೌನವನ್ನು ಧರಿಸುತ್ತಾರೆ*. ಈ ತರದ ವಿದ್ಯೆಯಲ್ಲಿ ಪಾಶ್ಚಿಮಾತ್ಯರು ನುರಿತಷ್ಟು ಪೌರ್ವಾತ್ಯರು ನುರಿತಿಲ್ಲೆಂದು ಬರೆದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

ಒಡ್ಡೋಲಗದಲ್ಲಿ ಗೊತ್ತಾದಂತೆ ಗೋವಿಂದ ನಂದಿವರ್ಮರು ಸಿವಮಾರನೊಡನೆ ತಳಕಾಡಿಗೆ ಹೋಗಿ ತಮ್ಮ ಕಯ್ಯಿಂದ ಸಿವಮಾರನ ಹಣೆಗೆ ಪಟ್ಟಬಂಧವನ್ನು ಕಟ್ಟಿ, ಅವನ ಪಟ್ಟಾಭಿಷೇಕ ಮಹೋತ್ಸವವನ್ನು ಯಥಾಸಾಂಗವಾಗಿ ಮಾಡಿಸಿದರು (೮೧೩?). ಪಟ್ಟಗಟ್ಟಿಸಿಕೊಂಡವನು ಪಟ್ಟಗಟ್ಟಿದವನ ಮಾಂಡಲಿಕನೆಂಬುದು ಮೇಲೇ ಕಾಣಿಸುತ್ತದೆ. ಇಷ್ಟು ಕಟ್ಟಭಿಮಾನಿಯೂ ಸ್ವಾತಂತ್ರ್ಯಪ್ರಿಯನೂ ಜಾಣನೂ ಆದ ಸಿವಮಾರನು ಹೀಗೆ ಏನು ಕಾರಣ ಮೋಸಹೋದನೆಂಬುದು ಗೊತ್ತಾಗುವುದಿಲ್ಲ. ಅಥವಾ ಸೆರೆಮನೆಯಲ್ಲಿ ಕೊಳೆಯುತ್ತ ಕಾಲಕಳೆಯುವುದಕ್ಕಿಂತ ತನ್ನ ರಾಜ್ಯಕ್ಕೆ ಹೋಗಿ ಮುಂದೆ ಸ್ವತಂತ್ರನಾಗಬೇಕೆಂಬ ವಿಚಾರವು ಅವನ

---

* ವರಂ ವಿದ್ವಾನೇಕೋ ಸಕಲನುಭಿಸಂಧಾಯ ಕಪಟೈ |
ಸ್ತಟಸ್ಥಃ ಸ್ವಾನರ್ಥಾನ್ ಘಟಯತಿ ಚ ಮೌನಂ ಚ ಭಜತೇ || ಮಾಲತೀಮಾಧವ

ಮನಸ್ಸಿನಲ್ಲಿ ಹುಟ್ಟಿರಬಹುದು. ಈ ಪಟ್ಟಾಭಿಷೇಕದಿಂದ ಗಂಗ ಮಂಡಲದ ಸ್ವತಂತ್ರ ಅರಸನಾದ ಸಿವಮಾರನು ರಾಷ್ಟ್ರಕೂಟರ ಸಾಮಂತನಾದನು. ಇದರಿಂದ ಗಂಗ ಮನೆತನಕ್ಕೆ ಅವಮಾನವಾಯಿತೇ ಹೊರತು ಸಮ್ಮಾನವಾಗಲಿಲ್ಲ. ಆದರೂ ಮೈಸೂರು ಜಿಲ್ಲಾ ಎಡತೊರೆಯ ೬೦ ನೆಯ ನಂಬರಿನ ೮೯೦ ನೆಯ ಇಸ್ವಿಯ ಶಾಸನದಲ್ಲಿ ಈ ಪಟ್ಟಬಂಧನವು ಸಿವಮಾರನಿಗೆ ಒಂದು ಭೂಷಣವಾಗಿತ್ತೆಂದು ವರ್ಣಿಸಿದ್ದಾರೆ. ಸಿವಮಾರನ ವರ್ಣನೆಯನ್ನು ಆ ಶಾಸನದಿಂದ ಉದ್ಧರಿಸಿ ಕೆಳಗೆ ಕೊಡುತ್ತೇವೆ*:—

೩೪. ಸತು ಪ್ರತಿದಿನ ಪ್ರವೃತ್ತಮಹಾದಾನ ಜನಿತ ಪುಣ್ಯಾಹ ಘೋಷ ಮುಖರಿತ ಮಂದಿರೋದರೇಣ ಶ್ರೀ

೩೫. ಪುರುಷ ಪ್ರಥಮ ನಾಮಧೆ(ೀ)ಯಃ ತತ್ಪುತ್ರಃ ಪ್ರತಾಪ ವಿನಿಮಿತ ಸಕಲ ಮಹೀಪಾಲಮೌ

೩೬. ಲಿಮಾಲಾ ಲಾಲಿತ ಚರಣಯುಗಲಃ ನಿಜಭುಜ ವಿರಾಜಿತ ನಿಶಿತ ಖಡ್ಗಪಟ್ಟ ಸಮಾ

೩ ನೆಯ ಪತ್ರದ ಹಿಂಭಾಗ

೩೭. ಕೃಷ್ಟಾನಿಷ್ಟ ಧರಾಪಾಲ ವಲ್ಲಭ ಜಯಶ್ರೀ ಸಮಾಲಿಂ (ಗಿ) ತಃ ಸಮರ ಮುಖ ಸಂಮುಖಾಗತ ರಿ

೩೮. ಪುನೃಪತಿ ಗಜಘಟಾ ಕುಂಭನಿರ್ಭೇದನೋಚ್ಛಲಿತ ರಕ್ತ ಚ್ಛಟಾಪಾತ ಪಾಟಲಿತ ನಿಜಭುಜ

೩೯. ಸ್ತಂಭಿಃ ಆಕರ್ಣ್ಣ ಶಮಾಕೃಷ್ಟ ಚಾಪಚಕ್ರವಿನಿ ರ್ಮುಕ್ತ ನಾರಾಚಪರಂಪರಾ ಘಾತ ಘಾತಿತಾರಾ

೪೦. ತಿಮಂಡಲೋ ಬಹುಶಮರಸಂಮಾರ್ಜಿತ ಜಯಪತಾಕಾ ಶತ ಸಫಲಿತ ನಭಸ್ಥಲಃ ಮುದು

೪೧. ಗುಂದೂರ್ನ್ನಾಮ ಗ್ರಾಮೋಪವಿಷ್ಟ ರಾಷ್ಟ್ರಕೂಟ ಚಾಳುಖ್ಯ ಹೈಹಯ ಪ್ರಮುಖ ಪ್ರ

* ಉಯಿರಾಯಿಸರ ಕರ್ನಾಟಕ ಶಾಸನಸಂಗ್ರಹ, ಸಂ. ೪, ಸಂಚಿಕೆ ೨, ಪು. ೧೮೩.

೪೨. ವೀರ ಸನಾಥವಲ್ಲಭ ಸೈನ್ಯ ವಿಜಯ ವಿಖ್ಯಾತ ಪ್ರಭಾವಃ
ರಾಷ್ಟ್ರಕೂಟ ಪಲ್ಲವಾನ್ವಯ

೪೩. ತಿಲಕಾಭ್ಯಾಂ ಮೂರ್ಧಾಭಿಷಿಕ್ತ ಗೋವಿಂದನಂದಿವ
ರ್ಮಾವಿಧೇಯಾಭ್ಯಾಂ ಸಮನುಷ್ಠಿತ ರಾಜ್ಯಾಭಿಷೇ

೪೪. ಕಾಭ್ಯಾಂ ನಿಜಕರ ಘಟಿತ ಪಟ್ಟವಿಭೂಷಿತ ಲಲಾಟ
ಪಟ್ಟೋವಿಖ್ಯಾತ ವಿಮಲ ಗಂಗಾನ್ವ

೪೫. ಯ ನಭಸ್ಥಲಗವಸ್ಥಿಮಾಲೀ ಕೊಂಗುಣಿ ಮಹಾರಾಜಾಧಿ
ರಾಜ ಪರಮೇಶ್ವರ ಶ್ರೀ ಶಿವಮಾರದೇವ।

೮೦೭ ನೆಯ ಇಸ್ವಿಯ ಒಂದು ಶಾಸನದಲ್ಲಿ ಗೋವಿಂದನು ಕೇರಳ ರನ್ನೂ ಮಾಳವರನ್ನೂ ಶೌತರನ್ನೂ ಗುರ್ಜರರನ್ನೂ ಬುಂದೇಲಖಂಡದ ಚಿತ್ರಕೂಟವೆಂಬ ಕೋಟೆಯಲ್ಲಿದ್ದ ಕಲಚುರಿಯರನ್ನೂ ಸೋಲಿಸಿದನೆಂದು ಬರೆದಿದೆ. ಈ ಶೌತರು ಯಾರೆಂಬುದು ಗೊತ್ತಾಗಿಲ್ಲ. ಅವನು ಮಾಳವ ರನ್ನು ಸೋಲಿಸಿದ ಬಳಿಕ ಚಿತ್ರಕೂಟದ ವರೆಗೆ ಹೋಗಿ ಆ ಕೋಟೆ ಯನ್ನು ಹಿಡಿದುಕೊಂಡಿರಬಹುದು.

ಇಷ್ಟು ವರ್ಷ ನಮ್ಮ ತಾಯ್ನಾಡಿನಲ್ಲಿ ಆಳಿದ ರಾಷ್ಟ್ರಕೂಟ ಮನೆತನದ ಹೆಬ್ಬರಸರಲ್ಲಿ ೩ ನೆಯ ಗೋವಿಂದನು ಮಹಾಪರಾಕ್ರಮ ಶಾಲಿಯೂ ಚತುರನೂ ಎದೆಗಾರನೂ ಆಗಿದ್ದನೆಂದು ಬರೆಯುಲಿಕ್ಕೆ ಏನೂ ಅಡ್ಡಿಯಿಲ್ಲ. ಅವನ ರಾಜ್ಯವು ಪೂರ್ವ ಸಮುದ್ರದಿಂದ ಪಡು ವಣಗಡಲ ವರೆಗೂ ವಿಂಧ್ಯಾದ್ರಿಯಿಂದ ತುಂಗಭದ್ರೆಯವರೆಗೂ ಹಬ್ಬಿತ್ತು. ವಿಂಧ್ಯಾದ್ರಿಯ ಉತ್ತರದಲ್ಲಿಯೂ ತುಂಗಭದ್ರೆಯ ದಕ್ಷಿಣದಲ್ಲಿಯೂ ಆಳುತ್ತಿದ್ದ ಅರಸರು ಅವನ ಸ್ನೇಹವನ್ನು ಹಾರೈಸುತ್ತಿದ್ದರು. ಗುಜ ರಾಥ ಲಾಟ ಪ್ರಾಂತಗಳ ಅರಸುತನವನ್ನು ಅವನು ತನ್ನ ತಮ್ಮನಾದ ಇಂದ್ರರಾಜನಿಗೆ ಕೊಟ್ಟಿದ್ದನು. ಇದಕ್ಕೂ ಮೊದಲು ಈ ಗುಜರಾಥ ಲಾಟ ಪ್ರಾಂತಗಳನ್ನು ೧ ನೆಯ ಕೃಷ್ಣನ ಜತೆಗಾರನಾದ ಕರ್ಕರಾಜನು ಗೆದ್ದು ಅಲ್ಲಿ ಆಳತೊಡಗಿದನೆಂದು ಹಿಂದೆ ೨ ನೆಯ ಅಧ್ಯಾಯದ ೩೧ ನೆಯ ಪುಟದಲ್ಲಿ ಬರೆದಿರುತ್ತೇವಷ್ಟೇ. ೯ ನೆಯ ಶತಮಾನದ

ಆರಂಭದಲ್ಲಿ ಅವನ ಮಗ ಅಥವಾ ಮೊಮ್ಮಗನು ಆಳುತ್ತಿರಬಹುದು. ಅವರು ತನ್ನ ಮನೆತನದ ವಿರೋಧಿಗಳಾದ್ದರಿಂದಲೋ ತನ್ನ ಸ್ವಾಮಿತ್ವ ವನ್ನು ಒಡಂಬಡದಿದ್ದುದರಿಂದಲೋ ಧ್ರುವ ೩ನೆಯ ಗೋವಿಂದರು ಅವರ ರಾಜ್ಯದ ಮೇಲೆ ದಾಳಿಮಾಡಿ, ಅವರ ಮೂಲೋತ್ಪಾಟನ ವನ್ನು ಮಾಡಿದರೆಂದು ಹೇಳಬಹುದು. ೩ನೆಯ ಗೋವಿಂದನಿಗೆ **ಪ್ರಭೂತವರ್ಷ, ಜಗತ್ತುಂಗ, ಕೀರ್ತಿನಾರಾಯಣ, ಶ್ರೀವಲ್ಲಭ** ಎಂಬ ಬಿರುದುಗಳಿದ್ದವು. ಜಿನಸೇನನೆಂಬೊಬ್ಬ ಜೈನ ಕವಿಯು ಶ್ರೀವಲ್ಲಭನು ದಕ್ಷಿಣಾಪಥದ ಸಾರ್ವಭೌಮನಾಗಿದ್ದನೆಂದು ಬರೆದಿರು ತ್ತಾನೆ (೭೮೩).

೩ನೆಯ ಗೋವಿಂದನು ತನ್ನ ತಮ್ಮನಾದ ಇಂದ್ರರಾಜನಿಗೆ ಲಾಟ ಪ್ರಾಂತದ ಒಡೆತನವನ್ನು ಕೊಟ್ಟನಷ್ಟೇ. ಈ ಇಂದ್ರರಾಜ ನಾಗಲಿ ಅವನ ಮಕ್ಕಳಾದ ಕರ್ಕರಾಜ ಗೋವಿಂದರಾಜರಾಗಲಿ ಸ್ವತಂತ್ರರಾಗಲಿಕ್ಕೆ ಹವಣಿಸಲಿಲ್ಲೆಂದು ತೋರುತ್ತದೆ. ಏಕೆಂದರೆ ಬಡೋದೆ ತೋರ್ಖೇಡೆ ಕಾವಿ ಈ ೩ ಊರುಗಳ ಶಾಸನಗಳಲ್ಲಿ ಇಂದ್ರ ರಾಜನ ಮಕ್ಕಳು ತಾವು ಸಾಮಂತಾಧಿಪತಿಗಳೆಂತಲೂ ಗೋವಿಂದನು ತಮ್ಮ ಸ್ವಾಮಿಯಂತಲೂ ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ಆದರೆ ಇಂದ್ರರಾಜನು ಮಾತ್ರ ತನ್ನ ಅಣ್ಣನಿಗೆ ಪೂರ್ಣವಾಗಿ ವಿಧೇಯನಾಗಿ ದ್ದಿಲ್ಲೆಂದು ಕಂಡುಬರುತ್ತದೆ. ಏಕೆಂದರೆ ಅವನು ಗೋವಿಂದನ ತೆಂಕಣ ಶತ್ರುಗಳಿಗೆ ಆಶ್ರಯಕೊಟ್ಟಿದ್ದನೆಂದು ಕೆಲ ಶಾಸನಗಳಲ್ಲಿ ಬರೆದಿದೆ*. **ಮೂನ**ರೆಂಬವರು ಅವನ ಸಾಹಾಯಕರಾಗಿದ್ದರಂತೆ. ಈ ಮೂನರು ಯಾರೆಂಬುದು ಇನ್ನೂ ಗೊತ್ತಾಗಿಲ್ಲ.

ಸಾವು ಯಾರನ್ನು ಬಿಟ್ಟುದಲ್ಲ. ಎಲ್ಲರೂ ಅದರ ತುತ್ತಾಗಲಿಕ್ಕೆ ಬೇಕು. ಮನುಷ್ಯನು ಎಷ್ಟು ಶೂರನಾಗಲಿ, ಎಷ್ಟು ಪರಾಕ್ರಮಶಾಲಿ ಯಾಗಲಿ, ಎಷ್ಟು ಬುದ್ಧಿವಂತನಾಗಲಿ, ಎಷ್ಟು ವಿದ್ಯಾವಂತನಾಗಲಿ, ಎಷ್ಟು ಪರಮೇಶ್ವರನ ಪರಮ ಭಕ್ತನಾಗಲಿ, ಎಷ್ಟು ಯಶಸ್ವಿಯಾಗಲಿ ಒಂದಿಲ್ಲ

---

* ಇಂಡಿಯನ್ ಆಂಟಿಕ್ವರಿ, ಸಂ. ೧೨, ಪು. ೧೬೩—೧೮೮.

ಒಂದು ದಿನ ಹರಣವನ್ನು ತೊರೆಯಲಿಕ್ಕೇ ಬೇಕು*. ತನ್ನ ಹೊಸ ರಾಜಧಾನಿಯನ್ನು ಸಿಂಗರಿಸುವಾಗ ಈ ಸೃಷ್ಟಿ ನೇಮಕ್ಕನುಸರಿಸಿ, ೩ ನೆಯ ಗೋವಿಂದನು ಮರಣಹೊಂದಿದನು (೮೧೫). ಇವನಿಗೆ ಎಷ್ಟು ಮಂದಿ ಗಂಡು ಹೆಣ್ಣುಮಕ್ಕಳಿದ್ದರೆಂಬುದು ಇನ್ನೂ ಗೊತ್ತಾಗಿಲ್ಲ. ಆದರೆ ಇವನಿಗೆ **ಶರ್ವ**ನೆಂಬೊಬ್ಬ ಜಾಣನೂ ಕಲಿಯೂ ಆದ ಗಂಡು ಮಗನಿದ್ದನೆಂಬುದಕ್ಕೆ ಸಂದೇಹವಿಲ್ಲ. ಇವನ ರಾಣಿಯ ಹೆಸರು **ಗಾಮುಂಡಬ್ಬೆ.** ಇವನೊಬ್ಬ ಮಗಳು ವಂಗ ಪ್ರಾಂತದ ಅರಸನ ಹೆಂಡತಿಯಾಗಿದ್ದಳು.

೩ ನೆಯ ಗೋವಿಂದನ ಕಾಲದ ಶಾಸನಗಳ ಸಾರಾಂಶವನ್ನು ಕೊಟ್ಟು ಅವನ ಚರಿತ್ರೆಯನ್ನು ಮುಗಿಸುವೆವು.

೧. ನಿಜಾಮ ಹೈದರಾಬಾದದಲ್ಲಿದ್ದ ಪೈಠಣದ ತಾಮ್ರಶಾಸನ. ೩ ನೆಯ ಗೋವಿಂದನ ಜಯಶಾಲಿಯಾದ ಪಾಳೆಯವು ಪ್ರತಿಷ್ಠಾನದಲ್ಲಿದ್ದಾಗ ಶಕ ಸಂವತ್ ೭೧೬ ನೆಯ ವೈಶಾಖ ಬಹುಳ ೩೦ (೪ ಮೇ ೭೯೪) ದಿವಸ ಖಗ್ರಾಸ ಸೂರ್ಯಗ್ರಹಣವಿದ್ದುದರಿಂದ ಅವನು ಪ್ರತಿಷ್ಠಾನ ಭುಕ್ತಿಗೆ ಸೇರಿದ ಸಾರಾಕಚ್ಛವೆಂಬ ಗ್ರಾಮವನ್ನು ಒಬ್ಬ ಬ್ರಾಹ್ಮಣನಿಗೆ ದಾನಕೊಟ್ಟನೆಂದು ಈ ಶಾಸನದಲ್ಲಿ ಬರೆದಿದೆ.

೨. ಮೈಸೂರ ಸಂಸ್ಥಾನ ಸಿವಮೊಗ್ಗಿ ಜಿಲ್ಲಾ ಕೂಡಲಗಿಯ ತಾಮ್ರಶಾಸನ. ೩ ನೆಯ ಗೋವಿಂದನು ಕಂಚಿಯ ದಂತಿಗನನ್ನು ಸೋಲಿಸಿ ಅವನಿಂದ ಬರತಕ್ಕ ಪೊಗದಿಯನ್ನು ತೆಗೆದುಕೊಂಡು ತಿರುಗಿ ಬರುವಾಗ ತುಂಗಾ ಭದ್ರಾ ಹೊಳೆಗಳು ಕೂಡುವ ಸ್ಥಳದಲ್ಲಿ (ಈಗ ಅಸವರಿ ಎಂಬಲ್ಲಿ) ಕಾಡುಹಂದಿಯ ಬೇಟೆಯನ್ನು ಆಡುತ್ತಿದ್ದಾಗ ಅಲ್ಲಿಯ ರಾಮೇಶ್ವರ ತೀರ್ಥದ ಗೊರವನಿಗೆ ಮೊದಲು ಬಾದಾಮಿ ಚಾಳುಕ್ಯ ಸಾರ್ವಭೌಮನಾದ ೨ ನೆಯ ಕೀರ್ತಿವರ್ಮನು ಹಾಕಿಕೊಟ್ಟ ಇನಾಮನ್ನು ತಿರುಗಿಕೊಟ್ಟನು, ಶಕ ಸಂವತ್ ೭೨೬ ನೆಯ ಸುಭಾನು ಸಂವತ್ಸರ ವೈಶಾಖ ಬಹುಳ ೫ ಗುರುವಾರ, ೪ ಎಪ್ರಿಲ ೮೦೪.

---

* ಮರಣಮ್ ಪ್ರಕೃತಿಃ ಶರೀರಿಣಾಮ್ । ವಿಕೃತಿರ್ಜೀವಿತಮುಚ್ಯತೇ ಬುಧೈಃ ॥
ರಘುವಂಶ.

೩. ನಾಸಿಕ ಜಿಲ್ಲೆ ವಾಣಿಯ ತಾಮ್ರಶಾಸನ. ಶಕ ಸಂವತ್ ೭೩೦ ನೆಯ ವ್ಯಯ ಸಂವತ್ಸರ ವೈಶಾಖ ಶುದ್ಧ ೧೫ ದಿವಸ (೨೫ ಎಪ್ರಿಲ ೮೦೭) ಚಂದ್ರಗ್ರಹಣ ನಿಮಿತ್ತವಾಗಿ ೩ ನೆಯ ಗೋವಿಂದನು ಮಯೂರಖಂಡಿಯಲ್ಲಿದ್ದಾಗ ಅಂಬಕ ಗ್ರಾಮವೆಂಬ ಹಳ್ಳಿಯನ್ನು ಒಬ್ಬ ಬ್ರಾಹ್ಮಣನಿಗೆ ದಾನಕೊಟ್ಟನು.

೪. ಗುಜರಾಥ ಪ್ರಾಂತದಲ್ಲಿದ್ದ ರಾಧನಪುರದ ತಾಮ್ರಶಾಸನ. ಶಕ ಸಂವತ್ ೭೩೦ ನೆಯ ಸರ್ವಜಿತ ಸಂವತ್ಸರ ಶ್ರಾವಣ ಬಹುಳ ೩೦ (೭ ಆಗಸ್ಟ ೮೦೭) ದಿವಸ ೩ ನೆಯ ಗೋವಿಂದನು ಮಯೂರಖಂಡಿಯಲ್ಲಿದ್ದಾಗ ಸೂರ್ಯಗ್ರಹಣ ನಿಮಿತ್ತವಾಗಿ ರಾಸಿಯನ ಬುಕ್ತಿಯಲ್ಲಿದ್ದ ರಟ್ಟಜ್ಜುಣ ಗ್ರಾಮವನ್ನು ಕೆಲ ಬ್ರಾಹ್ಮಣರಿಗೆ ದಾನಕೊಟ್ಟನು. ಅಹಮ್ಮದನಗರ ಜಿಲ್ಲೆ ಕರ್ಜತ ತಾಲ್ಲೂಕಿನಲ್ಲಿ ಈಗಿದ್ದ ರಾಸಿನ ಎಂಬ ಹಳ್ಳಿಯೇ ಈ ರಾಸಿಯನ ಬುಕ್ತಿಯ ಮುಖ್ಯ ಗ್ರಾಮವಾಗಿತ್ತೆಂದು ಡಾ॥ ಬುಹ್ಲರರು ಅಭಿಪ್ರಾಯಪಡುತ್ತಾರೆ. ಬಾದಾವಿ ಚಾಳುಕ್ಯ ವಿಜಯಾದಿತ್ಯನ ನೆರೂರ ಶಾಸನದಲ್ಲಿ ಕಂಡುಬರುವ ರಾಸೆನ ನಗರವು ಇದೇ ಆಗಿರಬಹುದು.

೫. ಬಡೋದೆಯ ತಾಮ್ರಶಾಸನ. ಗುಜರಾಥ ಪ್ರಾಂತದ ಮಹಾಸಾಮಂತಾಧಿಪತಿಯಾದ ಸುವರ್ಣವರ್ಷ ಕರ್ಕರಾಜನು ಸಿದ್ಧ ಸಾಮಿಯೆಂಬಲ್ಲಿದ್ದಾಗ ಅಂಕೊಟ್ಟಕ ೮೪ರಲ್ಲಿದ್ದ ವಡಪದ್ರಕವೆಂಬ ಗ್ರಾಮವನ್ನು ಒಬ್ಬ ಬ್ರಾಹ್ಮಣನಿಗೆ ದಾನಕೊಟ್ಟನು, ಶಕ ಸಂವತ್ ೭೩೪ ನೆಯ ವೈಶಾಖ ಶುದ್ಧ ೧೫ (೧೨ ಎಪ್ರಿಲ ೮೧೧ ಅಥವಾ ೩೦ ಎಪ್ರಿಲ ೮೧೨). ಬಡೋದೆಯಿಂದ ೫ ಮೈಲು ದೂರಿದ್ದ ಅಂಕೂಟವೇ ಈ ಅಂಕೊಟ್ಟಕ ೮೪ರ ಮುಖ್ಯ ಗ್ರಾಮವಾಗಿತ್ತೆಂದು ಡಾ॥ ಬುಹ್ಲರರು ಗೊತ್ತುಮಾಡಿದ್ದಾರೆ.

೬. ಖಾನದೇಶ ಜಿಲ್ಲೆಯಲ್ಲಿದ್ದ ತೋರ್ಖೇಡಿಯ ತಾಮ್ರಶಾಸನ. ಗುಜರಾಥ ಪ್ರಾಂತದ ಪ್ರಭೂತವರ್ಷ ಗೋವಿಂದರಾಜನ ಮಹಾ ಸಾಮಂತನೂ ಶಲುಕಿಶ ಮನೆತನದವನೂ ಆದ ಬುದ್ಧವರಸನು ಸೀಹರಖೀ

೧೨ಕ್ಕೆ ಸೇರಿದ ಗೋವಟ್ಟನ ಎಂಬ ಹಳ್ಳಿಯನ್ನು ಕೆಲ ಬ್ರಾಹ್ಮಣರಿಗೆ ದಾನಕೊಟ್ಟನು, ಶಕ ಸಂವತ್ ೭೩೫ ನೆಯ ನಂದನ ಸಂವತ್ಸರ ವಿಜಯ ಸಪ್ತಮಿ (ಪುಷ್ಯ ಶುದ್ಧ ೭), ೧೪ ದಿಶಂಬರ ೮೧೨. ಬಡೋದೆಯ ಸೆರೆ ಯಲ್ಲಿದ್ದ ಸೇರ್ಬಿಯೇ ಈ ಸೀಹರಖೀ ೧೨ರ ಮುಖ್ಯ ಗ್ರಾಮವಾಗಿರ ಬಹುದು.

೭. ಮೈಸೂರ ಸಂಸ್ಥಾನ ಕಡಬದ ತಾಮ್ರ ಶಾಸನ. ಬಲವರ್ಮ ನೆಂಬೊಬ್ಬ ಚಾಳುಕ್ಯ ಅರಸನಿಗೆ ಯಶೋವರ್ಮನೆಂಬ ಮಗನಿದ್ದನು. ಅವನು ಗಂಗಮಂಡಲದ ಅಧಿಪತಿಯಾದ ಚಾಕಿರಾಜನೆಂಬವನ ತಂಗಿ ಯನ್ನು ಮದುವೆಮಾಡಿಕೊಂಡು ವಿಮಲಾದಿತ್ಯನೆಂಬೊಬ್ಬ ಮಗನನ್ನು ಹಡೆದನು. ಈ ವಿಮಲಾದಿತ್ಯನು ದೊಡ್ಡವನಾಗಿ ಕುನುಂಗಿ ದೇಶವನ್ನು ಆಳುತ್ತಿದ್ದಾಗ ಅವನಿಗೆ ಶನೇಶ್ವರನು ಕಾಡತೊಡಗಿದನು. ವಲ್ಲಭೇಂದ್ರನು (೩ ನೆಯ ಗೋವಿಂದ?) ಮಯೂರಖಂಡಿಯಲ್ಲಿ ತನ್ನ ವಿಜಯಿಾ ಪಾಳೆಯವನ್ನು ಹಾಕಿಕೊಂಡಿದ್ದಾಗ ಚಾಕಿರಾಜನ ಬಿನ್ನಹವನ್ನು ಮನ್ನಿಸಿ ವಿಮಲಾದಿತ್ಯನ ಶನೇಶ್ವರ ಕಾಟವನ್ನು ಹೋಗಲಾಡಿಸುವದ ಕ್ಕೋಸ್ಕರ ಮನ್ಯಪುರದ ಜೈನಗುಡಿಗೆ ಇಡಿಗೂರ ವಿಷಯದಲ್ಲಿದ್ದ ಜಲ ಮಂಗಲವೆಂಬ ಹಳ್ಳಿಯನ್ನು ಇನಾಮು ಹಾಕಿಕೊಟ್ಟನು, ಶಕ ಸಂವತ್ ೭೩೫ ನೆಯ ಜ್ಯೇಷ್ಠ ಶುದ್ಧ ೧೦ ಸೋಮವಾರ, ೧೩ ಮೇ ೮೧೩ (?).



ಭೋಗನಂದೀಶ್ವರನ ಗುಡಿಯ ಬಡಗಣ ನೋಟ

ಬೆಂಗಳೂರಿನ ಬಡಗಲಿಗೆ ನಂದಿದುರ್ಗ ನಂದಿಗ್ರಾಮಗಳಿರುತ್ತ ವಷ್ಟೇ. ೩ನೆಯ ಗೋವಿಂದನ ಕಾಲದಲ್ಲಿ ಬಾಣಮನೆತನದ ಬಾಣ ವಿದ್ಯಾಧರನೆಂಬವನು ಈ ನಂದಿ ಪ್ರಾಂತವನ್ನಾಳುತ್ತಿದ್ದನು. ಇವನ ಹೆಂಡತಿಯಾದ ರತ್ನಾವಳಿಯೆಂಬವಳು ೮೧೦ರಲ್ಲಿ ಭೋಗನಂದೀಶ್ವರನ ಒಂದು ಸುಂದರವಾದ ಗುಡಿಯನ್ನು ಕಟ್ಟಿಸಿದಳಂತೆ*.

## ೬. ಶರ್ವಮಹಾರಾಜ ಅಥವಾ ನೃಪತುಂಗ

(೮೧೫–೮೭೮)

೩ನೆಯ ಗೋವಿಂದನು ಸತ್ತ ತರುವಾಯ ಅವನ ಮಗನಾದ ಶರ್ವಮಹಾರಾಜನು ಮಳಖೇಡದ ಪಟ್ಟವೇರಿದನು (೮೧೪). ಇವನ ಅಂಕಿತನಾಮವು ಏನಿತ್ತೆಂಬುದು ಇನ್ನೂ ನಿಶ್ಚಯವಾಗಿ ಗೊತ್ತಾಗಿಲ್ಲ. ಇವನ ಕಾಲದ ಶಾಸನಗಳಲ್ಲಿ ಬಹುಶಃ ಇವನ ಬಿರುದುಗಳೇ ಕಂಡು ಬರುತ್ತವೆ. **ಅಮೋಘವರ್ಷ, ಅತಿಶಯಧವಲ, ಮಹಾರಾಜ ಷಂಡ, ನೃಪತುಂಗ**—ಇವೇ ಇವನ ವಿಶಿಷ್ಟ ಬಿರುದುಗಳಾಗಿದ್ದವು. ಕಹ್ನೇರಿಯ ಒಂದು ಶಾಸನದಲ್ಲಿ ಇವನನ್ನು **ಶ್ರೀ ಮಹಾರಾಜ ಶರ್ವ**ನೆಂದು ಕರೆದಿರುತ್ತಾರೆ. ಆದ್ದರಿಂದ ಇವನ ಇಟ್ಟ ಹೆಸರು **ಶರ್ವ**ವಾಗಿತ್ತೆಂದು ಡಾ॥ ಭಾಂಡಾರಕರರು ಬರೆಯುತ್ತಾರೆ. ಆದರೆ ಡಾ॥ ಫ್ಲೀಟರು ಈ ಅಭಿಪ್ರಾಯಕ್ಕೆ ಒಡಂಬಡುವುದಿಲ್ಲ. ಅವರು ಹೇಳುವುದೇನಂದರೆ, **ಶರ್ವ**ವು ಅಮೋಘವರ್ಷನ ಹೆಸರಾಗಿದ್ದರೆ **ಶ್ರೀ** ಶಬ್ದವು **ಶರ್ವ**ದ ಹಿಂದೆ ಇರುತ್ತಿತ್ತು. ಆದರೆ ವಿಷ್ಣು ಅಥವಾ ಶಿವ ಅರ್ಥದ ಶರ್ವ ಶಬ್ದವು ಅವನ ಬಿರುದಾದ್ದರಿಂದ ಶ್ರೀ ಶಬ್ದವನ್ನು ಮಹಾರಾಜ ಶಬ್ದದ ಹಿಂದೆ ಬರೆದಿರುತ್ತಾರೆ. ಆದಕಾರಣ ಶರ್ವ ಶಬ್ದವು ಅವನ ಅಂಕಿತನಾಮವಾಗಲಾರದು. ಡಾ॥ ಫ್ಲೀಟರು ಕೊಟ್ಟ ಈ ಅಭಿಪ್ರಾಯದ ಊಹಾಪೋಹವು ಪೂರ್ಣವಾಗಿ ಆಗುವ ವರೆಗೆ **ಶರ್ವ** ಎಂಬುದೇ ನೃಪತುಂಗನ ಇಟ್ಟ ಹೆಸರಾಗಿತ್ತೆಂದು ಎಣಿಸುವಾ.

---

* ಪ್ರಬುದ್ಧ ಕರ್ನಾಟಕ, ಸಂ. ೯, ಸಂ. ೧, ಪು. ೨೫.

ರಾಷ್ಟ್ರಕೂಟರು ನಮ್ಮ ತಾಯ್ನಾಡಿನ ಸಾರ್ವಭೌಮರಾಗಿ ಸುಮಾರು ೫೫ ವರುಷಗಳಾದರೂ ಅವರ ರಾಜ್ಯಭಾರವು ಈ ನಾಡಿನಲ್ಲಿ ನೆಲೆಗೊಂಡಿದ್ದಿಲ್ಲೆಂದು ಕಂಡುಬರುತ್ತದೆ. ಈ ಮನೆತನದ ಆಳಿಕೆಯು ಆರಂಭವಾದಂದಿನಿಂದ ಪಟ್ಟದ ಸಲುವಾಗಿ ತಪ್ಪದೆ ಬಡಿದಾಟವಾಗುತ್ತಿತ್ತೆಂದು ಬರೆದರೆ ಅತಿಶಯೋಕ್ತಿಯಾಗಲಾರದು. ೧ನೆಯ ಕೃಷ್ಣನು ದಂತಿದುರ್ಗನೊಡನೆ ಕಾದಿ ಅವನು ಸತ್ತಬಳಿಕ ಅವನ ಪಟ್ಟವನ್ನೇರಿದನು. ಅವನ ಕಿರಿಮಗನಾದ ಧ್ರುವನು ತನ್ನ ಅಣ್ಣನಾದ ಗೋವಿಂದನನ್ನು ಪಟ್ಟದಿಂದ ತಳ್ಳಿ ಸಾರ್ವಭೌಮನಾದನು. ತನ್ನ ಪಟ್ಟಕ್ಕೆ ಅಡ್ಡಬಂದ ೧೨ ಮಂದಿ ಅರಸರನ್ನು ಮುರಿದು, ಉತ್ತರ ಪೂರ್ವ ದಕ್ಷಿಣ ದಿಕ್ಕುಗಳಲ್ಲಿ ದಿಗ್ವಿಜಯವನ್ನು ಮಾಡಿ, ೩ನೆಯ ಗೋಪಿಂದನು ತನ್ನ ಮನೆತನದ ಪಿರಿಯರಸುತನವನ್ನು ಕಾಯ್ದುಕೊಂಡನು. ಅದರಂತೆಯೇ ಅವನ ಮಗನಾದ ಶರ್ವಮಹಾರಾಜನು ತನ್ನ ಪ್ರತಿಸ್ಪರ್ಧಿಗಳಾದ ಗಂಗರಸ ಸಿವಮಾರನನ್ನೂ ಬಂಡುಗಾರರಾದ ರಾಷ್ಟ್ರಕೂಟರನ್ನೂ ಗೆದ್ದು, ತನ್ನ ಪಟ್ಟವನ್ನು ಉಳಿಸಿಕೊಳ್ಳಬೇಕಾಯಿತು.

ರಾಷ್ಟ್ರಕೂಟರು ಅಥವಾ ನಾಡುಗವುಡರು ಒಟ್ಟುಗೂಡಿ, ದಂತಿದುರ್ಗನನ್ನು ತಮ್ಮ ಮುಖ್ಯಸ್ಥನಾಗಿ ಮಾಡಿಕೊಂಡು, ಬಾದಾಮಿ ಚಾಳುಕ್ಯರ ಸಾರ್ವಭೌಮತ್ವವನ್ನು ಸೆಳೆದುಕೊಂಡರೆಂದು ಹಿಂದೆ ಬರೆದಿರುತ್ತೇವಷ್ಟೆ*. ೩ನೆಯ ಗೋವಿಂದನು ಸತ್ತ ಬಳಿಕ ಹಲವು ಸಾಮಂತರಾದ ರಾಷ್ಟ್ರಕೂಟರು ಒಟ್ಟುಗೂಡಿ, ನೃಪತುಂಗನ ರಾಜ್ಯವನ್ನು ಕಿತ್ತುಕೊಳ್ಳಲಿಕ್ಕೆ ಎತ್ತುಗಡೆ ಮಾಡಿದರೆಂದು ಡಾ|| ಫ್ಲೀಟರು ಬರೆಯುತ್ತಾರೆ†. ಈ ಸಂಗತಿಯು ನಾವು ಹಿಂದೆ ಮಾಡಿದ ಹೊಸ ಅನುಮಾನವನ್ನು ಪುಷ್ಟೀಕರಿಸುತ್ತದೆಂದು ಧಾರಾಳವಾಗಿ ಹೇಳಬಹುದು. ದಂತಿದುರ್ಗನ ವಿರುದ್ಧವಾಗಿ ಕೃಷ್ಣನನ್ನು ಕೂಡಿ ಮುಂದೆ ಅವನೊಡನೆ ಜಗಳಾಡಿ ಗುಜರಾಥ ಲಾಟ ಪ್ರಾಂತದಲ್ಲಿ ತನ್ನದೊಂದು ಅರಸು ಮನೆತನವನ್ನು

* ಹಿಂದೆ ಅಧ್ಯಾಯ ೧, ಪು. ೧೭–೧೯.

† ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೪೦೨–೪೦೯.

ರಾಷ್ಟ್ರಕೂಟ ಕರ್ಕರಾಜನು ಸ್ಥಾಪಿಸಿದನೆಂದು ಹಿಂದೆ ಬರೆದಿರುತ್ತೇವಷ್ಟೇ. ಅವನ ಮಗನಾದ ಗೋವಿಂದನಿಂದಲೇ ೩ನೆಯ ಗೋವಿಂದನು ರಾಜ್ಯವನ್ನು ಕಿತ್ತಿಕೊಂಡುದರಿಂದ ಅವನು ಹೊಟ್ಟೆಯುರಿದ ಹಲವು ರಾಷ್ಟ್ರಕೂಟರನ್ನು ಒಟ್ಟುಗೂಡಿಕೊಂಡು ದೊಡ್ಡ ದಂಡಿನೊಡನೆ ಮಳಖೇಡದ ರಾಜ್ಯವನ್ನೊಳನುಗ್ಗಿರಬಹುದು*.

೩ನೆಯ ಗೋವಿಂದನು ಸತ್ತ ಕೂಡಲೆ ವೆಂಗಿಯ ಚಾಳುಕ್ಯರು ಯುದ್ಧಸನ್ನಾಹವನ್ನು ಮಾಡತೊಡಗಿದ್ದಾರೆಂತಲೂ, ತಳಕಾಡಿನ ಸಿವಮಾರನು ಸ್ವತಂತ್ರನಾಗಲಿಕ್ಕೆ ಹವಣಿಸುತ್ತಾನೆಂತಲೂ, ಉತ್ತರದ ರಾಷ್ಟ್ರಕೂಟರು ತನ್ನ ರಾಜ್ಯವನ್ನೊಳನುಗ್ಗಿ ಕೆಲ ಪ್ರದೇಶವನ್ನಾಕ್ರಮಿಸಿರುತ್ತಾರೆಂತಲೂ ಸುದ್ದಿ ಬಂತು. ಶರ್ವಮಹಾರಾಜನು ಅಳ್ಳೆದೆಯವನಾಗಿದ್ದಿಲ್ಲ. ಅವನು ಹಗೆಗಳ ಈ ಹೋರಾಟಕ್ಕೆ ಹೆದರದೆ, ತನ್ನಿಬ್ಬರು ನಂಬಿಗೆಯ ದಳವಾಯಿಗಳನ್ನು ಚಾಳುಕ್ಯ ಗಂಗರ ದಾಳಿಯನ್ನು ತಡೆಯಲಿಕ್ಕೆ ಕಳುಹಿ, ತಾನೇ ದೊಡ್ಡ ದಂಡಿನೊಡನೆ ರಾಷ್ಟ್ರಕೂಟರನ್ನು ಎದುರಿಸಲಿಕ್ಕೆ ಹೊರಟನು. ಈ ಯುದ್ಧದಲ್ಲಿ ಅವನ ಕಕ್ಕನ ಮಗನಾದ ಗುಜರಾಥದ **ಸುವರ್ಣವರ್ಷ ಕರ್ಕರಾಜನು** ಅವನಿಗೆ ಮನಮುಟ್ಟಿ ನೆರವಾದನು. ಅವನೇ ಬಂಡುಗಾರರಾದ ರಾಷ್ಟ್ರಕೂಟರನ್ನು ಸೋಲಿಸಿ ದಿಕ್ಕಾಪಾಲಾಗಿ ಓಡಿಸಿ, ಶರ್ವಮಹಾರಾಜನನ್ನು ಮಳಖೇಡದ ಪಟ್ಟದ ಮೇಲೆ ಕೂಡ್ರಿಸಿದನೆಂದು ಗುಜರಾಥದ ಶಾಸನಗಳು ಸಾರುತ್ತವೆ. ಈ ಬರಹದಲ್ಲಿ ತುಸು ಅತಿಶಯೋಕ್ತಿಯು ಇದ್ದರೂ ಇರಬಹುದು. ಅದು ಹೇಗೇ ಇರಲಿ. ಶರ್ವಮಹಾರಾಜನು ಕರ್ಕರಾಜನ ನೆರವಿನಿಂದ ಬಂಡುಗಾರರಾದ ಬಡಗಣ ರಾಷ್ಟ್ರಕೂಟರನ್ನು ಸದೆಬಡಿದು, ಅವರ ಬಂಡನ್ನು ಅಡಗಿಸಿ, ತನ್ನ ಸಾಹಾಯಕನಾದ ಕರ್ಕರಾಜನೊಡನೆ ಜಯಭೇರಿಯನ್ನು ಹೊಡಿಸುತ್ತ ಮಳಖೇಡಕ್ಕೆ ಮರಳಿ ಬಂದನು (೮೧೩ ?).

ಅತ್ತ ಗಂಗವಾಡಿಯ ಮೇಲೆ ದಂಡೆತ್ತಿಹೋದ ದಳವಾಯಿಗೆ ಸಿವಮಾರನ ದಂಡು ಮೈಸೂರು ಸಂಸ್ಥಾನ ತುಮಕೂರು ಜಿಲ್ಲಾ **ಕಾಗಿಮೊಗೆಯೂರೆಂ**ಬಲ್ಲಿ ಗಂಟುಬಿತ್ತು. ಎರಡೂ ದಂಡುಗಳ ನಡುವೆ ಒಂದು

* ಹಿಂದಿನ ಅಧ್ಯಾಯ ೨, ಪು. ೨೮.

ದೊಡ್ಡ ನಿಕರದ ಕಾಳಗವಾಯಿತು. ಎರಡೂ ಪಕ್ಷದವರು ಜೀವದ ಹಂಗುದೊರೆದು ಹುರುಪಿನಿಂದ ಕಾದಿದರು. ಕೊನೆಗೆ ತನ್ನ ದಂಡು ಹಿಂಜರಿಯಲಾರಂಭಿಸಿದ್ದನ್ನು ನೋಡಿ, ಶೂರನಾದ ಸಿವಮಾರನು ತನ್ನ ಆನೆಯನ್ನು ಮುಂದಕ್ಕೆ ಹಾಕಿ ಜನರನ್ನು ಹುರಿದುಂಬಿಸತೊಡಗಿದನು. ಆ ಗದ್ದಲಲ್ಲಿ ಹೊಂಚುಹಾಕಿಕೊಂಡಿದ್ದ ಒಬ್ಬ ರಾಷ್ಟ್ರಕೂಟ ದಳವಾಯಿಯು ಅವನ ಮೇಲೆ ಏರಿಹೋಗಿ, ಅವನನ್ನು ಭರ್ಜಿಯಿಂದ ಇರಿದು ನೆಲಕ್ಕೆ ಉರುಳಿಸಿ ಕತ್ತಿಯಿಂದ ಅವನ ಕತ್ತನ್ನು ಕೊಯ್ದನು (೮೧೬?). ಸಿವ ಮಾರನು ಸತ್ತ ಸುದ್ದಿಯು ಹಬ್ಬಿದ ಕೂಡಲೆ ದಂಡಿನಲ್ಲೆಲ್ಲ ಹಾಹಾಕಾರ ಪೆದ್ದಿತು. ದಂಡಿನ ಮುಖ್ಯಸ್ಥನಾದ ಸಿವಮಾರನೇ ಮಡಿದ ಬಳಿಕ ದಂಡಾಳುಗಳನ್ನು ಹುರಿಗೊಳಿಸುವರಾರು? ಎಲ್ಲರು ತಮ್ಮ ಮನಬಂದಂತೆ ಕಾಲಿಗೆ ಬುದ್ಧಿಹೇಳಿದ್ದರಿಂದ, ಜಯಶಾಲಿಗಳಾದ ರಾಷ್ಟ್ರಕೂಟರು ಗಂಗರ ಪಾಳೆಯವನ್ನು ಯಥಾವಕಾಶವಾಗಿ ಸುಲಿದು, ತಮಗೆ ದೊರೆತ ಹೇರಳ ದ್ರವ್ಯವನ್ನೂ ಅಪರೂಪವಾದ ಒಡವೆಗಳನ್ನೂ ಹೇರಿಕೊಂಡು ಮಳಖೇಡಕ್ಕೆ ಹೋಗಿ ತಾವು ತಂದ ಸುಲಿಗೆಯನ್ನೆಲ್ಲ ಗೋವಿಂದನಿಗೆ ಒಪ್ಪಿಸಿದರು. ಸಿವಮಾರನ ತಮ್ಮನ ಮಗನಾದ ರಾಚ(ಜ)ಮಲ್ಲನು ಈ ದಳವಾಯಿಯೊಡನೆ ರಾಷ್ಟ್ರಕೂಟರ ರಾಜಧಾನಿಗೆ ಬಂದು, ಗೋವಿಂ ದನ ಸಾಮಂತನೆಂದು ಒಪ್ಪಿಕೊಂಡು, ಪ್ರತಿವರ್ಷ ಗೊತ್ತುಮಾಡಿದ ಪೊಗದಿಯನ್ನು ಕೊಡಲಿಕ್ಕೆ ಒಡಂಬಟ್ಟು ಒಪ್ಪಂದವನ್ನು ಮಾಡಿಕೊಂಡು, ತನ್ನ ನಾಡಿಗೆ ಮರಳಿ ಹೋದನು (೮೧೭).

ಶರ್ವಮಹಾರಾಜನು ಪಟ್ಟಾಭಿಷೇಕದ ಕಾಲಕ್ಕೆ **ಅಮೋಘ ವರ್ಷ**ನೆಂಬ ಬಿರುದನ್ನು ಧರಿಸಿರಬಹುದೆಂದು ತೋರುತ್ತದೆ. ಏಕೆಂದರೆ ಬಹುಶಃ ಎಲ್ಲ ಶಾಸನಗಳಲ್ಲಿಯೂ ಜೈನ ಗ್ರಂಥಗಳಲ್ಲಿಯೂ ಅವನನ್ನು ಅಮೋಘವರ್ಷನೆಂದು ಕರೆದಿರುತ್ತಾರೆ. ಮುಂದೆ ಅತಿಶಯಧವಲ, ದುರ್ಲಭ, ವೀರನಾರಾಯಣ, ಮಹಾರಾಜಷಂಡ, **ನೃಪತುಂಗ** ಎಂಬ ಬಿರುದುಗಳು ಏಕೆ ಎಂದು, ಹೇಗೆ ಬಂದವೆಂಬುದು ಗೊತ್ತಾಗುವುದಿಲ್ಲ. ಮುಂದೆ ೩–೪ ವರ್ಷ ಅವನು ತನ್ನ ರಾಜಧಾನಿಯಲ್ಲಿ ಹೊಸ ಕಟ್ಟಡ ಗಳನ್ನು ಕಟ್ಟಿಸುವುದರಲ್ಲಿ ಕಾಲಕಳೆದಿರಬಹುದೆಂದು ತೋರುತ್ತದೆ.

ಪಟ್ಟವೇರಿದ ಬಳಿಕ ಅಮೋಘವರ್ಷನು ವೆಂಗಿಯ ಚಾಳುಕ್ಯರ ಮೇಲೆ ದಂಡೆತ್ತಿಹೋದನು (೮೨೧?). ಅವನು ಗುಜರಾಥದ ದಂಡ ಯಾತ್ರೆಯನ್ನು ಕಯ್ಕೊಳ್ಳುವುದಕ್ಕಿಂತ ಮೊದಲು ತನ್ನೊಬ್ಬ ದಳವಾಯಿ ಯನ್ನು ವೆಂಗಿ ಚಾಳುಕ್ಯರ ಹಾವಳಿಯನ್ನು ಹತ್ತಿಬಡಿಯಲಿಕ್ಕೆ ಕಳು ಹಿದ್ದನೆಂದು ಮೇಲೆ ಬರೆದಿರುತ್ತೇವಷ್ಟೇ. ಆ ಜಾಣನಾದ ದಂಡನಾಯ ಕನು ಚಾಳುಕ್ಯರೊಡನೆ ಕಾಲುಕೆದರಿ ಜಗಳ ತೆಗೆಯದೆ, ಅವರು ಮಿಸು ಕಾಡದಂತೆ ಮಾಡಿ ಅವರ ಸರಕು ಕಟ್ಟಿಬಿಟ್ಟಿದ್ದನು. ಆದ್ದರಿಂದ ಚಾಳುಕ್ಯ ರನ್ನು ಮಣಿಸಲಿಕ್ಕೆ ಅಮೋಘವರ್ಷನಿಗೆ ಹೆಚ್ಚು ಶ್ರಮಪಡಬೇಕಾಗ ಲಿಲ್ಲ. **ವೆಂಗವಳ್ಳಿ** ಎಂಬಲ್ಲಿಯ ಕಾಳೆಗದಲ್ಲಿ ತನ್ನ ದಂಡನ್ನು ಪೂರ್ಣವಾಗಿ ಸೋಲಿಸಿ, ನೃಪತುಂಗನ ದಂಡು ತನ್ನ ರಾಜಧಾನಿಯ ಮೇಲೆ ಬರುತ್ತ ದೆಂಬ ಸುದ್ದಿಯು ಬಂದ ಕೂಡಲೆ, ವಿಜಯಾದಿತ್ಯನು ಹೆದರಿ, ಅವನ ಪಾಳೆಯಕ್ಕೆ ಹೋಗಿ, ತಾನು ಕೊಡತಕ್ಕ ಪೊಗದಿಯನ್ನು ಮುಂದಿಟ್ಟು, ಅವನು ಹೇಳಿದ ಶರ್ತುಗಳಿಗೆ ಒಡಂಬಟ್ಟು, ಅವನೊಡನೆ ಒಪ್ಪಂದ ಮಾಡಿ ಕೊಂಡನು (೮೨೪?).

ಕಿರೀಟಧಾರಿಯಾದ ತಲೆಗೆ ಶಾಂತತೆಯು ಸಿಕ್ಕುವುದಿಲ್ಲೆಂಬ ಪಾಶ್ಚಿ ಮಾತ್ಯರ ಗಾದೆಯ ಮಾತು ಅಕ್ಷರಶಃ ನಿಜವಾಗಿರುತ್ತದಷ್ಟೇ. ಅಮೋಘ ವರ್ಷನು ವೆಂಗಿ ಚಾಳುಕ್ಯರ ದ್ರೋಹವನ್ನು ದಂಡಿಸಿ ರಾಜಧಾನಿಗೆ ತಿರುಗಿ ಬರುವಷ್ಟರಲ್ಲಿ ತನ್ನ ಕಕ್ಕನ ಮಗನಾದ ಗೋವಿಂದರಾಜನು ಗುಜರಾಥ ದಲ್ಲಿ ಬಂಡಾಯವನ್ನೆಬ್ಬಿಸಿರುತ್ತಾನೆಂಬ ಸುದ್ದಿಯು ಬಂತು. ಆದ್ದರಿಂದ ಅವನು ಮಳಖೇಡಿನಲ್ಲಿ ಹೆಚ್ಚು ದಿವಸ ನಿಲ್ಲದೆ, ಲಗುಬಗೆಯಿಂದ ಗುಜ ರಾಥಕ್ಕೆ ದಂಡೆತ್ತಿ ಹೋಗಿ, ೨-೩ ಕಾಳೆಗಗಳಲ್ಲಿ ಗೋವಿಂದನ ದಂಡನ್ನು ಮುರಿಬಡಿದು, ಅವನನ್ನು ಗುಜರಾಥದಿಂದ ಓಡಿಸಿಬಿಟ್ಟು, ತನಗೆ ಆಪ ತ್ಕಾಲದಲ್ಲಿ ನೆರವಾದ ಕರ್ಕರಾಜನ ಮಗನಾದ ಧ್ರುವರಾಜನಿಗೆ ಗುಜ ರಾಥದ ಪಟ್ಟಗಟ್ಟಿ (೮೨೬?)* ತನ್ನ ರಾಜಧಾನಿಗೆ ಜಯಭೇರಿಯನ್ನು ಹೊಡಿಸುತ್ತ ತಿರುಗಿಬಂದನು.

---

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೪೦೯.

ಧಾರವಾಡ ಜಿಲ್ಲಾ ಸಿರೂರಿನ ಶಾಸನದಲ್ಲಿ ಅಂಗ, ವಂಗ, ಮಗಧ, ಮಾಳವೆ, ವೆಂಗಿ ಈ ಪ್ರಾಂತಗಳ ಅರಸರು ಅಮೋಘವರ್ಷನಿಗೆ ವಿಧೇಯರಾಗಿದ್ದರೆಂದು ಬರೆದಿದೆ. ಮಾಳವೆ ವೆಂಗಿ ನಾಡುಗಳ ಅರಸರು ಅವನ ಕಯ್ಕೆಳಗಿನವರಾಗಿದ್ದರೆಂಬ ಬಗ್ಗೆ ಸಂದೇಹವಿಲ್ಲ. ಆದರೆ ಅಂಗ, ವಂಗ, ಮಗಧ ಪ್ರಾಂತಗಳ ಅರಸರು ಅವನನ್ನು ಓಲೈಸುತ್ತಿದ್ದರೆಂಬುದು ಡಾ॥ ಫ್ಲೀಟರು ಬರೆಯುವಂತೆ ಅತಿಶಯೋಕ್ತಿಯೇ ಆಗಿತ್ತೆಂದು ಧಾರಾಳವಾಗಿ ಹೇಳಬಹುದು*. ಏಕೆಂದರೆ, ಇವನು ಆಯಾ ಪ್ರಾಂತಗಳಿಗೆ ದಂಡೆತ್ತಿ ಹೋದ ಸಂಗತಿಯು ಯಾವ ಶಾಸನದಲ್ಲಿಯೂ ಕಂಡುಬರುವುದಿಲ್ಲ.

ರಾಷ್ಟ್ರಕೂಟ ಮನೆತನದ ಸಾರ್ವಭೌಮರೊಳಗೆ ಶರ್ವಮಹಾರಾಜನೇ ಬಹುಕಾಲ ರಾಜ್ಯವಾಳಿದನೆಂದು ಧಾರಾಳವಾಗಿ ಹೇಳಬಹುದು. ಗುಜರಾಥದ ಮೇಲಿನ ೨ನೆಯ ದಂಡಯಾತ್ರೆಯನ್ನು ಮುಗಿಸಿಕೊಂಡು ಬಂದ ಬಳಿಕ ಅವನು ಮತ್ತೆಲ್ಲಿಯೂ ದಂಡೆತ್ತಿಹೋಗಲಿಲ್ಲೆಂದು ಕಂಡು ಬರುತ್ತದೆ. ಇವನು ಸುಮಾರು ೬೪ ವರ್ಷ ರಾಜ್ಯಭಾರ ಮಾಡಿದನೆಂದು ಪ್ರಾಕ್ತನ ವಿಮರ್ಶವಿಚಕ್ಷಣರು ನಿರ್ಣಯಿಸಿದ್ದಾರೆ. ಇವನ ಆಳಿಕೆಯ ಮೊದಲನೆಯ ೨೫ ವರ್ಷಗಳು ರಾಷ್ಟ್ರಕೂಟ ಗಂಗ ಚಾಳುಕ್ಯರೊಡನೆ ನಡೆದ ಗುದ್ದಿಯಾಟದಲ್ಲಿ ಕಳೆದು ಹೋದವೆಂದು ಎಣಿಸಿದರೆ, ಮುಂದೆ ಉಳಿದ ೩೮ ವರ್ಷ ಇವನು ಏನು ಮಾಡಿದನೆಂಬ ಪ್ರಶ್ನವು ತಲೆದೋರುತ್ತದೆ†. ಶರ್ವಮಹಾರಾಜನು ತನ್ನ ಉಳಿದ ಆಯುಷ್ಯವನ್ನು ತನ್ನ ಹೊಸ ರಾಜಧಾನಿಯಾದ ಮಳಖೇಡವನ್ನು ಸಿಂಗರಿಸುವುದರಲ್ಲಿಯೂ

---

* ಮುಂಬಯಿ ಇಲಾಖೆಯ ಗ್ಯಾಜಿಟಿಯರ, ಸಂ. ೧, ಭಾ. ೨, ಪು. ೪೦೨.

† ಬಡೋದೆಯ ಶಾಸನದಲ್ಲಿ ಗುಜರಾಥದ ೨ನೆಯ ಕರ್ಕರಾಜನ ಮಗನಾದ ಧ್ರುವರಾಜನು ಒಬ್ಬ ವಲ್ಲಭ(ರಾಷ್ಟ್ರಕೂಟ)ನೊಡನೆ ಕಾದುವಾಗ ಸತ್ತನೆಂದು ಬರೆದಿದೆ. ಈ ಸಾವು ರಾಷ್ಟ್ರಕೂಟರ ೩ನೆಯ ದಾಳಿಯಲ್ಲಿ ಆಗಿರಬಹುದು. ರಾಷ್ಟ್ರಕೂಟರ ೧ನೆಯ ದಾಳಿಯು ೮೧೫ರಲ್ಲಿಯೂ, ೨ನೆಯ ದಾಳಿಯು ೮೨೬ರಲ್ಲಿಯೂ ಆದ್ದರಿಂದ ಈ ೩ನೆಯ ದಾಳಿಯು ೮೪೦ರ ಸುಮಾರಕ್ಕೆ ಆಯಿತೆಂತಲೂ ಅದನ್ನು ಹಿಮ್ಮೆಟ್ಟಿಸಲಿಕ್ಕೆ ಅಮೋಘವರ್ಷನು ಗುಜರಾಥಕ್ಕೆ ದಂಡೆತ್ತಿಹೋಗಿದ್ದನೆಂತಲೂ ಬರೆದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

ಗ್ರಂಥಾವಲೋಕನ ಗ್ರಂಥ ರಚನೆಯಲ್ಲಿಯೂ ಕಳೆದನೆಂದು ಬರೆದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

೩ನೆಯ ಗೋವಿಂದನು ಮಳಖೇಡದ ಕೋಟೆಯ ಗೋಡೆಯನ್ನು ಕಟ್ಟಿಸಲಿಕ್ಕೆ ವೆಂಗಿಯ ಚಾಳುಕ್ಯ ವಿಜಯಾದಿತ್ಯನನ್ನು ಒತ್ತಾಯದಿಂದ ಒಡಂಬಡಿಸಿದನೆಂದು ಹಿಂದೆ ಬರೆದಿರುತ್ತೇವಷ್ಟೇ. ಆ ಕೆಲಸವನ್ನು ಅವನು ಎಷ್ಟುಮಟ್ಟಿಗೆ ಮಾಡಿದನೆಂಬುದನ್ನು ತಿಳಿದುಕೊಳ್ಳಲಿಕ್ಕೆ ನಮಗೆ ಆಧಾರ ವೇನೂ ಇಲ್ಲದಿದ್ದರೂ ಗೋವಿಂದನು ಇರುವಾಗಲೇ ಆ ಕೆಲಸವು ಮುಗಿ ದಿತ್ತೆಂತಲೂ ಅರಮನೆ, ಕಚೇರಿ, ಗುಡಿ ಮುಂತಾದ ಕಟ್ಟಡಗಳ ಕೆಲಸವು ನಡೆದಿತ್ತೆಂತಲೂ ಊಹಿಸಬಹುದು. ಕಟ್ಟುತ್ತಿದ್ದ ಈ ಕಟ್ಟಡಗಳನ್ನು ಮುಗಿಸಿ, ಶರ್ವಮಹಾರಾಜನು ಸಭಾಮಂಟಪಗಳನ್ನೂ ರಾಯಬೀದಿ ಗಳನ್ನೂ ಹೂದೋಟಗಳನ್ನೂ ಪೇಟೆಸಾಲುಗಳನ್ನೂ ಸರೋವರಗಳನ್ನೂ ಧರ್ಮಶಾಲೆಗಳನ್ನೂ ಅತಿಥಿಗೃಹಗಳನ್ನೂ ಅಗ್ರಹಾರಗಳನ್ನೂ ಮಠ ಗಳನ್ನೂ ಕಟ್ಟಿಸಿ, ತನ್ನ ಹೊಸ ರಾಜಧಾನಿಯನ್ನು ಸುಶೋಭಿತವಾಗಿ ಮಾಡಿದನು. ಈಗ ಹಾಳು ಹಳ್ಳಿಯಾದ ಮಳಖೇಡವನ್ನು ಅತಿಸುಂದರ ವಾದ ರಾಜಧಾನಿಯಾಗಿ ಮಾಡಿದವನು ಅಮೋಘವರ್ಷನೇ ಆಗಿದ್ದ ನೆಂಬುದಕ್ಕೆ ಸಂದೇಹವಿಲ್ಲ. ನೃಪತುಂಗದೇವನು ದೇವತೆಗಳ ಸೊಕ್ಕು ಮುರಿಯುವುದಕ್ಕೋಸ್ಕರ ತನ್ನ ರಾಜಧಾನಿಯಾದ **ಮಾನ್ಯಖೇಟ** ಪುರವನ್ನು ಅಮರಾವತಿನಗರಕ್ಕಿಂತ ಹೆಚ್ಚು ಮನೋಹರವಾದ ಪಟ್ಟಣ ವಾಗಿ ಮಾಡಿದನೆಂದು ಕರ್ಹಾಡದ ಒಂದು ತಾಮ್ರಶಾಸನವು ವರ್ಣಿ ಸುತ್ತದೆ*.

ಅಮೋಘವರ್ಷ ಅಥವಾ ನೃಪತುಂಗನು ಓದಾಳಿಯಾದ್ದರಿಂದ ಗ್ರಂಥಾವಲೋಕನದಲ್ಲಿ ಕಾಲಕಳೆಯುತ್ತಿದ್ದನೆಂದು ಮೇಲೆ ಬರೆದಿರು ತ್ತೇವಷ್ಟೇ. ಅವನು ಜೈನಮತ ಗ್ರಂಥಗಳನ್ನು ಓದಿ, ಜೈನರ ಸ್ಯಾದ್ವಾದ

---

* ತತ್ಸೂನುರಾನತನೃಪೋ ನೃಪತುಂಗದೇವಃ।
ಸೋಭೂತ್ಸ್ವಸೈನ್ಯಭರಭಂಗುರಿತಾಹಿರಾಜಃ ॥
ಯೋ ಮಾನ್ಯಖೇಟಮಮರೇಂದ್ರಪುರೋಪಹಾಸಿ।
ಗೀರ್ವಾಣಗರ್ವಮಿವ ಖರ್ವಯಿತುಂ ವ್ಯಧತ್ತ ॥

ತತ್ವದಲ್ಲಿ ಪೂರ್ಣ ಸಂಜಿಗೆಯುಳ್ಳವನಾಗಿದ್ದನೆಂದು ಸಾರಸಂಗ್ರಹವೆಂಬ ಜೈನ ಗಣಿತ ಗ್ರಂಥದ ಉಪೋದ್ಘಾತದಲ್ಲಿ ಬರೆದಿದೆ. ಗುಣಭದ್ರನೆಂಬ ದಿಗಂಬರ ಜೈನ ಪಂಡಿತನು ಅಮೋಘವರ್ಷ ನೃಪತಿಯು, ತನ್ನ ಗುರುವೂ ಆದಿಪುರಾಣದ ಕರ್ತನೂ ಆದ **ಜಿನಸೇನ**ನೆಂಬ ಜೈನ ಯತಿಯ ಪರಮ ಶಿಷ್ಯನಾಗಿದ್ದನೆಂದು ತನ್ನ ಉತ್ತರಪುರಾಣದಲ್ಲಿ ಬರೆಯುತ್ತಾನೆ*. **ಪ್ರಶ್ನೋತ್ತರ-ರತ್ನಮಾಲಿಕಾ** ಎಂಬ ಪುಸ್ತಕದ ದಿಗಂಬರ ಜೈನರ ಒಂದು ಪ್ರತಿಯಲ್ಲಿ—"ಮನುಷ್ಯನ ಬುದ್ಧಿಗೆ ಒಳ್ಳೆಯ ಅಲಂಕಾರ ರೂಪ ವಾದ ರತ್ನಮಾಲಿಕೆಯೆಂಬ ಗ್ರಂಥವನ್ನು ವಿವೇಕದಿಂದ ರಾಜ್ಯವನ್ನು ತೊರೆದ ಅಮೋಘವರ್ಷ ರಾಜನು ರಚಿಸಿದ"ನೆಂದು ಬರೆದಿದೆ†. ಈ ಮೂರು ಮಾತುಗಳನ್ನು ಆಧಾರವಾಗಿಟ್ಟುಕೊಂಡು ಡಾ|| ಭಾಂಡಾರ ಕರರು—"ಅಮೋಘವರ್ಷನು ದಿಗಂಬರ ಜೈನಮತವನ್ನು ಸ್ವೀಕರಿಸಿ, ದಿಗಂಬರ ಜೈನರಿಗೆ ಮಹದಾಶ್ರಯವನ್ನು ಕೊಟ್ಟನೆಂದು ಊಹಿಸು ತ್ತಾರೆ‡. ಆದರೆ ಈ ಅನುಮಾನಕ್ಕೆ ಸಾಕಷ್ಟು ಸಬಲ ಕಾರಣಗಳಿಲ್ಲೆಂದು ನನ್ನ ಅಲ್ಪಮತಿಗೆ ತೋರುತ್ತದೆ. ಆದ್ದರಿಂದ ನನಗೆ ಬಂದ ಸಂಶಯದ ಕಾರಣಗಳನ್ನು ಕೆಳಗೆ ಕೊಡುತ್ತೇನೆ:—

(ಅ) ಯಾವನಾದರೊಬ್ಬ ದೊಡ್ಡ ಗೃಹಸ್ಥನು ಪರಮತದ ಆಚಾರ್ಯರನ್ನು ಸತ್ಕರಿಸಿ ಬಹುಮಾನಮಾಡಿ, ಅವರ ಮತ ತತ್ವಗಳನ್ನು ತಿಳಿದುಕೊಳ್ಳಲಿಕ್ಕೆ ಪ್ರಯತ್ನಮಾಡಿದ ಕೂಡಲೆ, ಅವನು ತಮ್ಮ ಮತದಲ್ಲಿ ಭಕ್ತಿ ವಿಶ್ವಾಸವುಳ್ಳವನಾಗಿರುತ್ತಾನೆಂದು ತಿಳಿದುಕೊಳ್ಳುವುದು ಸ್ವಾಭಾ ವಿಕವಾಗಿರುತ್ತದೆ. ಅಕ್ಬರಬಾದಶಹನು ಕರೆಯಿಸಿದ ಪೋರ್ತುಗಲ್ಲಿನ

---

* ಯಸ್ಯ ಪ್ರಾಂಶುನಖಾಂಶುಜಾಲವಿಸರದ್ಧಾರಾಂತರಾವಿರ್ಭವ|
ತ್ಪಾದಾಂಭೋಜ ರಜಃ ಪಿಶಂಗ ಮುಕುಟ ಪ್ರತ್ಯಗ್ರ ರತ್ನದ್ಯುತಿಃ ||
ಸಂಸ್ಮರ್ತಾಸ್ವಮಮೋಘವರ್ಷ ನೃಪತಿಃ ಪೂತೋಹಮದ್ಯೇತ್ಯಲಂ|
ಸ ಶ್ರೀಮಾಞ್ಜಿನಸೇನ ಪೂಜ್ಯ ಭಗವತ್ಪಾದೋ ಜಗನ್ಮಂಗಲಂ ||

† ವಿವೇಕಾತ್ತ್ಯಕ್ತರಾಜ್ಯೇನ ರಾಜ್ಞೇಯಂ ರತ್ನಮಾಲಿಕಾ|
ರಚಿತಾಮೋಘವರ್ಷೇಣ ಸುಧಿಯಾಂ ಸದಲಂಕೃತಿಃ ||

‡ ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೨೦೧.

ಪಾದ್ರಿಗಳು ಅವನಿಗೆ ಕ್ರಿಸ್ತಮತದಲ್ಲಿ ಪೂರ್ಣ ಶ್ರದ್ಧೆ ಇರುತ್ತದೆಂದು ಮೊಟ್ಟಮೊದಲು ಎಣಿಸಲಿಲ್ಲವೇ?

(ಇ) ಒಬ್ಬ ಘನವಿದ್ವಾಂಸನಾದ ಬ್ರಾಹ್ಮಣ ಯತಿಯನ್ನು ಬಹಳವಾಗಿ ಮನ್ನಿಸಿದ ಮುಸಲ್ಮಾನನಾಗಲಿ, ಒಬ್ಬ ವೈರಾಗ್ಯಚಕ್ರವರ್ತಿಯಾದ ಫಕೀರನನ್ನು ಅತಿಶಯವಾಗಿ ಸತ್ಕರಿಸಿದ ಬ್ರಾಹ್ಮಣನಾಗಲಿ ಆ ಯತಿಯ ಅಥವಾ ಆ ಫಕೀರನ ಶಿಷ್ಯನೆಂದು ಹೇಳುವುದು ತಪ್ಪಾಗದೆ ಇರಲಾರದು.

(ಉ) ಇಹಪರ ಸುಖವನ್ನು ಕೊಡುವಂತಹ ವಿದ್ಯೆಯನ್ನು ಕಲಿಸುವವನೇ ನಿಜವಾದ ಗುರು, ಮತ್ತು ತನ್ನ ಗುರುವನ್ನು ಸಾಕ್ಷಾತ್ಪರಮೇಶ್ವರನೆಂದು ಭಾವಿಸಿ, ಅವನಿಗೆ ತನ್ನ ತನುಮನಧನವನ್ನು ಅಂತಃಕರಣಪೂರ್ವಕವಾಗಿ ಅರ್ಪಿಸುವವನೇ ನಿಜವಾದ ಶಿಷ್ಯನು. ಈ ತರದ ಗುರುಶಿಷ್ಯ ಸಂಬಂಧವು ಜಿನಸೇನ ನೃಪತುಂಗರ ನಡುವೆ ಇತ್ತೆಂದು ಜೈನಗ್ರಂಥಗಳಲ್ಲಾಗಲಿ ಶಾಸನಗಳಲ್ಲಾಗಲಿ ಒಂದಾದರೂ ಆಧಾರವು ಇನ್ನೂ ದೊರೆತಿಲ್ಲ.

(ಎ) ಪ್ರಶ್ನೋತ್ತರ ರತ್ನಮಾಲಿಕೆಯನ್ನು ಅಮೋಘವರ್ಷನು ಬರೆದನೆಂದು ದಿಗಂಬರ ಜೈನರು ಮಾತ್ರ ಬರೆಯುತ್ತಾರೆ. ಆದರೆ ಇದನ್ನು ಶಂಕರಗುರು ಎಂಬವನು ಬರೆದನೆಂದು ಬ್ರಾಹ್ಮಣರು ನಂಬುತ್ತಾರೆಂತಲೂ, ವಿಮಲನೆಂಬವನು ಬರೆದನೆಂದು ಶ್ವೇತಾಂಬರ ಜೈನರು ನಂಬುತ್ತಾರೆಂತಲೂ ಡಾ|| ಭಾಂಡಾರಕರರೇ ಬರೆಯುತ್ತಾರೆ. ತಮ್ಮ ಪ್ರತಿಷ್ಠೆಯನ್ನು ಜನರೊಳಗೆ ಬೆಳಿಸಿಕೊಳ್ಳಲಿಕ್ಕೆ ದಿಗಂಬರ ಜೈನರು ಈ ಗ್ರಂಥ ಕರ್ತೃತ್ವವನ್ನು ನೃಪತುಂಗನ ಮೇಲೆ ಆರೋಪಿಸಿರಬಾರದೇಕೆ?

(ಒ) ದಿಗಂಬರ ಜೈನರಿಗೆ ಬಹಳ ಉಂಬಳಿಗಳನ್ನು ಹಾಕಿಕೊಟ್ಟ ಸಂಗತಿಯಾಗಲಿ, ಜೈನಮತದಂತೆ ಅಮೋಘವರ್ಷನು ಮಾಡಿದ ವಿಶಿಷ್ಟಾಚರಣೆಯ ಉದಾಹರಣೆಯಾಗಲಿ ಅವನ ಕಾಲದ ಯಾವ ಶಾಸನದಲ್ಲಿಯೂ ಕಂಡುಬರುವುದಿಲ್ಲ.

ಈ ೫ ಕಾರಣಗಳ ಮೂಲಕವಾಗಿ ಅಮೋಘವರ್ಷನು ತನ್ನ ಮನೆತನದ ಸನಾತನ ಧರ್ಮವನ್ನು ಬಿಟ್ಟು, ಜೈನಮತವನ್ನು ಸ್ವೀಕರಿಸ

ಲಿಲ್ಲೆಂದು ನನ್ನ ಅಲ್ಪಮತಿಗೆ ತೋರುತ್ತದೆ. ಈ ಅನುಮಾನವು ಎಷ್ಟು ಮಟ್ಟಿಗೆ ಸಮಂಜಸವಾದ್ದೆಂಬುದನ್ನು ವಾಚಕಮಹಾಶಯರೇ ನಿರ್ಣಯಿಸಬಹುದು*.

ಶರ್ವಮಹಾರಾಜನು ಗ್ರಂಥಾವಲೋಕನ, ಗ್ರಂಥರಚನೆಯಲ್ಲಿ ಬಹುಕಾಲ ಕಳೆದನೆಂತಲೂ ಪ್ರಶ್ನೋತ್ತರ ರತ್ನಮಾಲಿಕೆಯನ್ನು ಯಾರು

---

* ಈ ಸಂಪುಟವನ್ನು ಮುದ್ರಿಸಲಿಕ್ಕೆ ಕೊಡುವಾಗ ಮ|| ಮಂಜೇಶ್ವರ ಗೋವಿಂದ ಪೈ ಎಂಬವರು ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆಯ ಸಂ. ೧೨, ಸ. ೪, ಪು. ೨೨೭–೨೭೦ರಲ್ಲಿ ಬರೆದ 'ನೃಪತುಂಗನ ಮತವಿಚಾರ' ಎಂಬ ಲೇಖವು ನನ್ನ ಕಯ್ಗೆ ಬಂತು. ಅದರಲ್ಲಿ ಅವರು ನೃಪತುಂಗನು ಜೈನನಲ್ಲ ಎಂಬುದಕ್ಕೆ ಕೆಳಗೆ ಬರೆದ ೯ ಕಾರಣಗಳನ್ನು ಕೊಡುತ್ತಾರೆ. ಅವಾವವೆಂದರೆ :—

(೧) ಜಿನಸೇನನಾಗಲಿ ಗುಣಭದ್ರನಾಗಲಿ ನೃಪತುಂಗನು ಜೈನಮತವನ್ನು ಅವಲಂಬಿಸಿದನೆಂದು ತಮ್ಮ ಯಾವ ಗ್ರಂಥದಲ್ಲಿಯಾದರೂ ಹೇಳಿರುವುದಿಲ್ಲ. ಗುಣಭದ್ರನ ಉತ್ತರಪುರಾಣದಲ್ಲಿಯ ಆ ಏಕಾಕಿಯಾದ ಶ್ಲೋಕದಿಂದಾದರೂ ಈ ಮಾತು ಹೊರಪಡುವುದಿಲ್ಲ; ಇಷ್ಟರಲ್ಲಿ, ನೃಪತುಂಗನು ಜಿನಸೇನನ ಶಿಷ್ಯನಾಗಿದ್ದನೆಂದಾದರೂ ಈ ಶ್ಲೋಕದ ಅರ್ಥವಾಗುವಂತೆ ತೋರುವುದಿಲ್ಲ.

(೨) ದಿಗಂಬರ ಜೈನರ ಸೇನಗಣದ ಪಟ್ಟಾವಳಿಯಲ್ಲಿ ಹೇಳಲ್ಪಟ್ಟಿರುವ ಪ್ರತಿ ಗುರುವನ್ನು ಕುರಿತು, ಆತನೆಸಗಿದ ವಿಶೇಷ ಕಾರ್ಯಗಳನ್ನು ಆತನ ಹೆಸರೊಂದಿಗೆ ಅದರಲ್ಲಿ ಉಲ್ಲೇಖಿಸಿದೆ. ಆದರೆ ಅದರಲ್ಲಿ ಜಿನಸೇನನನ್ನು ಕುರಿತು ಇಷ್ಟೇ ಇದೆ—

ಧವಲ ಮಹಾಧವಲ ಪುರಾಣಾದಿ ಸಕಲ ಗ್ರಂಥಕರ್ತಾರಃ ಶ್ರೀ ಜಿನಸೇನಾಚಾರ್ಯಾಣಾಮ್|| ಜೈ. ಸಿ. ಭಾ. ೧, ಪು. ೩೯.

(೩) ಜಿನಸೇನನಿಂದ ಈಚೆಯ ಜೈನಕೃತಿಗಳಲ್ಲಿ ಆತನನ್ನು ಹೊಗಳಿರುವ ಎಡೆಗಳಲ್ಲಿ ಕೂಡ ಆತನು ನೃಪತುಂಗನ ಗುರುವೆಂದೇನೂ ಹೇಳಿಲ್ಲ ಅಥವಾ ಆತನ ಹೆಸರೊಂದಿಗೆ ನೃಪತುಂಗನ ಹೆಸರನ್ನಾದರೂ ಹೇಳಿಲ್ಲ.

(೪) ಜಿನಸೇನನು ಕ್ರಿ. ಶ. ೮೪೮ರ ವರೆಗೆ ಇದ್ದಿರಲಾರನೆಂಬುದರಿಂದ, ನೃಪತುಂಗನು ಜಿನಸೇನನಿಂದ ಮತಾಂತರ ಹೊಂದಿದ್ದರೆ, ಅದರ ಆಚೆಯಲ್ಲದೆ ಈಚೆಯಾಗಲಾರದು; ಆದರೆ ನೃಪತುಂಗನ ಕಾಲದ ಕ್ರಿ. ಶ. ೮೬೬ ನೆಯ ಶಾಸನದಿಂದ ಆತನು ಅದುವರೆಗೆ ಜೈನನಾಗಿದ್ದಿಲ್ಲೆಂದು ಮಾತ್ರವಲ್ಲ, ವಿಷ್ಣುಭಕ್ತನಾಗಿದ್ದನೆಂದೇ ವ್ಯಕ್ತವಾಗುತ್ತದೆ; ಆತನು 'ಮಹಾವಿಷ್ಣುವ ರಾಜ್ಯಂಬೊಲ್' ರಾಜ್ಯಂಗೆಯ್ಯುತ್ತಿದ್ದನೆಂದಿದೆಯಲ್ಲದೆ, ಜೈನಧರ್ಮದ ದ್ವಾದಶಚಕ್ರವರ್ತಿಗಳಲ್ಲಿ ಯಾವನೊಬ್ಬನದಾದರೂ ಉಪಮೆಯನ್ನು ಕೊಟ್ಟಿಲ್ಲ.

(೫) ಅಮೋಘವರ್ಷ ನೃಪತುಂಗ ಎಂಬ ಹೆಸರಿನ ಅರಸರು ಹಲವರಿದ್ದುದರಿಂದ ಗಣಿತಸಾರಸಂಗ್ರಹದಲ್ಲಿ ಹೇಳಲ್ಪಟ್ಟಿರುವಾತನು ನಮ್ಮ ನೃಪತುಂಗನೇ ಎಂದಾದರೆ (ಮತ್ತು

ಬರೆದರೆಂಬುದು ನಿರ್ಣಯವಾಗತಕ್ಕದ್ದಿರುತ್ತದೆಂದೂ ಮೇಲೆ ಬರೆದಿರುತ್ತೇವಷ್ಟೇ. ಇವನ ಸಂಸ್ಕೃತ ಗ್ರಂಥಕರ್ತೃತ್ವವು ಸಂಶಯಾಸ್ಪದವಾಗಿದ್ದರೂ ಇವನ ಕನ್ನಡ ಗ್ರಂಥಕರ್ತೃತ್ವದ ಬಗ್ಗೆ ಆ ತರದ ಸಂದೇಹವಿಲ್ಲ. ಆದರೆ ಅರಸರ ಅಥವಾ ಅವರಂತಹ ಬಹಳ ದೊಡ್ಡ ಗೃಹಸ್ಥರ ಗ್ರಂಥ

---

ಹಾಗಾದರೆ ಮಾತ್ರ) ಆತನ ಜನ್ಮಧರ್ಮವು ಏಕಾಂತಪಕ್ಷ ಎಂದರೆ ವೈಷ್ಣವ ಧರ್ಮ(?) ವೆಂಬುದು ಇನ್ನೂ ಬಲವಾಗುತ್ತದೆ; ಅನ್ಯಥಾ (ಇದೇ ಪಕ್ಷದಲ್ಲಿ) ಅದರಲ್ಲಿಯ ಹೇಳಿಕೆಯು ಇತಿಹಾಸ ದೃಷ್ಟ್ಯಾ ಅಸಮಂಜಸವೆಂಬುದರಿಂದ ಅದನ್ನು ನಂಬಲಳವಲ್ಲ.

(೬) ಪ್ರಶ್ನೋತ್ತರ ರತ್ನಮಾಲಿಕೆಯು ನೃಪತುಂಗನ ಕೃತಿಯಾಗಿರಲಾರದು. ಅದರಲ್ಲಿಯ 'ವಿವೇಕಾತ್ಯಕ್ತರಾಜ್ಯೇನ' ಎಂಬ ಶ್ಲೋಕವು ಮೂಲ ರಚನೆಯಿಂದ ಅರ್ವಾಚೀನವಾದ ಪ್ರಕ್ಷೇಪವಾಗಿರಬೇಕು. ಅಥವಾ ಆ ಶ್ಲೋಕದಲ್ಲಿಯ ಹೇಳಿಕೆಯನ್ನು ದಿಟವೆಂದು ನಂಬಿದರೂ, ಅದರಿಂದ ನೃಪತುಂಗನು ತನ್ನ ವಿವೇಕದಿಂದ ತಾನೆ ಪಟ್ಟವನ್ನು ಬಿಟ್ಟನೆಂದಾಗುತ್ತದಲ್ಲದೆ, ಜೈನಧರ್ಮವನ್ನು ಅವಲಂಬಿಸಿ (ಅಥವಾ ಅವಲಂಬಿಸಿದುದರಿಂದ) ಹಾಗೆ ಮಾಡಿದನೆಂದಾಗಲಿ, ಆ ವಿವೇಕವು ಆತನಿಗೆ ಜೈನಧರ್ಮದಿಂದ ಒದಗಿತೆಂದಾಗಲಿ ಸರ್ವಥಾ ಅರ್ಥವಾಗದು.

(೭) ಕವಿರಾಜಮಾರ್ಗವನ್ನು ರಚಿಸಿದಾತನು ನೃಪತುಂಗನೇ ಇರಲಿ ಅಥವಾ ಆತನ ಆಸ್ಥಾನದಲ್ಲಿಯ ಇತರರು ಯಾರೇ ಇರಲಿ: ಅದರಲ್ಲಿ ಪ್ರತಿಫಲಿಸಿರುವ ಧರ್ಮವು ನೃಪತುಂಗನ ಧರ್ಮವೇ ಆಗಿರಬೇಕಲ್ಲದೆ, ರಚಕನು ಅನ್ಯನಿದ್ದರೂ ಅನ್ಯಮತೀಯನಿದ್ದರೂ ಆತನದಾಗಲಾರದು; ಆದುದರಿಂದ ಅದರ ಅವತಾರಿಕೆಯ ಪದ್ಯಗಳಲ್ಲಿ ಇಷ್ಟು ಸ್ಫುಟವಾಗಿರುವ ವಿಷ್ಣು ಸ್ತುತಿಯಿಂದ ನೃಪತುಂಗನು ವೈಷ್ಣವನಾಗಿದ್ದನೆಂದು ವ್ಯಕ್ತವಾಗುತ್ತದೆ.

(೮) ಸೊರಬದ ನಂ. ೮೬ ನೆಯ ಕ್ರಿ. ಶ. ೮೭೭ ನೆಯ ಈ ನೃಪತುಂಗನ ಕಾಲದ (ಮತ್ತು ಈತನ ಆಳಿಕೆಯ ಕೊನೆಯ ವರ್ಷದ) ಶಾಸನವು ಈ ರಾಷ್ಟ್ರಕೂಟ ವಂಶದ (ಈತನ ಹಿಂದೆ ಆಗಿಹೋದ ಹಾಗೆಯೇ ಈತನ ಬಳಿಕ ಆಳಿದ) ಇತರ ಅರಸರ ಶಾಸನಗಳ ಮಾದರಿಯಲ್ಲಿಯೇ ಇರುವುದರಿಂದ, ಅದುವರೆಗಾದರೂ ಈತನು ತನ್ನ ಪೂರ್ವಿಕರ ಧರ್ಮವನ್ನು ಬಿಟ್ಟಿಲ್ಲವೆಂದಾಗುತ್ತದೆ.

(೯) ಕ್ರಿ. ಶ. ೮೭೭ರ ಬಳಿಕ ಈತನ ದೇಹಾವಸಾನವಾಯಿತೋ ಅಥವಾ ಈತನು ರಾಜ್ಯಭಾರದಿಂದ ನಿವೃತ್ತನಾದನೋ ಎಂಬುದನ್ನು ನಿಷ್ಕೃಷ್ಟಮಾಡುವುದಕ್ಕೆ ತಕ್ಕ ಸಾಧನಗಳಿಲ್ಲವಾದರೂ ಈತನ ಮಗನಾದ ಮತ್ತೀತನ ಹಿಂದೆಯೇ ಪಟ್ಟಕ್ಕೆ ಬಂದ ಅಕಾಲವರ್ಷನೆಂಬ ೨ ನೆಯ ಕೃಷ್ಣ(ಕಿನ್ನರ)ನು ತನ್ನ ಪೂರ್ವಿಕರ ಧರ್ಮದಲ್ಲಿಯೇ ಇದ್ದನೆಂಬುದರಿಂದ ನೃಪತುಂಗನು ಆಮರಣಾಂತ ತನ್ನ ಪೂರ್ವಿಕರ ಭಾಗವತ ವೈಷ್ಣವ ಧರ್ಮದಲ್ಲಿಯೇ ಇದ್ದಿರಬೇಕಲ್ಲದೆ, ತನ್ನ ಕಡೆಯ ಕಾಲದಲ್ಲಾದರೂ ಜೈನಧರ್ಮವನ್ನು ಅವಲಂಬಿಸಲಿಲ್ಲವೆಂದೇ ಹೇಳಬೇಕು.

ಕರ್ತೃತ್ವವು ಶಬ್ದಾರ್ಥವನ್ನನುಸರಿಸದೆ, ವಾಡಿಕೆಯಾಗಿ ಲಾಕ್ಷಣಿಕಾರ್ಥವನ್ನು ಅನುಸರಿಸುತ್ತಿರುತ್ತದೆಂಬ ಮಾತನ್ನು ಮರೆಯಕೂಡದು.

ನೃಪತುಂಗನ ಹೆಸರಿನ **ಕವಿರಾಜಮಾರ್ಗ**ವೆಂಬ ಕನ್ನಡ ಅಲಂಕಾರ ಗ್ರಂಥವೇ ನಮಗೆ ಈಗ ದೊರೆತ ಹಳೆ ಕನ್ನಡ ಗ್ರಂಥಗಳಲ್ಲಿ ಮೊದಲನೆಯದಾಗಿರುತ್ತದೆಂದು ಬರೆಯಲಿಕ್ಕೆ ಸಂತೋಷಪಡುತ್ತೇನೆ. ಈ ಗ್ರಂಥದ ಕರ್ತೃತ್ವದ ವಿಷಯವಾಗಿ ರಾವಬಹದ್ದೂರ ರಾ. ನರಸಿಂಹಾಚಾರ್ಯರು ಬರೆಯುವುದೇನಂದರೆ:—"ಯದ್ಯಪಿ ಈ ಗ್ರಂಥವು ನೃಪತುಂಗ ಕೃತವೆಂದು ಪ್ರತೀತಿಯಿದ್ದರೂ ಶ್ರೀ ವಿಜಯಕೃತವೋ ಎಂದು ಸಂದೇಹಪಡುವುದಕ್ಕೆ ಅವಕಾಶವಿದೆ. ಪ್ರಥಮ ಪರಿಚ್ಛೇದದ ಅಂತ್ಯ ಪದ್ಯದಲ್ಲಿ "ಶ್ರೀ ವಿಜಯ ಪ್ರಭೂತಮನಿದಂ ಕೆಯ್ಕೊಳ್ವುದೀ ಮಾಳ್ಕೆಯಿಂ" ಎಂದೂ, ದ್ವಿತೀಯ ಪರಿಚ್ಛೇದದ ಕಡೆಯ ಪದ್ಯದಲ್ಲಿ "ಕಾವ್ಯದಿಂ ಶ್ರೀ ವಿಜಯಪ್ರಭೂತ ಮುದಮಂ ತನಗಾಗಿನಿದಂ ಕವೀಶ್ವರಂ" ಎಂದೂ, ೩ನೆಯ ಪರಿಚ್ಛೇದದ ಕೊನೆಯ ಪದ್ಯದಲ್ಲಿ "ಪರಮ ಶ್ರೀ ವಿಜಯಪ್ರಭೂತಿ ಜಯಶಸ್ಸ್ತ್ರೀ ಬಾಲವೃದ್ಧಾಹಿತಂ" ಎಂದೂ ದೊರೆಯುತ್ತದೆ. ಅಲ್ಲದೆ ಪ್ರತಿಪರಿಚ್ಛೇದದ ಕೊನೆಯ ಗದ್ಯದಲ್ಲಿಯೂ "ನೃಪತುಂಗದೇವ ಕೃತ" ಎನ್ನದೆ "ನೃಪತುಂಗದೇವಾನುಮತಮಪ್ಪ" ಎಂದಿದೆ. ೩ ಪರಿಚ್ಛೇದಗಳ ಕೊನೆಯ ಪದ್ಯಗಳಲ್ಲಿಯೂ "ಶ್ರೀ ವಿಜಯ ಪ್ರಭೂತ"ವೆಂದಿರುವುದರಿಂದಲೂ ಮುಖ್ಯವಾಗಿ ೧ನೆಯ ಪರಿಚ್ಛೇದದ ಕಡೆಯ ಪದ್ಯದಲ್ಲಿ "ಶ್ರೀ ವಿಜಯನು ಇದನ್ನು ಮಾಡಿದನು' ಎಂಬರ್ಥವು ತೋರುವುದರಿಂದಲೂ ಗ್ರಂಥದ ಅಂತ್ಯ ಭಾಗದಲ್ಲಿ "ಆಶ್ರಿತ ಮಹಾನೃಪತುಂಗ ಸಭಾಸದಂ........ಕೂಡೆ ಪೇೞ್ದಿ ಸುತ ಕಾವ್ಯಂ" ಎಂದಿರುವುದರಿಂದಲೂ, "ನೃಪತುಂಗಾನುಮತಮಪ್ಪ" ಎಂಬುದರಿಂದಲೂ ಒಂದು ವೇಳೆ ನೃಪತುಂಗನು ಪೂರ್ವ ಕವಿಗಳ ಗೋಷ್ಠಿಯಲ್ಲಿ ಹೇಳಿರುವ ಶ್ರೀವಿಜಯನೇ ಆತನ ಆಸ್ಥಾನ ಕವಿಯಾಗಿದ್ದು, ಈ ಗ್ರಂಥವನ್ನು ರಚಿಸಿ ನೃಪತುಂಗನ ಅಂಕಿತದಿಂದ ಪ್ರಕಟಿಸಿದ್ದರೂ ಇರಬಹುದು. ಹಿಂದೆ ಅನುವಾದಿಸಿರುವ ಶ್ರೀ ವಿಜಯ ಸ್ತುತಿರೂಪವಾದ ದುರ್ಗಸಿಂಹನ "ಶ್ರೀವಿಜಯರ ಕವಿಮಾರ್ಗಂ" ಎಂಬ ಪದ್ಯದಲ್ಲಿಯ 'ಕವಿಮಾರ್ಗ'

ಎಂಬುದು ‘ಕವಿರಾಜಮಾರ್ಗ’ ಎಂಬ ಈ ಗ್ರಂಥಕ್ಕೆ ಅನ್ವಯಿಸುವುದಾದರೆ, ಇದು ಶ್ರೀವಿಜಯ ಕೃತವೆಂಬ ಊಹೆಗೆ ಸಾಹಾಯಕವಾಗುತ್ತದೆ. ಆದರೆ ಈ ವಿಷಯದಲ್ಲಿ ಹೀಗೆಯೇ ಸರಿಯೆಂದು ನಿಶ್ಚಯಿಸಲಿಕ್ಕಾಗುವುದಿಲ್ಲ. ಒಂದು ವೇಳೆ ನೃಪತುಂಗನಿಗೆ ಶ್ರೀವಿಜಯನೆಂಬ ಬಿರುದೂ ಇದ್ದಿರಬಹುದು, ಎಂದರೆ ಅದಕ್ಕೆ ಶಾಸನಗಳಲ್ಲಿಯಾಗಲಿ ಈ ಗ್ರಂಥದಲ್ಲಿಯಾಗಲಿ ಆವ ಆಧಾರವೂ ಸಿಕ್ಕುವುದಿಲ್ಲ”*.

ಮೇಲೆ ಕೊಟ್ಟ ಕವಿಚರಿತೆಕಾರರ ಅಭಿಪ್ರಾಯವನ್ನು ಎಲ್ಲ ಕನ್ನಡ ಬರಹಗಾರರು ಅನುಮೋದಿಸುವುದಿಲ್ಲ. ಶಾಸನ ಪಂಡಿತರಾದ ಮ॥ ರಾಯಿಸ ಸಾಹೇಬರೂ, ಮ॥ ಕಾ. ಬಾ. ಪಾಠಕರೂ ನೃಪತುಂಗನೇ ಕವಿರಾಜಮಾರ್ಗವನ್ನು ಬರೆದನೆಂದು ಪ್ರತಿಪಾದಿಸುತ್ತಾರೆ†. ಇತ್ತಲಾಗ ಮತ್ತೆ ಈ ವಿಷಯದ ಚರ್ಚೆಯಾಯಿತು. ಧಾರವಾಡಸ್ಥರಾದ ಮ॥ ನಾ. ಶ್ರೀ. ರಾಜಪುರೋಹಿತರೆಂಬವರು ಈ ವಿಷಯವನ್ನು ಕುರಿತು ೨--೩ ಲೇಖಗಳನ್ನು ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ‡ ಪ್ರಸಿದ್ಧಮಾಡಿರುತ್ತಾರೆ. ನೃಪತುಂಗನೇ ಕವಿರಾಜಮಾರ್ಗದ ಗ್ರಂಥಕರ್ತನಾಗಿದ್ದನೆಂಬ ತಮ್ಮ ಅಭಿಪ್ರಾಯವನ್ನು ಸಮರ್ಥಿಸುವುದಕ್ಕೆ ಅವರು ಬರೆದ ಕಾರಣಗಳನ್ನು ಕೆಳಗೆ ಕೊಡುತ್ತೇವೆ:—

೧. ಕವಿರಾಜಮಾರ್ಗದ ಆರಂಭದ ೨ನೆಯ ಶ್ಲೋಕದಲ್ಲಿ “ನಮಗೆ ಪ್ರತಾಪೋದಯಂ ಈಗೆ” ಎಂದು ಬೇಡಿಕೊಂಡುದರಿಂದ ಈ ಗ್ರಂಥದ ಕರ್ತೃವು ಕ್ಷತ್ರಿಯನು ಅಂದರೆ ನೃಪತುಂಗನೇ ಆಗಿದ್ದನೆಂದು ಊಹಿಸಲಿಕ್ಕೆ ಅಡ್ಡಿಯಿಲ್ಲ.

೨. ಭಟ್ಟಾಕಳಂಕನು ೧೬೦೪ರಲ್ಲಿ ಬರೆದ ತನ್ನ ಶಬ್ದಾನುಶಾಸನದ ೨೮೮ನೆಯ ಸೂತ್ರದ ವ್ಯಾಖ್ಯೆಯಲ್ಲಿ “ದಕ್ಷಿಣೋತ್ತರಮಾರ್ಗಭೇದ ಭಿನ್ನ ಪ್ರಯೋಗ ಚಾತುರೀ ಪ್ರಪಂಚೋ ನೃಪತುಂಗ

* ಕರ್ನಾಟಕ ಕವಿಚರಿತೆ, ತಿದ್ದಿದ ಮುದ್ರಣ, ಸಂ. ೧, ಪು. ೧೯, ೨೦.

† ಕವಿರಾಜಮಾರ್ಗದ ಉಪೋದ್ಘಾತ, ಪು. ೨.

‡ ಪರಿಷತ್ಪತ್ರಿಕೆ, ಸಂ. ೬, ಸಂ. ೨; ಸಂ. ೭, ಸಂ. ೧; ಸಂ. ೮, ಸಂ. ೨.

ಗ್ರಂಥೇ ದ್ರುಷ್ಟವ್ಯ ಇತಿ'' ಎಂದು ಬರೆಯುತ್ತಾನೆ. ಈ ಗ್ರಂಥವು ಕವಿರಾಜಮಾರ್ಗವೇ ಆಗಿತ್ತೆಂಬುದರಲ್ಲಿ ಸಂದೇಹವಿಲ್ಲ.

೩. ಪಂಡಿತರಿಂದ **ಸರಸ್ವತೀ ತೀರ್ಥಾವತಾರ** ಎಂಬ ಬಿರುದನ್ನು ದೊರಕಿಸಿದ ನೃಪತುಂಗನು ಅನ್ಯಥ್ಯಾಯೋಪಜೀವಿಯಾಗಲಿಕ್ಕೆ ಎಂದೂ ಎಳಸನು.

೪. ........ಒಂದು ಕಾವ್ಯದಿಂ।

ಶ್ರೀವಿಜಯ ಪ್ರಭೂತ ಮುದಮುಂ ತನಗಾಗಿಸಿದೊಂ

ಕವೀಶ್ವರ್ವಂ ॥ ೨-೧೫೩

ಸಂತಸಂ ಬಡಿಸುವರ್ ನೃಪತುಂಗ ಸಭಾ(ಸದರ್) ॥

೩-೨೨೪

ಕವೀಶ್ವರನೆಂಬುವನು ಒಂದು ಕಾವ್ಯವನ್ನು ಬರೆದು ಶ್ರೀವಿಜಯನನ್ನು ಅತ್ಯಾನಂದಗೊಳಿಸಿದನೆಂತಲೂ ನೃಪತುಂಗನ ಸಭಾಸದರು ಸಂತೋಷಬಡಿಸುತ್ತಿದ್ದರೆಂತಲೂ ಮೇಲೆ ಕೊಟ್ಟ ಪದ್ಯ ಭಾಗಗಳ ಅರ್ಥವಾಗಿರುತ್ತದಷ್ಟೇ. ಕವೀಶ್ವರನು ಶ್ರೀವಿಜಯನ ಪೆರೊಲುಮೆಯನ್ನು ಸಂಪಾದಿಸಿದನೆಂಬುದರ ಭಾವಾರ್ಥವೇನು? ಸಭಾಸದರೂ ಆಸ್ಥಾನಕವಿಗಳೂ ಸಾರ್ವಭೌಮರ ಪ್ರೀತಿಯನ್ನು ಸಂಪಾದಿಸಲಿಕ್ಕೆ ಪ್ರಯತ್ನಿಸುವುದಿಲ್ಲವೇ? ಆದ್ದರಿಂದ ನೃಪತುಂಗನಿಗೆ **ಶ್ರೀವಿಜಯ** ಎಂಬ ಮತ್ತೊಂದು ಬಿರುದಿತ್ತೆಂದು ಧಾರಾಳವಾಗಿ ಹೇಳಬಹುದು.

೫. ಕವಿರಾಜಮಾರ್ಗವನ್ನು ಬೇರೊಬ್ಬ ಕವಿಯು ಬರೆದು ನೃಪತುಂಗನಿಗೆ ಅಂಕಿತವಾಗಿ ಮಾಡಿದ್ದರೆ, ಶಿಷ್ಟಸಾಂಪ್ರದಾಯದಂತೆ ಆ ಕವಿಯು ತನ್ನ ಹೆಸರನ್ನೂ ತನ್ನ ಪೋಷಕನ ಹೆಸರನ್ನೂ ಗ್ರಂಥಾರಂಭದಲ್ಲಿಯಾಗಲಿ ಪರಿಚ್ಛೇದಗಳ ಕೊನೆಯಲ್ಲಾಗಲಿ ಸ್ಪಷ್ಟವಾಗಿ ಬರೆಯುತ್ತಿದ್ದನು. ಈ ಮೇರೆಗೆ ಎಲ್ಲಿಯೂ ಬರದಿಲ್ಲಾದ್ದರಿಂದ ಈ ಗ್ರಂಥವನ್ನು ನೃಪತುಂಗನೇ ಬರೆದನೆಂದು ಊಹಿಸಲಿಕ್ಕೆ ಅಡ್ಡಿಯಿಲ್ಲ.

೬.* (ಆಶ್ರಿತ ಮಹಾ ನೃಪತುಂಗ ಸಭಾಸದಂ) ಕೂಡೆ ಪೇಟ್ದಿಸುತ ಕಾವ್ಯಂ। ೩-೨೨೩. ಇಲ್ಲಿ ಹೇಳಿದ ಸುತ ಕಾವ್ಯವು ಕವಿರಾಜಮಾರ್ಗ

ವೆಂದು ಹೇಳುವುದು ಸರ್ವಥಾ ತಪ್ಪಾಗಿರುತ್ತದೆ. ಏಕೆಂದರೆ ಕಾವ್ಯವೆಂಬ ಸಮುದ್ರದಿಂದ ಜನರನ್ನು ಪಾರಮಾಡಲಿಕ್ಕೆ ಯೋಗ್ಯವಾದ ಹಡಗಿನಂತೆ ತನ್ನ ಗ್ರಂಥವಿರುತ್ತದೆಂದು ನೃಪತುಂಗನು ಕವಿರಾಜಮಾರ್ಗದಲ್ಲೇ ಹೇಳಿರುತ್ತಾನೆ*. ಕವಿರಾಜಮಾರ್ಗವು ಅಲಂಕಾರ ಅಥವಾ ಲಕ್ಷಣ ಗ್ರಂಥವಾದ್ದರಿಂದ ಕಾವ್ಯ ಗ್ರಂಥವೆನಿಸುವುದಿಲ್ಲ.

೭. ಅಲಂಕಾರ ಶಾಸ್ತ್ರವು ಮತಭೇದ ಪ್ರಾದುರ್ಭಾವಕ್ಕೆ ಹುಟ್ಟಿಡೆಯಾದ್ದರಿಂದ† ಕವಿರಾಜಮಾರ್ಗದ ಪ್ರತಿ ಪರಿಚ್ಛೇದದ ಕೊನೆಯ ಗದ್ಯದಲ್ಲಿ "ನೃಪತುಂಗದೇವಾನುಮತಮಪ್ಪ" ಎಂತಲೂ, ಪರಿಚ್ಛೇದ ೨–೧೦೫ರಲ್ಲಿ "ಮಹಾ ನೃಪತುಂಗದೇವನಾದರದೊಳೆ ಪೇೞ್ದ ಮಾರ್ಗಗತಿಯಿಂ ತರಿಸಲ್ಗಿದನಿಂತೆ ಕಬ್ಬಿಗರ್" ಎಂತಲೂ, ಪರಿಚ್ಛೇದ ೩–೧೦೬ರಲ್ಲಿ "ಅತಿಶಯಧವಳೋಪದೇಶಮಾರ್ಗಕ್ರಮದಿಂದತಿನಿಪುಣರಱಿದುಕೊಳ್ಗನುಮತಿಯಿಂದಾಕ್ಷೇಪಮೆಂಬಳಂಕಾರಮುಮಂ" ಎಂತಲೂ ಬರೆದಿರುತ್ತದೆ. ಆದಕಾರಣ ಈ ವಾಕ್ಯಗಳಿಂದ ಕವಿರಾಜಮಾರ್ಗವನ್ನು ಬರೆದವನು ಬೇರೆಯವನಾಗಿದ್ದನೆಂದು ಊಹಿಸುವುದು ಶುದ್ಧ ತಪ್ಪೆಂದು ನಿಸ್ಸಂದೇಹವಾಗಿ ಹೇಳಬಹುದು.

ಮ॥ ರಾಜಪುರೋಹಿತರು ಕೊಡುವ ಮೇಲಿನ ಏಳು ಕಾರಣಗಳು ಸಯುಕ್ತಿಕವಾಗಿರುತ್ತವೆಂದು ಎಲ್ಲ ವಾಚಕರು ಒಡಂಬಡಬಹುದು. ಇದಲ್ಲದೆ ಅವರು ಮ॥ಕಾ.ಬಾ. ಪಾಠಕರವರು ಉಪೋದ್ಘಾತದಲ್ಲಿ ಅಪಾರ್ಥಮಾಡಿ ಉದಾಹರಿಸಿದ ೨ನೆಯ ಪರಿಚ್ಛೇದದ ೫೩ನೆಯ ಶ್ಲೋಕಾರ್ಥವನ್ನು ನೃಪತುಂಗನಿಗೆ ಅನ್ವಯಿಸುವಂತೆ ಅರ್ಥಮಾಡಿ ಪರಿಷತ್ಪತ್ರಿಕೆ, ಸಂ. ೮, ಸಂ. ೨, ಪು. ೧೧೩–೧೧೬ರಲ್ಲಿ ತೋರಿಸಿರುತ್ತಾರೆ. ಕವಿಚರಿತೆಕಾರರು ಬರೆಯುವಂತೆ ನೃಪತುಂಗನಿಗೆ ಶ್ರೀವಿಜಯವೆಂಬ ಬಿರುದಿದ್ದ ಬಗ್ಗೆ ಶಾಸನಗಳಲ್ಲಿ ಆವ ಆಧಾರವೂ ಸಿಕ್ಕುವುದಿಲ್ಲ. ಆದರೆ ನೃಪತುಂಗನಿಗೆ

---

* ಪರಿವೃತ ನೃಪತುಂಗದೇವ ಮಾರ್ಗಾಗ್ರಂ । ತರಗತ ಬೋಧ ವಿಶೇಷಯಾನಪಾತ್ರಂ॥
ಪರಮಗುಣ ಪರೀತ ಕಾವ್ಯರತ್ನಾ । ಕರದುರುಪಾರಮನೆಯ್ದುಗುಂ ಮಹಾತ್ಮಂ ॥
೩-೨೩೦

† ಶ್ರೀವಿದಿತಾರ್ಥಾಲಂಕಾ । ರಾವಳಿಯಂ ವಿವಿಧ ಭೇದ ವಿಭವಾಸ್ಪದಮಂ ॥ ೩-೧

ನರಲೋಕಚಂದ್ರ, ಪರಮಸರಸ್ವತೀತೀರ್ಥ ಮುಂತಾದ ಬಿರುದುಗಳು ಇದ್ದುವೆಂದು ಆವ ಶಾಸನದಲ್ಲಿ ಬರೆದಿದೆ ಎಂದು ಕೆಲವರು ಆಕ್ಷೇಪಿಸಬಹುದು. ಇದಲ್ಲದೆ ಶ್ರೀವಿಜಯನು ಪೂರ್ವದ ಕವಿಯೆಂದು ನೃಪತುಂಗನು ತನ್ನ ಕವಿರಾಜಮಾರ್ಗದ ೧ನೆಯ ಪರಿಚ್ಛೇದದ ೩೩ನೆಯ ಶ್ಲೋಕದಲ್ಲಿ ಹೇಳಿದ್ದರಿಂದ ಅವನು ನೃಪತುಂಗನ ಆಸ್ಥಾನ ಕವಿಯಾಗಿದ್ದನೆಂಬುದಕ್ಕೆ ಸಬಲ ಪ್ರಮಾಣವೇನಿರುತ್ತದೆಂದು ಮತ್ತೆ ಕೆಲವರು ಆಕ್ಷೇಪಿಸಬಹುದು.

ಈಗ ದೊರೆತ ನಮ್ಮ ತಾಯ್ನುಡಿಯ ಹಳೆ ಗ್ರಂಥಗಳೊಳಗೆ ಕವಿರಾಜಮಾರ್ಗವೇ ಮೊದಲನೆಯದಾದುದರಿಂದ ಅದರ ಕರ್ತೃವಿನ ವಿಷಯದಲ್ಲಿ ಇಷ್ಟು ವಿಸ್ತಾರವಾಗಿ ಬರೆದೆವು. ಇನ್ನು ಹೊಸ ಆಧಾರಗಳು ದೊರೆಯುವ ವರೆಗೆ ಕವಿರಾಜಮಾರ್ಗದ ಕರ್ತೃವಿನ ವಿಷಯವಾಗಿ ಚರ್ವಿತಚರ್ವಣವನ್ನು ಮಾಡುವುದರಿಂದ ಹೆಚ್ಚಿನ ಆವ ಪ್ರಯೋಜನವು ಉಂಟಾಗಲಾರದೆಂದು ಕಂಡುಬರುತ್ತದೆ. ಈ ಗ್ರಂಥವು ನೃಪತುಂಗಕೃತವೆಂಬ ಪ್ರತೀತಿಯು ಇರುತ್ತದೆಂದು ಕವಿಚರಿತಕಾರರು ಮುಕ್ತಕಂಠವಾಗಿ ಒಪ್ಪಿಕೊಂಡಿದ್ದಾರೆ*. ಭಟ್ಟಾಕಳಂಕದೇವನು ಶಬ್ದಾನುಶಾಸನವೆಂಬ ತನ್ನ ಪ್ರಸಿದ್ಧವಾದ ಕನ್ನಡ ನುಡಿಯ ವ್ಯಾಕರಣದಲ್ಲಿ ನೃಪತುಂಗನೇ ಈ ಗ್ರಂಥದ ಬರಹಗಾರನೆಂದು ಸ್ಪಷ್ಟವಾಗಿ ಬರೆದಿದ್ದಾನೆ. ಮಹಾರಾಜಾಧಿರಾಜರೂ ಅರಸರೂ ದೊಡ್ಡ ಶ್ರೀಮಂತರೂ ದೊಡ್ಡ ದೊಡ್ಡ ಅಧಿಕಾರಿಗಳೂ ಬುಧ ಪಂಡಿತರ ಸಹಾಯವಿಲ್ಲದೆ, ಈವರೆಗೆ ಆವ ಗ್ರಂಥವನ್ನಾದರೂ ಬರೆದಿಲ್ಲ; ಮುಂದೆಯಾದರೂ ಬರೆಯುವ ಸಂಭವವಿಲ್ಲ. ಶ್ರೀಹರ್ಷನು ರತ್ನಾವಳಿ ನಾಟಕವನ್ನು ಪಂಡಿತರ ಸಾಹಾಯವಿಲ್ಲದೆ ಬರೆದನೇ? ಎಂದೂ ಆಗಲಾರದು. ನೃಪತುಂಗದೇವನು ಕವೀಶ್ವರ ಮುಂತಾದ ಆಸ್ಥಾನ ಕವಿಗಳ ನೆರವಿನಿಂದಲೇ ಕವಿರಾಜಮಾರ್ಗವನ್ನು ಬರೆದನೆಂಬುದರಲ್ಲಿ ಎಳ್ಳಷ್ಟಾದರೂ ಸಂದೇಹವಿಲ್ಲ. ಕವಿರಾಜಮಾರ್ಗದಲ್ಲಿಯಾದರೂ ನೃಪತುಂಗನೇ ಆ ಗ್ರಂಥವನ್ನು ಬರೆದನೆಂಬುದಕ್ಕೆ ಇದ್ದಷ್ಟು ಆಧಾರಗಳು ಬೇರೊಬ್ಬ ಕವಿಯು ಅದನ್ನು ಬರೆದನೆಂಬುದಕ್ಕೆ ಇರುವುದಿಲ್ಲ. ಆದ್ದರಿಂದ ನೃಪತುಂಗನೇ ಕವಿರಾಜಮಾರ್ಗದ ಗ್ರಂಥಕರ್ತೃವಾಗಿದ್ದನೆಂದು ಎಣಿಸು

* ಕವಿಚರಿತೆ, ಸಂ. ೧, ಪು. ೧೯.

ವುದೇ ಹೆಚ್ಚು ಶ್ರೇಯಸ್ಕರವಾದ ಮಾರ್ಗವೆಂದು ನನ್ನ ಅಲ್ಪಮತಿಗೆ ತೋರುತ್ತದೆ.

ನೃಪತುಂಗನ ಕಾಲದಲ್ಲಿದ್ದ ನಮ್ಮ ತಾಯ್ನಾಡಿನ ವಿಸ್ತಾರವನ್ನೂ ಅದರೊಳಗಿದ್ದ ತಿರುಳ್ಗನ್ನಡದ ಪ್ರದೇಶವನ್ನೂ ಕವಿರಾಜಮಾರ್ಗದ ಪ್ರಥಮ ಪರಿಚ್ಛೇದದ ೩೬, ೩೭ ನೆಯ ಪದ್ಯಗಳು ಕೆಳಗೆ ಬರೆದಂತೆ ವಿವರಿಸುತ್ತವೆ:—

ಕಾವೇರಿಯಿಂದಮಾ ಗೋ।
ದಾವರಿವರಮಿರ್ದ ನಾಡದಾ ಕನ್ನಡದೊಳ್ ॥
ಭಾವಿಸಿದ ಜನಪದಂ ವಸು।
ಧಾವಳಯ ವಿಲೀನ ವಿಶದ ವಿಷಯ ವಿಶೇಷಮ್ ॥ ೩೬ ॥

ಅದಱೊಳಗಂ ಕಿಸುವೊೞಲಾ।
ವಿದಿತ ಮಹಾ ಕೊಪಣನಗರದಾ ಪುಲಿಗೆಱೆಯಾ ॥
ಸದಭಿಸ್ತುತಮಪ್ಪೊಂಕುಂ।
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥ ೩೭ ॥

೯ ನೆಯ ಶತಮಾನದಲ್ಲಿ ಕರ್ನಾಟಕದ ಉತ್ತರ ಮೇರೆಯು ಗೋದಾವರೀ ನದಿಯಾಗಿತ್ತೆಂತಲೂ, ದಕ್ಷಿಣ ಮೇರೆಯು ಕಾವೇರಿಯಾಗಿತ್ತೆಂತಲೂ ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಬರೆದಿರುತ್ತದೆ. ಪೂರ್ವ ಪಶ್ಚಿಮ ಮೇರೆಗಳನ್ನು ಹೇಳದಿದ್ದರೂ, ಅವು ಪೂರ್ವ ಪಶ್ಚಿಮ ಸಮುದ್ರಗಳೇ ಆಗಿದ್ದವೆಂದು ನಿಶ್ಚಯವಾಗಿ ಊಹಿಸಬಹುದು. ನಮ್ಮ ಉತ್ತರ ಕರ್ನಾಟಕದೊಳಗಿದ್ದ ಕಿಸುವೊಳಲು (ಪಟ್ಟದಕಲ್ಲು), ಕೊಪಣ (ಕೊಪ್ಪಳ), ಪುಲಿಗೆರೆ (ಲಕ್ಷ್ಮೇಶ್ವರ), ಒಂಕುಂದ (ಒಕ್ಕುಂದ) ಈ ಊರುಗಳ ನಡುವಿದ್ದ ಪ್ರದೇಶವೇ ತಿರುಳು(ಹುರಳು)ಳ್ಳ ಕನ್ನಡ ನುಡಿಯ ಭಾಗವೆಂದು ಆ ಕಾಲಕ್ಕೆ ಪ್ರಸಿದ್ಧಿಯಿತ್ತು. ಆಗ ನಮ್ಮ ತಾಯ್ನಾಡು ಎಷ್ಟು ಪುಷ್ಟವಾಗಿತ್ತೆಂಬುದನ್ನೂ ಈಗ ಅದು ನಮ್ಮ ಅನಾಸ್ಥಾ ನಿರಭಿಮಾನ ನಿರುತ್ಸಾಹಗಳಿಂದ ಕೊರಗಿ ಸೊರಗಿ ಎಷ್ಟು ಬಡವಾಗಿರುತ್ತದೆಂಬುದನ್ನೂ ವಾಚಕ ಮಹಾಶಯರೇ ವಿಚಾರ ಮಾಡಬಹುದು.

ಈಗ ನಮಗೆ ದೊರೆತ ಹಳಗನ್ನಡ ಗ್ರಂಥಗಳಲ್ಲೆಲ್ಲ ಕವಿರಾಜ ಮಾರ್ಗವೇ ಪುರಾತನವಾದುದೆಂದು ಮೇಲೆ ಬರೆದಿರುತ್ತೇವಷ್ಟೇ. ಈ ಗ್ರಂಥದಲ್ಲಿ ೩ ಪರಿಚ್ಛೇದಗಳಿರುತ್ತವೆ:—೧. ದೋಷಾನುವರ್ಣನ ನಿರ್ಣಯ, ೨. ಶಬ್ದಾಲಂಕಾರ, ೩. ಅರ್ಥಾಲಂಕಾರ. ಗ್ರಂಥಕರ್ತನು ತನ್ನ ಹೆಸರನ್ನು ಆರಂಭದ ೧ನೆಯ ಪದ್ಯದಲ್ಲಿ ನೃಪತುಂಗನೆಂದೂ, ೨ನೆಯ ಪದ್ಯದಲ್ಲಿ ಅತಿಶಯಧವಳನೆಂದೂ ಹೇಳಿಕೊಂಡಿದ್ದಾನೆ; ವಿಷ್ಣು ಸರಸ್ವತಿಯರನ್ನು ಶ್ಲೇಷೆಯಿಂದ ಸ್ತುತಿಸಿ, ಹಿಂದೆ ಆಗಿ ಹೋದ ಮಹಾ ಕವಿಗಳನ್ನು ಹೊಗಳಿ, ಗದ್ಯ ಪದ್ಯ ಕಾವ್ಯ ಲಕ್ಷಣಗಳನ್ನು ಬರೆದಿರುತ್ತಾನೆ.

ಧಾರವಾಡ ಜಿಲ್ಲಾ ಸಿರೂರಿನ ಶಿಲಾಲೇಖದಲ್ಲಿ ಈ ನೃಪತುಂಗನಿಗೆ ೩ ಶ್ವೇತಛತ್ರಗಳೂ ಒಂದು ಶಂಖವೂ ಒಂದು **ತಿವಿಳಿ** ಎಂಬ ವಾದ್ಯವೂ ಪಾಲಿಧ್ವಜವೂ ಗರುಡಧ್ವಜವೂ ಓಕಕೇತುವೂ ರಾಜಚಿಹ್ನಗಳಾಗಿದ್ದ ವೆಂತಲೂ, ಇವನು ರಟ್ಟಮನೆತನಕ್ಕೆ ಸೇರಿದವನೆಂತಲೂ, **ಲಟ್ಟಲೂರಿನ ಒಡೆಯ** ಎಂಬುದೇ ಇವನ ಮನೆತನದ ಬಿರುದಾಗಿತ್ತೆಂತಲೂ ಬರೆದಿರುತ್ತದೆ. ಧಾರವಾಡ ಜಿಲ್ಲಾ ರೋಣ ತಾಲೂಕ ಸೂಡಿಯ ಶಿಲಾಲೇಖದಲ್ಲಿ **ಅಬ್ಬಲಬ್ಬೆ** ಎಂಬ ಇವನ ಮಗಳನ್ನು ಮುಂದೆ ೩ನೆಯ ಕೃಷ್ಣನ ಆಳಿಕೆಯಲ್ಲಿ ಹೆಸರುವಾಸಿಯಾದ **ಪೆರಮನಡಿ ಬೂತುಗನ** ಮುತ್ತಜ್ಜನಾದ ಗುಣದುತ್ತುರಂಗ ಬೂತುಗನಿಗೆ ಮದುವೆ ಮಾಡಿಕೊಟ್ಟಿತ್ತೆಂತಲೂ ಬರೆದಿರುತ್ತದೆ. ರಟ್ಟರೂರಿನ ಅಪಭ್ರಂಶವೇ ಲಟ್ಟಲೂರು ಆಗಿದ್ದರೆ, ಧಾರವಾಡ ಜಿಲ್ಲಾ ಕೋಡ ತಾಲೂಕಿನಲ್ಲಿದ್ದ ರಟ್ಟಿಹಳ್ಳಿಯೇ ಇವರ ಮೂಲಸ್ಥಾನವಾಗಿರಬಹುದೆಂದು ಊಹಿಸಲಿಕ್ಕೆ ಅವಕಾಶವಿದೆ. ಏಕೆಂದರೆ ಇಲ್ಲಿಯೊಂದು ಹಳೆ ಕೋಟೆಯೂ, ಜಕಣಾಚಾರ್ಯರು ಕಟ್ಟಿದ ೩೬ ಕಂಬಗಳುಳ್ಳ ಒಂದು ಪುರಾತನ ಗುಡಿಯೂ, ೭ ಶಿಲಾಲೇಖಗಳೂ ಇರುತ್ತವೆ.

೮೭೦ರಿಂದ ಸಾಯುವ ವರೆಗೆ ನೃಪತುಂಗನು ಯಾವ ಯುದ್ಧವನ್ನು ಮಾಡಲಿಲ್ಲೆಂದು ಮೇಲೆ ಬರೆದಿರುತ್ತೇವಷ್ಟೇ. ಆದರೆ ಇವನ ಆಳಿಕೆಯಲ್ಲಿ ಗಂಗರ ಅರಸನಾದ ರಾಜಮಲ್ಲ ಸತ್ಯವಾಕ್ಯನು ಸ್ವತಂತ್ರನಾದ

ನೆಂದು ಮೆ॥ ರಾಯಿಸ ಸಾಹೇಬರು ಬರೆಯುತ್ತಾರೆ*. ಇವನು ೮೧೭ ರಲ್ಲಿ ಒಪ್ಪಿಕೊಂಡ ರಾಷ್ಟ್ರಕೂಟರ ಮಾಂಡಲಿಕತ್ವವನ್ನು ಹಾರುಹೊಡೆಯಲಿಕ್ಕೆ ಪ್ರಯತ್ನಮಾಡುತ್ತಾನೆಂಬ ಸುದ್ದಿಯನ್ನು ಕೇಳಿ, ಅಮೋಘವರ್ಷನು ತಾನೇ ದಂಡೆತ್ತಿ ಹೋಗದೆ, ಬಂಕೇಶನೆಂಬ ಒಬ್ಬ ದಳವಾಯಿಯನ್ನು ಅವನ ಪಾರಪತ್ಯ ಮಾಡಲಿಕ್ಕೆ ಕಳುಹಿದನು. ಈ ದಂಡಯಾತ್ರೆಯಿಂದ ಏನೂ ಫಲವಾಗಲಿಲ್ಲೆಂದು ತೋರುತ್ತದೆ. ಏಕೆಂದರೆ ರಾಜಮಲ್ಲನ ಮಗನಾದ ನೀತಿಮಾರ್ಗನು ಕೋಲಾರ ಜಿಲ್ಲಾ **ರಾಜಾರಾಮಡು** ಎಂಬಲ್ಲಿ ರಾಷ್ಟ್ರಕೂಟರನ್ನು ಪೂರ್ಣವಾಗಿ ಸೋಲಿಸಿದನು. ಈ ಸೋಲಿನಿಂದಲೋ ನಿವೃತ್ತಿಮಾರ್ಗವನ್ನು ಕಯ್ಕೊಂಡ ನೃಪತುಂಗನ ಮನಸ್ಸು ಕಾಳಗ ಕೊಲೆಗೆ ಹೇಸಿದ್ದರಿಂದಲೋ ಅಮೋಘವರ್ಷನು ಯುದ್ಧವನ್ನು ನಿಲ್ಲಿಸಿ, ಯುವರಾಜನಾದ ಬೂತುಗನಿಗೆ ತನ್ನ ಮಗಳಾದ **ಚಂದ್ರೋಬಲಬ್ಬೆ**ಯನ್ನು ಕೊಟ್ಟು, ಮದುವೆಮಾಡಿ ಗಂಗರೊಡನೆ ಸ್ನೇಹಬೆಳಿಸಿದನು. ಸೂಡಿಯ ಶಿಲಾಲೇಖದಲ್ಲಿ ಹೇಳಿದ ಅಬ್ಬಲಬ್ಬೆಯು ಈ ಚಂದ್ರೋಬಲಬ್ಬೆಯೇ ಆಗಿದ್ದಳೆಂಬುದಕ್ಕೆ ಸಂದೇಹವಿಲ್ಲ†. ನೃಪತುಂಗನ ಯುದ್ಧ ಜುಗುಪ್ಸೆಯನ್ನು ನೋಡಿ ಪಲ್ಲವರು ಪಿಸುಕಾಡತೊಡಗಿದ್ದರಿಂದ ಅವನು ತನ್ನ ೨ನೆಯ ಮಗಳಾದ **ಶಂಖ**ಯೆಂಬವಳನ್ನು ಗಂಗಪಲ್ಲವ ಅರಸನಾದ **ನಂದಿವರ್ಮ**ನೆಂಬವನಿಗೆ ಧಾರೆಯೆರಕೊಟ್ಟು ಅವನನ್ನು ತನ್ನ ಬಳಗದವನಾಗಿ ಮಾಡಿಕೊಂಡನು.

೩ನೆಯ ಗೋವಿಂದನು ಗೆದ್ದ ನಾಡುಗಳೆಲ್ಲ ನೃಪತುಂಗನ ಅಂಕಿತದಲ್ಲಿದ್ದವೋ ಇಲ್ಲೋ ಎಂಬ ಪ್ರಶ್ನವು ಇಲ್ಲಿ ತಲೆದೋರುತ್ತದೆ. ೩ನೆಯ ಗೋವಿಂದನ ಕಾಲದಲ್ಲಿ ಸಾಮಂತ ನಾಡುಗಳಾದ ಗಂಗವಾಡಿ ನೊಳಂಬವಾಡಿಗಳು ವಸ್ತುತಃ ಸ್ವತಂತ್ರವಾಗಿದ್ದವೆನ್ನಲಿಕ್ಕೆ ಅಡ್ಡಿಯಿಲ್ಲ. ಆದರೆ ಐಹೊಳೆಯ ಒಂದು ಒಡಕು ಶಿಲಾಲೇಖದಲ್ಲಿ ಈ ನೃಪತುಂಗನ ವಿಷಯವಾಗಿ "ನವರಾಜ್ಯಂ ಗೆಯ್ಯ" ಎಂದು ಬರೆದಿರುತ್ತದೆ. ಈ ೯ ರಾಜ್ಯ

---

* ಶಾಸನಗಳಿಂದ ತಿಳಿಯುವ ಮೈಸೂರು ಕೊಡಗು ಪ್ರಾಂತಗಳು, ಪು. ೭೦–೭೧.

† ಹಿಂದೆ ಪು. ೧೧೧ ನೋಡಿರಿ.

ಗಳಾವವೆಂಬ ಪ್ರಶ್ನವು ಇಲ್ಲಿ ಉದ್ಭವಿಸುವುದು. ಬೇರೆ ತರದ ಆಧಾರಗಳ ಅಭಾವದ ಮೂಲಕವಾಗಿ, ಈ ಪ್ರಶ್ನವನ್ನು ಅನುಮಾನದಿಂದಲೇ ಬಿಡಿಸಬೇಕಾಗಿರುತ್ತದೆ. ನವ ಶಬ್ದದ ಅರ್ಥವನ್ನು ನೂತನವೆಂದು ಮಾಡಿದರೆ ಅದು ಸರಿಯಾಗಲಾರದು. ಏಕೆಂದರೆ ಅಮೋಘವರ್ಷನ ರಾಜ್ಯವು ಪಿತ್ರಾರ್ಜಿತವಾಗಿತ್ತೇ ಹೊರತು ಸ್ವಸಂಪಾದಿತವಾಗಿದ್ದಿಲ್ಲ. ಆದ್ದರಿಂದ ನವ ಶಬ್ದವನ್ನು ಒಂಬತ್ತು ಎಂಬರ್ಥದಲ್ಲಿ ತೆಗೆದುಕೊಳ್ಳುವುದೇ ಸಯುಕ್ತಿಕವಾದ್ದೆಂದು ಕಂಡುಬರುತ್ತದೆ. ಕುಂತಳ, ಕೊಂಕಣ, ಗುಜರಾಥ, ಮಾಳವ, ಲಾಟ, ನಗರಖಂಡ, ಗಂಗವಾಡಿ, ನೊಳಂಬವಾಡಿ, ವೆಂಗಿ ಇವೇ ಅಮೋಘವರ್ಷನು ಆಳುತ್ತಿದ್ದ ನವ ರಾಜ್ಯಗಳು ಆಗಿರಬಹುದೇನು? ಸಿಲಹರರು ಕೊಂಕಣದ ಮಂಡಲೇಶ್ವರರಾಗಿದ್ದರು. ಗುಜರಾಥ, ಲಾಟ, ಮಾಳವ ಪ್ರಾಂತಗಳನ್ನು ನೃಪತುಂಗನ ಕಕ್ಕನ ಮಕ್ಕಳು ಆಳುತ್ತಿದ್ದರು. ಗೋವೆ, ನಗರಖಂಡ ಮುಂತಾದ ಪ್ರದೇಶಗಳು ಕದಂಬ ಮಂಡಲೇಶ್ವರರ ವಶದಲ್ಲಿದ್ದವು. ವೆಂಗಿಯಲ್ಲಿ ಚಾಳುಕ್ಯರೂ, ಗಂಗವಾಡಿ ನೊಳಂಬವಾಡಿಗಳಲ್ಲಿ ನೃಪತುಂಗನ ಇಬ್ಬರು ಅಳಿಯರೂ ಆಳುತ್ತಿದ್ದರು. ಕುಂತಳ ನಾಡಿನಲ್ಲಿ ಇಬ್ಬರು ಮಂಡಲೇಶ್ವರರಿದ್ದರು. ಚೆಲ್ಲಕೇತ ಮನೆತನದ ಬಂಕೆಯರಸು (ಬಂಕೇಶ) ಎಂಬವನು ಧಾರವಾಡ ಜಿಲ್ಲಾ ಬಂಕಾಪುರವನ್ನು ಮುಖ್ಯ ಸ್ಥಳವಾಗಿ ಮಾಡಿಕೊಂಡು ಬನವಾಸಿ ೧೨,೦೦೦ವನ್ನೂ, ಬೆಳಗಲಿ ೩೦೦ರನ್ನೂ, ಕುಂದರಗೆ ೭೦ನ್ನೂ, ಕುಂಡೂರ ೫೦೦ನ್ನೂ, ಪುರಿಗೆರೆ ೩೦೦ನ್ನೂ ಆಳುತ್ತಿದ್ದನು. ದೇವಳಯನೆಂಬ ಮತ್ತೊಬ್ಬ ಸಾಮಂತನು ಅಣ್ಣಿಗೇರಿಯನ್ನು ತನ್ನ ಮುಖ್ಯ ಪಟ್ಟಣವಾಗಿ ಮಾಡಿಕೊಂಡು ಬೆಳವೊಳ ೩೦೦ರನ್ನು ಆಳುತ್ತಿದ್ದನು. ಈಗ ಪಟ್ಟಣಗಳಾದ ಧಾರವಾಡ, ಹುಬ್ಬಳ್ಳಿ ಎಂಬ ಊರುಗಳು ಈ ಬೆಳವೊಳ ವಿಭಾಗಕ್ಕೆ ಸೇರಿದ್ದವೆಂದು ತೋರುತ್ತದೆ.

೯ನೆಯ ಶತಮಾನದಲ್ಲಿ ನಮ್ಮ ಭರತಖಂಡದೊಳಗೆ ಬೌದ್ಧಮತವು ಇನ್ನೂ ಅವಶೇಷವಾಗಿತ್ತೆಂತಲೂ, ಜೈನಮತವು ಈ ಕಾಲಕ್ಕೆ ಹೆಚ್ಚು ಪ್ರಬಲವಾಗಿ ಅದನ್ನು ನಿಃಶೇಷವಾಗಿ ಮಾಡಲಿಕ್ಕೆ ಮುಖ್ಯ ಕಾರಣವಾಯಿತೆಂತಲೂ ಡಾ॥ ಫ್ಲೀಟರು ಬರೆಯುತ್ತಾರೆ*. ಕ್ರಿಸ್ತ ಶಕದ

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೪೦೬–೭, ೮.

೪ನೆಯ ಅಥವಾ ೫ನೆಯ ಶತಮಾನದಲ್ಲಿ **ಸಮಂತಭದ್ರ**ನೆಂಬ ಒಬ್ಬ ಘನಪಂಡಿತನಾದ ದಿಗಂಬರ ಜೈನ ಯತಿಯು ಆಗಿಹೋದನು*. ಇವನು ಉಗ್ರ ತಪಸ್ಸಿನಿಂದ ತನ್ನ ಭಸ್ಮಕರೋಗವನ್ನು ಪರಿಹಾರಮಾಡಿಕೊಂಡು, ವಾದಕ್ಕೋಸ್ಕರ ಪಾಟಲೀಪುತ್ರನಗರ, ಮಾಳವದೇಶ, ಸಿಂಧುದೇಶ, ಠಕ್ಕದೇಶ (ಪಂಜಾಬ), ವಿದಿಶೆ, ಕಾಂಚೀಪುರ, ಕರಹಾಟಕ ದೇಶಗಳಲ್ಲಿ ಸಂಚರಿಸಿ ಕರ್ನಾಟಕಕ್ಕೆ ಬಂದನು. ಇವನು ವಾದಕ್ಕೆ ನಿಂತರೆ ಈಶ್ವರನ ನಾಲಗೆಯಾದರೂ ಒಳಗೆ ಎಳೆದುಕೊಳ್ಳುತ್ತಿತ್ತೆಂದು ಶ್ರವಣಬೆಳ್ಗೊಳದ ೬೭ನೆಯ ಶಾಸನದಲ್ಲಿ ಬರೆದಿದೆ. ಇವನು **ಆಪ್ತಮೀಮಾಂಸ** ಎಂಬ ದೊಂದು ವೇದಾಂತಗ್ರಂಥವನ್ನು ರಚಿಸಿ, ಅದರಲ್ಲಿ ಬೌದ್ಧಮತ ಬ್ರಹ್ಮಾದ್ವೈತ ಮತಗಳನ್ನು ಖಂಡಿಸಿ, ತನ್ನ ಮತದ **ಸ್ಯಾದ್ವಾದ** ತತ್ವವನ್ನು ಸ್ಥಾಪಿಸಲಿಕ್ಕೆ ಎತ್ತುಗಡೆ ಮಾಡಿದನು. ಜಿನಸೇನನು ತನ್ನ ಆದಿಪುರಾಣದಲ್ಲಿಯೂ, ಚಾವುಂಡರಾಯನು ತನ್ನ ಚಾವುಂಡರಾಯ ಪುರಾಣದಲ್ಲಿಯೂ ಸಮಂತಭದ್ರನ ವಚಸ್ಸೆಂಬ ವಜ್ರದಿಂದ ಕುಮತಗಳೆಂಬ ಗುಡ್ಡಗಳು ಛಿನ್ನಭಿನ್ನವಾದುವೆಂದು ಬರೆಯುತ್ತಾರೆ†. ಮುಂದೆ ಅಕಲಂಕದೇವನೆಂಬವನು ಅಷ್ಟಶತಿಯೆಂಬ ಈ ಆತ್ಮಮೀಮಾಂಸದ ಟೀಕೆಯನ್ನು ಬರೆದನು. ಬಳಿಕ ವಿದ್ಯಾನಂದ (ಪಾತ್ರಕೇಸರಿ) ಎಂಬವನು ಆಪ್ತಮೀಮಾಂಸಾಲಂಕಾರ ಅಥವಾ ಅಷ್ಟಸಹಸ್ರಿ ಎಂಬ ಅತಿವಿಸ್ತಾರವಾದ ಟೀಕೆಯನ್ನು ಬರೆದನು. ತರುವಾಯ ಮಾಣಿಕ್ಯನಂದಿಯೆಂಬುವನು ಪರೀಕ್ಷಾಮುಖವೆಂಬ ಖಂಡನ ಗ್ರಂಥವನ್ನು ಬರೆದನು, ಮತ್ತು ಪ್ರಭಾಚಂದ್ರನೆಂಬುವನು ಪ್ರಮೇಯ ಕಮಲಮಾರ್ತಂಡವೆಂಬ ಅದರ ಟೀಕೆಯನ್ನು ಬರೆದನು. ಅನಂತರ **ಜಿನಸೇನ**ನೆಂಬ ವಿದ್ವಾಂಸನು ಹರಿವಂಶ, ಆದಿಪುರಾಣ, ಪಾರ್ಶ್ವಾಭ್ಯುದಯ ಎಂಬ ಗ್ರಂಥಗಳನ್ನು ಬರೆದನು. ಇವನು ೩ನೆಯ ಗೋವಿಂದ, ಅಮೋಘವರ್ಷ ಇವರಿಬ್ಬರ ಆಳಿಕೆಯಲ್ಲಿದ್ದಂತೆ ಕಂಡುಬರುತ್ತದೆ. ಏಕೆಂದರೆ ಇವನು ತನ್ನ ಪಾರ್ಶ್ವಾಭ್ಯುದಯ ಗ್ರಂಥದಲ್ಲಿ

---

* ಕರ್ನಾಟಕ ಕವಿಚರಿತೆ, ಸಂ. ೧, ಪು. ೪.

† ನಮಸ್ಸಮಂತಭದ್ರಾಯ ಮಹತೇ ಕವಿವೇಧಸೇ ।
ಯದ್ವಚೋ ವಜ್ರಪಾತೇನ ನಿರ್ಭಿನ್ನಾಃ ಕುಮತಾದ್ರಯಃ ॥ ಆದಿಪುರಾಣ.

ತಾನು ಅಮೋಘವರ್ಷನಿಗೆ ಬೇಕಾದವನಾಗಿದ್ದೆನೆಂದು ಹೇಳಿಕೊಳ್ಳು ತ್ತಾನೆ. ಮುಂದೆ ಜಿನಸೇನನ ಶಿಷ್ಯನಾದ ಗುಣಭದ್ರನು ತನ್ನ ಉತ್ತರ ಪುರಾಣವನ್ನು ಅಮೋಘವರ್ಷನ ಮಗನಾದ ೨ನೆಯ ಕೃಷ್ಣನ ಆಳಿಕೆ ಯಲ್ಲಿ ಮುಗಿಸಿದನೆಂದು ತೋರುತ್ತದೆ. ನೃಪತುಂಗನು ವಿದ್ಯಾ ಪಕ್ಷಪಾತಿ ಯಾದ್ದರಿಂದ ಪಂಡಿತರು ಅವನನ್ನು **ಪರಮ ಸರಸ್ವತೀ ತೀರ್ಥಾವತಾರ** ನೆಂದು ಕರೆಯುತ್ತಿದ್ದರು.

ಈ ನೃಪತುಂಗನಿಗೆ **ಕೃಷ್ಣ**ನೆಂಬ ಒಬ್ಬ ಮಗನೂ, **ಚಂದ್ರೋಬ ಲಬ್ಬೆ** (ಅಬ್ಬಲಬ್ಬೆ), **ಶಂಖ** ಎಂಬ ಇಬ್ಬರು ಹೆಣ್ಣುಮಕ್ಕಳೂ ಇದ್ದರು. ಹೆಣ್ಣುಮಕ್ಕಳನ್ನು ಯಾರಿಗೆ ಕೊಟ್ಟಿತ್ತೆಂಬುದನ್ನು ಮೇಲೆ ಬರೆದಿರು ತ್ತೇವಷ್ಟೇ. ನೃಪತುಂಗನು ಹಣ್ಣುಮುದುಕನಾದ ಬಳಿಕ ೮೭೫ರಲ್ಲಿ ಕೃಷ್ಣನಿಗೆ ಯುವರಾಜಪಟ್ಟವನ್ನು ಕಟ್ಟಿದನೆಂದು ಗುಣಭದ್ರನ ಆತ್ಮಾನು ಶಾಸನವೆಂಬ ಗ್ರಂಥದಿಂದಲೂ, ೧೧ನೆಯ ಶತಮಾನದ ಸೌದತ್ತಿಯ ಒಂದು ಶಾಸನದಿಂದಲೂ ಕಂಡುಬರುತ್ತದೆ. ಮುಂದೆ ೩ ವರ್ಷದ ಮೇಲೆ ನೃಪತುಂಗನು ಮರಣಹೊಂದಿದನು.

ನೃಪತುಂಗನ ಆಳಿಕೆಗೆ ಸಂಬಂಧಿಸಿದ ಶಾಸನಗಳ ತಾತ್ಪರ್ಯ ವನ್ನು ಕೆಳಗೆ ಕೊಡುತ್ತೇವೆ:—

(೧) ಬಡೋಜ ಜಿಲ್ಲಾ ಕಾವಿಯ ತಾಮ್ರಶಾಸನ. ಗುಜರಾಥದ ಮಹಾಸಾಮಂತಾಧಿಪತಿಯಾದ ಪ್ರಭೂತವರ್ಷ ಗೋವಿಂದರಾಜನು ಭರುಕಚ್ಛ(ಬಡೋಜ)ದಲ್ಲಿ ನರ್ಮದಾ ನದಿಯೊಳಗೆ ಸ್ನಾನಮಾಡಿ ಸಂವತ್ ೭೪೯ ನೆಯ ವೈಶಾಖ ಶುದ್ಧ ೧೫ನೆಯ ದಿವಸ (೧೫ ಎಪ್ರಿಲ ೮೨೭) ಜಯಾದಿತ್ಯನೆಂಬ ಸೂರ್ಯನ ಗುಡಿಗೆ ಥೂರ್ಣಾವಿ (ಧನವಿ) ಎಂಬ ಹಳ್ಳಿ ಯನ್ನು ದಾನಕೊಟ್ಟನು. ಕಾವಿಯ ಆಗಿನ ಹೆಸರು ಕಾಪಿಕಾ ಎಂದಿತ್ತು.

(೨) ಬಡೋದೆಯ ತಾಮ್ರಶಾಸನ. ಗುಜರಾಥದ ಕರ್ಕರಾಜನ ಮಗನಾದ ಮಹಾಸಾಮಂತಾಧಿಪತಿ ಧಾರಾವರ್ಷ ನಿರುಪಮ ಧ್ರುವ ರಾಜನು ಶ್ರೀಖೇತಕ(ಕೈರಾ)ದ ಬಳಿಯಲ್ಲಿದ್ದಾಗ, ಸಂವತ್ ೭೫೭ನೆಯ

ಕಾರ್ತೀಕ ಶುದ್ಧ ೧೫ನೆಯ ದಿವಸ (೧೧ ಅಕ್ಟೋಬರ ೮೩೫) ಪೂಸಿಲಾವಿಲ್ಲಿ ಎಂಬ ಹಳ್ಳಿಯನ್ನು ಒಬ್ಬ ಬ್ರಾಹ್ಮಣನಿಗೆ ದಾನಕೊಟ್ಟನು.

(೩) ನಿಜಾಮ ರಾಜ್ಯದ ವೇರೂಳಿನ (ಎಳೂರಿನ) ದಶಾವತಾರ ಗವಿಯಲ್ಲಿದ್ದ ಅಪೂರ್ಣ ಶಿಲಾಲೇಖ. ಇದು ಅಮೋಘವರ್ಷನ ಕಾಲದ್ದೇ ಎಂದು ನಿಶ್ಚಯವಾಗಿ ಹೇಳಲಿಕ್ಕಾಗುವುದಿಲ್ಲ. ಏಕೆಂದರೆ, ಇದರಲ್ಲಿ ರಾಷ್ಟ್ರಕೂಟರ ವಂಶಾವಳಿಯು ಮಹಾರಾಜಶರ್ವನವರೆಗೆ ಬಂದು ಅವನ ವರ್ಣನೆಯ ಶ್ಲೋಕವು ಅಪೂರ್ಣವಾಗಿ ನಿಂತುಹೋಗಿದೆ.

(೪) ಠಾಣೆ ಜಿಲ್ಲೆ ಸಾಷ್ಟಿನದುಗಡ್ಡೆಯಲ್ಲಿದ್ದ ಕಣ್ಹೇರಿ ಗವಿಯ ೭೮ನೆಯ ನಂಬರಿನ ಶಿಲಾಲೇಖ. ಸಿಲಾಹಾರ ಮನೆತನದ ಪುಲ್ಲಶಕ್ತಿಯೆಂಬ ಮಹಾಸಾಮಂತನು ಪುರಿಯೆಂಬ ತನ್ನ ಮುಖ್ಯಪಟ್ಟಣದಲ್ಲಿದ್ದು ಅಮೋಘವರ್ಷನ ಅನುಗ್ರಹದಿಂದ ಕೊಂಕಣ ಪ್ರದೇಶವನ್ನು ಆಳುತ್ತಿದ್ದಾಗ ಅವನ ಹಳೆ ಮಂತ್ರಿಯಾದ ವಿಷ್ಣು ಎಂಬವನು ಕೃಷ್ಣಗಿರಿ (ಕಣ್ಹೇರಿ)ಯ ಗವಿಗಳಲ್ಲಿದ್ದ ಬೌದ್ಧಯತಿಗಳ ಪುಸ್ತಕ ವಸ್ತ್ರಗಳ ಖರ್ಚಿಗಾಗಿ ದ್ರಮ್ಮಗಳೆಂಬ ಕೆಲ ನಾಣ್ಯಗಳನ್ನು ದಾನವಾಗಿ ಕೊಟ್ಟನು. ಸಂವತ್ ೭೬೫ ಇಸ್ವಿ ೮೪೩–೪೪.

(೫) ಕಣ್ಹೇರಿಯಲ್ಲಿದ್ದ ೧೦ನೆಯ ನಂಬರಿನ ದರಬಾರ ಅಥವಾ ಮಹಾರಾಜ ಗವಿಯ ಶಾಸನ. ಪುಲ್ಲಶಕ್ತಿಯ ಮಗನೂ ಅಮೋಘವರ್ಷ ಮಹಾರಾಜನ ಮಹಾಸಾಮಂತನೂ ಆದ ೨ನೆಯ ಕಪರ್ದಿಯು ಕೊಂಕಣವನ್ನು ಆಳುತ್ತಿದ್ದಾಗ, ಅವಿಘ್ನಾಕರನೆಂಬ ಒಬ್ಬ ಬೌದ್ಧ ಯತಿಯು ಗೌಡದೇಶದಿಂದ ಬಂದು, ಕಣ್ಹೇರಿಯಲ್ಲಿ ತಪಶ್ಚರ್ಯಕ್ಕೆ ಯೋಗ್ಯವಾದ ಕೆಲವು ಗವಿಗಳನ್ನು ಮಾಡಿಸಿ, ಅಲ್ಲಿ ಧ್ಯಾನಸ್ಥರಾಗಿ ಕೂಡ್ರುವ ಯತಿಗಳಿಗೋಸ್ಕರ ವಸ್ತ್ರಗಳನ್ನು ಕೊಡಲಿಕ್ಕೆ ೧೦೦ ದ್ರಮ್ಮಗಳನ್ನು ಕೊಟ್ಟು, ಆ ಹಣದ ಬಡ್ಡಿಯನ್ನು ಈ ವಸ್ತ್ರದಾನಕ್ಕೆ ಉಪಯೋಗಿಸಬೇಕೆಂದು ಕಟ್ಟುಮಾಡಿದನು; ಸಂವತ್ ೭೭೩ನೆಯ ಪ್ರಜಾಪತಿ ಸಂವತ್ಸರ ಆಶ್ವಿಜ ಕೃಷ್ಣ ೨ ಬುಧವಾರ (೧೬ ಸಪ್ಟಂಬರ ೮೫೧).

(೬) ಧಾರವಾಡ ಜಿಲ್ಲಾ ಸಿರೂರಿನ ಶಿಲಾಲೇಖ. ಅಮೋಘವರ್ಷನ ಆಳಿಕೆಯ ೫೨ನೆಯ ವರ್ಷದಲ್ಲಿ ಅವನ ಮಾಂಡಲಿಕನಾಗಿ ಅಣ್ಣಿಗೇರಿಯಲ್ಲಿದ್ದು ಬೆಳವೊಳ ೩೦೦ನ್ನು ಆಳುತ್ತಿದ್ದ ದೇವಣಯ್ಯನೆಂಬುವನು ಸೂರ್ಯಗ್ರಹಣ ನಿಮಿತ್ತವಾಗಿ ಯಾವುದೋ ಒಂದು ತೆರಿಗೆಯನ್ನು ಮಾಫುಮಾಡಿದನು; ಸಂವತ್ ೭೮೮ನೆಯ ಜ್ಯೇಷ್ಠ ಕೃಷ್ಣ ಅಮಾವಾಸ್ಯೆ ರವಿವಾರ (೧೬ ಜೂನ ೮೬೬).

(೭) ಬಡೋದೆಸಂಸ್ಥಾನ ನವಸಾರಿ ಜಿಲ್ಲಾ ಬಗುಮ್ರೆಯ ತಾಮ್ರಶಾಸನ. ಅಕಾಲವರ್ಷ ಶುಭತುಂಗನ ಮಗನೂ ಗುಜರಾಥದ ಮಹಾಸಾಮಂತಾಧಿಪತಿಯೂ ಆದ ಧಾರಾವರ್ಷ ನಿರುಪಮ ಧ್ರುವರಾಜನು ಸೂರ್ಯಗ್ರಹಣ ನಿಮಿತ್ತವಾಗಿ ಭೃಗುಕಚ್ಛ(ಬಡೋಚ)ದಲ್ಲಿ ನರ್ಮದಾ ಸ್ನಾನಮಾಡಿ, ಒಬ್ಬ ಬ್ರಾಹ್ಮಣನಿಗೆ ಪಾರಾಹಣಕ (ಸುರತ ಜಿಲ್ಲೆಯಲ್ಲಿದ್ದ ಪರೋನ) ಎಂಬ ಗ್ರಾಮವನ್ನು ದಾನಕೊಟ್ಟನು; ಸಂವತ್ ೭೮೯ನೆಯ ಜ್ಯೇಷ್ಠ ಕೃಷ್ಣ ೩೦ (ತಾರೀಖು ೬ ಜೂನ ೮೬೭).

(೮) ಕಣ್ಹೇರಿಯ ಮತ್ತೊಂದು ಶಿಲಾಲೇಖ. ಅಮೋಘವರ್ಷನ ಆಳಿಕೆಯಲ್ಲಿ ೨ನೆಯ ಕಪರ್ದಿಯು ಗುಜರಾಥದ ಮಹಾಸಾಮಂತನಾಗಿದ್ದಾಗ, ವಿಷ್ಣು ಎಂಬವನು ಕೃಷ್ಣಗಿರಿಯಲ್ಲಿ ಒಂದು ಗವಿಯನ್ನು ಕೊರೆಯಿಸಿ, ಅಲ್ಲಿರುವ ಯತಿಗಳ ವಸ್ತ್ರಕ್ಕೋಸ್ಕರ ೧೦೦ ದ್ರಮ್ಮಗಳನ್ನು ಕೊಟ್ಟನು; ಸಂವತ್ ೭೯೯ (ಇಸ್ವಿ ೮೭೮).

ಬೇರೆ ಬೇರೆ ಗ್ರಂಥಗಳಲ್ಲಿ ದೊರೆತ ನೃಪತುಂಗನ ಗುಣವರ್ಣನೆಯ ಕೆಲವು ಶ್ಲೋಕಗಳನ್ನು ಕೊಟ್ಟು ಅವನ ಆಳಿಕೆಯ ವರ್ಣನೆಯನ್ನು ಮುಗಿಸುವೆವು:—

ವೀರನುದಾರಂ ಶುಚಿ ಗಂ।
ಭೀರಂ ನಯಶಾಲಿಕೈದುವೋತ್ತರದೇವಂ ॥
ಗಾರೆಬಿಗನ್ನೃಪತುಂಗಂಗೆ।
—(ಎಂಬ ಕಂದ ಭಾಗದೊಳ್) ಶಬ್ದಮಣಿದರ್ಪಣ, ಸೂತ್ರ ೧೪೦, ಪುಟ ೧೨೪.

ಕರಿವೋಲ್ ಭದ್ರಗುಣಂ ಕೇ।
ಸರಿವೋಲ್ ನಿರ್ವ್ಯಾಜಶೌರ್ಯಸಂಭೋನಿಧಿವೋಲ್ ॥
ಶರಣಾಗತರಕ್ಷಣಪಟು।
ಗಿರಿವೋಲ್ ನಿಷ್ಕಂಪಚಿತ್ತನಾನೃಪತುಂಗಂ ॥

—ಕಾವ್ಯಾವಲೋಕನಂ, ಸೂತ್ರ ೭೪, ಪುಟ ೫೫.

ಪ್ರಾಣತಾರಿತತ್ರುಟಿತ ಮುಕ್ತಾ।
ಗಣಗಣನೋತ್ತಂಸದಿಂ ಕಳಲ್ತುದುರೆ ಸಭಾಂ ॥
ಗಣವೊಪ್ಪೆ ವೀರನಾರಾ।
ಯಣನಾ ತಾರಕಿತನಭಿದವೋಲ್ ಸೊಗಯಿಸುಗುಂ ॥
ಪರಛತ್ರ ಭೂಪರಟ್ಟಿದ।
ಕರಿಗಳ್ಬಿಡುತಪ್ಪ ಮದದ ಪೊಸಲಿಂದತ್ತಂ ॥
ನರಲೋಕ ಚಂದ್ರನಾ ಮಂ।
ದಿರದೊಳಗೊಳಗೆಲ್ಲ ಕಾಲಮುಂ ಕೆಸಱಿಕ್ಕುಂ ॥

—ಕವಿರಾಜಮಾರ್ಗ, ಪರಿಚ್ಛೇದ ೩, ಪದ್ಯ ೧೮೦–೧೮೧.

---

# ೪ ನೆಯ ಅಧ್ಯಾಯ

## ರಾಷ್ಟ್ರಕೂಟರ ಇಳಿಗಾಲ

### ೭. ಎರಡನೆಯ ಕೃಷ್ಣ ಅಥವಾ ಕನ್ನರ

(೮೭೮–೯೧೪)

ಅಮೋಘವರ್ಷನ ತರುವಾಯ ಯುವರಾಜನಾದ ಕೃಷ್ಣನು ೨ ನೆಯ ಕೃಷ್ಣನೆಂಬ ಹೆಸರಿನಿಂದ ಮಳಖೇಡದ ಪಟ್ಟವನ್ನೇರಿದನು (೮೭೮). ಡಾ॥ ಫ್ಲೀಟರು ಕೊಟ್ಟ ರಾಷ್ಟ್ರಕೂಟರ ವಂಶಾವಳಿಯಲ್ಲಿ ಇವನು ೮೮೮ರಿಂದ ೯೧೧–೧೨ರ ವರೆಗೆ ಆಳಿದನೆಂದು ಬರೆದಿರುತ್ತಾರೆ. ಏಕೆಂದರೆ, ೮೭೮ರಿಂದ ೮೮೮ರ ವರೆಗಿನ ರಾಷ್ಟ್ರಕೂಟರ ಒಂದು ಶಾಸನವಾದರೂ ಇನ್ನೂ ದೊರೆತಿಲ್ಲ. ಈ ಶಾಸನಗಳ ಅಭಾವದ

ಕಾರಣವೇನಿರಬಹುದು ? ಅಮೋಘವರ್ಷ ಅಥವಾ ನೃಪತುಂಗನು ೮೭೮ರಲ್ಲೇ ಸತ್ತನೆಂಬುದಕ್ಕೆ ಯಾವ ಶಾಬ್ದಪ್ರಮಾಣವೂ ಇನ್ನೂ ಸಿಕ್ಕಿಲ್ಲ. ಬಾದಾಮಿ ಚಾಳುಕ್ಯ ಮನೆತನದ ೨ನೆಯ ಪುಲಿಕೇಸಿಯಂತೆ ಅವನು ಮುಪ್ಪಿನಿಂದಲೂ ಬೇನೆಯಿಂದಲೂ ನಿತ್ರಾಣನಾಗಿ ಕೆಲವು ವರ್ಷ ನರಳುತ್ತ ಬಿದ್ದಿರಬಹುದು. ಇಂತಹ ಪೊಲಬಿನಲ್ಲಿ ರಾಜ್ಯಲೋಭಾಕೃಷ್ಟ ರಾದ ನೆಂಟರು ಅವನ ಸಾಮ್ರಾಜ್ಯವನ್ನು ಕಿತ್ತಿಕೊಳ್ಳುವುದಕ್ಕೋಸ್ಕರ ಒಳಸಂಚನ್ನು ನಡಿಸಿ, ಒಳಜಗಳವನ್ನು ಹೂಡಿ, ರಾಜ್ಯದಲ್ಲೆಲ್ಲಾ ಅನಾಯಕತ್ವವನ್ನುಂಟುಮಾಡಿರಬಹುದು. ಕೃಷ್ಣನಿಗೆ ಅಣ್ಣಾತಮ್ಮಂದಿ ರಿದ್ದಿದ್ದಿಲ್ಲ. ಆದ್ದರಿಂದ ಅವನ ಭಾವಮೈದುನರಾದ ಬೂತುಗ ನಂದಿ ವರ್ಮರು ರಾಜ್ಯಲೋಭದಿಂದ ಕೃಷ್ಣನೊಡನೆ ಜಗಳ ಹೂಡಿದ್ದರೂ ಹೂಡಿರಬಹುದು. ಇದೇ ಸಂಧಿಯನ್ನು ಸಾಧಿಸಿ ಬಾದಾಮಿ ವೆಂಗಿ ಚಾಳುಕ್ಯರು ಮಳಖೇಡದ ಮೇಲೆ ದಂಡೆತ್ತಿಬಂದು, ಕೃಷ್ಣನನ್ನು ರಾಜ ಧಾನಿಯಿಂದ ಓಡಿಸಿರಬಹುದು. ಈವರೆಗೆ ಆದ ಶೋಧದಿಂದ ಈ ಅನು ಮಾನಗಳೊಳಗೆ ಯಾವುದು ನಿಜವಾದ್ದೆಂಬುದನ್ನು ನಿರ್ಣಯಿಸುವುದು ಅಸಾಧ್ಯವಾದರೂ ಈ ಹತ್ತು ವರ್ಷಗಳಲ್ಲಿ (೮೭೮–೮೮) ಗಂಗ ರಾಷ್ಟ್ರ ಕೂಟ ಚಾಳುಕ್ಯರೊಳಗೆ ಅತಿಶಯವಾದ ಬಡಿದಾಟವು ನಡೆದುದರಿಂದ ಸಾಮ್ರಾಜ್ಯದಲ್ಲಿ ಅರಾಜಕತ್ವವು ಉಂಟಾಗಿತ್ತೆಂದು ಧಾರಾಳವಾಗಿ ಬರೆಯಬಹುದು.

ಬಳಿಕೆಯಿಂದಲೇ ಬಲ ಎಂಬ ಅನುಭವದ ಮಾತು ವಾಚಕರಿಗೆ ಗೊತ್ತಿದ್ದ ಸಂಗತಿಯೇ ಸರಿ. ನಾವು ಕಯ್ಕಾಲುಗಳನ್ನು ಉಪಯೋಗಿ ಸುತ್ತಿದ್ದರೆ, ಅವು ಸದೃಢವಾಗಿರುತ್ತವೆ; ಗ್ರಂಥಾವಲೋಕನವನ್ನು ಮಾಡುತ್ತಿದ್ದರೆ, ವಿಷಯಗಳ ಪರಿಜ್ಞಾನವು ನಮ್ಮಲ್ಲಿ ಪೂರ್ಣವಾಗಿ ಉಳಿಯುತ್ತದೆ; ಪಾತ್ರೆಗಳನ್ನು ಬಳಿಸುತ್ತಿದ್ದರೆ ಅವು ನಿರ್ಮಲವಾಗಿ ಇರುತ್ತವೆ; ದನಗಳನ್ನು ದಿನಾಲು ದುಡಿಸಿಕೊಳ್ಳುತ್ತಿದ್ದರೆ ಅವು ತುಂಟ ತನವನ್ನು ಕಲಿಯುವುದಿಲ್ಲ. ಅದರಂತೆಯೇ ಅರಸರೂ ಸಾರ್ವಭೌಮರೂ ಶಿಷ್ಟಪರಿಪಾಲನೆಯಲ್ಲಿಯೂ ದುಷ್ಟನಿಗ್ರಹದಲ್ಲಿಯೂ ದಕ್ಷರಾಗಿದ್ದರೆ ಮಾತ್ರ ಅವರ ಕಯ್ಕೆಳಗಿನ ಅಧಿಕಾರಿಗಳೂ ಪ್ರಜೆಗಳೂ ಧರ್ಮಬುದ್ಧಿ

ಯುಳ್ಳವರೂ ಪಾಪಭೀರುಗಳೂ ರಾಜನಿಷ್ಠರೂ ಆಗಿರುತ್ತಾರೆ. ಅವರು ಶಿಷ್ಟಪರಿಪಾಲನೆಯನ್ನು ಮಾಡದಿದ್ದರೆ, ದೇಶದಲ್ಲಿ ಅಸಂತೋಷವೂ ಅನೀತಿಯೂ ಅನ್ಯಾಯಗಳೂ ಹೆಚ್ಚುತ್ತವೆ. ಅವರು ಅತಿಜಾಗರೂಕತೆಯಿಂದ ದುಷ್ಟರನ್ನು ದಂಡಿಸದಿದ್ದರೆ, ತುಂಟತನವೂ ಕಳವುದರೋಡೆಗಳೂ ಕೊಲೆಸುಲಿಗೆಗಳೂ ರಾಜದ್ರೋಹವೂ ಬಂಡಾಯಗಳೂ ಮಿತಿಮೀರಿ ಬೆಳೆಯುತ್ತವೆ. ನೃಪತುಂಗನು ವಿದ್ಯಾವ್ಯಾಸಂಗದಲ್ಲಿ ಮಗ್ನನಾಗಿ ಪಂಡಿತರ ಸಹವಾಸದಲ್ಲಿ ತನ್ನ ಎಲ್ಲ ಹೊತ್ತನ್ನು ಕಳೆಯತೊಡಗಿದ್ದರಿಂದ, ರಾಜ್ಯಭಾರದ ಕಟ್ಟುಗಳು ಸಡಿಲಾದವು, ದಂಡಿನ ಸಿಸ್ತು ಕೆಟ್ಟಿತು, ಸರಕಾರದ ಹೆದರಿಕೆಯು ತಗ್ಗಿತು, ಪುಂಡರ ಹಾವಳಿಯು ಹೆಚ್ಚಿತು, ಹಗೆಗಳು ಬಲಿಷ್ಠರಾಗಲಿಕ್ಕೆ ಅವಕಾಶ ದೊರೆಯಿತು. ಅವನಿಗೆ ಯುದ್ಧವು ಬೇಸರಾದ್ದರಿಂದ, ಗಂಗನೊಳಂಬ ಗಂಗರ ಪುಂಡಾಟಿಗೆಯನ್ನು ಕುಗ್ಗಿಸಲಿಕ್ಕೆ ತಾನೇ ದಂಡೆತ್ತಿ ಹೋಗದೆ, ಅಥವಾ ನಂಬಿಗಸ್ತರಾದ ದಂಡನಾಯಕರನ್ನು ಕಳುಹದೆ, ಅವರೊಡನೆ ಶರೀರಸಂಬಂಧವನ್ನು ಮಾಡಿ ಸ್ನೇಹವನ್ನು ಬೆಳಿಸಿದನೆಂದು ಹಿಂದೆ ಬರೆದಿರುತ್ತೇವೆ*. ರಾಜ್ಯಭಾರವು ಇಷ್ಟು ದುರ್ಬಲವಾದಾಗ ಮತ್ತು ಸಾಮ್ರಾಜ್ಯವು ಇಂತಹ ನಿಕೃಷ್ಟಾವಸ್ಥೆಯನ್ನು ಹೊಂದಿದಾಗ, ರಾಜ್ಯಸೂತ್ರಗಳು ಅಮೋಘವರ್ಷನ ಮಗನಾದ ೨ನೆಯ ಕೃಷ್ಣನ ಕಯ್ಸೇರಿದವೆಂದು ತೋರುತ್ತದೆ.

ಈ ಜಗತ್ತಿನಲ್ಲಿ ಹೊನ್ನು ಹೆಣ್ಣು ಮಣ್ಣು ಇವು ಮೂರು ಹಗೆತನಜಗಳಕ್ಕೆ ಬುನಾದಿಯಿಂದ ಮುಖ್ಯ ಕಾರಣಗಳಾಗಿರುತ್ತವೆಂಬುದು ವಾಚಕರಿಗೆ ಗೊತ್ತಿದ್ದ ಮಾತೇ ಸರಿ. ಲಕ್ಷ್ಮಿಯು ಅತಿಚಂಚಲಳಾದ್ದರಿಂದ, ಹೊನ್ನಿನ ದ್ವೇಷವು ಬಹುಶಃ ಒಂದು ತಲೆಗೆ ಮುಗಿಯುತ್ತದೆಂದು ಹೇಳಬಹುದು. ಹೆಣ್ಣಿನ ಯವ್ವನವು ಹೋದ ಬಳಿಕ ಅಥವಾ ಆಕೆಯು ತೀರಿಕೊಂಡ ಬಳಿಕ ಆ ಹಗೆತನವಾದರೂ ಕುಗ್ಗುತ್ತದೆ. ಆದರೆ ಮಣ್ಣಿನ ಅಥವಾ ಭೂಮಿಯ ದ್ವೇಷವು ಹೊನ್ನು ಹೆಣ್ಣಿನ ದ್ವೇಷದಂತೆ ಅಲ್ಪಕಾಲಿಕವಾಗಿರುವುದಿಲ್ಲ. ಆದರೊಳಗೆ ಅರಸುತನದ ಅಥವಾ ಸಾಮ್ರಾಜ್ಯ

*ಹಿಂದೆ ಅಧ್ಯಾಯ ೩, ಪು. ೧೦೨ ನೋಡಿರಿ.

ಲಕ್ಷ್ಮಿಯು ದ್ವೇಷವಂತೂ ಬಹುಕಾಲಿಕವಾಗಿದ್ದು ಬೂದಿಮುಚ್ಚಿದ ಕಿಚ್ಚಿನಂತೆ ೮-೧೦ ತಲೆಗಳಾದರೂ ಪ್ರಜ್ವಲಿಸುತ್ತದೆಂಬುದು ಈ ರಾಷ್ಟ್ರಕೂಟ ಚಾಳುಕ್ಯರ ಎಡೆಬಿಡದ ಬಡಿದಾಟದಿಂದ ಸ್ಪಷ್ಟವಾಗಿ ಕಂಡು ಬರುತ್ತದೆ.

ದ್ವೇಷದಿಂದ ದ್ವೇಷವು ಹೆಚ್ಚುತ್ತದೆ ಹೊರತು ಕಡಮೆಯಾಗುವುದಿಲ್ಲ; ಅದು ಪ್ರೀತಿಯಿಂದಲೇ ಮಾತ್ರ ತಗ್ಗುತ್ತದೆಂಬ ಗೌತಮಬುದ್ಧನ ಸಿದ್ಧಾಂತವು ತ್ರಿಕಾಲದಲ್ಲಿಯೂ ನಿಜವಾಗಿರುತ್ತದೆ. ದ್ವೇಷವು ಮನುಷ್ಯನ ಇಂದ್ರಿಯಗಳ ವಿಕಾರವಾಗಿದ್ದು, ಪ್ರೀತಿಯು ಅವನ ಆತ್ಮಶಕ್ತಿಯ ಬಲಿಷ್ಠವಾದ ಸಾಧನವಾಗಿರುತ್ತದೆ. ಆದ್ದರಿಂದ ಹಗೆತನವನ್ನು ಹೊರಗೆಡವಿ ಮನಸ್ಸನ್ನು ತಿರುಗಿಸಲಿಕ್ಕೆ ಪ್ರೀತಿಯೇ ಮುಖ್ಯ ಸಾಧನವೆಂದು ಧಾರಾಳವಾಗಿ ಹೇಳಬಹುದು. ರಾಷ್ಟ್ರಕೂಟ ಸಾರ್ವಭೌಮರಾದ ಧ್ರುವ ೩ನೆಯ ಗೋವಿಂದ ನೃಪತುಂಗರು ಈ ಪ್ರೀತಿಯ ಸಾಧನವನ್ನು ಕಯ್ಕೊಳ್ಳದೆ ವೆಂಗಿಯ ಚಾಳುಕ್ಯರ ಮೇಲೆ ಬಾರಿಬಾರಿಗೆ ದಂಡೆತ್ತಿ ಹೋಗಿ, ಅವರನ್ನು ಸೋಲಿಸಿ, ಅವರಿಂದ ಹೇರಳ ಕಪ್ಪವನ್ನು ತೆಗೆದುಕೊಂಡು, ಅವರ ರಾಜ್ಯದ ಭಾಗವನ್ನು ಕಿತ್ತಿಕೊಂಡು, ಅವರೊಳಗೆ ಸೆರೆ ಸಿಕ್ಕವರನ್ನು ಕ್ರೌರ್ಯದಿಂದ ಕೊಲ್ಲಿಸಿ, ತಮ್ಮ ಕಡುದ್ವೇಷವನ್ನು ತೋರಿಸಿದ್ದರಿಂದ ಆ ಎರಡು ಮನೆತನಗಳೊಳಗಿನ ದ್ವೇಷವು ತಲೆತಲೆಗೆ ಹೆಚ್ಚುತ್ತ ನಡೆಯಿತೇ ಹೊರತು ಕಾಲಕ್ರಮದಿಂದ ಕಡಮೆಯಾಗಲಿಲ್ಲ.

ಸುಮಾರು ೮೨೧ರಲ್ಲಿ ನೃಪತುಂಗನು ವೆಂಗಿಯ ಮೇಲೆ ದಂಡೆತ್ತಿ ಹೋಗಿ ಚಾಳುಕ್ಯರನ್ನು ಸೋಲಿಸಿ, ಅಲ್ಲಿಯ ಅರಸನಾದ ವಿಜಯಾದಿತ್ಯನನ್ನು ಶರಣು ಬರಮಾಡಿಕೊಂಡನೆಂದು ಹಿಂದೆ ಬರೆದಿರುತ್ತೇವಷ್ಟೇ*. ಮುಂದೆ ಸುಮಾರು ೫೫ ವರುಷ ಅಮೋಘವರ್ಷನು ಯಾವ ದಂಡಯಾತ್ರೆಯನ್ನು ಕಯ್ಕೊಳ್ಳದ್ದರಿಂದ, ಹೊಟ್ಟೆಯುರಿದ ವಿಜಯಾದಿತ್ಯನಿಗೂ ಅವನ ಮಗನಾದ ೩ನೆಯ ಗುಣಕ ವಿಜಯಾದಿತ್ಯನಿಗೂ (೮೪೪–೮೮೮) ಯುದ್ಧಸನ್ನಾಹವನ್ನು ಮಾಡಲಿಕ್ಕೆ ಯಥೇಷ್ಟವಾಗಿ ಅವಕಾಶ ದೊರೆಯಿತು. ಕೋಟೆಕೊತ್ತಲಗಳನ್ನು ಗಟ್ಟಿಮಾಡಿಸಿ, ಎದೆ

---

* ಹಿಂದೆ ಅಧ್ಯಾಯ ೩, ಪು. ೮೮.

ಗಾರರೂ ಜಾಣರೂ ಆದ ಹೊಸ ದಂಡಾಳುಗಳನ್ನು ಸಂಬಳಕ್ಕಿಟ್ಟು ಕೊಂಡು, ರಾಷ್ಟ್ರಕೂಟರ ಊಳಿಗವನ್ನು ತೊರೆದು ಬಂದವರಿಗೆ ಉದಾರಾಶ್ರಯವನ್ನಿತ್ತು, ಯುದ್ಧಸಾಮಗ್ರಿಗಳನ್ನೂ ಅನ್ನಸಾಮಗ್ರಿಯನ್ನೂ ಕೂಡಹಾಕಿ, ರಾಷ್ಟ್ರಕೂಟ ಸಾಮ್ರಾಜ್ಯದ ಅಂತಃಸ್ಥಿತಿಗತಿಯನ್ನು ತಿಳಿದುಕೊಳ್ಳಲಿಕ್ಕೆ ಹಲವು ಚತುರರಾದ ಚಾರರನ್ನು ಕಳುಹಿ, ಎಲ್ಲ ಸಿದ್ಧತೆಯನ್ನು ಮಾಡಿಕೊಂಡು, ಸುಸಂಧಿಯನ್ನು ಎದುರು ನೋಡುತ್ತ ಗುಣಕ ವಿಜಯಾದಿತ್ಯನು ಕುಳಿತನು (೮೭೬?).

ಗುಣಕ ವಿಜಯಾದಿತ್ಯನಿಗೆ ಸಮಯ ನಿರೀಕ್ಷಿಸುತ್ತ ಬಹಳ ದಿವಸ ಕೂಡ್ರುಬೇಕಾಗಲಿಲ್ಲ. ದಿನವೊಬ್ಬ ಬೇಹಿನವನು ಬಂದು ರಾಷ್ಟ್ರಕೂಟ ಸಾಮ್ರಾಜ್ಯದ ಕಟ್ಟುಹರಕತನದ ಬಗೆಬಗೆಯ ಪ್ರಕಾರಗಳನ್ನು ಬಣ್ಣಿಸತೊಡಗಿದನು. ಮುಪ್ಪಿನ ಮುದುಕನಾದ ಅಮೋಘವರ್ಷನ ಅತಿದೌರ್ಬಲ್ಯವೂ ರಾಜ್ಯಪಾಲಕನಾದ ಕೃಷ್ಣನ ಎಚ್ಚರಗೇಡಿತನವೂ ಅಳಿಯಂದಿರ ಒಳಸಂಚೂ ಮಂತ್ರಿಗಳ ತಟಸ್ಥತೆಯೂ ದಂಡನಾಯಕರ ದ್ರೋಹವಿಚಾರಗಳೂ ಅರಮನೆಯ ಹೆಂಗಸರ ಪಕ್ಷಪರಪಕ್ಷತೆಯೂ ತುಂಟರ ದುಂಡುಟಿಗೆಯೂ ಪುಂಡರ ಪುಂಡಾಟಿಗೆಯೂ ವಿಜಯಾದಿತ್ಯನ ಕಿವಿಯಲ್ಲಿ ಕೀಸರಿಟ್ಟವು. ಆದ್ದರಿಂದ ಇನ್ನು ಮುಂದೆ ಸುಮ್ಮನೇ ಕುಳಿತು ಹೊತ್ತುಗಳೆಯುವುದು ಹಿತಕರವಾಗಲಾರದೆಂದೆಣಿಸಿ, ಅವನು ದಂಡಯಾತ್ರೆಯ ಜೋಡಣಿಯನ್ನೆಲ್ಲ ಮಾಡಿಕೊಂಡು, ದೊಡ್ಡ ದಂಡಿನೊಡನೆ ರಾಷ್ಟ್ರಕೂಟರ ರಾಜ್ಯವನ್ನೊಳನುಗ್ಗಿದನು (೮೭೭?).

೮೭೮ರಿಂದ ೮೮೮ರ ವರೆಗೆ ೧೦ ವರುಷಗಳ ರಾಷ್ಟ್ರಕೂಟರ ಶಾಸನಗಳಾವವೂ ಇನ್ನೂ ದೊರೆತಿಲ್ಲೆಂದು ಮೇಲೆ ಬರೆದಿರುತ್ತೇವಷ್ಟೇ. ಆ ಕಾಲದ ಅವರ ಶಾಸನಗಳೇ ಇಲ್ಲೆಂದು ಬರೆದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ. ಏಕೆಂದರೆ, ಪಾಡಿಕೆಯಾಗಿ ಅರಸರು ತಮ್ಮ ಗೆಲವನ್ನೇ ಕೊರೆಯಿಸಿಡುತ್ತಾರೆ, ಹೊರತು ತಮ್ಮ ಸೋಲನ್ನೂ ತಮಗೆ ಬಂದ ವಿಪತ್ತನ್ನೂ ಬರೆಯಿಸಿಡುವುದಿಲ್ಲ. ಆದಕಾರಣ ಈ ಹತ್ತು ವರ್ಷಗಳಲ್ಲಿ ಏನು ನಡೆಯಿತೆಂಬುದನ್ನು ತಿಳಿದುಕೊಳ್ಳಲಿಕ್ಕೆ ವೆಂಗಿಯ ಚಾಳುಕ್ಯರ ಶಾಸನಗಳ ಹೊರತು ಬೇರೆ ಯಾವ ಸಾಧನವೂ ಇಲ್ಲ. ಈ ಚಾಳುಕ್ಯರು

ತಮ್ಮ ಶಾಸನದಲ್ಲಿ ಬರೆಯುವುದೇನೆಂದರೆ:—"ರಟ್ಟರ ಮುಖ್ಯಸ್ಥನು ಯುದ್ಧಕ್ಕೆ ಕೆಣಕಿದ್ದರಿಂದ ೩ ನೆಯ ಗುಣಕ ವಿಜಯಾದಿತ್ಯನು (೮೪೪-೮೮೮) ಅಪ್ರತಿಮರಾದ ಗಂಗರನ್ನು ಸೋಲಿಸಿ, **ಮಂಗಿ**ಯ ತಲೆಯನ್ನು ಕಾಳೆಗದಲ್ಲಿ ಹಾರಿಸಿ, ಪ್ರಚಂಡನಾದ (೨ ನೆಯ) ಕೃಷ್ಣನನ್ನು ಹೆದರಿಸಿ, ಅವನ ರಾಜಧಾನಿ(ಮಳಖೇಡ)ಯನ್ನು ಸುಟ್ಟು ಬೂದಿಮಾಡಿಬಿಟ್ಟನು*. (ಪರಿಶಿಷ್ಟದಲ್ಲಿ ಕೊಟ್ಟ ಶಾಸನವನ್ನು ನೋಡಿರಿ.)

ಮೇಲೆ ಕೊಟ್ಟ ವೆಂಗಿ ಚಾಳುಕ್ಯರ ಬರಹದಲ್ಲಿ ಎಷ್ಟು ಸುಳ್ಳು ಅಥವಾ ಅತಿಶಯೋಕ್ತಿ ಇರುತ್ತದೆಂಬುದನ್ನು ಕಂಡುಹಿಡಿಯಲಿಕ್ಕೆ ನಮಗೆ ಬೇರೆ ಯಾವ ಆಧಾರಗಳು ಇನ್ನೂ ಸಿಕ್ಕಿಲ್ಲ. ಆದ್ದರಿಂದ ಗುಣಕ ವಿಜಯಾದಿತ್ಯನು ರಾಷ್ಟ್ರಕೂಟ ರಾಜ್ಯವನ್ನೊಳನುಗ್ಗಿದಾಗ, ಕೃಷ್ಣನ ಭಾವಮೈದುನನಾದ ಗಂಗ ಬೂತುಗನು ಅವನನ್ನು ಹಿಂದಕ್ಕಟ್ಟಲಿಕ್ಕೆ ಹೋಗಿ, ಮುಂದೆ ನಡೆದ ಕಾಳೆಗದಲ್ಲಿ ಮಡಿದಿರಬಹುದು. ಏಕೆಂದರೆ, ಈ ಬೂತುಗನು ಹರೆಯದಲ್ಲೇ ಸತ್ತನೆಂದು ಗಂಗವಂಶದ ವರ್ಣನೆಯಲ್ಲಿ ಬರೆದಿದ್ದೇವೆ†. ಕಾಳೆಗದಲ್ಲಿ ಶಿರಚ್ಛೇದ ಮಾಡಿಸಿಕೊಂಡವನು ಈ ಬೂತುಗನೇ ಆಗಿದ್ದರೆ, ಅವನಿಗೆ **ಮಂಗಿ** ಎಂಬ ಮತ್ತೊಂದು ಹೆಸರು ಇದ್ದಂತೆ ಕಂಡುಬರುತ್ತದೆ. ಗುಣಕ ವಿಜಯಾದಿತ್ಯನು ದಾರಿಯಲ್ಲಿ ರಾಷ್ಟ್ರಕೂಟರ ದಂಡನ್ನು ಉದ್ಧ್ವಸ್ತಮಾಡಿ ರಾಜಧಾನಿಯಾದ ಮಳಖೇಡಕ್ಕೆ ಹೋಗಲು, ಅದನ್ನು ಕಾಪಾಡುವಷ್ಟು ದಂಡು ಇಲ್ಲದ್ದರಿಂದ ಕೃಷ್ಣನು ಅಲ್ಲಿಂದ ಓಡಿಹೋಗಿರಬಹುದು ಮತ್ತು ಹೊಟ್ಟೆಯುರಿದ ಚಾಳುಕ್ಯರು ಆ ಪಟ್ಟಣವನ್ನು ಸುಟ್ಟಿರಬಹುದು. ನೃಪತುಂಗನು ಇಂತಹ ಆಪತ್ಕಾಲದಲ್ಲಿ ಸತ್ತನೋ ಅಥವಾ ಅದಕ್ಕೂ ಮುಂಚೆ ಸತ್ತಿದ್ದನೋ ಗೊತ್ತಾಗುವುದಿಲ್ಲ.

ಮಳಖೇಡ ಪಟ್ಟಣದ ದಹನವು ೮೭೮ರಲ್ಲಿಯೇ ಆಗಿದ್ದರೆ, ಮುಂದೆ ೧೦ ವರ್ಷ ರಾಷ್ಟ್ರಕೂಟ ಕೃಷ್ಣನು ಎಲ್ಲಿ ಏನುಮಾಡುತ್ತಿದ್ದ

* ಮುಂಬಯಿ ಇಲಾಖೆಯ ಗ್ಯಾಜಿಟಿಯರ, ಸಂ. ೧, ಭಾ. ೨, ಪು. ४೧೧-೧೨; ಮತ್ತು ಇಂಡಿಯನ್ ಆಂಟಿಕ್ವರಿ, ಸಂ. ೨೦, ಪು. ೧೦೨-೩.

† ಕರ್ನಾಟಕ ಸಾಮ್ರಾಜ್ಯ, ಸಂ. ೧, ಭಾ. ೧, ಅ. ४, ಪು. ೮४.

ನೆಂಬುದನ್ನು ತಿಳಿದುಕೊಳ್ಳಲಿಕ್ಕೆ ನಮಗೆ ಸಾಧನಗಳಾವವು ಇನ್ನೂ ಸಿಕ್ಕಿಲ್ಲ. ಜಯಶಾಲಿಗಳಾದ ಪೂರ್ವ ಚಾಳುಕ್ಯರಾದರೂ ಏನು ಮಾಡು ತ್ತಿದ್ದರೆಂಬುದರ ವಿವರವು ಗೊತ್ತಾಗುವುದಿಲ್ಲ. ಆದ್ದರಿಂದ ಈ ಕಾಲದ ಇತಿಹಾಸವನ್ನು ನಾವು ಅನುಮಾನದಿಂದಲೇ ಕಂಡುಹಿಡಿಯಬೇಕಾಗಿದೆ. ಈ ಆಪತ್ಕಾಲದಲ್ಲಿ ೨ ನೆಯ ಕೃಷ್ಣನು ತನ್ನ ರಾಜಧಾನಿಯಿಂದ ದೂರ ವಾಗಿದ್ದ ಯಾವದಾದರೊಂದು ಅನುಕೂಲವಾದ ಊರಿಗೆ ಹೋಗಿ, ಅಲ್ಲಿ ಯಥಾವಕಾಶವಾಗಿ ತನ್ನ ಅನುಯಾಯಿಗಳನ್ನು ಕರೆಯಿಸಿಕೊಂಡು, ತನ್ನ ದಂಡನ್ನು ಬೆಳಿಸಿ, ಪೂರ್ವ ಚಾಳುಕ್ಯರೊಡನೆ ಕಾದಲಿಕ್ಕೆ ಸಿದ್ಧನಾಗಿರ ಬಹುದು. ಅಥವಾ ಚೇದಿಯ ಅರಸನೂ ತನ್ನ ಹೆಣ್ಣುಕೊಟ್ಟ ಮಾವನೂ ಆದ ೧ ನೆಯ ಕೊಕ್ಕಲನ ಆಶ್ರಯಕ್ಕೆ ಹೋಗಿ, ಅವನಿಂದ ದಂಡಿನ ಸಹಾಯವನ್ನು ಪಡೆದು, ಪೂರ್ವ ಚಾಳುಕ್ಯರನ್ನು ತನ್ನ ರಾಜ್ಯದಿಂದ ಹೊರಗೆ ಹಾಕಿರಬಹುದು. ಈ ಎರಡು ಪ್ರಯತ್ನಗಳೊಳಗೆ ಒಂದರಲ್ಲಿ ಅಥವಾ ಈ ಎರಡೂ ಪ್ರಯತ್ನಗಳನ್ನು ಮಾಡುವುದರಲ್ಲಿ ೮೭೮ರಿಂದ ೮೮೮ರ ವರೆಗೆ ೧೦ ವರ್ಷಗಳು ಕಳೆದುಹೋದವೆಂದು ಊಹಿಸಿದರೆ ಹೆಚ್ಚು ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

ಅತಿಬಲಾಢ್ಯರಾದ ರಾಷ್ಟ್ರಕೂಟ ಸಾರ್ವಭೌಮರ ಹೆಸರು ವಾಸಿಯಾದ ಮತ್ತು ಹೊಸರಾಜಧಾನಿಯಾದ ಮಳಖೇಡವನ್ನು ಸುಡು ವಷ್ಟು ಸಾಮರ್ಥ್ಯವು ಪೂರ್ವ ಚಾಳುಕ್ಯರಿಗೆ ಹೇಗೆ ಬಂತೆಂಬ ಕುತೂ ಹಲವು ವಾಚಕರ ಮನಸ್ಸಿನಲ್ಲಿ ಸ್ವಾಭಾವಿಕವಾಗಿ ಹುಟ್ಟಬಹುದು. ಈ ಕುತೂಹಲವನ್ನು ಸಮಾಧಾನಗೊಳಿಸಲಿಕ್ಕೆ ನಮಗೆ ಶಾಬ್ದಪ್ರಮಾಣ ಗಳಾವವೂ ದೊರೆಯುವುದಿಲ್ಲ. ಆದಕಾರಣ ಅನುಮಾನ ಪ್ರಮಾಣದಿಂದಲೇ ನಾವು ಸಂತುಷ್ಟರಾಗಬೇಕಾಗಿದೆ. ಪ್ರತಿಯೊಬ್ಬ ಮನುಷ್ಯನ ಶರೀರದಲ್ಲಿ ರೋಗದ ಬೀಜಗಳು ಇರುವಂತೆ ಪ್ರತಿಯೊಂದು ರಾಜಕೀಯ ಶರೀರದಲ್ಲಿ ರೋಗದ ಬೀಜಗಳು ಯಾವಾಗಲೂ ಇದ್ದೇ ಇರುತ್ತವಷ್ಟೇ. ಅವು ಹೆಚ್ಚಾದಾಗ ಯಾವದಾದರೊಂದು ರೋಗವು ತಲೆದೋರುತ್ತದೆ; ಮತ್ತು ಅವುಗಳನ್ನು ಮಿತಿಮೀರಿ ಬೆಳೆಯಗೊಟ್ಟರೆ, ಕಷ್ಟಸಾಧ್ಯವಾದ ಅಥವಾ ಅಸಾಧ್ಯವಾದ ಬಗೆ ಬಗೆಯ ರೋಗಗಳು ಮನುಷ್ಯ ಶರೀರವನ್ನಾಗಲಿ

ರಾಜಕೀಯ ಶರೀರವನ್ನಾಗಲಿ ಸೇರಿ, ಅವುಗಳನ್ನು ಪರಿಪರಿಯಿಂದ ಪೀಡಿಸುತ್ತವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತೇ ಸರಿ. ನೃಪತುಂಗನು ತನ್ನ ಮುಪ್ಪಿನ ಕಾಲದಲ್ಲಿ ದಂಡಸಾಧ್ಯರಾದ ಪುಂಡರನ್ನು ಮುರಿಬಡಿಯದೆ, ಅವರೊಡನೆ ಸ್ನೇಹಬೆಳಿಸಲಿಕ್ಕೆ ಹೆಣಗಿದ್ದರಿಂದ ತುಂಟರು ಬಲಿಷ್ಠರಾದರು, ಪುಂಡರ ಹಾವಳಿಯು ಹೆಚ್ಚಿತು, ದ್ರೋಹಿಗಳು ಪ್ರಬಲರಾಗಲಿಕ್ಕೆ ಅನುವು ದೊರೆಯಿತು. ಆದಕಾರಣ ೯ ನೆಯ ಶತಮಾನದ ಕೊನೆಯ ಭಾಗದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಕಷ್ಟಸಾಧ್ಯವಾದ ರೋಗವು ತಗಲಿತ್ತೆಂದು ನಿಶ್ಚಯವಾಗಿ ಹೇಳಬಹುದು. ಅರಮನೆಯೊಳಗೆ ಒಳಸಂಚು, ಮಂತ್ರಿಗಳೊಳಗೆ ಮತಭೇದ, ದಂಡನಾಯಕರೊಳಗೆ ಎರಡಿಟ್ಟು, ಮಂಡಲೇಶ್ವರರೊಳಗೆ ಮಹತ್ವಾಕಾಂಕ್ಷೆ ಅಥವಾ ಉದಾಸೀನತೆ, ಹಗೆಗಳೊಳಗೆ ಹುರುಪು—ಇವೇ ಈ ಕಷ್ಟಸಾಧ್ಯ ರೋಗದ ಲಕ್ಷಣಗಳಾಗಿದ್ದವು.

ರೋಗಿಗಳ ಪ್ರಕೃತಿಯಲ್ಲಿ ಆಗಿಂದಾಗ ಹೆಚ್ಚುಕಡಮೆ ಆಗುತ್ತಿರುತ್ತದಷ್ಟೇ. ಒಮ್ಮೆ ರಾಷ್ಟ್ರಕೂಟ ರಾಜಕೀಯ ಶರೀರದಲ್ಲಿ ರೋಗದ ಉದ್ರೇಕವಾದಾಗ ಪೂರ್ವ ಚಾಳುಕ್ಯರು ಹೇಗೋ ಅವರ ರಾಜಧಾನಿಯಾದ ಮಳಖೇಡವನ್ನು ಹೊಕ್ಕು ಅದನ್ನು ಸುಟ್ಟರು. ಆದರೆ ಅದನ್ನು ತಮ್ಮ ಸ್ವಾಧೀನದಲ್ಲಿ ಇಟ್ಟುಕೊಳ್ಳಲಿಕ್ಕಾಗಲಿ ಅವರ ರಾಜ್ಯವನ್ನು ಗೆದ್ದುಕೊಳ್ಳಲಿಕ್ಕಾಗಲಿ ಬೇಕಾದಷ್ಟು ಸಾಮರ್ಥ್ಯವು ಅವರಲ್ಲಿದ್ದಿಲ್ಲ. ೨ ನೆಯ ಕೃಷ್ಣನು ಶೂರನೂ ಸಾಹಸಿಯೂ ಆದ್ದರಿಂದ ವಿಶ್ವಪ್ರಯತ್ನಮಾಡಿ, ದೊಡ್ಡ ದಂಡನ್ನು ಕೂಡಿಸಿಕೊಂಡು ಬಂದು, ಅವರಿಂದ ರಾಜಧಾನಿಯನ್ನು ಕಿತ್ತಿಕೊಂಡು ಅವರನ್ನು ಬೆನ್ನಟ್ಟಿದನು (೮೮೦?). ಪೂರ್ವ ಚಾಳುಕ್ಯರನ್ನು ತನ್ನ ರಾಜ್ಯದಿಂದ ಹೊರಗೆ ಹಾಕಲಿಕ್ಕೆ ಕೃಷ್ಣನಿಗೆ ಸುಮಾರು ೪ ವರ್ಷಗಳು ತಗಲಿರಬಹುದು. ಅಷ್ಟರಿಂದಲೇ ಸಂತುಷ್ಟನಾಗದೆ ಅವನು ಸೇಡುತೀರಿಸಿಕೊಳ್ಳುವ ಉದ್ದೇಶದಿಂದ ಅವರ ರಾಜ್ಯವನ್ನೊಳಸುಗ್ಗಿದನು (೮೮೪). ಎಡೆಬಿಡದೆ ಸೋಲುತ್ತ ತಿರುಗಿ ಬಂದ ದಂಡಿನವರು ಹುರುಪಿನಿಂದ ಕಾದುವ ಸಂಭವವೆಲ್ಲಿ? ಪೂರ್ವಚಾಳುಕ್ಯರ ರಾಜಧಾನಿಯಾದ ವೆಂಗಿಯು ಕೃಷ್ಣನ ಕೈಸೇರಿತು. ೩ ನೆಯ ವಿಜಯಾ

ದಿತ್ಯನು ಸತ್ತನು. ಅಷ್ಟರಲ್ಲಿ ತನ್ನ ರಾಜ್ಯದೊಳಗೆ ಪುಂಡ ಸಾಮಂತರ ಹಾವಳಿಯೂ ಹೆಚ್ಚುತ್ತ ನಡೆದ ಸುದ್ದಿಯೂ ಬಂದುದರಿಂದ ಕೃಷ್ಣ ಸಾರ್ವಭೌಮನು ವೆಂಗಿಯ ರಾಜ್ಯಕ್ಕೆ ತನ್ನೊಬ್ಬ ದಂಡನಾಯಕನನ್ನು ಮಂಡಲೇಶ್ವರನಾಗಿ ನೇಮಿಸಿ, ಜಯಭೇರಿಯನ್ನು ಹೊಡಿಸುತ್ತ ಮರಳಿ ತನ್ನ ರಾಜಧಾನಿಗೆ ಬಂದು, ಅದನ್ನು ಸಿಂಗರಿಸತೊಡಗಿದನು (೮೮೮?). ಮುಂದೆ ವಿಜಯಾದಿತ್ಯನ ಮಗನಾದ **೧ನೆಯ ಭೀಮನು** (೮೮೮-೯೧೮) ತನ್ನ ಪಿತ್ರಾರ್ಜಿತ ರಾಜ್ಯವನ್ನು ಕ್ರಮ ಕ್ರಮವಾಗಿ ದೊರಕಿಸಿದನೆಂದು ಪೂರ್ವ ಚಾಳುಕ್ಯರ ಶಾಸನಗಳು ಹೇಳುತ್ತವೆ*.

೨ನೆಯ ಕೃಷ್ಣನು ಬಲಾಢ್ಯ ಸಾರ್ವಭೌಮನಾಗಿದ್ದನೆಂತಲೂ ಅವನು ಗುರ್ಜರರನ್ನು ಬೆದರಿಸಿ, ಲಾಟರ ಸೊಕ್ಕು ಮುರಿದು, ಗೌಡರಿಗೆ ನಮ್ರತೆಯನ್ನು ಕಲಿಸಿ, ಕೊಂಕಣವನ್ನು ಕಲಿಕಿ, ಆಂಧ್ರ ಕಳಿಂಗ ಗಾಂಗ ಮಾಗಧರನ್ನು ವಿಧೇಯರಾಗಿ ಮಾಡಿಕೊಂಡನೆಂದು ವರ್ಧಾ ನವಸರಿಯ ಶಾಸನಗಳಿಂದ ತಿಳಿದುಬರುತ್ತದೆಂದು ಡಾ|| ಭಾಂಡಾರಕರರು ಬರೆಯುತ್ತಾರೆ†. ಇದೆಲ್ಲ ಹುರುಳಿಲ್ಲದ ಹೊಗಳಿಕೆ ಎಂದೆಣಿಸಿ ಡಾ|| ಫ್ಲೀಟರು ಈ ವರ್ಣನೆಯನ್ನು ಬಿಟ್ಟುಕೊಟ್ಟಿರುತ್ತಾರೆ. ತನ್ನ ವಂಶಜರು ಆಳುತ್ತಿದ್ದ ಲಾಟ ಗುಜರಾಥ ಪ್ರಾಂತಗಳಿಗೆ ಅವನು ಹೋಗಿದ್ದರೂ ಹೋಗಿರಬಹುದು. ಗಾಂಗರು ಅವನ ಆಪ್ತರಾದ್ದರಿಂದ ಅವರೊಡನೆ ಹೊಸ ಒಡಂಬಡಿಕೆಯನ್ನು ಮಾಡಿಕೊಂಡಿರಬಹುದು. ಆದರೆ ಅವನು ಅಂಗ ವಂಗ ಮಗಧ ಕಳಿಂಗಗಳಲ್ಲಿ ದಿಗ್ವಿಜಯವನ್ನು ಮಾಡಿದ ಬಗ್ಗೆ ಹೊಸ ಶಾಬ್ದಪ್ರಮಾಣಗಳು ದೊರೆತ ಹೊರತು ನಾವು ಅದನ್ನು ನಂಬಲಾರೆವು.

ಅಕಾಲವರ್ಷ ಕೃಷ್ಣನ ಆಳಿಕೆಯಲ್ಲಿ ಜಿನಸೇನನು ಆರಂಭಿಸಿದ ಮತ್ತು ಗುಣಭದ್ರನು ಮುಂದರಿಸಿದ ಮಹಾಪುರಾಣವನ್ನು ಶಕ ೮೨೦ ನೆಯ ಪಿಂಗಳ ಸಂವತ್ಸರದಲ್ಲಿ (೮೯೭ನೆಯ ಇಸ್ವಿ) ಗುಣಭದ್ರನ ಶಿಷ್ಯನಾದ ಲೋಕಸೇನನೆಂಬವನು ಮುಗಿಸಿದನು. ಆದಿಪುರಾಣದ

---

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೪೧೨.

† ,, ,, ,, ,, ೨೦೧.

ಕೊನೆಯಲ್ಲಿ ಅಕಾಲವರ್ಷನ ಆನೆಗಳು ಗಂಗಾ ನದಿಯ ನೀರಿನಲ್ಲಿ ಮಿಂದವೆಂತಲೂ ಮಲೆಯಾಳದ ನಿಬಿಡವಾದ ಚಂದನವನದಲ್ಲಿ ಮಲಗಿ ಕೊಂಡವೆಂತಲೂ ವರ್ಣನೆ ಇದೆ*. ಈ ವರ್ಣನೆಯು ಕಲ್ಪನಾತರಂಗ ವೆಂತಲೂ ಕವಿಯ ಅತಿಶಯೋಕ್ತಿ ಎಂತಲೂ ಹೇಳಬಹುದು.

ಹಿರಿಯರು ತಂತಮ್ಮ ಮಕ್ಕಳಿಗಿಟ್ಟ ಉದ್ದವಾದ ಹೆಸರಿನಿಂದ ಅವರನ್ನು ಕರೆಯದೆ ಅದರ ಸಂಕ್ಷಿಪ್ತರೂಪವನ್ನು ಮಾಡಿ ಆ ಸಣ್ಣ ಹೆಸರಿನಿಂದ ಅವರನ್ನು ಕರೆಯುವ ಸಾಂಪ್ರದಾಯವು ಬಹುಕಾಲದಿಂದ ಬಂದಿರುತ್ತದಷ್ಟೇ. ವಿಷ್ಣುವರ್ಧನನನ್ನು ಬಿಟ್ಟಿ ಅಥವಾ ಬಿಟ್ಟಿಗನೆಂತಲೂ, ಜಯಸಿಂಹನನ್ನು ದೇಸಿಂಗನೆಂತಲೂ, ಗೋವಿಂದನನ್ನು ಗೊಜ್ಜಿಗ ನೆಂತಲೂ ಕಾರ್ತವೀರ್ಯನನ್ನು ಕಟ್ಟನೆಂತಲೂ ಸತ್ಯಾಶ್ರಯನನ್ನು ಸತ್ತಿಗನೆಂತಲೂ, ವಿಕ್ರಮಾದಿತ್ಯನನ್ನು ವಿಕ್ಕಲನೆಂತಲೂ, ಚಿಂತಾಮಣಿ ಯನ್ನು ಚಿಂತಪ್ಪನೆಂತಲೂ, ದತ್ತಾತ್ರಯನನ್ನು ದತ್ತಪ್ಪನೆಂತಲೂ, ಲಕ್ಷ್ಮಣನನ್ನು ಲಚ್ಚ್ಯಾ ಎಂತಲೂ, ನಾರಾಯಣನನ್ನು ನಾನಾ ಎಂತಲೂ, ಪರಶುರಾಮನನ್ನು ಪರಶಾ ಎಂತಲೂ, ಶ್ರೀನಿವಾಸನನ್ನು ಸೀನಪ್ಪ ನೆಂತಲೂ, ತ್ರ್ಯಯಂಬಕನನ್ನು ತಿಮ್ಮಪ್ಪನೆಂತಲೂ, ವಿಶ್ವನಾಥನನ್ನು ವಾಸಪ್ಪನೆಂತಲೂ, ವಿಠ್ಠಲನನ್ನು ವಿಟ್ಟು ಎಂತಲೂ, ಪ್ರಹ್ಲಾದನನ್ನು ಪಲ್ಯಾ ಎಂತಲೂ—ಕರೆಯುವ ರೂಢಿಯು ಈಗಲೂ ಉಂಟು. ಅದರಂತೆ ೨ನೆಯ ಕೃಷ್ಣನನ್ನು ಆ ಕಾಲಕ್ಕೆ **ಕನ್ನರ**ನೆಂದು ವಾಡಿಕೆಯಾಗಿ ಕರೆಯು ತ್ತಿದ್ದರು. ಇವನು ಚೇದಿಯ ಅರಸನಾದ ೧ನೆಯ ಕೊಕ್ಕಲನ ಮಗಳನ್ನು ಮದುವೆಯಾಗಿದ್ದನು. ಆದರೆ ಈ ಕೊಕ್ಕಲನು ತನ್ನ ಅಳಿಯನಿಗೆ ವಿಪತ್ತು ಬಂದಾಗ ಎಷ್ಟುಮಟ್ಟಿಗೆ ನೆರವಾದನೆಂಬುದು ಗೊತ್ತಾಗು ವದಿಲ್ಲ. ಇವನ ಮಗಳ ಹೆಸರಾಗಲಿ ಅವಳಿಗೆ ಎಷ್ಟು ಮಕ್ಕಳಿದ್ದರೆಂಬು

---

* ಯಸ್ಯೋತ್ತುಂಗಮತಂಗಜಾ ನಿಜಮದಸ್ರೋತಸ್ವಿನೀಸಂಗಮಾ |
ದ್ಗಾಂಗಂ ವಾರಿ ಕಲಂಕಿತಂ ಕಟುಮುಹುಃ ಪೀತ್ವಾಪ್ಯಗಚ್ಛತ್ತೃಷಃ ||
ಕೌಮಾರಂ ಘನಚಂದನಂ ವನಮುಪಾಂಪತ್ಯುಸ್ತರಂಗಾನಿಲೈ |
ರ್ಮಂದಾಂದೋಲಿತಮಸ್ತಭಾಸ್ಕರಕರಚ್ಛಾಯಂ ಸಮಾಶಿಶ್ರಿಯನ್ ||

ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೦೨.

ದಾಗಲಿ ತಿಳಿಯುವುದಿಲ್ಲ. ೨ನೆಯ ಕೃಷ್ಣನಿಗೆ ಒಬ್ಬ ಗಂಡುಮಗನು ಮಾತ್ರ ಇದ್ದಂತೆ ತೋರುತ್ತದೆ. ಅವನ ತೊಟ್ಟ ಹೆಸರು **ಜಗತ್ತುಂಗ**ನಾದರೂ ಅವನ ಇಟ್ಟ ಹೆಸರು ಏನಿತ್ತೆಂಬುದನ್ನು ತಿಳಿದುಕೊಳ್ಳುವುದಕ್ಕೆ ಲೇಖಗಳೇ ಸಿಕ್ಕಿಲ್ಲ.

೨ನೆಯ ಕೃಷ್ಣನಿಗೆ ಅಕಾಲವರ್ಷ ಶುಭತುಂಗ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಎಂಬ ಬಿರುದುಗಳಿದ್ದವು. ಗುಣಭದ್ರನ ಉತ್ತರಪುರಾಣದ ಪ್ರಶಸ್ತಿಯಲ್ಲಿ ಚೆಲ್ಲಕೇತನ ಮನೆತನದ ಲೋಕಾದಿತ್ಯನೆಂಬವನು ೨ನೆಯ ಕೃಷ್ಣನ ಮಹಾಮಂಡಲೇಶ್ವರನಾಗಿ, ವ(ಬ)ಂಕಾಪುರವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು, ಬನವಾಸಿ ಪ್ರಾಂತವನ್ನು ಆಳುತ್ತಿದ್ದನೆಂದು ಬರೆದಿದೆ. ಇವನು ಸುಮಾರು ೯೧೪ರಲ್ಲಿ ಸತ್ತಿರಬಹುದೆಂದು ತೋರುತ್ತದೆ. ೨ನೆಯ ಕೃಷ್ಣನು ಕಲಚುರಿ ಮನೆತನದ ಕೊಕ್ಕಲನೆಂಬವನ ಮಗಳನ್ನು ಮದುವೆಮಾಡಿಕೊಂಡಿದ್ದನು.

೨ನೆಯ ಕೃಷ್ಣನಿಗೆ ಜಗತ್ತುಂಗನೆಂಬೊಬ್ಬ ಮಗನಿದ್ದನೆಂದು ಮೇಲೆ ಬರೆದಿರುತ್ತೇವಷ್ಟೇ. ಇವನು ಬಲು ಚೆಲುವನಾಗಿದ್ದನೆಂದು ವರ್ಧಾದ ಶಾಸನದಲ್ಲಿ ಬರೆದಿದೆ. ಇವನು ತನ್ನ ಸೋದರಮಾವನಾದ **ರಣವಿಗ್ರಹ** ಶಂಕರಗಣನ ಹಿರಿಮಗಳಾದ **ಲಕ್ಷ್ಮಿ** ಎಂಬಾಕೆಯನ್ನು ಮದುವೆಮಾಡಿಕೊಂಡಿದ್ದನು. ಅವಳಿಂದ ಇವನಿಗೆ **ಇಂದ್ರ**ನೆಂಬ ಒಬ್ಬ ಮಗನು ಹುಟ್ಟಿದನು. ಮುಂದೆ ೨ನೆಯ ಕೃಷ್ಣನು ಇರುವಾಗಲೇ ಲಾಟ ಪ್ರಾಂತದ ರಾಷ್ಟ್ರಕೂಟ ಮನೆತನದ ಮಂಡಲೇಶ್ವರನು ತಿರುಗಿಬಿದ್ದುದರಿಂದ ಇವನು ಆ ಪ್ರಾಂತಕ್ಕೆ ದಂಡೆತ್ತಿಹೋಗಿ ಅವನನ್ನು ದಂಡಿಸಿ, ತಿರುಗಿ ಬರುವಾಗ ತನ್ನ ಮಾವನ ರಾಜಧಾನಿಯಾದ ಚೇದಿಗೆ ಹೋಗಿ ಅಲ್ಲಿರುವಾಗ ಅವನ ೨ನೆಯ ಮಗಳಾದ **ಗೋವಿಂದಾಂಬೆ**ಗೆ ಮೋಹಿಸಿ ಅವಳನ್ನು ಮದುವೆಯಾದನು. ಅವಳಿಂದ ಇವನಿಗೆ **ಅಮೋಘವರ್ಷ** (ವಡ್ಡಿಗ) ಎಂಬ ಎರಡನೆಯ ಮಗನು ಹುಟ್ಟಿದನು. ಈ ಜಗತ್ತುಂಗನು ತನ್ನ ತಂದೆ ಇರುವಾಗಲೇ ಸತ್ತುದರಿಂದ ಪಟ್ಟವೇರಲಿಲ್ಲೆಂದು ಖಾರೆಪಟ್ಟಣ, ನವಸರಿ, ವರ್ಧಾ ಈ ಮೂರು ಸ್ಥಳಗಳ ಶಾಸನಗಳಿಂದ ಸ್ಪಷ್ಟವಾಗಿ ಕಂಡುಬರುತ್ತದೆ.

೨ನೆಯ ಕೃಷ್ಣನ ಆಳಿಕೆಗೆ ಸಂಬಂಧಿಸಿದ ಶಾಸನಗಳ ಸಾರಾಂಶ ವನ್ನು ಕೆಳಗೆ ಕೊಡುವೆವು:—

(೧) ಬಡೋದೆ ಸಂಸ್ಥಾನದಲ್ಲಿದ್ದ ಬಗುವ್ರೆಯ ತಾಮ್ರ ಶಾಸನ. ಶಕ ೮೧೦ ನೆಯ ಚೈತ್ರ ಬಹುಳ ೩೦ (೧೫ ಎಪ್ರಿಲ ೮೮೮) ದಿವಸ ಸೂರ್ಯಗ್ರಹಣವಿದ್ದುದರಿಂದ ಗುಜರಾಥದ ಮಹಾಸಾಮಂತಾಧಿಪತಿ ಅಕಾಲವರ್ಷ ಕೃಷ್ಣರಾಜನು ನರ್ಮದೆಯ ಭಗವತ್ತೀರ್ಥದಲ್ಲಿ ಸ್ನಾನಮಾಡಿ, ಇಬ್ಬರು ಬ್ರಾಹ್ಮಣರಿಗೆ ಕೊಂಕಣ ವಿಷಯದಲ್ಲಿದ್ದ ಕವಿಥಸಾಧಿ (ಸುರತ ಜಿಲ್ಲೆಯಲ್ಲಿದ್ದ ಕೋಸಾಡ) ಎಂಬ ಗ್ರಾಮವನ್ನು ದಾನಕೊಟ್ಟನು.

(೨) ವಿಜಾಪುರ ಜಿಲ್ಲೆಯಲ್ಲಿದ್ದ ನಂದವಾಡಿಗೆಯ ಶಿಲಾಲೇಖ. ಶಕ ೮೨೫ನೆಯ ದುಂದುಭಿ ಸಂವತ್ಸರ ಮಾಘ ಶುದ್ಧ ೫ ದಿವಸ (ಗುರುವಾರ ೬ ಜನವರಿ ೯೦೩) ನಂದವಾಡಿಗೆಯ ಜನರು ದಾನ ಕೊಟ್ಟರು.

(೩) ಧಾರವಾಡ ಜಿಲ್ಲೆ ಮುಳಗುಂದದ ಶಿಲಾಲೇಖ. ಶಕ ೮೨೪ ನೆಯ ದುಂದುಭಿ ಸಂವತ್ಸರದಲ್ಲಿ (೯೦೨-೯೦೩) ಅರಸಾರ್ಯನೆಂಬೊಬ್ಬ ಜೈನನು ತನ್ನ ತಂದೆಯಾದ ಚಿಕಾರ್ಯನು ಕಟ್ಟಿಸಿದ ಜೈನ ಗುಡಿಗೆ ದಾನಕೊಟ್ಟನು.

(೪) ಗುಜರಾಥದ ಕೈರಾ ಜಿಲ್ಲೆಯಲ್ಲಿದ್ದ ಕಾಪಡವಣಜದ ತಾಮ್ರ ಶಾಸನ. ಶಕ ೮೩೨ ನೆಯ ವೈಶಾಖ ಶುದ್ಧ ೧೫ (೨೬ ಎಪ್ರಿಲ ೯೧೦) ದಿವಸ ಬ್ರಹ್ಮವಕ ಮನೆತನದ ಮಹಾಸಾಮಂತ ಪ್ರಚಂಡ ಧವಲಪ್ಪನ ದಂಡನಾಯಕನಾದ ಚಂದ್ರಗುಪ್ತನೆಂಬವನು ಒಬ್ಬ ಬ್ರಾಹ್ಮಣನಿಗೆ ವ್ಯಾಘ್ರಾಸ (ವಘಾಸ) ಎಂಬ ಹಳ್ಳಿಯನ್ನು ದಾನ ಕೊಟ್ಟನು.

(೫) ವಿಜಾಪುರ ಜಿಲ್ಲೆ ಅಯ್ಹೊಳೆಯ ಶಿಲಾಲೇಖ. ಶಕ ೮೩೩ ನೆಯ ಪ್ರಜಾಪತಿ ಸಂವತ್ಸರದಲ್ಲಿ (೯೧೧ ನೆಯ ಇಸ್ವಿ) ಒಬ್ಬ ಸನ್ಯಾಸಿಗೆ ಒಂದು ಆಶ್ರಮವನ್ನು ಕಟ್ಟಿಕೊಟ್ಟಿತೆಂದು ಬರೆದಿದೆ.

## ೮. ಮೂರನೆಯ ಇಂದ್ರ

(೯೧೫—೯೧೭)

೨ನೆಯ ಕೃಷ್ಣನ ಮಗನಾದ ಜಗತ್ತುಂಗನು ತಂದೆ ಇರುವಾಗಲೇ ಸತ್ತನೆಂದು ಮೇಲೆ ಬರೆದಿರುತ್ತೇವಷ್ಟೇ. ಆದಕಾರಣ ಕೃಷ್ಣನು ತೀರಿದ ಬಳಿಕ ಅವನ ಮುಮ್ಮಗನಾದ ಇಂದ್ರನು ೩ನೆಯ ಇಂದ್ರನೆಂಬ ಹೆಸರಿನಿಂದ ಪಟ್ಟವೇರಿದನು (೯೧೫). ಇವನಿಗೆ **ನಿತ್ಯವರ್ಷ** ಎಂಬ ವಿಶಿಷ್ಟ ಬಿರುದೂ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕ ಶ್ರೀ ಪೃಥ್ವೀವಲ್ಲಭ ಎಂಬ ಸಾಮಾನ್ಯ ಬಿರುದುಗಳೂ ಇದ್ದವು.

ಈ ನಿತ್ಯವರ್ಷ ೩ನೆಯ ಇಂದ್ರನು ಹಯ್ಹಯ ಅಥವಾ ಚೇದಿ ಮನೆತನದ ಲಕ್ಷ್ಮಿ ಎಂಬವಳಲ್ಲಿ ಹುಟ್ಟಿದ ಜಗತ್ತುಂಗನ ಮಗನಾಗಿದ್ದನು. ಇವನು ತನ್ನ ರಾಜಧಾನಿಯಾದ ಮಾನ್ಯಖೇಟ(ಮಳಖೇಡ)ದಲ್ಲಿ ಇರುತ್ತಿದ್ದು, ತನ್ನ ಪಟ್ಟಬಂಧೋತ್ಸವಕ್ಕೋಸ್ಕರ ತಾಪಿಯ ಹೊಳೆಯ ಮೇಲಿದ್ದ ಕುರುಂದಕ(ಕಡೋದ)ಕ್ಕೆ ಹೋಗಿದ್ದನೆಂತಲೂ ಅಲ್ಲಿ ಶಕ ೮೩೬ನೆಯ ಯುವ ಸಂವತ್ಸರ ಫಾಲ್ಗುಣ ಶುದ್ಧ ೭ (೨೪ ಫೇಬ್ರುವರಿ ೯೧೫) ದಿವಸ ಪಟ್ಟಬಂಧೋತ್ಸವವು ಆದ ಬಳಿಕ, ಲಾಟ ದೇಶದಲ್ಲಿದ್ದ ತೆನಾ ಎಂಬ ಗ್ರಾಮವನ್ನು ಒಬ್ಬ ಬ್ರಾಹ್ಮಣನಿಗೆ ದಾನ ಕೊಟ್ಟು, ಹಿಂದಿನ ಅರಸರು ಕಸುಕೊಂಡ ೪೦೦ ಹಳ್ಳಿಗಳನ್ನು ಅವರವರಿಗೆ ಬಿಟ್ಟುಕೊಟ್ಟು, ತುಲಾಭಾರ ಮಾಡಿಸಿಕೊಂಡು, ಚಿನ್ನದ ನಾಣ್ಯಗಳಾದ ೨೦ ಲಕ್ಷ ದ್ರಮ್ಮಗಳನ್ನು ಬ್ರಾಹ್ಮಣರಿಗೆ ಹಂಚಿದನೆಂತಲೂ ಬಡೋದೆ ಸಂಸ್ಥಾನದಲ್ಲಿದ್ದ ನವಸರಿಯ ಶಾಸನವು ಹೇಳುತ್ತದೆ.

ನಿತ್ಯವರ್ಷ ೩ನೆಯ ಇಂದ್ರನು ತನ್ನ ಪಟ್ಟಬಂಧೋತ್ಸವವನ್ನು ಮಳಖೇಡದಲ್ಲೇ ಮಾಡಿಸಿಕೊಳ್ಳದೆ, ಕುರುಂದಕದಲ್ಲಿ ಏನು ಕಾರಣ ಮಾಡಿಸಿಕೊಂಡನೆಂಬ ಪ್ರಶ್ನವು ಇಲ್ಲಿ ತಲೆದೋರುತ್ತದೆ. ಇವನ ಹಿಂದಿನ ಸಾರ್ವಭೌಮರಾಗಲಿ ಇವನ ಮುಂದಿನ ಅರಸರಾಗಲಿ ತಮ್ಮ ಪಟ್ಟಾಭಿಷೇಕದ ಸಲುವಾಗಿ ಮಳಖೇಡವನ್ನು ಬಿಟ್ಟು ಬೇರೂರಿಗೆ ಹೋಗಲಿಲ್ಲವಷ್ಟೇ. ಇವನು ಮಾತ್ರ ಕಡೋದಕ್ಕೆ ಹೋಗಬೇಕಾದರೆ ಯಾವ

ದಾದರೊಂದು ವಿಶಿಷ್ಟ ಕಾರಣವಿರಬೇಕಲ್ಲವೇ? ಕುರುಂದಕದಲ್ಲಿ ಆದ ಪಟ್ಟಬಂಧೋತ್ಸವವು ಅವನ ಪಟ್ಟಾಭಿಷೇಕ ಸಮಾರಂಭವಾಗಿರದೆ ಅದಕ್ಕೆ ಸಂಬಂಧಿಸಿದ ಒಂದು ಉತ್ಸವವಾಗಿರಬೇಕೆಂದು ಡಾ॥ ಭಾಂಡಾರಕರರು ಅಭಿಪ್ರಾಯಪಡುವಂತೆ ತೋರುತ್ತದೆ*.

ಆದರೆ ಕಡೋದದಲ್ಲಿ ಆದ ಸಮಾರಂಭವು ಸಣ್ಣ ಪ್ರಮಾಣದ ಮೇಲೆ ಆಗದೆ, ದೊಡ್ಡ ಪ್ರಮಾಣದ ಮೇಲೆ ಆದ್ದರಿಂದ ಅದು ಉಪೋತ್ಸವವಾಗಿದ್ದಿಲ್ಲೆಂದು ಹೇಳಬಹುದು. ಏಕೆಂದರೆ, ಆ ಕಾಲಕ್ಕೆ ಇಂದ್ರನು ಕೊಟ್ಟ ಭೂರಿಭೂದಾನವೂ ಅವನು ಮಾಡಿಸಿಕೊಂಡ ತುಲಾಭಾರವೂ ಅವನು ಹಂಚಿದ ೨೦ ಲಕ್ಷ ದ್ರಮ್ಮಗಳ ಭೂರಿದಕ್ಷಿಣೆಯೂ ಉಪೋತ್ಸವದ ಲಕ್ಷಣಗಳಲ್ಲ. ಆದ್ದರಿಂದ ಕುರುಂದಕದಲ್ಲಿ ಇಂದ್ರನ ಪಟ್ಟಾಭಿಷೇಕ ಸಮಾರಂಭವು ಅತಿವಿಜೃಂಭಣೆಯಿಂದ ಆಯಿತೆಂದು ಧಾರಾಳವಾಗಿ ಹೇಳಬಹುದು.

ಇಂದ್ರನ ಪಟ್ಟಾಭಿಷೇಕ ಮಹೋತ್ಸವವು ರಾಷ್ಟ್ರಕೂಟರ ಪಿತ್ರಾರ್ಜಿತ ರಾಜಧಾನಿಯಾದ ಮಳಖೇಡದಲ್ಲಿ ಆಗದೆ, ಅಲ್ಲಿಂದ ದೂರವಾಗಿ ಲಾಟ ಪ್ರಾಂತದಲ್ಲಿದ್ದ ಕುರುಂದಕವೆಂಬ ಕುಗ್ರಾಮದಲ್ಲಿ ಏನು ಕಾರಣ ಆಯಿತೆಂಬ ಪ್ರಶ್ನವನ್ನು ಬಿಡಿಸುವುದು ಕಷ್ಟಸಾಧ್ಯವಾಗಿರುತ್ತದೆ. ಈ ಕಾಲದಲ್ಲಿ ರಾಜಕೀಯ ಪರಿಸ್ಥಿತಿಯಲ್ಲಿ ಯಾವ ದೊಡ್ಡ ಹೆಚ್ಚುಕಡಮೆಗಳು ಆದಂತೆ ಕಂಡುಬರುವುದಿಲ್ಲ. ಕಂಚಿಯ ಪಲ್ಲವರಾಗಲಿ ವೆಂಗಿಯ ಚಾಳುಕ್ಯರಾಗಲಿ ರಾಜಧಾನಿಯ ಮೇಲೆ ದಂಡೆತ್ತಿ ಬಂದಿದ್ದಿಲ್ಲ. ಒಳಜಗಳಗಳಾವವೂ ಎದ್ದಿದ್ದಿಲ್ಲ. ದಂಡನಾಯಕರಾರೂ ಬಂಡಾಯವನ್ನು ಹೂಡಿದ್ದಿಲ್ಲ. ತಂದೆ ಸಾಯುವಾಗ ಇಂದ್ರನು ಲಾಟ ಪ್ರಾಂತದಲ್ಲಿರದೆ ಮಳಖೇಡದಲ್ಲೇ ಇದ್ದನು. ಆದ್ದರಿಂದ ಇಂದ್ರನ ತಾಯಿಯು ಯಾವದೋ ಒಂದು ಕಾರಣದಿಂದ ಕುರುಂದಕದ ಒಂದು ದೇವರಿಗೆ ಹರಿಕೆಬೇಡಿಕೊಂಡುದರಿಂದ ಈ ಪಟ್ಟಾಭಿಷೇಕ ಸಮಾರಂಭವು ಅಲ್ಲಿ ಆಯಿತೆಂದು ಊಹಿಸಬೇಕಾಗಿದೆ.

---

* ಮುಂಬಯಿ ಇಲಾಖೆಯ ಗ್ಯಾಜಿಟಿಯರ, ಸಂ. ೧, ಭಾ. ೨, ಪು. ೨೦೩.

ಈ ೩ನೆಯ ಇಂದ್ರನ ಆಳಿಕೆಯಲ್ಲಿ ಯಾವ ದೊಡ್ಡ ರಾಜಕೀಯ ಸಂಗತಿಯೂ ಒದಗಿದಂತೆ ಕಂಡುಬರುವುದಿಲ್ಲ. ಇವನು ತನ್ನ ತಂದೆ ಅಜ್ಜರಂತೆ ಚೇದಿ ಮನೆತನದ ಕೊಕ್ಕಲನ ಮೊಮ್ಮಗಳೂ ಅಮ್ಮನ ದೇವನ ಮಗಳೂ ಆದ **ವಿದ್ಯಾಂಬೆ** ಅಥವಾ **ವಿಜಯಾಂಬೆ** ಎಂಬವಳನ್ನು ಮದುವೆಮಾಡಿಕೊಂಡಿದ್ದನು. ಅವಳಿಂದ ಇವನಿಗೆ—೧. ಅಮೋಘವರ್ಷ, ೨. ಗೋವಿಂದ ಎಂಬ ಇಬ್ಬರು ಗಂಡುಮಕ್ಕಳಾಗಿದ್ದರು.

೩ನೆಯ ಇಂದ್ರನು ೨ ವರ್ಷ ಮಾತ್ರ ಆಳಿದಂತೆ ತೋರುತ್ತದೆ. ಏಕೆಂದರೆ, ಇವನ ಕಾಲದ ೩ ಶಾಸನಗಳು ಮಾತ್ರ ದೊರೆತಿರುತ್ತವೆ. ಅವುಗಳೊಳಗೆ ೨ ಅವನ ಪಟ್ಟಬಂಧಕ್ಕೆ ಸಂಬಂಧಿಸಿದ ನವಸರಿಯ ತಾಮ್ರ ಶಾಸನಗಳಾಗಿದ್ದು, ಧಾರವಾಡ ಜಿಲ್ಲಾ ಹತ್ತಿಮತ್ತೂರಿನಲ್ಲಿ ಸಿಕ್ಕ ಶಿಲಾಲೇಖವು ಮಾತ್ರ ಅವನ ಆಳಿಕೆಯ ಕಾಲವನ್ನು ಗೊತ್ತುಮಾಡಲಿಕ್ಕೆ ಅನುಕೂಲಿಸುತ್ತದೆ. ಅದರಲ್ಲಿ ಶಕ ೮೩೮ನೆಯ ಧಾತು ಸಂವತ್ಸರದಲ್ಲಿ (೯೧೬–೧೭) ೩ನೆಯ ಇಂದ್ರನು ಸಾರ್ವಭೌಮನಾಗಿದ್ದನೆಂದು ಲಕ್ಷ್ಮೇಶ್ವರದ ಮಹಾಸಾಮಂತನು ಬರೆಯಿಸಿರುತ್ತಾನೆ. ಆದ್ದರಿಂದ ಅವನು ೯೧೫ರಿಂದ ೯೧೭ರ ವರೆಗೆ ೨ ವರ್ಷ ಆಳಿದನೆಂದು ಊಹಿಸಬಹುದು.

೩ನೆಯ ಇಂದ್ರನ ಆಳಿಕೆಗೆ ಸಂಬಂಧಿಸಿದ ಶಾಸನಗಳ ತಾತ್ಪರ್ಯವನ್ನು ಕೆಳಗೆ ಕೊಡುವೆವು:—

೧. ಬಡೋದೆ ಸಂಸ್ಥಾನದಲ್ಲಿ ನವಸರಿಯ ಮೊದಲನೆಯ ತಾಮ್ರ ಶಾಸನ. ೩ನೆಯ ಇಂದ್ರನು ತನ್ನ ರಾಜಧಾನಿಯಾದ ಮಾನ್ಯಖೇಟದಿಂದ ಕುರುಂದಕಕ್ಕೆ ಬಂದು, ಶಕ ೮೩೬ನೆಯ ಯುವ ಸಂವತ್ಸರ ಫಾಲ್ಗುಣ ಶುದ್ಧ ೭ (೨೪ ಫೇಬ್ರುವರಿ ೯೧೫) ದಿವಸ ತನ್ನ ಪಟ್ಟಬಂಧೋತ್ಸವವನ್ನು ಮಾಡಿಸಿಕೊಂಡು, ಆ ಸಮಾರಂಭವು ಮುಗಿದ ಬಳಿಕ ತುಲಾಭಾರವನ್ನು ಮಾಡಿಸಿಕೊಂಡು, ತಕ್ಕಡಿಯ ಪರಡಿಯಲ್ಲಿ ಕುಳಿತಿರುವಾಗಲೇ ಲಾಟ ದೇಶದಲ್ಲಿದ್ದ ತೆನ್ನ ಎಂಬ ಹಳ್ಳಿಯನ್ನು ಒಬ್ಬ ಬ್ರಾಹ್ಮಣನಿಗೆ ದಾನಕೊಟ್ಟನೆಂದು ಇದರಲ್ಲಿ ಬರೆದಿರುತ್ತದೆ.

೨. ನವಸರಿಯ ಎರಡನೆಯ ತಾಮ್ರ ಶಾಸನ. ಮೇಲೆ ಬರೆದ ತುಲಾಭಾರದ ದಿವಸವೇ ಮತ್ತೊಬ್ಬ ಬ್ರಾಹ್ಮಣನಿಗೆ ಲಾಟ ದೇಶದಲ್ಲಿದ್ದ ಉಂಬರಾ (ಬೆಗುಂಬ್ರಾ) ಎಂಬ ಮತ್ತೊಂದು ಹಳ್ಳಿಯನ್ನು ದಾನ ಕೊಟ್ಟನೆಂದು ಇದರಲ್ಲಿ ಬರೆದಿರುತ್ತದೆ.

೩. ಧಾರವಾಡ ಜಿಲ್ಲಾ ಹತ್ತಿಮತ್ತೂರಿನ ಶಿಲಾಲೇಖ. ಶಕ ೮೩೮ನೆಯ ಧಾತು ಸಂವತ್ಸರ(೯೧೬-೧೭)ದಲ್ಲಿ ಪುರಿಗೆರೆ ೩೦೦ರಿನ ಮಹಾಸಾಮಂತನಾದ ಲೆಂಡೆಯರಸನೆಂಬವನು ಒಬ್ಬ ಬಾಹ್ಮಣನಿಗೆ ಒಂದು ಹಳ್ಳಿಯನ್ನು ದಾನಕೊಟ್ಟನೆಂದು ಇದರಲ್ಲಿ ಬರೆದಿರುತ್ತದೆ.

## ೯. ಎರಡನೆಯ ಅಮೋಘವರ್ಷ

(೯೧೭—೯೧೮)

೩ನೆಯ ಇಂದ್ರನಿಗೆ ವಿಜಯಾಂಬೆಯಿಂದ—೧. ಅಮೋಘವರ್ಷ, ೨. ಗೋವಿಂದ ಎಂಬಿಬ್ಬರು ಗಂಡುಮಕ್ಕಳಿದ್ದರೆಂದು ಮೇಲೆ ಬರೆದಿರುತ್ತೇವಷ್ಟೇ. ಹಿರಿಮಗನ ಇಟ್ಟ ಹೆಸರು ಏನಿತ್ತೆಂಬುದನ್ನು ತಿಳಿದುಕೊಳ್ಳಲಿಕ್ಕೆ ಸಾಧನವೇ ಇಲ್ಲ. ಅಮೋಘವರ್ಷವೆಂಬುದೇ ಅವನ ಹೆಸರಾಗಿತ್ತೆಂದು ಡಾ॥ ಭಾಂಡಾರಕರರು ಬರೆಯುತ್ತಾರೆ*. ಆದರೆ ಅಮೋಘವರ್ಷ ಶಬ್ದವು ತೊಟ್ಟ ಹೆಸರು ಅಥವಾ ಬಿರುದು ಆಗಬಹುದೆ ಹೊರತು ಇಟ್ಟ ಹೆಸರು ಎಂದೂ ಆಗಲಾರದು. ಆದ್ದರಿಂದ ಅಮೋಘವರ್ಷನ ಹೆಸರು ಗೊತ್ತಾಗುವುದಿಲ್ಲೆಂಬ ಡಾ॥ ಫ್ಲೀಟರ ಅಭಿಪ್ರಾಯವೇ ಸರಿಯಾದ್ದೆಂದು ತೋರುತ್ತದೆ†.

೩ನೆಯ ಇಂದ್ರನ ತರುವಾಯ ಅವನ ಮಕ್ಕಳೊಳಗೆ ಯಾರು ಪಟ್ಟವೇರಿದರೆಂಬುದು ವಾದಗ್ರಸ್ತ ವಿಷಯವಾಗಿರುತ್ತದೆ. ಖಾರೆಪಾಟಣದ ಶಾಸನವನ್ನು ನಂಬಿ ಡಾ॥ ಭಾಂಡಾರಕರರು ಇಂದ್ರನ ತರುವಾಯ ಅವನ ಹಿರಿಮಗನಾದ ಅಮೋಘವರ್ಷನೇ ಸಾರ್ವಭೌಮ

---

* ಮುಂಬಯಿ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೨೦೪, ಅಡಿಟಿಪ್ಪಣಿ ೧.

† ಸದರ ಇಲಾಖೆಯ ಗ್ಯಾಜಟಿಯರ, ಸಂ. ೧, ಭಾ. ೨, ಪು. ೪೧೬.

ನಾದನೆಂದು ಬರೆಯುತ್ತಾರೆ. ಆದರೆ ಸಾಂಗಲಿಯ ಶಾಸನದಲ್ಲಿ ೪ ನೆಯ ಗೋವಿಂದನು ತನ್ನ ತಂದೆಯಾದ ನಿತ್ಯವರ್ಷ(೩ ನೆಯ ಇಂದ್ರ)ನ ಪಾದಗಳನ್ನು ಧ್ಯಾನಿಸಿ ಪಟ್ಟವೇರಿದನೆಂದು ಬರೆದಿರುವುದರಿಂದ ಅವನ ಅಣ್ಣನಾದ ಅಮೋಘವರ್ಷನು ಪಟ್ಟವೇರಲಿಲ್ಲೆಂದು ಡಾ॥ ಫ್ಲೀಟರು ಅಭಿಪ್ರಾಯಪಡುತ್ತಾರೆ. ಈ ಎರಡು ವಿರುದ್ಧ ಮತಗಳೊಳಗೆ ಡಾ॥ ಭಾಂಡಾರಕರರ ಮತವೇ ಸರಿಯಾದ್ದೆಂದು ನನ್ನ ಅಲ್ಪಮತಿಗೆ ಕಂಡುಬರುತ್ತದೆ. ಈ ಅಭಿಪ್ರಾಯವನ್ನು ಸಮರ್ಥಿಸುವ ಕಾರಣಗಳನ್ನು ಕೆಳಗೆ ಕೊಡುತ್ತೇನೆ:—

(ಅ) ಹಿರಿಮಗನೇ ಪಟ್ಟಕ್ಕೆ ಬಾಧ್ಯಸ್ಥನೆಂಬುದು ಶಾಸ್ತ್ರಕ್ಕೂ ರೂಢಿಗೂ ಸಮ್ಮತವಾದ ಸಿದ್ಧಾಂತವೇ ಸರಿ.

(ಆ) ಅಮೋಘವರ್ಷನು ಗೋವಿಂದನ ಅಣ್ಣನಾಗಿದ್ದನೆಂದು ಖಾರೆಪಾಟಣದ ಶಾಸನದಿಂದಲೂ ಸಾಂಗಲಿಯ ೪ ನೆಯ ಗೋವಿಂದನ ಶಾಸನದಿಂದಲೂ ಸ್ಪಷ್ಟವಾಗಿ ಕಂಡುಬರುತ್ತದೆ.

(ಇ) ಶಿಲಾಹಾರ ಮನೆತನದ ಅಪರಾಜಿತನೆಂಬವನು ತನ್ನ ೯೯೭ ನೆಯ ಇಸ್ವಿಯ ಠಾಣೆ ಜಿಲ್ಲೆ ಭಡಾನದ ಶಾಸನದಲ್ಲಿ ೨ನೆಯ ಅಮೋಘವರ್ಷನು ೧ ವರುಷ ಸಾರ್ವಭೌಮನಾಗಿದ್ದನೆಂದು ಬರೆಯಿಸಿರುತ್ತಾನೆ*. ಈ ಶಾಸನವನ್ನು ನಂಬಲಿಕ್ಕೆ ಏನೂ ಅಡ್ಡಿ ಇದ್ದಂತೆ ತೋರುವುದಿಲ್ಲ.

(ಈ) ಮಧ್ಯಪ್ರಾಂತದ ವರ್ಧಾ ಜಿಲ್ಲೆಯ ಶಾಸನದಲ್ಲಿ ಅಮೋಘವರ್ಷನು ಗೋವಿಂದನ ಅಣ್ಣನಾಗಿದ್ದನೆಂತಲೂ ಅವನು ತಂದೆ ಸತ್ತ ತುಸು ದಿವಸದಲ್ಲೇ ಸತ್ತ ಬಳಿಕ ಗೋವಿಂದನು ಪಟ್ಟವೇರಿದನೆಂತಲೂ ಬರೆದಿರುತ್ತದೆ. ೪ ನೆಯ ಗೋವಿಂದನ ಸಾಂಗಲಿ ಶಾಸನದಲ್ಲಿ ಗೋವಿಂದನು ಸಮರ್ಥನಾಗಿದ್ದರೂ ತನ್ನ ಅಣ್ಣನನ್ನು ಅತಿಕ್ರೌರ್ಯದಿಂದ ಪೀಡಿಸಲಿಲ್ಲೆಂತಲೂ ಅಕ್ಕ ತಂಗಿ ತಾಯಿಯರ ಸಮಾನರಾದ ಹೆಂಗಸರೊಡನೆ ವ್ಯಭಿಚಾರ ಮಾಡಲಿಲ್ಲೆಂತಲೂ ಪುಣ್ಯಾಪಾಪಗಳ ವಿಚಾರವಿಲ್ಲದೆ

---

* ಎಪಿಗ್ರಾಫಿಯಾ ಇಂಡಿಕಾ, ಸಂ. ೩, ಪು. ೨೬೭.

ನರಪಿಶಾಚಿಯಂತೆ ನಡೆದುಕೊಳ್ಳಲಿಲ್ಲೆಂತಲೂ ತನ್ನ ಔದಾರ್ಯ ಸಾಹಸಗಳಿಂದ ಸಾಹಸಾಂಕನಾದನೆಂತಲೂ ಬರೆದಿರುತ್ತದೆ*. ಈ ಎರಡೂ ಶಾಸನಗಳನ್ನು ಒಟ್ಟುಗೂಡಿಸಿ ಓದಿದರೆ, ಇಂದ್ರನ ತರುವಾಯ ಅಮೋಘವರ್ಷನು ಸಾರ್ವಭೌಮನಾದನೆಂತಲೂ ಬಳಿಕ ಅವನನ್ನು ಸೆರೆಹಿಡಿದು ಸೂಕ್ಷ್ಮ ರೀತಿಯಿಂದ ಕೊಲ್ಲಿಸಿ, ಗೋವಿಂದನು ಪಟ್ಟದೊರಕಿಸಿದನೆಂತಲೂ ಸ್ವಾಭಾವಿಕವಾಗಿ ಅನುಮಾನ ಮಾಡಬಹುದು.

(ಉ) ೪ನೆಯ ಗೋವಿಂದನು ತಾನು ಪಟ್ಟವೇರುವಾಗ ತನ್ನ ಅಣ್ಣನ ಪಾದಗಳನ್ನು ಧ್ಯಾನಿಸದೆ ತನ್ನ ತಂದೆಯ ಅಡಿಗಳನ್ನು ಧ್ಯಾನಿಸಿದ್ದರಿಂದ ಅಮೋಘವರ್ಷನು ಪಟ್ಟವೇರಲಿಲ್ಲೆಂದು ಡಾ॥ ಫ್ಲೀಟರು ಬರೆಯುತ್ತಾರಷ್ಟೇ. ತಾನು ಬುದ್ಧಿಪುರಸ್ಕರವಾಗಿ ಪಟ್ಟದಿಂದ ತಳ್ಳಿ ಸೆರೆಯಲ್ಲಿರಿಸಿ ಕೊಲ್ಲಿಸಿದ ಅಣ್ಣನ ಪಾದಗಳನ್ನು ಧ್ಯಾನಿಸುವುದು ಎಷ್ಟು ಸಂಭವನೀಯವಾಗಿರುತ್ತದೆಂಬುದನ್ನು ವಾಚಕಮಹಾಶಯರೇ ವಿಚಾರ ಮಾಡಬಹುದು.

(ಎ) ದಕ್ಷಿಣ ದೇಶದ ೩೦೫ನೆಯ ನಂಬರಿನ ಶಾಸನದಂತೆ ಇವನು ೧ ವರ್ಷ ಆಳಿದನೆಂದು ಡಾ॥ ಕಿಲ್ಹಾರ್ನರು ಬರೆಯುತ್ತಾರೆ.

ಈ ೬ ಕಾರಣಗಳ ಮೂಲಕವಾಗಿ ೩ನೆಯ ಇಂದ್ರನ ತರುವಾಯ ಅವನ ಹಿರಿಮಗನಾದ ಅಮೋಘವರ್ಷನೇ ಪಟ್ಟವೇರಿದನೆಂದು ಧಾರಾಳವಾಗಿ ಹೇಳಬಹುದು.

೨ನೆಯ ಅಮೋಘವರ್ಷನ ಕಾಲದ ಒಂದು ಶಾಸನವಾದರೂ ಇನ್ನೂ ದೊರೆತಿಲ್ಲ. ಆದ್ದರಿಂದ ಅವನ ಅಲ್ಪಕಾಲಿಕ ಆಳಿಕೆಯಲ್ಲಿ ಏನು ನಡೆಯಿತೆಂಬುದು ಗೊತ್ತಾಗುವುದಿಲ್ಲ. ಅರಮನೆಯಲ್ಲಿ ಒಡಕೂ ಒಳಸಂಚೂ ಕೊಲೆಯೂ ರಾಜಧಾನಿಯಲ್ಲಿ ಪಾಣ್ಬೆಕೆಯೂ ವೈಮನಸ್ಸೂ ರಾಜ್ಯದಲ್ಲಿ ಪುಂಡಾಟಿಗೆಯೂ ಅರಾಜಕತೆಯೂ ಇವನ ಕಾಲದಲ್ಲಿ ಹೆಚ್ಚಿದ್ದರಿಂದ ಹಿಂದಿನ ಸಾರ್ವಭೌಮರು ಶ್ರಮಬಟ್ಟು ಮಾಡಿದ ಕಟ್ಟುಪಾಡುಗಳೆಲ್ಲ ಸಡಿಲಾಗುತ್ತ ನಡೆದವೆಂದು ಬರೆಯಲಿಕ್ಕೆ ಅಡ್ಡಿಯಿಲ್ಲ. ಈ ಅಮೋಘವರ್ಷನಿಗೆ ಗಂಡುಮಕ್ಕಳಿದ್ದಿಲ್ಲೆಂದು ತೋರುತ್ತದೆ.

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೦೪.

## ೧೦. ನಾಲ್ಕನೆಯ ಗೋವಿಂದ

(೯೧೮–೯೩೩)

೨ನೆಯ ಅಮೋಘವರ್ಷನನ್ನು ಪಟ್ಟದಿಂದ ತಳ್ಳಿ ಕೊಲ್ಲಿಸಿ, ಅವನ ತಮ್ಮನಾದ ಗೋವಿಂದನು ಪಟ್ಟವೇರಿದನೆಂದು ಮೇಲೆ ಬರೆದಿರುತ್ತೇವಷ್ಟೇ. ಇವನು ಮುರಪಟಿಂಗ(ಸಿತಗ)ನಾಗಿದ್ದನೆಂದು ಶಾಸನಗಳಿಂದ ಕಂಡುಬರುತ್ತದೆ. ಖಾರೆಪಾಟಣದ ಶಾಸನದಲ್ಲಿ ಇವನು ಸ್ತ್ರೀವ್ಯಾಮೋಹಕ್ಕೆ ಮನೆಯಾಗಿದ್ದನೆಂತಲೂ ಸುಂದರಿಯರಾದ ಹೆಂಗಸರ ಗುಂಪಿನೊಳಗೆ ಯಾವಾಗಲೂ ಕಾಲಕಳೆಯುತ್ತಿದ್ದನೆಂತಲೂ ಬರೆದಿದೆ. ಹೆಂಗಸರ ಒಡನಾಟವು ಅವನಿಗೆ ಬಹಳವಾಗಿ ಸೇರುತ್ತಿತ್ತೆಂತಲೂ ಹೆಂಗಸರ ನೋಟದಿಂದ ಅವನ ಮನಸ್ಸು ಜಿಗಿಯಲ್ಪಟ್ಟಿತ್ತೆಂತಲೂ ದುರ್ವ್ಯಸನದಿಂದ ಇವನು ಎಲ್ಲರಿಗೂ ಬೇಸರಾಗಿದ್ದನೆಂತಲೂ ಸ್ತ್ರೀಲಂಪಟವು ಇವನ ಆರೋಗ್ಯವನ್ನು ಹಾಳುಮಾಡಿದ್ದರಿಂದ ಇವನು ಅಕಾಲಮರಣಕ್ಕೆ ತುತ್ತಾದನೆಂತಲೂ ವರ್ಧೆಯ ಶಾಸನವು ಹೇಳುತ್ತದೆ. ಇವನು ತನ್ನ ಸಾಂಗಲಿಯ ಶಾಸನದಲ್ಲಿ ಅಕ್ಕತಂಗಿ ತಾಯಿಯರ ಸಮಾನರಾದ ಹೆಂಗಸರನ್ನು ತಾನು ಕೆಡಿಸಲಿಲ್ಲೆಂದು ಹೇಳಿಕೊಂಡುದರ ಕಾರಣವೇನಿರಬಹುದು? ಬಹುಶಃ ಅರಸರು ತಮ್ಮ ಸದ್ಗುಣಗಳ ಯಥಾರ್ಥವಾಗಿಯಾಗಲಿ ಅತಿಶಯೋಕ್ತಿಯಿಂದಾಗಲಿ ಹೊಗಳಿಕೊಳ್ಳುತ್ತಾರೆ ಹೊರತು, ತಾವು ಇಂತಹ ಕೆಟ್ಟಕೆಲಸವನ್ನು ಮಾಡಲಿಲ್ಲೆಂದು ಶಾಸನಗಳಲ್ಲಿ ಬರೆಯಿಸುವುದಿಲ್ಲ. ಆದ್ದರಿಂದ ಗೋವಿಂದನ ಸಾಂಗಲಿ ಶಾಸನದಲ್ಲಿದ್ದ ಈ ವರ್ಣನೆಯು ಅತಿವಿಚಿತ್ರವಾದುದೇ ಸರಿ. ಆ ಕಾಲಕ್ಕೆ ಗೋವಿಂದನ ವಿಷಯವಾಗಿ ಈ ತರದ ದುರ್ವಾರ್ತೆಯು ದೇಶದಲ್ಲೆಲ್ಲ ಹಬ್ಬಿದ್ದರಿಂದ ಅವನು ಸ್ವಾಭಿಮಾನ ಸಂರಕ್ಷಣಾರ್ಥವಾಗಿ ಈ ತರದ ಆತ್ಮಸ್ತುತಿಯನ್ನು ತಾನು ಕೊಟ್ಟ ತಾಮ್ರ ಶಾಸನದಲ್ಲಿ ಮಾಡಿಕೊಂಡನೆಂದು ಅನುಮಾನ ಮಾಡಲಿಕ್ಕೆ ಅಡ್ಡಿ ತೋರುವುದಿಲ್ಲ.

ಸಾಂಗಲಿಯ ಶಾಸನದಲ್ಲಿ ತನ್ನ ಔದಾರ್ಯ ಸಾಹಸಗಳಿಂದ ತಾನು ಸಾಹಸಾಂಕನಾಗಿದ್ದೆನೆಂದು ಇವನು ಹೇಳಿಕೊಂಡಿರುತ್ತಾನಷ್ಟೇ. ತನ್ನ ಸುಮಾರು ೧೬ ವರ್ಷದ ಆಳಿಕೆಯಲ್ಲಿ ಇವನು ಯಾವ ದೊಡ್ಡ

ಔದಾರ್ಯದ ಕೃತ್ಯವನ್ನಾಗಲಿ ಸಾಹಸದ ಕಾರ್ಯವನ್ನಾಗಲಿ ಮಾಡಿದಂತೆ ತೋರುವುದಿಲ್ಲ. ಇವನು ಯಾವ ದಂಡಯಾತ್ರೆಯನ್ನು ಕಯ್ಕೊಳ್ಳಲಿಲ್ಲ, ಯಾವ ದಿಗ್ವಿಜಯುವನ್ನು ಮಾಡಲಿಲ್ಲ, ಯಾವ ಮಲೆತು ನಿಂತ ಮಂಡಲೇಶ್ವರರನ್ನು ಮಣಿಸಲಿಲ್ಲ. ಪರಸ್ತ್ರೀಯರನ್ನು ಮೋಸದಿಂದಾಗಲಿ ಜುಲುಮೆಯಿಂದಾಗಲಿ ದ್ರವ್ಯದ ಆಶೆಯಿಂದಾಗಲಿ ಕೆಡಿಸುವುದೇ ಇವನ ದಿನಚರ್ಯವಾಗಿತ್ತು. ಆದಕಾರಣ ಇವನು ಕುಂಟಣಿಯರಿಗೆ ಕೊಟ್ಟ ಹೇರಳ ಹಣವೇ ಇವನ ಔದಾರ್ಯವಾಗಿತ್ತೆಂತಲೂ ಇವನು ಮೋಸಮಾಡಿ ತನ್ನ ಅಣ್ಣನನ್ನು ಕೊಂದು ಪಟ್ಟದೊರಕಿಸಿದ್ದೇ ಇವನ ಸಾಹಸವಾಗಿತ್ತೆಂತಲೂ ಅನುಮಾನಮಾಡಲಿಕ್ಕೆ ಅನುವು ದೊರೆಯುತ್ತದೆ.

ನಾವು ಮಾಡಿದ ಶುಭಾಶುಭಕೃತ್ಯಗಳ ಫಲವನ್ನು ನಾವು ಈ ಜನ್ಮದಲ್ಲಿಯಾಗಲಿ ಮುಂದಿನ ಜನ್ಮದಲ್ಲಿಯಾಗಲಿ ಅನುಭೋಗಿಸೇ ತೀರಬೇಕೆಂಬ ಸನಾತನ ಧರ್ಮದ ಸಿದ್ಧಾಂತವು ತ್ರಿಕಾಲದಲ್ಲಿಯೂ ಅಬಾಧಿತವಾಗಿರುತ್ತದಷ್ಟೇ. ನಾವು ಮಾಡುವ ಪುಣ್ಯಪಾಪಗಳು ಎರಡು ಪ್ರಕಾರದವಿರುತ್ತವೆ:—೧. ದೇಹಕ್ಕೆ ವಿಶೇಷವಾಗಿ ಸಂಬಂಧಿಸಿದವು. ೨. ಆತ್ಮಕ್ಕೆ ವಿಶೇಷವಾಗಿ ಸಂಬಂಧಿಸಿದವು. ಕಾಯಿಕಪಾಪಗಳ ಶಿಕ್ಷೆಯನ್ನು ಆಯಾಯ ಜನ್ಮದಲ್ಲೇ ಅನುಭೋಗಿಸಬೇಕಾಗುತ್ತದೆ. ಆದರೆ ಆತ್ಮಿಕ ಪಾಪಗಳ ಫಲವನ್ನು ಹಿಂದಿನ ಜನ್ಮದಲ್ಲಿ ನಾವು ಮಾಡಿದ ಪುಣ್ಯಗಳ ಫಲವನ್ನು ಅನುಭೋಗಿಸಿದ ಬಳಿಕ ಅನುಭೋಗಿಸಬೇಕಾದ್ದರಿಂದ ಅವು ಒಮ್ಮೊಮ್ಮೆ ಮುಂದಿನ ಜನ್ಮದ ವರೆಗೆ ಅಮಲಿನಲ್ಲಿ ಬರುವುದಿಲ್ಲ. ಆದಕಾರಣ ಹಿಂದಿನ ಜನ್ಮದ ನೆನಪು ನಮಗೆ ಇಲ್ಲದಿರುವುದರಿಂದ ನಾವು ಅನುಭೋಗಿಸುವ ದುಃಖದ ಕಾರಣವು ನಮಗೆ ತಿಳಿಯದಿದ್ದುದರಿಂದ ನಾವು ಅನ್ಯಾಯವಾಯಿತೆಂದು ನಿಷ್ಕಾರಣವಾಗಿ ಕೊರಗುತ್ತೇವೆ. ಈ ಸಾರ್ವತ್ರಿಕ ನಿಯಮದಂತೆ ೪ನೆಯ ಗೋವಿಂದನು ತನ್ನ ದೇಹಿಕ ದುಷ್ಕೃತ್ಯದ ದುಷ್ಟ ಪರಿಣಾಮವನ್ನು ಈ ಜನ್ಮದಲ್ಲಿ ಅನುಭೋಗಿಸಿದರೂ ತನ್ನ ಪೂರ್ವಜನ್ಮದ ಆತ್ಮಿಕ ಪುಣ್ಯದಿಂದ ಸುಮಾರು ೧೬ ವರ್ಷ ಸಾರ್ವಭೌಮತ್ವವನ್ನು ಅನುಭೋಗಿಸಿ, ತನ್ನ ಆತ್ಮಿಕ ಪಾಪಗಳ ಭಯಂಕರ

ಶಿಕ್ಷೆಯನ್ನು ಮುಂದಿನ ಜನ್ಮಕ್ಕೆ ಇಟ್ಟುಕೊಂಡನೆಂದು ಧಾರಾಳವಾಗಿ ಹೇಳಬಹುದು.

ರಾಜ್ಯಭಾರದ ಹೊರೆಯನ್ನು ಕಯ್ಕೆಳಗಿನವರ ಮೇಲೆ ಹೊರಿಸಿ, ಹಗೆಗಳ ಪರಿವೆ ಇಲ್ಲದೆ, ಚೆಲುವೆಯರಾದ ಹೆಂಗಸರೊಡನೆ ಸದಾ ಚಲ್ಲಾಟವಾಡುತ್ತಿದ್ದ ೪ನೆಯ ಗೋವಿಂದನಿಗೆ ಸುಮಾರು ೧೬ ವರ್ಷ ಸಾಮ್ರಾಜ್ಯವೈಭವವು ಸುರಕ್ಷಿತವಾಗಿ ಉಳಿದುದು ಅವನ ಪೂರ್ವಜನ್ಮದ ಸುಕೃತದ ಫಲವೇ ಸರಿ. ಏಕೆಂದರೆ, ರಾಷ್ಟ್ರಕೂಟರ ಹುಟ್ಟುಹಗೆಗಳಾದ ಹೊಟ್ಟೆಯುರಿದ ಚಾಳುಕ್ಯರೊಳಗೆ ಈ ಕಾಲಕ್ಕೆ ಒಳಸಂಚೂ ಒಳಜಗಳವೂ ಹಬ್ಬಿದ್ದರಿಂದ ಅವರು ರಾಷ್ಟ್ರಕೂಟ ಸಾಮ್ರಾಜ್ಯವನ್ನು ಡಬ್ಬುಹಾಕುವ ಸುಸಂಧಿಗೆ ಎರವಾದರು.

ಪೂರ್ವ ಚಾಳುಕ್ಯರ ಅರಸನಾದ ೧ನೆಯ ಭೀಮನು ರಾಷ್ಟ್ರಕೂಟ ೨ನೆಯ ಕೃಷ್ಣನು ಗೆದ್ದ ತನ್ನ ಪಿತ್ರಾರ್ಜಿತ ರಾಜ್ಯವನ್ನು ಕ್ರಮಕ್ರಮವಾಗಿ ತಿರುಗಿ ತೆಗೆದುಕೊಂಡನೆಂದು ಹಿಂದೆ ಬರೆದಿರುತ್ತೇವಷ್ಟೇ*. ಈ ಸಾಹಸಭೀಮನು ೪ನೆಯ ಗೋವಿಂದನು ಪಟ್ಟದೊರಕಿಸಿದ ವರ್ಷವೇ (೯೧೮) ಸತ್ತುದರಿಂದ ಪಟ್ಟದ ಸಲುವಾಗಿ ವೆಂಗಿಯ ಚಾಳುಕ್ಯರೊಳಗೆ ಬಡಿದಾಟವು ಆರಂಭಿಸಿತು. ಇಬ್ಬರ ನ್ಯಾಯ ಮತ್ತೊಬ್ಬರಿಗಾಯ ಎಂಬ ಗಾದೆಯಂತೆ ಈ ಒಳಜಗಳವು ರಾಷ್ಟ್ರಕೂಟ ಗೋವಿಂದನಿಗೆ ಪಥ್ಯವಾಯಿತು. ಭೀಮನ ತರುವಾಯ ೧ನೆಯ **ಅಮ್ಮನು** ವೆಂಗಿಯ ಪಟ್ಟವೇರಿದನು; ಅವನ ಪ್ರತಿಸ್ಪರ್ಧಿಗಳು ರಾಷ್ಟ್ರಕೂಟರ ನೆರವು ಬೇಡಿದರು. ಈ ಕಾಲಕ್ಕೆ ಮಳಖೇಡದ ಗಾದಿಯ ಮೇಲೆ ಒಬ್ಬ ಶೂರನೂ ಸಾಹಸಿಯೂ ಆದ ಸಾರ್ವಭೌಮನಿದ್ದರೆ, ಅವನು ದಂಡೆತ್ತಿಹೋಗಿ ತನಗೆ ಶರಣುಬಂದ ಚಾಳುಕ್ಯನನ್ನು ಪಟ್ಟದ ಮೇಲೆ ಕೂಡ್ರಿಸಿ, ಅವನನ್ನು ತನ್ನ ಮಂಡಲೇಶ್ವರನಾಗಿ ಮಾಡಿಕೊಳ್ಳಬಹುದಾಗಿತ್ತು. ಆದರೆ ಸ್ತ್ರೀಲೋಲುಪನಾದ ಗೋವಿಂದನಲ್ಲಿ ಇಂತಹ ಧೂರ್ತವಿಚಾರವು ಹುಟ್ಟುವ ಸಂಭವವೆಲ್ಲಿ? ಶೂರನಾದ ಅಮ್ಮನು (೯೧೮–೨೫) ತನ್ನ

---

* ಹಿಂದೆ ಪುಟ ೧೧೬.

ವಿರೋಧಿಗಳಾದ ಎಲ್ಲ ಆಪ್ತರನ್ನು ಸೋಲಿಸಿ, ಕೊಲ್ಲಿಸಿ, ಮಣಿಸಿ ತನ್ನ ಪಟ್ಟವನ್ನು ಸ್ಥಿರವಾಗಿ ಮಾಡಿಕೊಂಡು, ರಾಷ್ಟ್ರಕೂಟರ ರಾಜ್ಯವನ್ನೊಳ ಸುಗ್ಗಿ ಊರುಗಳನ್ನು ಸುಲಿಯುತೊಡಗಿದನು. ಮುಂದೆ ಚಾಳುಕ್ಯರ ಹಾವಳಿಯು ದಿನದಿನಕ್ಕೆ ಹೆಚ್ಚುತ್ತ ನಡೆಯಿತು. ಆದರೂ ತನ್ನ ಪ್ರೀತಿಯ ಹೆಂಗಸರನ್ನು ಬಿಟ್ಟು ದಂಡೆತ್ತಿಹೊರಡಲಿಕ್ಕೆ ಗೋವಿಂದನ ಮನಸ್ಸು ಒಡಂಬಡಲಿಲ್ಲ. ಚಾಳುಕ್ಯರನ್ನು ದಂಡಿಸಲಿಕ್ಕೆ ಬಂದ ಒಂದು ದೊಡ್ಡದಂಡನ್ನು ಅಮ್ಮನ ತರುವಾಯ ವೆಂಗಿಯ ಅರಸನಾದ ೨ನೆಯ ಚಾಳುಕ್ಯ ಭೀಮನು (೮೩೪-೯೫) ಸೋಲಿಸಿ ಹಿಂದಕ್ಕಟ್ಟಿದನೆಂದು ವೆಂಗಿಯ ಚಾಳುಕ್ಯರ ಒಂದು ಶಾಸನವು ಹೇಳುತ್ತದೆ.

೪ನೆಯ ಗೋವಿಂದನನ್ನು ಜನರು ವಾಡಿಕೆಯಾಗಿ **ಗೊಜ್ಜಿಗ** ನೆಂದು ಕರೆಯುತ್ತಿದ್ದರು. ಸುವರ್ಣವರ್ಷ, ಪ್ರಭೂತವರ್ಷ, ನೃಪತುಂಗ, ವೀರನಾರಾಯಣ, ರಟ್ಟಕಂದರ್ಪ, ಸಾಹಸಾಂಕ, ನೃಪತಿತ್ರಿನೇತ್ರ —ಇವು ಏಳು ಇವನ ವಿಶಿಷ್ಟ ಬಿರುದುಗಳಾಗಿದ್ದವು. ಇವನ ಹೆಂಡಂದಿರು ಯಾರಿದ್ದರೆಂಬುದು ಗೊತ್ತಾಗುವುದಿಲ್ಲ. ಇವನಿಗೆ ಮಕ್ಕಳಿದ್ದಿಲ್ಲೆಂದು ಕಂಡುಬರುತ್ತದೆ.

೪ನೆಯ ಗೋವಿಂದನು ಹೇಗೆ ಸತ್ತನೆಂಬ ಬಗ್ಗೆ ಸಂಶಯ ಬರುತ್ತದೆ. ಏಕೆಂದರೆ, ಇವನು ತನ್ನ ದುರ್ವ್ಯಸನದಿಂದ ಎಲ್ಲರಿಗೂ ಬೇಸರಾಗಿದ್ದನೆಂದು ವರ್ಧೆಯ ಶಾಸನದಲ್ಲಿ ಬರೆದಿರುವುದಲ್ಲದೆ, ಇವನು ಸತ್ತ ತರುವಾಯ ಮಂಡಲೇಶ್ವರರು ಋಷಿಯಂತೆ ಸಮಾಧಾನಿಯೂ ಸದ್ಗುಣಿಯೂ ಆದ ಇವನ ಮುದುಕ ಕಕ್ಕನನ್ನು ಪಟ್ಟದ ಮೇಲೆ ಕೂಡ್ರಿಸಿದರೆಂದು ದೇವಲಿ, ಖಾರೆಪಾಟಣ ಈ ಊರುಗಳ ಶಾಸನಗಳು ಹೇಳುತ್ತವೆ. ಆದಕಾರಣ ಪ್ರಮುಖ ಸರದಾರರು ಒಟ್ಟುಗೂಡಿ ಒಳಸಂಚುಮಾಡಿ ಈ ಭೂಭಾರನಾದ ಗೋವಿಂದನನ್ನು ಯಾವ ರೀತಿಯಿಂದಲೋ ಸೆರೆಯಲ್ಲಿಟ್ಟು ಅಥವಾ ಕೊಲ್ಲಿಸಿ ಸಜ್ಜನನಾದ ಅಮೋಘವರ್ಷ ವಡ್ಡಿಗನನ್ನು ಪಟ್ಟದ ಮೇಲೆ ಕೂಡ್ರಿಸಿರಬಹುದೆಂದು ಅನುಮಾನಮಾಡಲಿಕ್ಕೆ ಅನುವು ದೊರೆಯುತ್ತದೆ.

ಪ್ರಸಿದ್ಧ ಕನ್ನಡ ಕವಿಯಾದ ಆದಿಪಂಪನು ಈ ೪ ನೆಯ ಗೋವಿಂದ ನಿಗೆ ಸಂಬಂಧಿಸಿದ ಕೆಲ ಹೊಸ ಸಂಗತಿಗಳನ್ನು ತನ್ನ ಭಾರತದಲ್ಲಿ ಹೇಳು ವುದರಿಂದ ಅವನ ವಚನಗಳನ್ನು ಉದ್ಧರಿಸಿ ಕೆಳಗೆ ಕೊಡುತ್ತೇವೆ:—

"ಚಾಳುಕ್ಯ ಕುಲತಿಲಕನಪ್ಪ ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ ತಳರದೆ ಪೆಱಗಿಕ್ಕಿ ಕಾದ ಶರಣಾಗತ ಜಳನಿಧಿಯ ಪೆಂಪುಮಂ ಗೊಜ್ಜಿಗನೆಂಬ ಸಕಲ ಚಕ್ರವರ್ತಿ ಬೆಸಸಿದಂದುವಂದ ಮಹಾಸಾಮಂತರಂ ಮರಲಿರಿದು ಗೆಲ್ದ ಸಾಮಂತಚೂಡಾಮಣಿಯ ವೀರ್ಯಮುಮ ನಾತಿವರ್ತಿಯಾಗಿ ಮಾರ್ಮಲೆವ ಚಕ್ರವರ್ತಿಯಂ ಕಿಡಿಸಿ ತನ್ನಂ ನಂಬಿ ಬಂದ ಬದ್ದೆಗದೇವಂಗೆ ಸಕಳ ಸಾಮ್ರಾಜ್ಯಮನೋರಂತುಮಾಡಿ ನಿಱಿಸಿದರಿಕೇಸರಿಯ ತೋಳ್ವಲಮುಮಂ ಸಮದಗಜ ಘಟಾಟೋಪಂ ಬೆರಸು ನೆಲನದಿರೆ ಬಂದು ತಾಗಿದ ಕಕ್ಕಲನ ತಮ್ಮನಪ್ಪ ಬಪ್ಪುವನಂಕ ಕಾಱಿಣನೊಂದೆ ಮದಾಂಧ ಗಂಧ ಸಿಂಧುರದೊಳೋಡಿಸಿದ ವೈರಿಗಜಘಟ ವಿಘಟ್ಟನನದಟುಮಂ ಪರಚಕ್ರಗಳನಂಜಿಸಿದ ಪರಸೈನ್ಯ ಭೈರವನ ಮೋಗಿ ಲ್ಲದ ಬಲ್ಲಾಳ್ತನಮುಮಂ ಕಂಡುಂ ಕೇಳ್ದುಂ ನಿನಗೆ ಸೆಣಸಲೆಂತು ಬಗೆ ಬಂದಪುದು*."

"ಗೊಜ್ಜಿಗನೆಂಬ ಸಕಲ ಚಕ್ರವರ್ತಿ ಮುಳಿಯೆ ತನಗೆ ಶರಣಾಗತ ನಾದ ವಿಜಯಾದಿತ್ಯನಂ ಕಾದ ಬಲ್ಲಾಳ್ತನದೊಳ್ ಶರಣಾಗತ ಜಳ ನಿಧಿಯುಂ†."

೨ ನೆಯ ಅರಿಕೇಸರಿಯು ಸಾರ್ವಭೌಮನಾದ ಗೊಜ್ಜಿಗನ ವಿರುದ್ಧ ವಾಗಿ ವಿಜಯಾದಿತ್ಯನೆಂಬೊಬ್ಬ ಚಾಳುಕ್ಯ ಸಾಮಂತನ ಬೆನ್ನುಕಟ್ಟಿ, ಗೊಜ್ಜಿಗನು ಕಳಿಸಿದ ಸಾಮಂತರನ್ನು ಸೋಲಿಸಿ ೪ ನೆಯ ಗೋವಿಂದ ನನ್ನು ನಾಶಮಾಡಿ ತನ್ನನ್ನು ನಂಬಿದ ಬದ್ದೆಗನಿಗೆ ಸಾಮ್ರಾಜ್ಯವನ್ನು ಕೊಟ್ಟನೆಂತಲೂ ಮುಂದೆ ದಂಡೆತ್ತಿಬಂದ ಕಕ್ಕಲನ ತಮ್ಮನಾದ ಬಪ್ಪುವ ನೆಂಬವನನ್ನು ಮುರಿಬಡಿದನೆಂತಲೂ ಈ ವಚನಗಳಲ್ಲಿ ಸ್ಪಷ್ಟವಾಗಿ ಬರೆ

---

* ೯ ನೆಯ ಆಶ್ವಾಸ, ೫೨ ನೆಯ ಪದ್ಯದ ಮುಂದಿನ ವಚನ.

† ೧೪ ನೆಯ ಆಶ್ವಾಸ, ೩೭ ನೆಯ ಪದ್ಯದ ಮುಂದಿನ ವಚನ.

ದಿದೆ. ಆದರೆ ವಿಜಯಾದಿತ್ಯನು ಯಾವ ಪ್ರಾಂತದ ಸಾಮಂತನಾಗಿದ್ದ ನೆಂಬುದಾಗಲಿ, ಗೋವಿಂದನು ಏನು ಕಾರಣ ಅವನ ಮೇಲೆ ಸಿಟ್ಟಾದ ನೆಂಬುದಾಗಲಿ, ಕಕ್ಕಲನು ರಾಷ್ಟ್ರಕೂಟರ ಕೊನೆಯರಸನಾದ ೨ ನೆಯ ಕಕ್ಕಲನೋ ಬೇರೊಬ್ಬನೋ ಎಂಬುದಾಗಲಿ ಗೊತ್ತಾಗುವುದಿಲ್ಲ.

೪ ನೆಯ ಗೋವಿಂದನಿಗೆ ಸಂಬಂಧಿಸಿದ ಶಾಸನಗಳ ತಾತ್ಪರ್ಯ ವನ್ನು ಕೆಳಗೆ ಕೊಡುತ್ತೇವೆ:—

೧. ಧಾರವಾಡ ಜಿಲ್ಲೆ ದಂಡಾಪುರದ ಶಿಲಾಲೇಖ. ಶಕ ೮೪೦ ನೆಯ ಪ್ರಮಾದಿ ಸಂವತ್ಸರ ಪುಷ್ಯಮಾಸದ ಮಕರ ಸಂಕ್ರಾಂತಿಯ ದಿವಸ (೨೩ ದಿಶಂಬರ ೯೧೮) ಒಬ್ಬ ಗೃಹಸ್ಥನು ಕೆಲ ದಾನಗಳನ್ನು ಕೊಟ್ಟನು.

೨. ಗೋಕಾಪಿ ಶಾಸನ. ಇದರಲ್ಲಿ ಶಕ ೮೪೫ (೯೨೩)ರಲ್ಲಿ ಸೇಂದ್ರ ಮನೆತನದ ಇಂದ್ರರಾಜನೆಂಬವನು ಗೊಜ್ಜಿಗ ಮಹಾರಾಜನು ಆಳುವಾಗ ಆರ್ಯಣಂದಾಚಾರ್ಯರೆಂಬ ಜೈನ ತಪಸ್ವಿಗೆ ಜಮುಖಂಡಿಯ ಹತ್ತಿರದಲ್ಲಿ ಪೂವಿಣ (ಹೂನೂರು) ಗ್ರಾಮದ ತೆಂಕಲಲ್ಲಿದ್ದ ಜಳಾರ (ಮದರಖಂಡಿ) ಗ್ರಾಮದೊಳಗಿನ ಒಂದು ಹೊಲವನ್ನು ದಾನಕೊಟ್ಟ ನೆಂದು ಬರೆದಿದೆ. ಈ ತಾಮ್ರ ಶಾಸನವನ್ನು ಮ॥ ರಾಜಪುರೋ ಹಿತರು ಶೋಧಿಸಿರುತ್ತಾರೆ.

೩. ಸಾಂಗಲಿಯ ತಾಮ್ರ ಶಾಸನ. ಶಕ ೮೫೫ ನೆಯ ವಿಜಯ ಸಂವತ್ಸರ ಶ್ರಾವಣ ಶುದ್ಧ ೧೫ ದಿವಸ (೮ ಅಗಷ್ಟ ೯೩೩) ೪ ನೆಯ ಗೋವಿಂದನು ತನ್ನ ರಾಜಧಾನಿಯಾದ ಮಾನ್ಯಖೇಟದಲ್ಲಿದ್ದಾಗ ರಾಮಪುರಿ ೭೦೦ರಲ್ಲಿದ್ದ ಲೋಹಗ್ರಾಮ ಎಂಬ ಹಳ್ಳಿಯನ್ನು ಒಬ್ಬ ಬ್ರಾಹ್ಮಣನಿಗೆ ಕೊಟ್ಟನೆಂದು ಈ ಶಾಸನದಲ್ಲಿ ಬರೆದಿದೆ.

## ೧೧. ಅಮೋಘವರ್ಷ ವಡ್ಡಿಗ

(೯೩೪–೯೪೦)

ರಾಷ್ಟ್ರಕೂಟ ಮನೆತನದ ೭ ನೆಯ ಸಾರ್ವಭೌಮನಾದ ೨ ನೆಯ ಕೃಷ್ಣನಿಗೆ ಜಗತ್ತುಂಗನೆಂಬೊಬ್ಬ ಮಗನಿದ್ದನೆಂತಲೂ, ಅವನು ತಂದೆ

ಇರುವಾಗಲೇ ಸತ್ತುದರಿಂದ ಪಟ್ಟವೇರಲಿಲ್ಲೆಂತಲೂ, ಆದ್ದರಿಂದ ಅವನ ಹಿರಿಹೆಂಡತಿಯ ಮಗನಾದ ಇಂದ್ರನು ೨ನೆಯ ಕೃಷ್ಣನ ತರುವಾಯ ಪಟ್ಟವೇರಿದನೆಂತಲೂ, ಅವನ ತರುವಾಯ ಅವನ ಇಬ್ಬರು ಮಕ್ಕಳಾದ ಅಮೋಘವರ್ಷ ಗೋವಿಂದರು ಆಳಿದರೆಂತಲೂ ಮೇಲೆ ಬರೆದಿರುತ್ತೇವಷ್ಟೇ. ಈ ಜಗತ್ತುಂಗನ ಕಿರಿಹೆಂಡತಿಯಾದ ಗೋವಿಂದಾಂಬೆಯಿಂದ ಹುಟ್ಟಿದ ವಡ್ಡಿಗ ಅಥವಾ ಬದ್ದಿಗನೆಂಬವನು ಜಗತ್ತುಂಗನ ಕಿರಿಮಗನಾಗಿದ್ದನು.

ಹೆಂಗಸಿನ ಚರಿತ್ರವೂ ಪುರುಷನ ಭಾಗ್ಯವೂ ದೇವರಿಗೆ ಕೂಡ ಗೊತ್ತಾಗುವುದಿಲ್ಲ; ಅವು ಮನುಷ್ಯನಿಗೆ ತಿಳಿಯುವ ಸಂಭವವೆಲ್ಲಿ? ಎಂಬ ಸಂಸ್ಕೃತೋಕ್ತಿಯು ವಾಚಕರಿಗೆ ಗೊತ್ತಿರಬಹುದು*. ಈ ಜಗತ್ತಿನಲ್ಲಿ ಪೂರ್ವಜನ್ಮದ ಪುಣ್ಯಪ್ರಭಾವದಿಂದ ಬಡವನು ಹಣವಂತನಾಗಬಹುದು, ಹೇಡಿಯು ಕಲಿಯಾಗಬಹುದು, ಅಶಕ್ತನು ಸಶಕ್ತನಾಗಬಹುದು, ನಿರಕ್ಷರಕುಕ್ಷಿಯು ಘನಪಂಡಿತನಾಗಬಹುದು, ಅತಿ ನೀಚನು ಪರಮ ಸಜ್ಜನನಾಗಬಹುದು, ದೇವಲಂಡ ಪಿತೃಲಂಡನಾದವನು ಮಹಾ ಪಿತೃಭಕ್ತನಾಗಬಹುದು. ಈ ತರದ ಪಲ್ಲಟವು ಈ ಮೃತ್ಯುಲೋಕದಲ್ಲಿ ಎಡೆಬಿಡದೆ ನಡೆದಿರುತ್ತದೆಂಬುದನ್ನು ಎಲ್ಲರು ಬಲ್ಲರು. ತನ್ನ ಅಣ್ಣನಾದ ೩ನೆಯ ಇಂದ್ರನು ಪಟ್ಟವೇರಿದಂದಿನಿಂದ ೪ನೆಯ ಗೋವಿಂದನು ಸಾಯುವವರೆಗೆ ತನಗೆ ರಾಷ್ಟ್ರಕೂಟ ಸಾರ್ವಭೌಮರಿಂದ ದೊರೆತ ಜೀವನಾಂಶದಿಂದ ಸದ್ವೃತ್ತಿಯಲ್ಲಿ ಕಾಲಕ್ಷೇಪ ಮಾಡುತ್ತಿದ್ದ ಬಡ್ಡಿಗನ ದೈವವು ಈಗ ತೆರೆಯಿತು. ೧೮ ವರ್ಷ ಬಡಬಿರಾದರ ಅರಸನಾಗಿದ್ದ ಬಡ್ಡಿಗನು ಈಗ ರಾಷ್ಟ್ರಕೂಟ ಸಾರ್ವಭೌಮತ್ವವನ್ನು ಪಡೆದು ಅಮೋಘಾಧಿಕಾರಕ್ಕೂ ಅತುಲೈಶ್ವರ್ಯಕ್ಕೂ ಒಡೆಯನಾದನು.

ಬದ್ದಿಗನು ೩ನೆಯ ಅಮೋಘವರ್ಷನೆಂಬ ಬಿರುದನ್ನು ಧರಿಸಿ ಮಳಖೇಡದ ಪಟ್ಟವನ್ನೇರಿದನು (೯೩೪). ಇವನ ಕಾಲದ ಶಾಸನ

---

* ಭೂಪಸ್ಯ ಚಿತ್ತಂ ಕೃಪಣಸ್ಯ ವಿತ್ತಂ ಮನೋರಥಂ ಮಾನುಷದುರ್ಜನಸ್ಯ ।
ಸ್ತ್ರಿಯಶ್ಚರಿತ್ರಂ ಪುರುಷಸ್ಯ ಭಾಗ್ಯಂ ದೇವೋ ನ ಜಾನಾತಿ ಕುತೋ ಮನುಷ್ಯಃ ॥

ಗಳಾವವೂ ಇನ್ನೂ ದೊರೆತಿಲ್ಲ. ಆದ್ದರಿಂದ ಇವನ ಆಳಿಕೆಯಲ್ಲಿ ನಡೆದ ಸಂಗತಿಗಳನ್ನು ತಿಳಿದುಕೊಳ್ಳಲಿಕ್ಕೆ ಸಾಧನವೇ ಇಲ್ಲ. ಸ್ತ್ರೀಲಂಪಟದಿಂದ ರಾಜಕಾರ್ಯ ವಿಮುಖನಾದ ಗೋವಿಂದನ ಆಳಿಕೆಯಲ್ಲಿ ಎದ್ದ ಬಂಡಾಯಗಳನ್ನೂ ರಾಜದ್ರೋಹಿಗಳಾದ ದಂತಿಗ, ಬಪ್ಪುಕ ಎಂಬ ರಾಷ್ಟ್ರಕೂಟ ಪುಂಡರ ಹಾವಳಿಗಳನ್ನೂ ಮುರಿಯುವುದರಲ್ಲಿಯೂ ಗಂಗರನ್ನು ಪೂರ್ಣ ವಿಧೇಯರಾಗಿ ಮಾಡಿಕೊಳ್ಳುವುದರಲ್ಲಿಯೂ ಇವನ ೬ ವರ್ಷದ ಆಳಿಕೆಯು ಕಳೆದು ಹೋಗಿರಬಹುದು. ಶತ್ರುನಿಗ್ರಹ ಕಾರ್ಯದಲ್ಲಿ ಇವನ ಶೂರ ಮಗನಾದ ಕೃಷ್ಣನು ಇವನಿಗೆ ಬಹಳವಾಗಿ ನೆರವಾದನು. ರಾಷ್ಟ್ರಕೂಟರ ಹುಟ್ಟುಹಗೆಗಳಾದ ವೆಂಗಿಯ ಚಾಳುಕ್ಯರೊಡನೆ ಯುದ್ಧವು ಸಣ್ಣಾಗಿ ನಡೆದಿದ್ದರೂ ನಡೆದಿರಬಹುದು. ಇವನು ದೇವಬ್ರಾಹ್ಮಣರಲ್ಲಿ ವಿಶ್ವಾಸವುಳ್ಳವನಾದ್ದರಿಂದ ಬ್ರಾಹ್ಮಣರಿಗೆ ಒಂದು ಅಗ್ರಹಾರವನ್ನು ಹಾಕಿಕೊಟ್ಟನೆಂದು ಡಾ॥ ಭಾಂಡಾರಕರರು ಬರೆಯುತ್ತಾರೆ*.

ಈ ಬಡ್ಡಿಗನ ಹೆಂಡತಿಯು ಯುವರಾಜನ ಮಗಳಾದ **ಕುಂದಕದೇವಿ**ಯು ಆಗಿದ್ದಳೆಂದು ಕರ್ಡೆಯ ಶಾಸನವು ಹೇಳುತ್ತದೆ. ಈ ಯುವರಾಜನು ತ್ರಿಪುರದ ಕಳಚುರಿ ಮನೆತನದ ೧ನೆಯ ಯುವರಾಜನಾಗಿದ್ದನೆಂದು ಅಲೆಗ್ಝಾಂಡರ ಕನಿಂಗ್ಹಾಮರು ಗೊತ್ತುಮಾಡಿದ್ದಾರೆ. ಅಮೋಘವರ್ಷ ಬಡ್ಡಿಗನಿಗೆ ಈ ಕುಂದಕದೇವಿಯಿಂದ ೫ ಮಂದಿ ಮಕ್ಕಳಾದರು; ನಾಲ್ಕು ಮಂದಿ ಗಂಡುಮಕ್ಕಳು—೧. ಕೃಷ್ಣ, ೨. ಜಗತ್ತುಂಗ, ೩. ಕೊಟ್ಟಿಗ, ೪. ನಿರುಪಮ—ಒಬ್ಬ ಹೆಣ್ಣುಮಗಳು. ಈ ಹೆಣ್ಣುಮಗಳ ಹೆಸರು ರೇವಕೆಯಾಗಿತ್ತೆಂದು ರಾಯಿಸ ಸಾಹೇಬರು ಬರೆಯುತ್ತಾರೆ. ಅವಳು ಗಂಗರಸನಾದ ಸತ್ಯವಾಕ್ಯ ಕೊಂಗುಣಿವರ್ಮ ಪೆರ್ಮನಡಿ ಬೂತುಗನೆಂಬವನನ್ನು ಮದುವೆಯಾಗಿದ್ದಳೆಂತಲೂ ಪುರಿಗೆರೆ ೩೦೦ನ್ನೂ ಬೆಳ್ವೊಲ ೩೦೦ನ್ನೂ ಕಿಸುಕಾಡ ೭೦ನ್ನೂ ಬಾಗೆ ಅಥವಾ ಬಾಗೆನಾಡ ೭೦ನ್ನೂ ಅವಳ ಬಳವಳಿಯಾಗಿ ಅಮೋಘವರ್ಷ ಬಡ್ಡಿಗನು ಕೊಟ್ಟಿದ್ದನೆಂತಲೂ ಧಾರವಾಡ ಜಿಲ್ಲಾ ಹೆಬ್ಬಾಳದ ಶಾಸನದಿಂದ ಕಂಡು

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೦೭.

ಬರುತ್ತದೆ*. ಈ ಬೂತುಗನು ಹೆಬ್ಬಯಕೆಯುವನಾದಕಾರಣ ತನ್ನ ಮಾವನ ನೆರವಿನಿಂದ ಗಂಗಮಂಡಲದ ಅರಸನಾಗಿದ್ದ ತನ್ನ ಅಣ್ಣನನ್ನು ಕೊಂದು, ಗಂಗಮಂಡಲಕ್ಕೆ ತಾನೇ ಒಡೆಯನಾದನು.

## ೧೨. ಮೂರನೆಯ ಕೃಷ್ಣ ಅಥವಾ ಕನ್ನರದೇವ

(೯೪೦—೯೬೯)

ಅಮೋಘವರ್ಷ ಬಡ್ಡಿಗನ ತರುವಾಯ ಅವನ ಹಿರಿಮಗನಾದ ಕೃಷ್ಣನು **೩ನೆಯ ಕೃಷ್ಣ**ನೆಂಬ ಹೆಸರಿನಿಂದ ಪಟ್ಟವೇರಿದನು (೯೪೦). ಆರುವ ದೀವಿಗೆಯು ಭಗ್ಗೆಂದು ಉರಿಯಾಗಿ ಬೆಳಗಿ ನೊಂದುವಂತೆ, ಇವನ ಆಳಿಕೆಯು ೨/೩ ದೊಡ್ಡ ದಿಗ್ವಿಜಯಗಳಿಂದ ಹೆಚ್ಚಾಗಿ ಹೊಳೆಯಿತೆನ್ನಲಿಕ್ಕೆ ಅಡ್ಡಿಯಿಲ್ಲ. ಆದರೆ ಈ ದಿಗ್ವಿಜಯಗಳಲ್ಲಿ ಕೃಷ್ಣನ ಕಲಿತನದ ಅಂಶಕ್ಕಿಂತ ಅವನ ಭಾವಮೈದುನನಾದ ಬೂತುಗನ ಪರಾಕ್ರಮದ ಅಂಶವೇ ಹೆಚ್ಚಾಗಿತ್ತೆಂದು ಧಾರಾಳವಾಗಿ ಹೇಳಬಹುದು.

ಅಮೋಘವರ್ಷ ಬಡ್ಡಿಗನು ಸತ್ತ ಕೂಡಲೆ **ಲಲ್ಲಿಯ**ನೆಂಬೊಬ್ಬ ಮೋಸಗಾರನು ತಾನು ಪಟ್ಟಕ್ಕೆ ಬಾಧ್ಯಸ್ಥನೆಂದು ಸಾರಿ, ದಂಡುಕಟ್ಟಿ ಕೊಂಡು ಮಳಖೇಡದ ಮೇಲೆ ಸಾಗಿಬಂದನು. ಇವನು ತಾನು ಹಕ್ಕುದಾರನೆಂದು ಏನು ಕಾರಣ ಹೇಳಿಕೊಂಡನೆಂಬುದು ಗೊತ್ತಾಗು ವುದಿಲ್ಲ. ಪಾಣ್ಬನಾದ ೪ನೆಯ ಗೋವಿಂದನ ಮಗನು ತಾನಿರುತ್ತೇ ನೆಂದು ಇವನ ತಿಳಿವಳಿಕೆಯು ಆಗಿದ್ದರೂ ಆಗಿರಬಹುದು. ಅದು ಹೇಗೇ ಇರಲಿ, ಕೃಷ್ಣನ ಭಾವಮೈದುನನಾದ ಬೂತುಗನು ದಂಡೆತ್ತಿಹೋಗಿ, ಲಲ್ಲಿಯನ ದಂಡನ್ನು ಚದರಿಸಿ, ಅವನನ್ನು ದಿಕ್ಕೆಟ್ಟು ಓಡಿಸಿಬಿಟ್ಟನು†. ಈ ಗೆಲವಿನಿಂದ ೩ನೆಯ ಕೃಷ್ಣನ ಪಟ್ಟವು ಸ್ಥಿರವಾಯಿತು.

ಬೂತುಗನು ಮಹಾಶೂರನೂ ಸಾಹಸಿಯೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಇವನು ರಾಜ್ಯಲೋಭದಿಂದ ತನ್ನ ಅಣ್ಣನನ್ನು ಕೊಂದು ತಾನೇ ಗಂಗಮಂಡಲದ ಅರಸನಾದನೆಂದು ಮೇಲೆ

---

* ಕರ್ನಾಟಕ ಸಾಮ್ರಾಜ್ಯ, ಸಂ. ೧, ಭಾ. ೧, ಅ. ೪, ಪು. ೮೫-೮೬.

† ಲುಯಿರಾಯಿಸರ ಶಾಸನಗಳಿಂದ ತಿಳಿಯುವ ಮೈಸೂರು ಕೊಡಗು ಪ್ರಾಂತಗಳು, ಪು. ೪೫.

ಬರೆದಿರುತ್ತೇವಷ್ಟೇ. ಗಂಗವಾಡಿಯ ಮತ್ತು ಮಧುರೆಯ ಚೋಳ ರಾಜ್ಯದ ಮೇರೆಗಳು ಒಂದಕ್ಕೊಂದು ಹತ್ತಿದ್ದವು. ಆದಕಾರಣ ಹೆಬ್ಬ ಯಕೆಯುವನಾದ ಬೂತುಗನು ಈ ಕಾಲಕ್ಕೆ ಚೋಳರಸನಾದ ರಾಜಾ ದಿತ್ಯನೊಡನೆ ಕಾಲುಕೆದರಿ ಜಗಳ ತೆಗೆದು, ರಾಷ್ಟ್ರಕೂಟ ಸಾರ್ವ ಭೌಮನಾದ ೩ನೆಯ ಕೃಷ್ಣನನ್ನು ಚೋಳರಾಜ್ಯವನ್ನು ಒಳನುಗ್ಗಲಿಕ್ಕೆ ಒಡಂಬಡಿಸಿದನು (೯೪೮?). ಈ ದಂಡಯಾತ್ರೆಯ ಜೋಡಣೆಯು ಒತ್ತರ ದಿಂದ ನಡೆಯಿತು. ಎಲ್ಲವು ಸಿದ್ಧವಾದ ಬಳಿಕ ಕೃಷ್ಣ ಬೂತುಗರು ದೊಡ್ಡ ದಂಡಿನೊಡನೆ ಹೊರಟು ಚೋಳರಾಜ್ಯವನ್ನೊಳನುಗ್ಗಿದರು (೯೪೯?). ಇಂತಹ ದೊಡ್ಡ ದಂಡನ್ನು ಎದುರಿಸುವಷ್ಟು ತನ್ನಲ್ಲಿ ಸಾಮರ್ಥ್ಯವಿಲ್ಲದುದರಿಂದ ರಾಜಾದಿತ್ಯನು ಕಿರಿಕುಳ ಉಪದ್ರಕೊಡಲಿಕ್ಕೆ ವಿಶ್ವಪ್ರಯತ್ನ ಮಾಡಿದನು. ಆನೆ ಹೋಗುವಾಗ ಶ್ವಾನ ಬೊಗಳುವುದ ರಿಂದ ಆಗುವುದೇನು? ರಾಷ್ಟ್ರಕೂಟ ದಂಡು ಒಂದರ ಹಿಂದೊಂದು ಊರುಗಳನ್ನು ಗೆಲ್ಲುತ್ತ ಉತ್ತರಆರ್ಕಾಟ ಜಿಲ್ಲೆಯಲ್ಲಿದ್ದ ಅರ್ಕೋಣ ಮ್ಮದ ವರೆಗೆ ಹೋಯಿತು. ಆ ಊರ ಹತ್ತಿರದಲ್ಲಿದ್ದ **ತಕ್ಕೋಲ** ಎಂಬಲ್ಲಿ ಒಂದು ಭಯಂಕರವಾದ ಅತಿನಿಕರದ ಕಾಳೆಗವೆಸಗಿತು(೯೫೦?). ಚೋಳರ ದಂಡು ಅತ್ಯಾವೇಶದಿಂದ ರಾಷ್ಟ್ರಕೂಟರ ದಂಡಿನ ಮೇಲೆ ಬಿತ್ತು. ಎರಡೂ ಪಕ್ಷದ ದಂಡಿನವರಿಗೆ ಕಯ್ಗೆ ಕಯ್ಯು ಹತ್ತಿತು. ಹಗೆ ಯಾರು ಗೆಳೆಯುನಾರು ಎಂಬುದು ಗೊತ್ತಾಗದಷ್ಟು ಗದ್ದಲವಾಯಿತು. ಇಂತಹ ಸಮಯದಲ್ಲಿ ಎದೆಗಾರನಾದ ಬೂತುಗನು ತನ್ನ ಮೆಯ್ಗಾವಲು ಗಾರರೊಡನೆ ಗದ್ದಲದಲ್ಲಿ ನುಗ್ಗಿ, ತಡೆದವರನ್ನು ಸವರುತ್ತ ರಾಜಾದಿತ್ಯ ನಿದ್ದೆಡೆಗೆ ಹೋಗಿ, ಅವನ ಕಾವಲುಗಾರರನ್ನು ತುಂಡರಿಸಿ, ಅವನ ಮಾವು ತನ ತಲೆಯನ್ನು ಹಾರಿಸಿ, ಅವನ ಆನೆಯನ್ನೇರಿ, ಅಂಬಾರಿಯನ್ನು ಹೊಕ್ಕು, ಅವನನ್ನು ಕೆಳಗೆ ಉರುಳಿಸಿ ಅವನ ಕುತ್ತಿಗೆಯನ್ನು ಕೊಯ್ದು ಅದನ್ನು ತೆಗೆದುಕೊಂಡು ಸುರಕ್ಷಿತವಾಗಿ ತಿರುಗಿ ಹೋಗಿ ಕೃಷ್ಣ ಸಾರ್ವಭೌಮನಿಗೆ ಕಾಣಿಕೆಯಾಗಿ ಅರ್ಪಿಸಿದನು!!

ತನ್ನ ಮುಂದೆ ತಂದಿಟ್ಟ ಚೋಳ ಅರಸನಾದ ರಾಜಾದಿತ್ಯನ ರುಂಡವನ್ನು ನೋಡಿ, ಕೃಷ್ಣನ ಹಿಗ್ಗು ಹಿಡಿಸಲಾರದಷ್ಟಾಯಿತು.



ತಕ್ಕೋಲ ಕಾಳೆಗದ ಕಲ್ಪಿತ ಚಿತ್ರ

ರಾಷ್ಟ್ರಕೂಟ ದಂಡಿನ ಆನಂದವು ಉಕ್ಕೇರಿತು. ಜಯಘೋಷವು ಭೂವ್ಯಾಕಾಶಗಳನ್ನು ತುಂಬಿತು. ಉಡುಗರೆಗಳೂ ಇನಾಮುಗಳೂ ಕಿತಾಬುಗಳೂ ಶ್ರಾವಣ ಮಾಸದ ಜಡಿಮಳೆಯಂತೆ ಸುರಿದವು. ಬೂತುಗನಂತೂ ಎಲ್ಲರ ಸ್ತುತಿಗೂ ಪ್ರೀತಿಗೂ ಪಾತ್ರನಾದನು. ಅವನ ಶೌರ್ಯಸಾಹಸಗಳನ್ನು ಹೊಗಳುವ ಶ್ಲೋಕಗಳೂ ಪದಗಳೂ ಲಾವಣಿಗಳೂ ಎಲ್ಲರ ಬಾಯಿಂದ ಹೊರಡುತ್ತಿದ್ದವು. ಸುಪ್ರೀತನಾದ ಕೃಷ್ಣನು ಬೂತುಗನ ಎದೆಗಾರಿಕೆಗೆ ಮೆಚ್ಚಿ, ಒಂದು ದೊಡ್ಡ ಒಡ್ಡೋಲಗವನ್ನು ಕೂಡಿಸಿ ಅವನಿಗೆ ಬನವಾಸಿಯ ಪ್ರಾಂತವನ್ನು ಉಂಬಳಿಯಾಗಿ ಕೊಟ್ಟನು*. ಬೂತುಗನಿಗೆ ಕೊಡುವುದಕ್ಕಿಂತ ಮೊದಲು ಚೆಲ್ಲಕೇತನ ಮನೆತನದ ಕಲಿವಿಟ್ಟನೆಂಬವನು ಆ ಬನವಾಸಿ ಪ್ರಾಂತದ ಮಹಾಸಾಮಂತನಾಗಿದ್ದನೆಂದು ಧಾರವಾಡ ಜಿಲ್ಲಾ ಕ್ಯಾಸನೂರಿನ ಶಾಸನದಿಂದ ಕಂಡು ಬರುತ್ತದೆ.

ಕೊಂಡಿಯನ್ನು ಕತ್ತರಿಸಿದ ಬಳಿಕ ಚೇಳಿನ ಭಯವೇ ಇಲ್ಲದಂತಾಗುವುದಿಲ್ಲವೇ? ಮುಖ್ಯ ಶತ್ರುವಾದ ರಾಜಾದಿತ್ಯನನ್ನು ಕೊಂದ ಬಳಿಕ ರಾಷ್ಟ್ರಕೂಟರ ದಂಡಯಾತ್ರೆಯು ಸುಖಕರವಾದ ವಿಜಯಯಾತ್ರೆಯಾಯಿತೆಂದು ಹೇಳಬಹುದು. ತಕ್ಕೋಲದಿಂದ ತಂಜಾವರದ ವರೆಗೆ ಅವರನ್ನು ಯಾರೂ ತಡೆಯಲಿಲ್ಲ. ತಂಜಾವರವನ್ನು ಮುತ್ತಿ ಹಿಡಿದುಕೊಳ್ಳಲಿಕ್ಕೆ ಕೆಲಕಾಲವು ಹತ್ತಿತು. ಅದು ಕಯ್ವಶವಾದ ಬಳಿಕ ತಾನು ಗೆದ್ದ ಚೋಳರಾಜ್ಯಕ್ಕೆ ಒಬ್ಬ ಮಂಡಲೇಶ್ವರನನ್ನು ನಿಯಮಿಸಿ, ಪಲ್ಲವ ಅರಸನಾದ ಅಣ್ಣಿಗನನ್ನು ಸೋಲಿಸಿ, ಅವನ ರಾಜಧಾನಿಯಾದ ಕಂಚಿಯನ್ನು ಹಿಡಿದುಕೊಂಡು, ಅಣ್ಣಿಗನು ಮಾಂಡಲಿಕನಾಗಿರಲಿಕ್ಕೆ ಒಡಂಬಟ್ಟುದರಿಂದ ಅವನ ರಾಜ್ಯವನ್ನು ಅವನಿಗೆ ತಿರುಗಿಕೊಟ್ಟು, ೩ ನೆಯ

---

* ಬೂತುಗನು ಮೋಸಮಾಡಿ ರಾಜಾದಿತ್ಯನನ್ನು ಕೊಂದನೆಂದು ಡಾ|| ಫ್ಲೀಟರು ಬರೆಯುತ್ತಾರೆ. ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೧೯. ಆದರೆ ಡಾ|| ಫ್ಲೀಟರು ಮಾಡಿದ ಶಾಸನದ ಅರ್ಥವು ಶುದ್ಧ ತಪ್ಪೆಂತಲೂ ಬೂತುಗನು ರಣಾಂಗಣದಲ್ಲಿ ರಾಜಾದಿತ್ಯನ ಅಂಬಾರಿಯನ್ನು ಹೊಕ್ಕು ದ್ವಂದ್ವ ಯುದ್ಧದಲ್ಲಿ ಅವನನ್ನು ಕೊಂದನೆಂಬುದೇ ಸರಿಯಾದ ಅರ್ಥವೆಂತಲೂ ರಾ. ಬ. ರಾ. ನರಸಿಂಹಾಚಾರ್ಯರು ಸಪ್ರಮಾಣವಾಗಿ ಬರೆದಿರುತ್ತಾರೆ.

ಕೃಷ್ಣನು ತನ್ನ ರಾಜಧಾನಿಯ ಕಡೆಗೆ ತಿರುಗಿದನು. ಈ ದಂಡಯಾತ್ರೆ ಯಲ್ಲಿ ಕೃಷ್ಣನು **ದಂತಿಗ, ಒಪ್ಪುಕ** ಎಂಬ ಇಬ್ಬರು ಅರಸರನ್ನು ಕೊಂದನೆಂದು ದೇವಲಿಯ ಶಾಸನವು ಹೇಳುತ್ತದೆ. ಈ ಅರಸರು ಎಲ್ಲಿ ಯವರೆಂಬುದು ಗೊತ್ತಾಗುವುದಿಲ್ಲ. ಇವರು ಚೋಳ ಅಥವಾ ಪಲ್ಲವ ಮನೆತನಕ್ಕೆ ಸೇರಿದವರಾಗಿರಬಹುದೆಂದು ತೋರುತ್ತದೆ.

ಚೋಳ ಪಲ್ಲವ ರಾಜ್ಯಗಳ ದಿಗ್ವಿಜಯವನ್ನು ಮುಗಿಸಿಕೊಂಡು, ಕೃಷ್ಣ ಬೂತುಗರು ಮಳಖೇಡಕ್ಕೆ ಜಯಭೇರಿಯನ್ನು ಹೊಡಿಸುತ್ತ ತಿರುಗಿ ಬಂದು ರಾಜಧಾನಿಯಲ್ಲಿ ಆನಂದೋತ್ಸವಗಳಲ್ಲಿ ಕೆಲಕಾಲ ಕಳೆ ದರು. ಬೂತುಗನ ಆನಂದಕ್ಕಂತೂ ಅಳತೆಯೇ ಇದ್ದಿಲ್ಲ. ತಕ್ಕೋಲದ ರಣಾಂಗಣದಲ್ಲಿ ರಾಜಾದಿತ್ಯನನ್ನು ಕೊಲ್ಲುವಷ್ಟು ಧೈರ್ಯ ಸಾಮರ್ಥ್ಯ ವನ್ನು ದಯಪಾಲಿಸಿದ ಪರಮೇಶ್ವರನನ್ನು ಅವನು ಅನನ್ಯಭಾವದಿಂದ ಪರಿಪರಿಯಾಗಿ ಹೊಗಳಿದನು; ಮೈಸೂರ ಸಂಸ್ಥಾನ ಆತಗೂರಿನಲ್ಲಿದ್ದ ಚಲ್ಲೇಶ್ವರ ದೇವಸ್ಥಾನಕ್ಕೆ ಕೆಲ ಭೂಮಿಯನ್ನು ಉಂಬಳಿ ಹಾಕಿ ಕೊಟ್ಟನು; ಆ ಕಾಳಗದಲ್ಲಿ ತನಗೆ ಅತ್ಯಂತವಾಗಿ ನೆರವಾದ **ಮಣಲೇರ** ನೆಂಬೊಬ್ಬ ಸಾಹಾಯಕನಿಗೆ ಆತಗೂರು, ಕೋಟಿಯೂರು ಮುಂತಾದ ೧೩ ಹಳ್ಳಿಗಳನ್ನು ಇನಾಮು ಹಾಕಿಕೊಟ್ಟನು (೯೫೨?). ಈ ಗೆಲವಿ ನಿಂದ ಉಬ್ಬಿದ ಬೂತುಗನು ಕೃಷ್ಣನ ಅಪ್ಪಣೆಯಿಂದ ಗಂಗವಾಡಿಯ ಮೇಲೆ ದಂಡೆತ್ತಿಹೋಗಿ, ತನ್ನ ಅಣ್ಣನಾದ ರಾಚಮಲ್ಲನನ್ನು ಸೋಲಿಸಿ ಕೊಂದು ತಾನೇ ಗಂಗವಾಡಿಯ ಅರಸನಾದನು.

ಕೃಷ್ಣ ಬೂತುಗರು ಆನಂದದಿಂದ ರಾಜಧಾನಿಯಲ್ಲಿ ಕಾಲಕಳೆಯು ತ್ತಿರುವಾಗ, ಚೇದಿಯ ಕಲಚುರಿಯರ ಒಬ್ಬ ರಾಯಭಾರಿಯು ಆಕಸ್ಮಾತ್ತಾಗಿ ಬಂದನು. ಗುಜರಾಥದಲ್ಲಿ ಚಾಳುಕ್ಯರ ಒಂದು ಮನೆ ತನವು ಬಹುಕಾಲದಿಂದ ಆಳುತ್ತಿತ್ತಷ್ಟೇ. **ಅಣ್ಹಿಲ್ವಾಡ**ವು ಆ ಮನೆ ತನದ ರಾಜಧಾನಿಯಾಗಿತ್ತು. ಅಲ್ಲಿ **ಮೂಲರಾಜ**ನೆಂಬೊಬ್ಬ ಶೂರ ನಾದ ಚಾಳುಕ್ಯನು ಈ ಕಾಲದಲ್ಲಿ ಆಳುತ್ತಿದ್ದನು. ಈ ಮಹತ್ವಾಕಾಂಕ್ಷಿ ಯಾದ ಮೂಲರಾಜನು ದೊಡ್ಡ ದಂಡಿನೊಡನೆ ಚೇದಿಯ ರಾಜ್ಯವನ್ನೊಳ ನುಗ್ಗಿ ಕಾಲಂಜರ, ಚಿತ್ರಕೂಟ ಎಂಬೆರಡು ಚೇದಿರಾಜ್ಯದ ಮುಖ್ಯ

ಕೋಟೆಗಳನ್ನು ಮುತ್ತಿದ್ದರಿಂದ ರಾಷ್ಟ್ರಕೂಟ ದಂಡಿನ ನೆರವು ಅತ್ಯವಶ್ಯ ವಾಗಿ ಬೇಕಾಗಿರುತ್ತದೆಂದು ಕಲಚುರಿಯರ ರಾಯಭಾರಿಯು ಕೃಷ್ಣ ನನ್ನು ಸೆರಗೊಡ್ಡಿ ಬೇಡಿಕೊಂಡನು. ಚಾಳುಕ್ಯರು ತನ್ನ ಮನೆತನದ ಹುಟ್ಟುಹಗೆಗಳಾದ್ದರಿಂದಲೂ ಕಲಚುರಿಯರು ತನಗೆ ಸಮೀಪದ ಆಪ್ತ ರಾದ್ದರಿಂದಲೂ ಕೃಷ್ಣನು ಸಾಹಾಯಮಾಡಲಿಕ್ಕೆ ಒಡಂಬಟ್ಟು, ಬೂತುಗ ಅವನ ಮಗನಾದ **ಮಾರಸಿಂಹ** ಇವರಿಬ್ಬರೊಡನೆ ಒಂದು ದೊಡ್ಡ ದಂಡನ್ನು ಚೇದಿರಾಜ್ಯಕ್ಕೆ ಕಳುಹಿದನು. ವೀರರಾದ ಬೂತುಗ ಮಾರ ಸಿಂಹರು ದಂಡೆತ್ತಿಹೋಗಿ, ಕಾಲಂಜರ ಚಿತ್ರಕೂಟಗಳ ಮುತ್ತಿಗೆಯನ್ನೆ ಬ್ಬಿಸಿ, ಮೂಲರಾಜನನ್ನು ಒಂದೆರಡು ಕಾಳೆಗಗಳಲ್ಲಿ ಮುರಿಬಡಿದು, ಅವನಿಂದ ತಪ್ಪುಗಾಣಿಕೆಯನ್ನು ತೆಗೆದುಕೊಂಡು, ಸಪ್ತಮಾಳವೆಗಳ ಮೇರೆಗಳನ್ನು ಗೊತ್ತುಮಾಡಿ, ಅವಕ್ಕೆ ಮಾಳವಗಂಗ ಎಂಬ ಹೆಸರನ್ನಿಟ್ಟು ಜಯಭೇರಿಯನ್ನು ಹೊಡಿಸುತ್ತ ತಿರುಗಿಬಂದು, ತಾವು ತಂದ ಸುಲಿಗೆ ಯನ್ನೂ ಕಪ್ಪುಗಾಣಿಕೆಯನ್ನೂ ಕೃಷ್ಣಸಾರ್ವಭೌಮನಿಗೆ ಒಪ್ಪಿಸಿದ ರೆಂದು ಮೈಸೂರ ಸಂಸ್ಥಾನ ಶಿವಮೊಗ್ಗೆ ಜಿಲ್ಲೆ ನಗರದ ೩೫ನೆಯ ಶಾಸನದಿಂದ ಕಂಡುಬರುತ್ತದೆ (೯೫೭?).

ಸತ್ಪುರುಷನಾದ ಅಮೋಘವರ್ಷ ಬಡ್ಡಿಗನು ಬ್ರಾಹ್ಮಣರಿಗೆ ಒಂದು ಅಗ್ರಹಾರವನ್ನು ಹಾಕಿಕೊಟ್ಟನೆಂದು ಹಿಂದೆ ಬರೆದಿರುತ್ತೇವಷ್ಟೇ. ಆದರೆ ಈ ಅಗ್ರಹಾರವು ಎಲ್ಲಿತ್ತೆಂಬುದಾಗಲಿ, ಬ್ರಾಹ್ಮಣರು ಎಲ್ಲಿಂದ ಬಂದು ಅಲ್ಲಿ ನಿಂತರೆಂಬುದಾಗಲಿ ಗೊತ್ತಾಗುವುದಿಲ್ಲ. ಆದರೆ ವಿಜಾಪುರ ಜಿಲ್ಲಾ ಇಂಡಿ ತಾಲೂಕ **ಸಾವಿಟ್ಟಗೆ** ಗ್ರಾಮದ ಮಹಾವಿದ್ಯಾಲಯದ ಬ್ರಾಹ್ಮಣರಿಗೆ ೩ನೆಯ ಕೃಷ್ಣನು ಕೆಲ ದಾನಗಳನ್ನು ಕೊಟ್ಟನೆಂದು ಸಾಲೊಟ್ಗಿಯ ಶಾಸನದಲ್ಲಿ ಬರೆದಿದೆ. ಸಾವಿಟ್ಟಗೆಯೇ ಬಡ್ಡಿಗನ ಅಗ್ರ ಹಾರವಾಗಿದ್ದರೂ ಆಗಿರಬಹುದು; ಮತ್ತು ಅಲ್ಲಿಯೊಂದು ಆ ಕಾಲಕ್ಕೆ ಮಹಾವಿದ್ಯಾಲಯವಿದ್ದರೂ ಇರಬಹುದು. ಆದರೆ ಅದು ಎಂದು ಯಾರಿಂದ ಸ್ಥಾಪಿಸಲ್ಪಟ್ಟಿತೆಂಬ ವಿಷಯವು ಶೋಧನಾರ್ಹವಾಗಿರುತ್ತದೆ.

ಈ ೩ನೆಯ ಕೃಷ್ಣನ ಆಳಿಕೆಯಲ್ಲಿ ಮುಂದೆ ಹೆಸರುವಾಸಿಯಾದ ಎರಡು ಮನೆತನಗಳು ಬೈಲಿಗೆ ಬಂದವೆಂದು ಹೇಳಬಹುದು:—೧.

ಸೆವುಣ ದೇಶದ ಯಾದವ ಮನೆತನ, ೨. ಸವದತ್ತಿಯ ರಟ್ಟರು. ನಾಸಿಕ ದೇವಗಿರಿ(ದೌಲತಾಬಾದ)ಗಳ ಸುತ್ತಲಿನ ಪ್ರದೇಶವೇ ಈ ಸೆವುಣ ದೇಶವಾಗಿತ್ತೆಂತಲೂ ಮುಂದೆ ಮುಸಲ್ಮಾನರು ಸೆವುಣದ ಅಪಭ್ರಂಶವನ್ನೇ ಖಾನವೆಂದು ಮಾಡಿದರೆಂತಲೂ ಈಗಿನ ಖಾನದೇಶವು ಪೂರ್ವಕಾಲದ ಸೆವುಣ ದೇಶದ ಭಾಗವಾಗಿರುತ್ತದೆಂತಲೂ ಡಾ॥ ಭಾಂಡಾರಕರರು ಬರೆಯುತ್ತಾರೆ*. ಈ ನಾಡಿನ ರಾಜಧಾನಿಯು ಸಿಂದಿನೇರ (ನಾಸಿಕ ಜಿಲ್ಲಾ ಸಿನ್ನರ) ಎಂಬ ಪಟ್ಟಣವಾಗಿತ್ತು. ಈ ಯಾದವರಿಗೆ ಈ ನಾಡಿನ ಒಡೆತನವು ಎಂದು ಬಂತೆಂಬುದು ಗೊತ್ತಾಗು ವುದಿಲ್ಲ. ೧೦ನೆಯ ಶತಮಾನದ ಮಧ್ಯದಲ್ಲಿ ಈ ಮನೆತನದ ವಂಡಿಗ ಅಥವಾ ವಡ್ಡಿಗನೆಂಬುವನು ೩ ನೆಯ ಕೃಷ್ಣನ ಮಹಾಸಾಮಂತನಾಗಿದ್ದ ನೆಂತಲೂ ವೊಡ್ಡಿಯವ್ವಾ ಎಂಬ ರಾಷ್ಟ್ರಕೂಟ ಅರಸುಮಗಳನ್ನು ಮದುವೆಯಾಗಿದ್ದನೆಂತಲೂ ಶಾಸನಗಳಿಂದ ತಿಳಿದುಬರುತ್ತದೆ.

ಸವದತ್ತಿ ರಟ್ಟ ಮನೆತನದ ಉತ್ಪತ್ತಿಯಾದರೂ ಸ್ಪಷ್ಟವಾಗಿ ತಿಳಿಯುವುದಿಲ್ಲ. ಮೇರಡ ಎಂಬವನ ಮಗನೂ ಇಂದ್ರಕೀರ್ತಿಸ್ವಾಮಿ ಎಂಬ ಜೈನ ಸನ್ಯಾಸಿಯ ಶಿಷ್ಯನೂ ಆದ **ಪೃಥ್ವೀರಾಮ**ನೆಂಬೊಬ್ಬ ೩ ನೆಯ ಕೃಷ್ಣನ ಸೇವಕನು ಸವದತ್ತಿಯಲ್ಲಿ ಒಂದು ಜೈನ ಗುಡಿಯನ್ನು ಕಟ್ಟಿಸಿದನೆಂತಲೂ ಅದಕ್ಕೆ ಕೃಷ್ಣ ಸಾರ್ವಭೌಮನು ಉಂಬಳಿ ಹಾಕಿ ಕೊಟ್ಟುದಲ್ಲದೆ ಪೃಥ್ವೀರಾಮನನ್ನು ಸವದತ್ತಿ ಪ್ರಾಂತದ ಮಹಾಸಾಮಂತ ನಾಗಿ ಮಾಡಿದನೆಂತಲೂ ಅವನಿಂದಲೇ ರಟ್ಟಮನೆತನವು ಬೆಳೆಯಿತೆಂತಲೂ ಶಾಸನಗಳಿಂದ ಕಂಡುಬರುತ್ತದೆ. ಜಿನೋಪಾಸಕನಾದ ಈ ಪೃಥ್ವೀ ರಾಮನಿಗೆ ೩ ನೆಯ ಕೃಷ್ಣನು ಇಷ್ಟು ಏನುಕಾರಣ ಮೋಹಿಸಿದನೆಂಬು ದನ್ನು ತಿಳಿದುಕೊಳ್ಳಲಿಕ್ಕೆ ನಮಗೆ ಸಾಧನವೇ ಇಲ್ಲ. ಯಾವದಾದ ರೊಂದು ಅದ್ಭುತಕೃತಿಯನ್ನು ಮಾಡಿತೋರಿಸಿ, ಪೃಥ್ವೀರಾಮನು ಕೃಷ್ಣನ ಪ್ರೀತಿಯನ್ನು ಸಂಪಾದಿಸಿರಬಹುದೆಂದು ತೋರುತ್ತದೆ.

೩ ನೆಯ ಕೃಷ್ಣನನ್ನು ಜನರು ವಾಡಿಕೆಯಾಗಿ ಕನ್ನರನೆಂದು ಕರೆಯುತ್ತಿದ್ದರು. ಮಹಾರಾಜಾಧಿರಾಜ ಪರಮೇಶ್ವರ ಪರಮ

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೩೧.

ಭಟ್ಟಾರಕ ಶ್ರೀ ಪೃಥ್ವೀವಲ್ಲಭ ಸಮಸ್ತಭುವನಾಶ್ರಯ ಎಂಬ ಸಾಮಾನ್ಯ ಬಿರುದುಗಳ ಹೊರತು ಅಕಾಲವರ್ಷನೆಂಬ ವಿಶಿಷ್ಟ ಬಿರುದೂ ಅವನಿಗಿತ್ತು. ಮುಂದೆ ಇವನಿಂದ ಮುಂದಕ್ಕೆ ಬಂದ ಸವದತ್ತಿ ರಟ್ಟರು ಕೃಷ್ಣಕಂಧರ, ಕಂಧಾರ ಪುರವರಾಧೀಶ್ವರ, ತುಲಿಗ, ಎಂಬ ಬಿರುದುಗಳಿಂದ ಇವನನ್ನು ತಮ್ಮ ಶಾಸನಗಳಲ್ಲಿ ಕರೆದಿರುತ್ತಾರೆ. ಈ ಕಂಧಾರಪುರವರವು ಯಾವು ದೆಂಬುದು ಇನ್ನೂ ಗೊತ್ತಾಗಿಲ್ಲ.

೩ ನೆಯ ಕೃಷ್ಣನ ಹೆಂಡತಿಯು ಯಾರಾಗಿದ್ದಳೆಂಬುದು ಗೊತ್ತಾಗುವುದಿಲ್ಲ. ಇವನಿಗೆ ಒಬ್ಬ ಮಗನೂ ಇಂದ್ರನೆಂಬ ಒಬ್ಬ ಮೊಮ್ಮಗನೂ ಇದ್ದರೆಂದು ಡಾ॥ ಫ್ಲೀಟರು ನಿರ್ಣಯಿಸಿದ್ದಾರೆ. ಮಗನ ಉಲ್ಲೇಖವು ಯಾವ ಶಾಸನದಲ್ಲಿಯೂ ಇಲ್ಲದುದರಿಂದ ಅವನ ವಿಷಯವಾಗಿ ಏನೂ ಗೊತ್ತಾಗುವುದಿಲ್ಲ. ೩ ನೆಯ ಕೃಷ್ಣನು ಎಂದು ಸತ್ತನೆಂಬುದು ನಿಶ್ಚಯವಾಗಿ ತಿಳಿಯುವುದಿಲ್ಲ. ಧಾರವಾಡ ಜಿಲ್ಲಾ ಹಾನುಗಲ್ಲ ತಾಲೂಕ ಆಲೂರಿನ ಶಾಸನವನ್ನು ಆಧಾರವಾಗಿಟ್ಟುಕೊಂಡು, ೩ ನೆಯ ಕೃಷ್ಣನ ಆಳಿಕೆಯು ೯೫೬ರಲ್ಲಿ ಮುಗಿಯಿತೆಂದು ಡಾ॥ ಫ್ಲೀಟರು ಬರೆಯುತ್ತಾರೆ. ಆದರೆ ಇದು ಸರಿಯಾದ ಅನುಮಾನವೆಂದು ನನ್ನ ಅಲ್ಪಮತಿಗೆ ತೋರುವುದಿಲ್ಲ. ಏಕೆಂದರೆ:—

೧. ಮದ್ರಾಸ ಇಲಾಖೆ ಉತ್ತರಆರ್ಕಾಟ ಜಿಲ್ಲಾ ವೆಲ್ಲೂರಿನ ಶಾಸನದಲ್ಲಿ ೩ ನೆಯ ಕೃಷ್ಣನು ೨೬ ವರ್ಷ ಆಳಿದನೆಂದು ಬರೆದಿರುತ್ತದೆ.

೨. ಬೂತುಗನ ಮಗನಾದ ಸತ್ಯವಾಕ್ಯ ಕೊಂಗುಣಿವರ್ಮ ಮಾರಸಿಂಹನ ೯೬೮–೬೯ರ ಶಾಸನದಲ್ಲಿ ೩ ನೆಯ ಕೃಷ್ಣನ ಹೆಸರಿದ್ದರೂ ಅವನು ಆ ಕಾಲಕ್ಕೆ ಜೀವಂತನಾಗಿ ಇದ್ದನೋ ಇಲ್ಲವೋ ಎಂಬ ಸಂಶಯವನ್ನು ಡಾ॥ ಫ್ಲೀಟರು ಏನುಕಾರಣ ತೆಗೆದುಕೊಳ್ಳುತ್ತಾರೆಂಬುದು ಗೊತ್ತಾಗುವುದಿಲ್ಲ*.

೩. ಕೃಷ್ಣನ ತರುವಾಯ ೯೭೧ರಲ್ಲಿ ಅವನ ತಮ್ಮನು ಪಟ್ಟವೇರಿದನೆಂದು ಎಲ್ಲರು ಒಡಂಬಡುತ್ತಾರೆ.

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೧೯.

೪. ಸೋಮದೇವನೆಂಬ ಜೈನ ಪಂಡಿತನು ಬರೆದ ಯಶಸ್ತಿಲಕ ಎಂಬ ಗ್ರಂಥದಲ್ಲಿ ಶಕ ೮೮೧ರೊಳಗೆ ಕೃಷ್ಣರಾಜದೇವನ ಒಬ್ಬ ಸಾಮಂತನು ಆಳುತ್ತಿದ್ದನೆಂದು ಬರೆದಿದೆ.

ಈ ನಾಲ್ಕು ಕಾರಣಗಳಿಗೋಸ್ಕರ ೩ ನೆಯ ಕೃಷ್ಣನು ೩೦ ವರ್ಷ ರಾಜ್ಯಭಾರಮಾಡಿ ೯೬೯ರಲ್ಲಿ ಸತ್ತನೆಂದು ಅನುಮಾನಮಾಡಿದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

೩ ನೆಯ ಕೃಷ್ಣನ ಆಳಿಕೆಗೆ ಸಂಬಂಧಿಸಿದ ಶಾಸನಗಳ ತಾತ್ಪರ್ಯ ವನ್ನು ಕೆಳಗೆ ಕೊಡುತ್ತೇವೆ:—

೧. ಮಧ್ಯಪ್ರಾಂತದ ವರ್ದಾ ಜಿಲ್ಲಾ ದೇವಳಿಯ ತಾಮ್ರ ಶಾಸನ. ೩ ನೆಯ ಕೃಷ್ಣನು ತನ್ನ ರಾಜಧಾನಿಯಾದ ಮಾನ್ಯಖೇಟದಲ್ಲಿದ್ದಾಗ ತನ್ನ ಪ್ರಿಯ ತಮ್ಮನಾದ ೩ ನೆಯ ಜಗತ್ತುಂಗನಿಗೆ ಹೆಚ್ಚು ಪುಣ್ಯ ಬರ ಬೇಕೆಂಬ ಉದ್ದೇಶದಿಂದ ಶಕ ೮೬೨ ನೆಯ ಶರ್ವರೀ ಸಂವತ್ಸರ ವೈಶಾಖ ವದ್ಯ ೫ (೩೦ ಎಪ್ರಿಲ ೯೪೦) ದಿವಸ ನಾಗಪೂರ ನಂದಿವರ್ಧನ ಜಿಲ್ಲೆ ಯಲ್ಲಿದ್ದ ತಾಲಪುರವಂಶಕ ಎಂಬ ಗ್ರಾಮವನ್ನು ಒಬ್ಬ **ಕನ್ನಡ** ಬ್ರಾಹ್ಮಣನಿಗೆ ದಾನಕೊಟ್ಟನೆಂದು ಈ ಶಾಸನದಲ್ಲಿ ಬರೆದಿದೆ.

೨. ವಿಜಾಪುರ ಜಿಲ್ಲಾ ಇಂಡಿ ತಾಲೂಕ ಸಾಲೊಟ್ಗಿಯ ಶಿಲಾ ಲೇಖ. ಕರ್ಣಪುರಿ ವಿಷಯಕ್ಕೆ ಸೇರಿದ ಪಾವಿಟ್ಟಗೆ ಎಂಬ ಗ್ರಾಮದ ಮಹಾವಿದ್ಯಾಲಯದ ಬ್ರಾಹ್ಮಣರ ಸಂರಕ್ಷಣೆಗೋಸ್ಕರ ಶಕ ೮೬೭ನೆಯ ಪ್ಲವಂಗ ಸಂವತ್ಸರ ಭಾದ್ರಪದ ವದ್ಯ ೩೦ ಮಂಗಳವಾರ (೯ ಸಪ್ಟಂಬರ ೯೪೫) ದಿವಸ ಸೂರ್ಯಗ್ರಹಣ ಹಿಡಿದಾಗ ಕೆಲ ದಾನಗಳು ಕೊಡಲ್ಪಟ್ಟ ವೆಂದು ಇದರಲ್ಲಿ ಬರೆದಿದೆ. ಈ ಮಹಾವಿದ್ಯಾಲಯವು ಎಂದು ಯಾರಿಂದ ಸ್ಥಾಪಿಸಲ್ಪಟ್ಟಿತೆಂಬುದು ಶೋಧನಾರ್ಹವಾಗಿದೆ.

೩. ಮೈಸೂರ ಸಂಸ್ಥಾನ ಆತಕೂರಿನ ಶಿಲಾಲೇಖವು. ಚೋಳರಸನಾದ ರಾಜಾದಿತ್ಯನನ್ನು ಕೊಂದುದಕ್ಕೋಸ್ಕರ ೩ ನೆಯ ಕೃಷ್ಣನು ಪಶ್ಚಿಮ ಗಂಗ ಅರಸನಾದ ಸತ್ಯವಾಕ್ಯ ಕೊಂಗುಣಿವರ್ಮ ಪೆರಮನಡಿ ಬೂತುಗನಿಗೆ ಬನವಾಸಿ ೧೨,೦೦೦ವನ್ನೂ ಬೆಳ್ವೊಲ

೩೦೦ನ್ನೂ ಪುರಿಗೆರೆ ೩೦೦ನ್ನೂ ಕಿಸುಕಾಡ ೭೦ನ್ನೂ ಬಾಗೆನಾಡು ೭೦ನ್ನೂ ಕೊಟ್ಟನೆಂತಲೂ ಸಂತುಷ್ಟನಾದ ಬೂತುಗನು ಆತಕೂರಿನ ಚಲ್ಲೇಶ್ವರ ದೇವಸ್ಥಾನಕ್ಕೆ ಕೆಲ ಭೂಮಿಯನ್ನು ಉಂಬಳಿಯಾಗಿ ಕೊಟ್ಟು ದಲ್ಲದೆ, ತನ್ನ ಅನುಯಾಯಿಯಾದ ಮಣಲರತನೆಂಬವನಿಗೆ ಆತಕೂರ ೧೨ನ್ನೂ ಬೆಳ್ವೊಳದಲ್ಲಿದ್ದ ಕೋಟಿಯೂರನ್ನೂ ಇನಾಮಾಗಿ ಕೊಟ್ಟನು. ಈ ಶಿಲಾಲೇಖದಲ್ಲಿ ಮಾಸ ತಿಥಿಯನ್ನು ಕಾಣಿಸದೆ ಶಕ ೮೭೨ ನೆಯ ಸೌಮ್ಯ ಸಂವತ್ಸರ (೯೪೯-೫೦) ಎಂದು ಮಾತ್ರ ಬರೆದಿದೆ.

೪. ಧಾರವಾಡ ಜಿಲ್ಲಾ ಸೊರಟೂರಿನ ಶಿಲಾಲೇಖ. ಶಕ ೮೭೩ ನೆಯ ವಿರೋಧಿಕೃತ ಸಂವತ್ಸರ ಮಾರ್ಗಶಿರ ಶುದ್ಧ ೧೫ (೧೦ ನವೆಂಬರ ೯೫೧) ದಿವಸ ಚಂದ್ರಗ್ರಹಣದ ನಿಮಿತ್ತವಾಗಿ ಕೆಲ ದಾನ ಗಳನ್ನು ಕೊಟ್ಟಿತೆಂದು ಇದರಲ್ಲಿ ಬರೆದಿದೆ.

೫, ೬. ಮದ್ರಾಸ ಇಲಾಖೆ ಚೆಂಗಲ್ಪೇಟ ಜಿಲ್ಲಾ ತಿರುಕ್ಕಳುಕು ಗ್ರಾಮದ ೨ ಶಾಸನಗಳು. ಇವುಗಳಲ್ಲಿ ಕೆಲ ಮಹಾಜನರು ಅಲ್ಲಿಯ ಮೂಲಸ್ಥಾನ ದೇವಾಲಯಕ್ಕೆ ೩ ನೆಯ ಕೃಷ್ಣನ ಆಳಿಕೆಯ ೧೭ ನೆಯ ಮತ್ತು ೧೯ ನೆಯ ವರ್ಷಗಳಲ್ಲಿ (೯೫೭ ಮತ್ತು ೯೫೯) ಕೆಲ ದಾನ ಗಳನ್ನು ಕೊಟ್ಟರೆಂದು ಬರೆದಿರುತ್ತದೆ.

೭. ಮದ್ರಾಸ ಇಲಾಖೆ ಉತ್ತರ ಆರ್ಕಾಟ ಜಿಲ್ಲಾ ವೆಲ್ಲೂರಿನ ನೆರೆಯಲ್ಲಿದ್ದ ಜಾವಾಜಿಗುಡ್ಡದ ಒಂದು ಕಲ್ಲಿನ ಮೇಲೆ ಕೊರೆದ ಶಿಲಾಲೇಖ. ೩ ನೆಯ ಕೃಷ್ಣನ ಆಳಿಕೆಯ ೨೬ ನೆಯ ವರ್ಷದಲ್ಲಿ ಅಂದರೆ ೯೬೬-೯೬೭ರಲ್ಲಿ ಪಲ್ಲವ ಮನೆತನದ ಪಲ್ಲವ ಮುರಾರಿ ಎಂಬ ಬಿರುದುಳ್ಳ ತ್ರಿಭುವನಧೀರ ನುಳಂಬನೆಂಬವನು ಪನ್ನಪ್ಪೇಶ್ವರನೆಂಬ ಈಶ್ವರ ದೇವಾಲಯಕ್ಕೆ ನೇಲುಪ್ಪಾಡಿ ಎಂಬ ಹಳ್ಳಿಯನ್ನು ದಾನ ಕೊಟ್ಟನೆಂದು ಇದರಲ್ಲಿ ಬರೆದಿದೆ.

---

# ೫ ನೆಯ ಅಧ್ಯಾಯ

## ರಾಷ್ಟ್ರಕೂಟರ ಅಳಿಗಾಲ

### ೧೩. ಕೊಟ್ಟಿಗ

(೯೬೯–೯೭೧)

ಮೂರನೆಯ ಕೃಷ್ಣನಿಗೆ ಒಬ್ಬ ಮಗನೂ ಇಂದ್ರನೆಂಬ ಒಬ್ಬ ಮಮ್ಮಗನೂ ಇದ್ದನೆಂದು ಮೇಲೆ ಬರೆದಿರುತ್ತೇವಷ್ಟೇ. ಶಾಸ್ತ್ರದಂತೆಯೂ ವೃದ್ಧಸಾಂಪ್ರದಾಯದಂತೆಯೂ ಕೃಷ್ಣನ ತರುವಾಯ ಅವನ ಮಗನಾಗಲಿ ಮಮ್ಮಗನಾಗಲಿ ಪಟ್ಟವೇರಬೇಕಾಗಿತ್ತು. ಇವರಿಬ್ಬರು ಪಟ್ಟವೇರದೆ ಕೃಷ್ಣನ ೨ನೆಯ ತಮ್ಮನಾದ **ಕೊಟ್ಟಿಗ**ನು ಸಾರ್ವಭೌಮನಾದನೆಂಬುದರ ಕಾರಣವನ್ನು ತಿಳಿದುಕೊಳ್ಳಲಿಕ್ಕೆ ನಮಗೆ ಸಾಧನವೇ ಇಲ್ಲ. ಡಾ|| ಫ್ಲೀಟರು ಬರೆಯುವಂತೆ ಕೃಷ್ಣನ ಮಗನೂ ಅವನ ಮೊದಲನೆಯ ತಮ್ಮನಾದ ಜಗತ್ತುಂಗನೂ ಕೃಷ್ಣನಿರುವಾಗಲೇ ಸತ್ತಿದ್ದರೆಂದು ಎಣಿಸಿದರೂ, ಕೃಷ್ಣನ ತರುವಾಯ ಅವನ ಮಮ್ಮಗನಾದ ಇಂದ್ರನು ಏಕೆ ಪಟ್ಟವೇರಲಿಲ್ಲೆಂಬ ಪ್ರಶ್ನವು ಉದ್ಭವಿಸುತ್ತದೆ. ಈ ಪ್ರಶ್ನಕ್ಕೆ ಸಮರ್ಪಕವಾದ ಉತ್ತರವನ್ನು ಕೊಡಲಿಕ್ಕೆ ನಮಗೆ ಆಧಾರಗಳು ಇನ್ನೂ ದೊರೆತಿಲ್ಲ. ಆದ್ದರಿಂದ ಇಂದ್ರನು ಎಳೆ ಕೂಸಾಗಿದ್ದುದರಿಂದಲೂ ಸಾಮ್ರಾಜ್ಯದಲ್ಲಿ ಶತ್ರುಗಳ ಹಾವಳಿಯು ಹೆಚ್ಚಾಗಿದ್ದುದರಿಂದಲೂ ಪ್ರಮುಖ ಸರದಾರರು ಒಟ್ಟುಗೂಡಿ, ಕೃಷ್ಣನ ಎರಡನೆಯ ತಮ್ಮನಾದ ಕೊಟ್ಟಿಗನನ್ನು ಪಟ್ಟದ ಮೇಲೆ ಕೂಡ್ರಿಸಿದರೆಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

ಕೃಷ್ಣ ಕೊಟ್ಟಿಗರ ನಡುವಿದ್ದ ಸಂಬಂಧದ ವಿಷಯವಾಗಿ ಶಾಸನ ಪಂಡಿತರೊಳಗೆ ಮತಭೇದವಿದ್ದುದರಿಂದ, ಖಾರೆಪಾಟಣದ ಶಾಸನವು ಆ ಸಂಶಯವನ್ನು ದೂರಮಾಡುತ್ತದೆಂದು ಡಾ|| ಭಾಂಡಾರಕರರು ಬರೆಯುತ್ತಾರೆ. ಅದರಲ್ಲಿ ಹೇಳಿದ್ದೇನಂದರೆ :—

ಐಂದ್ರಪದಜಿಗೀಷಯೇವ ಸ್ವರ್ಗಮಧಿರೂಢೇ ಚ ಜ್ಯೇಷ್ಠೇ
ಭ್ರಾತರಿ ಶ್ರೀಮತ್ಕೃಷ್ಣದೇವರಾಜೇ
ಯುವರಾಜದೇವ ದುಹಿತರಿ ಕಂದಕ ದೇವ್ಯಾಮಮೋಘವರ್ಷ
ನೃಪಾ।
ಜ್ಞಾತಃ ಖೊಟ್ಟಿಗದೇವೋ ನೃಪತಿರಭೂದ್ಭುವನವಿಖ್ಯಾತಃ
॥ ೧೬ ॥*

ಮೇಲೆ ಕೊಟ್ಟ ಅವತರಣದಿಂದ ಕೊಟ್ಟಿಗನು ಕೃಷ್ಣನ ಮಲ ತಮ್ಮನಾಗಿದ್ದನೆಂದು ಸ್ಪಷ್ಟವಾಗಿ ಕಂಡುಬರುತ್ತದೆ.

ಈ ಕೊಟ್ಟಿಗದೇವನು ಎಂದು ಸಾರ್ವಭೌಮನಾದನೆಂಬ ಬಗ್ಗೆ ಡಾ॥ ಫ್ಲೀಟರು ಸಂಶಯದಲ್ಲಿ ತೊಳಲುತ್ತಾರೆ. ೩ನೆಯ ಕೃಷ್ಣನು ೯೬೯ರಲ್ಲಿ ಸತ್ತನೆಂದು ಮೇಲೆ ಬರೆದಿರುತ್ತೇವಷ್ಟೇ. ಆದ್ದರಿಂದ ಅವನು ಅದೇ ವರುಷ ಪಟ್ಟವೇರಿದನೆಂದು ಹೇಳಬಹುದು. ಇದಲ್ಲದೆ ಡಾ॥ ಫ್ಲೀಟರು ಉದಾಹರಿಸಿದ ಧಾರವಾಡ ಜಿಲ್ಲಾ ಗದಗ ತಾಲೂಕ ನಾಗಾವಿಯ ೨ ಶಿಲಾಲೇಖಗಳೂ ಅದೇ ತಾಲೂಕಿನ ಹಿರಿಹಂದಿಗೋಳದ ಒಂದು ಶಿಲಾಲೇಖವೂ ಈ ಅನುಮಾನವನ್ನು ಪುಷ್ಟೀಕರಿಸುತ್ತವೆ. ಈ ಶಾಸನಗಳು ಬಹಳವಾಗಿ ಸವೆದುದರಿಂದ ಒಂದರಲ್ಲಿ ಹೆಸರು ಮತ್ತೊಂದರಲ್ಲಿ ಶಕವು ಸ್ಪಷ್ಟವಾಗಿ ಕಾಣಿಸುವುದಿಲ್ಲ. ನಾಗಾವಿಯ ನಾಗಾರ್ಜುನ ಗುಡಿಯಲ್ಲಿದ್ದ ಶಿಲಾಲೇಖದಲ್ಲಿ ಶಕ ೮೯೧ ಮಾರ್ಗಶಿರ ಶುದ್ಧ ೧೫ (ಶುಕ್ರವಾರ ೨೬ ನವಂಬರ ೯೬೯) ದಿವಸ ಚಂದ್ರಗ್ರಹಣ ನಿಮಿತ್ತವಾಗಿ ದಾನಕೊಟ್ಟ ಸಂಗತಿಯು ಸ್ಪಷ್ಟವಾಗಿ ಕಂಡರೂ ದಾನಕೊಟ್ಟವರ ಹೆಸರು ಸವೆದುಹೋಗಿರುತ್ತದೆ. ಅದೇ ಊರ ಕನ್ನೂರು ಬಸಪ್ಪನ ಗುಡಿಯಲ್ಲಿದ್ದ ಶಿಲಾಲೇಖದಲ್ಲಿ ನಿತ್ಯವರ್ಷ ಕೊಟ್ಟಿಗದೇವನ ಹೆಸರು ಸ್ಪಷ್ಟವಾಗಿದ್ದರೂ ಕಾಲನಿರ್ದೇಶವು ಕಂಡುಬರುವುದಿಲ್ಲ. ಹಿರಿಹಂದಿಗೋಳದ ಉಡಚವ್ವನ ಗುಡಿಯಲ್ಲಿದ್ದ ಶಿಲಾಲೇಖದಲ್ಲಿ ನಿತ್ಯವರ್ಷ ಕೊಟ್ಟಿಗದೇವನ ಹೆಸರು ಓದಲಿಕ್ಕೆ ಬಂದರೂ ಶಕ ಸಂವತ್ಸರಗಳ ಅಕ್ಷರಗಳು ಸವೆದುಹೋಗಿರುತ್ತವೆ. ಈ ಮೂರೂ ಶಾಸನಗಳನ್ನು ಒಟ್ಟು

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೦೫.

ಗೂಡಿಸಿ ಓದಿದರೆ ೯೬೯ರಲ್ಲಿ ಕೊಟ್ಟಿಗನು ಪಟ್ಟವೇರಿದ್ದನೆಂದು ಧಾರಾಳ ವಾಗಿ ಹೇಳಬಹುದು*.

ಈ ಕೊಟ್ಟಿಗನ ಆಳಿಕೆಯಲ್ಲಿ ನಡೆದ ರಾಜಕೀಯ ಸಂಗತಿಗಳನ್ನು ತಿಳಿಸುವ ರಾಷ್ಟ್ರಕೂಟರ ಶಾಸನಗಳಾವವೂ ಇನ್ನೂ ದೊರೆತಿಲ್ಲ. ಆದರೆ ಮಾಳವೆಯ ಒಂದು ಶಾಸನದಲ್ಲಿ ಇವನ ಆಳಿಕೆಯು ಅನರ್ಥಕರವಾಯಿ ತೆಂದು ಬರೆದಿರುತ್ತದೆ. ಪರಮಾರ ಮನೆತನದ ಮಾಳವೆಯ ಅರಸನಾದ **ಸಿಯಾಕಹರ್ಷ**ನು ಕಾಳಿಗದಲ್ಲಿ ಕೊಟ್ಟಿಗನನ್ನು ಸೋಲಿಸಿ, ಅವನ ಪಾಳೆಯವನ್ನು ಸುಲಿದು ಅವನ ಸಂಪತ್ತನ್ನು ಸೆಳೆದುಕೊಂಡೆನೆಂದು ಹೇಳಿ ಕೊಳ್ಳುತ್ತಾನೆ. ಇದಲ್ಲದೆ ಇವನಾಗಲಿ ಇವನ ಮಗ **ಮುಂಜ**ನಾಗಲಿ ರಾಷ್ಟ್ರಕೂಟರ ಪ್ರಸಿದ್ಧ ರಾಜಧಾನಿಯಾದ ಮಳಖೇಡವನ್ನು ಸೂರೆ ಗೊಂಡನೆಂದು ಮತ್ತೊಂದು ಶಾಸನದಿಂದ ಕಂಡುಬರುತ್ತದೆ.

ಈ ಸೋಲಿನ ಮೂಲಕವಾಗಿಯೋ ಬೇರೆ ಕಾರಣದಿಂದಲೋ ಇವನು ಬಹಳ ವರ್ಷ ಬಾಳಲಿಲ್ಲ. ಇವನು ಸುಮಾರು ೨ ವರ್ಷ ಮಾತ್ರ ಸಾರ್ವಭೌಮನಾಗಿದ್ದಂತೆ ತೋರುತ್ತದೆ. ಇವನಿಗೆ ಗಂಡು ಮಕ್ಕಳಿದ್ದಿಲ್ಲೋ ಅಥವಾ ಅವರು ಇಂದ್ರನಂತೆ ಚಿಕ್ಕವರಾಗಿದ್ದರೋ ಗೊತ್ತಾಗುವುದಿಲ್ಲ. ಇವನಿಗೆ ನಿತ್ಯವರ್ಷನೆಂಬ ವಿಶಿಷ್ಟ ಬಿರುದೂ ರಟ್ಟ ಕಂದರ್ಪ ಶ್ರೀ ಪೃಥ್ವೀವಲ್ಲಭ ಮುಂತಾದ ಸಾಮಾನ್ಯ ಬಿರುದುಗಳೂ ಇದ್ದವು.

ಇವನ ಕಾಲದ ಒಂದು ಶಿಲಾಲೇಖವು ಮಾತ್ರ ಪ್ರಸಿದ್ಧವಾಗಿರು ತ್ತದೆಂದು ಡಾ॥ ಫ್ಲೀಟರು ಬರೆಯುತ್ತಾರೆ. ಧಾರವಾಡ ಜಿಲ್ಲಾ ಹುಬ್ಬಳ್ಳಿ ತಾಲೂಕ ಅದರಗುಂಚಿಯ ಶಾಸನವೇ ಈ ಶಿಲಾಲೇಖವಾಗಿರು ತ್ತದೆ. ಮೇಲೆ ಉದಾಹರಿಸಿದ ಗದಗ ತಾಲೂಕ ನಾಗಾವಿ ಹಿರಿಹಂದಿ ಗೋಳ ಈ ಊರುಗಳ ಶಿಲಾಲೇಖಗಳನ್ನು ಶಾಸನ ಪಂಡಿತರು ಮತ್ತೊಮ್ಮೆ ಪರೀಕ್ಷಿಸಿ ಹೊಸ ಸಂಗತಿಗಳನ್ನು ಹೊರಗೆಡುವುವ ವರೆಗೆ

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೨೨, ಅಡಿಟಿಪ್ಪಣಿ ೩.

ನಾವು ಇದೊಂದೇ ಶಾಸನದಿಂದ ಸಂತುಷ್ಟರಾಗಿರಬೇಕಾಗಿದೆ. ಈ ಶಿಲಾಲೇಖದ ತಾತ್ಪರ್ಯವನ್ನು ಕೆಳಗೆ ಕೊಡುತ್ತೇವೆ:—

ಧಾರವಾಡ ಜಿಲ್ಲಾ ಹುಬ್ಬಳ್ಳಿ ತಾಲೂಕ ಅದರಗುಂಚಿಯ ಶಿಲಾಲೇಖ. ಕೊಟ್ಟಿಗನ ಮಹಾಮಂಡಲೇಶ್ವರನಾದ ಪೆರಮನಡಿ ಮಾರಸಿಂಹನು ಗಂಗವಾಡಿ ೯೬,೦೦೦ವನ್ನೂ, ಪುರಿಗೆರೆ ೩೦೦ನ್ನೂ, ಬೆಳ್ವೊಲ ೩೦೦ನ್ನೂ ಆಳುತ್ತಿದ್ದಾಗ ಶಕ ೮೯೩ನೆಯ ಪ್ರಜಾಪತಿ ಸಂವತ್ಸರ ಆಶ್ವಯುಜ ೩೦ನೆಯ ದಿವಸ (೨೨ ಅಕ್ಟೋಬರ ೯೭೧) ಸೂರ್ಯಗ್ರಹಣ ನಿಮಿತ್ತವಾಗಿ ಒಬ್ಬ ಗೃಹಸ್ಥನು ಕೆಲ ದಾನಗಳನ್ನು ಕೊಟ್ಟನೆಂದು ಇದರಲ್ಲಿ ಬರೆದಿರುತ್ತದೆ.

## ೧೪. ಎರಡನೆಯ ಕಕ್ಕರಾಜ ಅಥವಾ ಕಕ್ಕಲದೇವ

(೯೭೧–೯೭೩)

ಕೊಟ್ಟಿಗನ ತರುವಾಯ ಅವನ ತಮ್ಮನಾದ ನಿರುಪಮನ ಮಗನಾದ ಕಕ್ಕ ಅಥವಾ ಕಕ್ಕಲನು ೨ನೆಯ ಕಕ್ಕನೆಂಬ ಹೆಸರಿನಿಂದ ಪಟ್ಟವೇರಿದನು (೯೭೧). ೧೦೦೯ನೆಯ ಇಸ್ವಿಯ ಕೌತೆಮ್ಮದ ಶಾಸನದಲ್ಲಿ ಕರ್ಕರನೆಂತಲೂ ೧೦೪೩ನೆಯ ಇಸ್ವಿಯ ವಿಜಾಪುರ ಜಿಲ್ಲಾ ಮನಗೋಳಿಯ ಶಿಲಾಲೇಖದಲ್ಲಿ ಕಕ್ಕರನೆಂತಲೂ ಇವನನ್ನು ಕರೆದಿರುತ್ತಾರೆ.

೨ನೆಯ ಕಕ್ಕನು ರಾಷ್ಟ್ರಕೂಟ ಮನೆತನದ ಕಟ್ಟಕಡೆಯ ಸಾರ್ವಭೌಮನಾಗಿದ್ದನೆಂಬುದಕ್ಕೆ ಸಂದೇಹವಿಲ್ಲ. ಖಾನದೇಶ ಜಿಲ್ಲಾ ಕರ್ಡೆಯ ತಾಮ್ರ ಶಾಸನದಲ್ಲಿ ಇವನು ಶೂರನಾಗಿದ್ದನೆಂತಲೂ ಗುರ್ಜರರನ್ನೂ, ಚೋಳರನ್ನೂ, ಹೂಣರನ್ನೂ, ಪಾಂಡ್ಯರನ್ನೂ ಸೋಲಿಸಿದನೆಂತಲೂ ಬರೆದಿದ್ದಾರೆ. ಆದರೆ ಈ ಸ್ತುತಿಗೆ ಕಕ್ಕನು ಅನರ್ಹನಾಗಿದ್ದನೆಂದು ತೋರುತ್ತದೆ. ಏಕೆಂದರೆ, ಇವನು ರಾಜಧಾನಿಯನ್ನು ಬಿಟ್ಟು ಕದಲಿದ್ದಾಗಲಿ ಯಾವ ರಾಜ್ಯದ ಮೇಲೆ ದಂಡೆತ್ತಿಹೋದುದಾಗಲಿ ಯಾವ ಶಾಸನದಲ್ಲಿಯೂ ಕಂಡುಬರುವುದಿಲ್ಲ. ಆದಕಾರಣ ಈ ಸ್ತುತಿಯು ಮಳಖೇಡದಲ್ಲಿ ಒಂದು ಗ್ರಾಮವನ್ನು ಉಂಬಳಿಯಾಗಿ ದೊರಕಿಸಿದ ಒಬ್ಬ ಬ್ರಾಹ್ಮಣನ ಒಣಹೊಗಳಿಂದು ಧಾರಾಳವಾಗಿ ಹೇಳಬಹುದು.

೨ನೆಯ ಕಕ್ಕನಿಗೆ ಅಮೋಘವರ್ಷ ನೃಪತುಂಗ ಎಂಬ ಎರಡು ವಿಶಿಷ್ಟ ಬಿರುದುಗಳೂ ವೀರನಾರಾಯಣ ರಾಜತ್ರಿನೇತ್ರ ಮಹಾರಾಜಾಧಿರಾಜ ಮುಂತಾದ ಸಾಮಾನ್ಯ ಬಿರುದುಗಳೂ ಇದ್ದವು. ಇವನು ಶಕ ೮೯೬ನೆಯ ಆಷಾಢ ಕೃಷ್ಣ ೫ ಮಂಗಳವಾರ (೨೪ ಜೂನ ೯೭೩) ದ ವರೆಗೆ ಸಾರ್ವಭೌಮನಾಗಿದ್ದನೆಂತಲೂ ಮುಂದೆ ಒಂದೆರಡು ತಿಂಗಳಲ್ಲಿ ಬಾದಾವಿ ಚಾಳುಕ್ಯ ಮನೆತನದ ಕಲಿಯಾದ ೨ನೆಯ **ತೈಲ** ಅಥವಾ **ತೈಲಪ**ನು ಇವನ ಸಾಮ್ರಾಜ್ಯವನ್ನು ಕಿತ್ತಿಕೊಂಡನೆಂತಲೂ ಡಾ॥ ಫ್ಲೀಟರು ನಿರ್ಣಯಿಸಿದ್ದಾರೆ. ಈ ನಿರ್ಣಯಕ್ಕೆ ಶಾಬ್ದಪ್ರಮಾಣಗಳಾಗಿದ್ದ ೩ ಶಾಸನಗಳ ತಾತ್ಪರ್ಯವನ್ನು ಕೆಳಗೆ ಕೊಡುತ್ತೇವೆ:—

(೧) ಖಾನದೇಶ ಜಿಲ್ಲಾ ಕರ್ಡೆಯ ತಾಮ್ರಶಾಸನ. ಶಕ ೮೯೪ನೆಯ ಅಂಗಿರಸ ಸಂವತ್ಸರ ಆಶ್ವಯುಜ ಶುದ್ಧ ೧೫ ಬುಧವಾರ ದಿವಸ(೨೫ ಸಪ್ಟಂಬರ ೯೭೨) ೨ನೆಯ ಕಕ್ಕನು ತನ್ನ ರಾಜಧಾನಿಯಾದ ಮಾನ್ಯಖೇಟದಲ್ಲಿದ್ದಾಗ ಚಂದ್ರಗ್ರಹಣದ ನಿಮಿತ್ತವಾಗಿ ಒಬ್ಬ ಬ್ರಾಹ್ಮಣನಿಗೆ ಉಪ್ಪಲಿಕಾ ೩೦೦ರಲ್ಲಿದ್ದ ಪಂಗರಿಕಾ ಎಂಬ ಹಳ್ಳಿಯನ್ನು ದಾನ ಕೊಟ್ಟನು.

(೨) ಧಾರವಾಡ ಜಿಲ್ಲಾ ಗುಂಡೂರಿನ ಶಿಲಾಲೇಖ. ಶಕ ೮೯೬ನೆಯ ಆಷಾಢ ಕೃಷ್ಣ ೫ ಮಂಗಳವಾರ (೨೪ ಜೂನ ೯೭೩) ದಿವಸ ಪೆರ್ಮನಡಿ ಮಾರಸಿಂಹನು ಕಕ್ಕನ ಮಂಡಲೇಶ್ವರನಾಗಿದ್ದಾಗ ಒಬ್ಬ ಗೃಹಸ್ಥನು ದಕ್ಷಿಣಾಯನ ಪರ್ವಕಾಲದ ನಿಮಿತ್ತವಾಗಿ ಒಂದು ಹೊಲವನ್ನು ದಾನಕೊಟ್ಟನು.

(೩) ಧಾರವಾಡ ಜಿಲ್ಲಾ ಗದಗಿನ ವೀರನಾರಾಯಣನ ಗುಡಿಯಲ್ಲಿದ್ದ ಶಿಲಾಲೇಖ*. ಇದು ೧೯೮ನೆಯ ಇಸ್ವಿಯ ಶಾಸನವು. ಬಾದಾವಿ ಚಾಳುಕ್ಯ ಮನೆತನದ ೨ನೆಯ ತೈಲನು ಶ್ರೀಮುಖ ಸಂವತ್ಸರ (೯೭೩) ದಲ್ಲಿ ರಟ್ಟರನ್ನು ಬೇರುದರಸೆ ಕಿತ್ತಿಹಾಕಿ, ಮಾಳವೆಯ ಮುಂಜನನ್ನು ಕೊಂದು, ಪಾಂಚಾಳನ ತಲೆಯನ್ನು ಕಾಳೆಗದಲ್ಲಿ ಹಾರಿಸಿ, ತನ್ನ

---

* ಇಂಡಿಯನ್ ಆಂಟಿಕ್ವರಿ, ಸಂ. ೨೧, ಪು. ೧೬೭.

ಪೂರ್ವಜರ ರಾಜ್ಯವೈಭವವನ್ನು ಮರಳಿ ದೊರಕಿಸಿ, ೨೪ ವರ್ಷ ರಾಜ್ಯ ಭಾರ ಗೆಯ್ದನೆಂದು ಈ ಶಾಸನದ ಒಂದು ಶ್ಲೋಕದಲ್ಲಿ ಬರೆದಿದೆ.

ಇಲ್ಲಿಗೆ ರಾಷ್ಟ್ರಕೂಟ ಅಥವಾ ನಾಡುಗವುಡರ ಮನೆತನದ ಆಳಿಕೆಯು ಮುಗಿದಂತಾಯಿತು. ಡಾ॥ ಫ್ಲೀಟರು ಹೇಳಿದವರಿಗಿಂತ ಹೆಚ್ಚು ಮಂದಿ ಸಾರ್ವಭೌಮರು ಆಳಿದರೆಂತಲೂ ಅವರ ಕಾಲವಾದರೂ ಕೆಲಮಟ್ಟಿಗೆ ಭಿನ್ನವಾಗಿತ್ತೆಂತಲೂ ನಾನು ಬರೆದಿರುವುದರಿಂದ, ಅವರ ಹೆಸರುಗಳನ್ನೂ ಅವರು ಆಳಿದ ಕಾಲವನ್ನೂ ಕೆಳಗೆ ಕೊಡುತ್ತೇನೆ:—

| | ಹೆಸರು | ಆಳಿಕೆಯ ಕಾಲ |
|---|---|---|
| ೧. | ದಂತಿದುರ್ಗ ಅಥವಾ ೨ನೆಯ ದಂತಿವರ್ಮ | ೭೫೪—೭೫೮ |
| ೨. | ಮೊದಲನೆಯ ಕೃಷ್ಣ | ೭೫೮—೭೭೮ |
| ೩. | ಎರಡನೆಯ ಗೋವಿಂದ | ೭೭೮—೭೮೩ |
| ೪. | ಧ್ರುವ ಅಥವಾ ಡೋರ | ೭೮೪—೭೯೪ (?) |
| ೫. | ಮೂರನೆಯ ಗೋವಿಂದ | ೭೯೪ (?)—೮೧೪ |
| ೬. | ಶರ್ವಮಹಾರಾಜ ಅಥವಾ ನೃಪತುಂಗ | ೮೧೫—೮೭೮ |
| ೭. | ಎರಡನೆಯ ಕೃಷ್ಣ ಅಥವಾ ಕನ್ನರ | ೮೭೮—೯೧೪ |
| ೮. | ಮೂರನೆಯ ಇಂದ್ರ | ೯೧೪—೯೧೭ |
| ೯. | ಎರಡನೆಯ ಅಮೋಘವರ್ಷ | ೯೧೭—೯೧೮ |
| ೧೦. | ನಾಲ್ಕನೆಯ ಗೋವಿಂದ | ೯೧೮—೯೩೩ |
| ೧೧. | ಅಮೋಘವರ್ಷ ವಡ್ಡಿಗ | ೯೩೪—೯೪೦ |
| ೧೨. | ಮೂರನೆಯ ಕೃಷ್ಣ ಅಥವಾ ಕನ್ನರದೇವ | ೯೪೦—೯೬೯ |
| ೧೩. | ಕೊಟ್ಟಿಗ | ೯೬೯—೯೭೧ |
| ೧೪. | ಎರಡನೆಯ ಕಕ್ಕರಾಜ ಅಥವಾ ಕಕ್ಕಲದೇವ | ೯೭೧—೯೭೩ |

## ೧೫. ನಾಲ್ಕನೆಯ ಇಂದ್ರ

೨ನೆಯ ಕಕ್ಕನೇ ರಾಷ್ಟ್ರಕೂಟ ಮನೆತನದ ಕಟ್ಟಕಡೆಯ ಅರಸನಾಗಿದ್ದನೆಂತಲೂ ೯೭೩ನೆಯ ಇಸ್ವಿಯ ಕಡೆಯ ಭಾಗದಲ್ಲಿ ಬಾದಾಮಿ

ಚಾಳುಕ್ಯ ಮನೆತನದವನಾದ ಎರಡನೆಯ ತೈಲನು ರಾಷ್ಟ್ರಕೂಟರ ಸಾಮ್ರಾಜ್ಯವನ್ನು ಕಿತ್ತಿಕೊಂಡನೆಂತಲೂ ಮೇಲೆ ಬರೆದಿರುತ್ತೇವಷ್ಟೇ. ಮೂಗು ಕೊಯ್ದರೂ ಮೂಗಿನ ಸೊಳ್ಳೆ ಉಂಟಲ್ಲ? ಎಂಬ ಗಾದೆಯಂತೆ ರಾಷ್ಟ್ರಕೂಟರ ಸಾರ್ವಭೌಮತ್ವವು ಮಣ್ಣುಪಾಲಾದರೂ ನಾಮ ಧಾರಿಯಾದ ರಾಷ್ಟ್ರಕೂಟ ಸಾರ್ವಭೌಮನೊಬ್ಬನು ಕರ್ನಾಟಕದಲ್ಲಿ ದಿಕ್ಕೆಟ್ಟು ೮ ವರ್ಷ ಅಲೆದಾಡುತ್ತಿದ್ದನು. ಅದು ಹೇಗೆಂದರೆ:—

೯ ನೆಯ ಶತಮಾನದ ಆರಂಭದಿಂದ ರಾಷ್ಟ್ರಕೂಟ ಗಂಗ ಮನೆತನ ಗಳ ನಡುವೆ ಶರೀರಸಂಬಂಧವು ಎಡೆಬಿಡದೆ ನಡೆದಿತ್ತಷ್ಟೇ. ಚೋಳ ರಾಜನನ್ನು ಕಲಿತನದಿಂದ ಕಾಳೆಗದಲ್ಲಿ ಕೊಂದ ಬೂತುಗನ ತಂಗಿಯು ೩ ನೆಯ ಕೃಷ್ಣನ ಮಹಾರಾಣಿಯಾಗಿದ್ದಳು. ಕೃಷ್ಣನ ತರುವಾಯ ಅವನ ತಮ್ಮನಾದ ಕೊಟ್ಟಿಗನೂ ಅವನ ತರುವಾಯ ಅವನ ತಮ್ಮನ ಮಗನಾದ ಕಕ್ಕನೂ ಮಳಖೇಡದ ಪಟ್ಟವೇರಿದ್ದರಿಂದ ಕೃಷ್ಣನ ಮಮ್ಮಗನಾದ ಇಂದ್ರನು ಪಟ್ಟಕ್ಕೆ ಎರವಾಗಿದ್ದನು. ಈ ಇಂದ್ರನಿಗೆ ಬೂತುಗನ ಮಗಳನ್ನು ಕೊಟ್ಟಿತ್ತು. ಚಾಳುಕ್ಯ ತೈಲಪನು ಕಕ್ಕನನ್ನು ಪಟ್ಟದಿಂದ ತಳ್ಳಿ ರಾಷ್ಟ್ರಕೂಟರ ಪ್ರಸಿದ್ಧ ರಾಜಧಾನಿಯಾದ ಮಳಖೇಡ ವನ್ನು ಹಿಡಿದುಕೊಂಡ ಬಳಿಕ, ಕೃಷ್ಣ ಬೂತುಗರ ಮಮ್ಮಗನಾದ ಇಂದ್ರನು ಕಂಗೆಟ್ಟು ತನ್ನ ಸೋದರಮಾವನಾದ ಮಾರಸಿಂಹನು ಇದ್ದೆಡೆಗೆ ಓಡಿಹೋದನು. ಅವನ ದುರವಸ್ಥೆಯನ್ನು ನೋಡಿ ಮಹತ್ವಾ ಕಾಂಕ್ಷಿಯಾದ ಮಾರಸಿಂಹನ ಹೊಟ್ಟೆಯಲ್ಲಿ ಬೆಂಕಿ ಬಿತ್ತು. ಸಿಟ್ಟು ಕ್ಷಣಿಕ ಹುಚ್ಚುತನವಲ್ಲವೇ? ಸಿಟ್ಟಿನ ಭರದಲ್ಲಿ ಮಾರಸಿಂಹನು ದೇಶ ಕಾಲಸ್ಥಿತಿಯನ್ನು ವಿಚಾರಿಸದೆ, ತನ್ನ ಮತ್ತು ಹಗೆಗಳ ಸಾಮರ್ಥ್ಯವನ್ನು ತೂಗಿನೋಡದೆ, ಅಳಿದು ಹೋದ ರಾಷ್ಟ್ರಕೂಟ ಸಾಮ್ರಾಜ್ಯವನ್ನು ಮರಳಿ ನೆಲೆಗೊಳಿಸುವ ಹೆಮ್ಮೆಯಿಂದ ತನ್ನ ಸೋದರಳಿಯನಾದ ಇಂದ್ರನಿಗೆ ೪ ನೆಯ ಇಂದ್ರನೆಂಬ ಹೆಸರಿನಿಂದ ರಾಷ್ಟ್ರಕೂಟ ಪಟ್ಟ ಬಂಧೋತ್ಸವವನ್ನು ಮಾಡಿಸಿ, ಅವನನ್ನು ಕಟ್ಟಿಕೊಂಡು ಚಾಳುಕ್ಯ ತೈಲನೊಡನೆ ಕಾದಲಿಕ್ಕೆ ಅಣಿಯಾದನೆಂದು ಶ್ರವಣಬೆಳ್ಗೊಳದ ೩೮ ನೆಯ ಶಾಸನದಿಂದ ಕಂಡುಬರುತ್ತದೆ.

ಮಾರಸಿಂಹನು ಶೂರನೂ ಸಾಹಸಿಯೂ ಧೈರ್ಯಶಾಲಿಯೂ ಆಗಿದ್ದರೂ ಅವನಿಗೆ ಜನಸಾಹಾಯುವಾಗಲಿ ದೈವಬಲವಾಗಲಿ ಇದ್ದಿಲ್ಲ. ಹನುಮಂತನ ಮುಂದೆ ಹಾರುವುದೇ ಗುಬ್ಬಿ? ಎಂಬ ಗಾದೆಯಂತೆ ಗೆಲವಿನಿಂದ ಕೊಬ್ಬೇರಿದ ಚಾಳುಕ್ಯ ತೈಲನ ಮುಂದೆ ಅವನ ಆಟ ಸಾಗ ಲಿಲ್ಲ. ಮುಂದೆ ಮಾರಸಿಂಹ ತೈಲರ ನಡುವೆ ಆದ ಕಾಳೆಗದಲ್ಲಿ ಮಾರ ಸಿಂಹನು ಸೋತು ಗಾಯಪಟ್ಟು, ಧಾರವಾಡ ಜಿಲ್ಲಾ ಬಂಕಾಪುರಕ್ಕೆ ಓಡಿಹೋಗಿ, ಅಲ್ಲಿ ಅನಶನದಿಂದ ಸತ್ತನು (ಭಾವ ಸಂವತ್ಸರ ಜ್ಯೇಷ್ಠ ಮಾಸ ಜೂನ ೯೭೪). ತರುವಾಯ ಅವನು ಬೆನ್ನುಕಟ್ಟಿದ ೪ನೆಯ ಇಂದ್ರನು ನಿರಾಶ್ರಿತನಾಗಿ ದಿಕ್ಕೆಟ್ಟು ಅತ್ತಿತ್ತ ಅಂಡಲೆದು, ಅನಶನವ್ರತ ದಿಂದ ಶ್ರವಣಬೆಳ್ಗೊಳದಲ್ಲಿ ಸತ್ತನು (೨೦ ಮಾರ್ಚ, ೯೮೨). ಇಲ್ಲಿಗೆ ರಾಷ್ಟ್ರಕೂಟ ಅಥವಾ ನಾಡುಗವುಡರ ಆಳಿಕೆಯ ಅವಶೇಷವು ಮುಗಿ ದಂತಾಯಿತು.

ಈ ಮೇರೆಗೆ ರಾಷ್ಟ್ರಕೂಟರ ಸಾರ್ವಭೌಮತ್ವವು ಅಳಿದರೂ ಅವರ ವಂಶವು ಅಳಿಯಲಿಲ್ಲೆಂದು ಧಾರಾಳವಾಗಿ ಹೇಳಬಹುದು. ಏಕೆಂದರೆ, ರಾಷ್ಟ್ರಕೂಟರ ತರುವಾಯ ಚಾಳುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದ ೨ನೆಯ ತೈಲನು ರಾಷ್ಟ್ರಕೂಟ ಅರಸುಮನೆತನಕ್ಕೆ ಸೇರಿದ **ಭಮ್ಮಹ**ನೆಂಬವನ ಮಗಳಾದ **ಜಕ್ಕಬ್ಬೆ** ಎಂಬಾಕೆಯನ್ನು ಮದುವೆ ಯಾಗಿದ್ದನು. ಈ ಭಮ್ಮಹನು ಕೃಷ್ಣ ಕೊಟ್ಟಿಗ ಕಕ್ಕರಿಗೆ ಹೇಗೆ ಸಂಬಂಧಿಕನಾಗಿದ್ದನೆಂಬುದು ಗೊತ್ತಾಗುವುದಿಲ್ಲ. ಇಷ್ಟೇ ಅಲ್ಲ, ಭಮ್ಮಹ ಶಬ್ದವು ಬೇರೊಬ್ಬ ರಾಷ್ಟ್ರಕೂಟನ ಹೆಸರಾಗಿತ್ತೋ ಅಥವಾ ೨ನೆಯ ಕಕ್ಕನ ಬಿರುದಾಗಿತ್ತೊ ಎಂದು ಡಾ|| ಫ್ಲೀಟರು ಸಂಶಯಪಡು ತ್ತಾರೆ*. ಭಮ್ಮಹ ಶಬ್ದವು ೨ನೆಯ ಕಕ್ಕನ ಬಿರುದಾಗಿತ್ತೆಂದು ಸಿದ್ಧ ವಾದರೆ, ೨ನೆಯ ತೈಲನು ತನ್ನ ಮಾವನ ರಾಜ್ಯವನ್ನೇ ಸೆಳೆದುಕೊಂಡಂ ತಾಯಿತು, ಮತ್ತು ರಾಷ್ಟ್ರಕೂಟ ದಂತಿದುರ್ಗನು ಬಾದಾವಿ ಚಾಳುಕ್ಯರಿಂದ ರಾಜ್ಯವನ್ನು ಕಿತ್ತಿಕೊಳ್ಳುವಾಗ ಮಾಡಿದ ಕಾಯಕ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಅಡಿಟಿಪ್ಪಣಿ ೨.

ದಿಂದಲೇ ೨ನೆಯ ತೈಲನು ಸುಸಂಧಿಯನ್ನು ಸಾಧಿಸಿ, ಮುಯ್ಯಕ್ಕೆ ಮುಯ್ಯ ತೀರಿಸಿದನೆಂದು ಧಾರಾಳವಾಗಿ ಹೇಳಬಹುದು. ಅದು ಹೇಗೇ ಇರಲಿ; ರಾಷ್ಟ್ರಕೂಟ ಅರಸುಮಗಳಾದ ಜಕ್ಕವ್ವೆಯು ೨ನೆಯ ತೈಲನ ಮಹಾರಾಣಿಯಾದ್ದರಿಂದ ಶರಣುಬಂದ ರಾಷ್ಟ್ರಕೂಟರನ್ನು ಅವನು ಹಿಂಸಿಸಲಿಲ್ಲೆಂದು ಬರೆಯಲಿಕ್ಕೆ ಏನೂ ಅಡ್ಡಿಯಿಲ್ಲ. ಆದಕಾರಣ ಕಲ್ಯಾಣದ ಚಾಳುಕ್ಯರ ಸಾಮ್ರಾಜ್ಯದಲ್ಲಿ ಕೆಲ ರಾಷ್ಟ್ರಕೂಟರು



ರಾಷ್ಟ್ರಕೂಟರ ಶಾಸನದ ಮಾದರಿ

ಸಣ್ಣ ದೊಡ್ಡ ಸಾಮಂತರಾಗಿ ಅಲ್ಲಲ್ಲಿ ಆಳುತ್ತಿದ್ದರೆಂದು ಹೇಳಬಹುದು. ತಾವು ರಾಷ್ಟ್ರಕೂಟ ಮನೆತನದವರೆಂದು ಹೇಳಿಕೊಳ್ಳುವ ಸವದತ್ತಿಯ ರಟ್ಟರು ಚಾಳುಕ್ಯರ ಮಹಾಸಾಮಂತರಾಗಿ ಎಷ್ಟೋ ವರ್ಷ ಸವದತ್ತಿಯಲ್ಲಿ ಆಳಿದರು. ಸೆವುಣದೇಶದ ಯಾದವ ಮನೆತನದ ಮಹಾಸಾಮಂತನಾದ ೨ನೆಯ ಭಿಲ್ಲಮನು (೧೦೦೦ ಇಸ್ವಿ) ರಾಷ್ಟ್ರಕೂಟ ಮನೆತನದ ಝುಂಝಾ ಎಂಬವನ ಮಗಳಾದ **ಲಚ್ಚಿಯವ್ವಾ** ಅಥವಾ ಲಕ್ಷ್ಮೀ ಎಂಬಾಕೆಯನ್ನು ಮದುವೆಯಾಗಿದ್ದನು. ಲಟಲವೂರಿನ ಪ್ರಸಿದ್ಧ ರಾಷ್ಟ್ರಕೂಟ ಮನೆತನದವನಾದ ಧಾಡೀಭಂಡಕ ಅಥವಾ ಧಾಡೀಭಡಕನೆಂಬವನು ಚಾಳುಕ್ಯ ಮನೆತನದ ೬ನೆಯ ವಿಕ್ರಮಾದಿತ್ಯನ ಆಳಿಕೆಗೆ ಒಳಗಾದ ಮಧ್ಯಪ್ರಾಂತದಲ್ಲಿದ್ದ ಸಿತಾಬಲ್ದಿ ನಾಡಿನ ಮಹಾಸಾಮಂತನಾಗಿದ್ದನು (೧೦೮೭). ಇದಲ್ಲದೆ ಚೇದಿಯ ಕಲಚುರಿಯರು ರಾಷ್ಟ್ರಕೂಟರ ಹತ್ತಿಹೊಂದಿದ ಆಪ್ತರಾದ್ದರಿಂದ ಅವರ ಆಶ್ರಯದಲ್ಲಿ ಕೆಲ ರಾಷ್ಟ್ರಕೂಟರು ಇದ್ದರೆಂದು ಕಂಡುಬರುತ್ತದೆ.

---

# ೬ನೆಯ ಅಧ್ಯಾಯ

## ದೇಶಕಾಲ ಸ್ಥಿತಿ

(೭೫೭–೯೭೩)

ನಾಡುಗವುಡರು ಅಥವಾ ರಾಷ್ಟ್ರಕೂಟರು ನಮ್ಮ ತಾಯ್ನಾಡಾದ ಕರ್ನಾಟಕದೊಳಗೆ ಸುಮಾರು ೨೧೬ ವರ್ಷ ಸಾಮ್ರಾಜ್ಯಗೆಯ್ದರೆಂದು ಧಾರಾಳವಾಗಿ ಹೇಳಬಹುದು. ಈ ಅವಧಿಯಲ್ಲಿ ನಮ್ಮ ಪೂರ್ವಜರ ಸ್ಥಿತಿಗತಿಯು ಹೇಗಿತ್ತೆಂಬುದನ್ನು ಸಾಧ್ಯವಿದ್ದ ಮಟ್ಟಿಗೆ ಈ ಅಧ್ಯಾಯದಲ್ಲಿ ವಿವರಿಸಲಿಕ್ಕೆ ಯತ್ನಿಸುವೆವು.

**ರಾಜಕೀಯ ಸ್ಥಿತಿ**—ರಾಷ್ಟ್ರಕೂಟರು ಯಾರಾಗಿದ್ದರೆಂಬ ಬಗ್ಗೆ ಹಿಂದೆ ೧ನೆಯ ಅಧ್ಯಾಯದಲ್ಲಿ ವಿಶೇಷವಾಗಿ ವಿಚಾರ ಮಾಡಿರುತ್ತೇವಷ್ಟೇ. ೬ನೆಯ ಶತಮಾನಕ್ಕಿಂತ ಮೊದಲು ಇವರು ಎಲ್ಲಿ ವಾಸ

ಮಾಡಿಕೊಂಡಿದ್ದರೆಂಬುದು ನಮಗೆ ಗೊತ್ತಾಗದಿದ್ದರೂ ೬ನೆಯ ಶತಮಾನದಿಂದ ಇವರು ಕರ್ನಾಟಕಸ್ಥರೇ ಆಗಿದ್ದರೆಂದು ೧ನೆಯ ಅಧ್ಯಾಯದಲ್ಲಿ ಸಪ್ರಮಾಣವಾಗಿ ಬರೆದಿರುತ್ತೇವೆ. ಇವರು ಕನ್ನಡಿಗರೇ ಆಗಿದ್ದರೆಂಬ ನನ್ನ ಊಹೆಯನ್ನು ಕೆಳಗೆ ಕೊಟ್ಟ ಕಾರಣಗಳು ಬಲಪಡಿಸುತ್ತವೆ:—

೧. ಈವರೆಗೆ ನಮಗೆ ದೊರೆತ ರಾಷ್ಟ್ರಕೂಟರ ಬಹುಶಃ ಎಲ್ಲ ಶಾಸನಗಳು ಕನ್ನಡ ಲಿಪಿಯಲ್ಲಾಗಲಿ ಮಾತಿನಲ್ಲಾಗಲಿ ಇರುತ್ತವೆ.

೨. ಈ ಮನೆತನದ ಸಾರ್ವಭೌಮರೊಳಗೆ ಸುಪ್ರಸಿದ್ಧನಾದ ನೃಪತುಂಗ (೮೧೫—೮೭೭) ನೆಂಬವನು ಕನ್ನಡ ಕವಿಗಳಿಗೆ ಉದಾರಾಶ್ರಯವನ್ನಿತ್ತುದಲ್ಲದೆ 'ಕವಿರಾಜಮಾರ್ಗ'ವೆಂಬ ಕನ್ನಡ ಗ್ರಂಥವನ್ನು ತಾನೇ ಬರೆದನು ಅಥವಾ ಬರೆಯಿಸಿದನೆಂಬುದಕ್ಕೆ ಸಂದೇಹವಿಲ್ಲ.

೩. ಇವರು ತಮ್ಮ ಹೆಂಗಸರ ಹೆಸರಿನ ಮುಂದೆ **'ಅವ್ವಾ'** ಅಥವಾ **'ಅಬ್ಬೆ'** ಎಂಬ ಕನ್ನಡ ಶಬ್ದವನ್ನು ವಾಡಿಕೆಯಾಗಿ ಹಚ್ಚುತ್ತಿದ್ದರು. ಉದಾ.—ಗಾಮುಂಡಬ್ಬೆ, ಚಂದ್ರೋಬಲಬ್ಬೆ, ಅಬ್ಬಲಬ್ಬೆ, ಲಚ್ಚಿಯಮ್ವಾ, ವೊಡ್ಡಿಯಮ್ವಾ, ಜಾಕಬ್ಬೆ.

೪. ಈ ರಾಷ್ಟ್ರಕೂಟ ಮನೆತನದ ಅರಸುಮಕ್ಕಳಿಗೆ ಉದ್ದವಾದ ಸಂಸ್ಕೃತ ಹೆಸರುಗಳ ಹೊರತು ಡೋರ, ಗೊಜ್ಜಿಗ, ಕನ್ನರ, ಬಡ್ಡಿಗ, ಕೊಟ್ಟಿಗ, ಮುಂತಾದ ಸಣ್ಣ ಕನ್ನಡ ಹೆಸರುಗಳಿದ್ದವು.

೫. ರಾಷ್ಟ್ರಕೂಟರ ಅಥವಾ ನಾಡುಗವುಡರ ಮಂತ್ರಿಗಳು, ದಂಡನಾಯಕರು, ಸಾಮಂತರು—ಇವರೆಲ್ಲ ಕನ್ನಡಿಗರೇ ಆಗಿದ್ದರು. ಉದಾ.—ಬಾರಪ್ಪ, ಬಂಕೆಯರಸು, ಅರಸಾರ್ಯ, ಧವಲಪ್ಪ, ಲೆಂಡೆಯರಸು, ಬೂತುಗ, ಮಣಲೇರ, ಮುಂತಾದವರು.

೬. ಎಂಟನೆಯ, ಒಂಬತ್ತನೆಯ ಮತ್ತು ಹತ್ತನೆಯ ಶತಮಾನಗಳಲ್ಲಿ ಕರ್ನಾಟಕ ಸಾಮ್ರಾಜ್ಯದೊಳಗೆ ತ್ರಿಮತಗಳು ಜನರ ಭಕ್ತಿ ವಿಶ್ವಾಸವನ್ನು ಸೆಳೆದುಕೊಂಡಿದ್ದವು. ಉತ್ತರ ಭಾಗದಲ್ಲಿದ್ದ ಬೌದ್ಧ

ಮತವು ಅರೆಜೀವಿಯಾಗಿ ಪ್ರಾಣೋತ್ಕ್ರಮಣದ ಕಾಲವನ್ನು ನಿರೀಕ್ಷಿಸುತ್ತಿತ್ತು. ಮಧ್ಯ ಭಾಗದಲ್ಲಿಯೂ ದಕ್ಷಿಣ ಭಾಗದಲ್ಲಿಯೂ ಅದ್ವೈತ ಜೈನ ಮತಗಳು ಎಡೆಬಿಡದೆ ಮೇಲಾಟಕ್ಕೋಸ್ಕರ ಹೆಣಗು ತ್ತಿದ್ದವು. ಎಂಟನೆಯ ಶತಮಾನದಲ್ಲಿ ಅದ್ವೈತ ಮತವು ಪ್ರಬಲವಾಗಿ ಕೆಲ ಚಾಳುಕ್ಯ ಸಾರ್ವಭೌಮರ ಅಂತಃಕರಣಗಳನ್ನು ವಶವರ್ತಿಯಾಗಿ ಮಾಡಿಕೊಂಡಿತ್ತೆಂದು ೧ ನೆಯ ಸಂಪುಟದ ೨ ನೆಯ ಭಾಗದ ಕೊನೆಯಲ್ಲಿ ಬರೆದಿರುತ್ತೇವಷ್ಟೇ. ಮುಂದೆ ೯ ನೆಯ ಶತಮಾನದ ಮಧ್ಯಭಾಗದಲ್ಲಿ ಜೈನ ಮತದ ಘನವಿದ್ವಾಂಸರು ವೇದಾಂತ ಗ್ರಂಥಗಳನ್ನೂ ಪರಮತ ಖಂಡನ ಗ್ರಂಥಗಳನ್ನೂ ಬರೆದು, ನೃಪತುಂಗ ಮುಂತಾದ ಕೆಲ ರಾಷ್ಟ್ರ ಕೂಟ ಸಾರ್ವಭೌಮರ ಆಶ್ರಯವನ್ನು ದೊರಕಿಸಿದರು. ಈ ಜೈನರು ಕನ್ನಡ ನುಡಿಯ ಪರಮಭಕ್ತರಾದ್ದರಿಂದ ಅವರ ಗ್ರಂಥಗಳಿಗೆ ಮೆಚ್ಚಿದ ರಾಷ್ಟ್ರಕೂಟರು ಕನ್ನಡಿಗರೇ ಆಗಿದ್ದರೆಂದು ಹೇಳಬಹುದು.

೭. ಅರಸರಾಗಲಿ ಸಾರ್ವಭೌಮರಾಗಲಿ ತಂತಮ್ಮ ಮಾತೃ ಭಾಷೆಯುಳ್ಳ ಯೋಗ್ಯರಾದ ವೈದಿಕರಿಗೆ ವಿಶೇಷವಾಗಿ ದೊಡ್ಡದೊಡ್ಡ ಭೂದಾನಗಳನ್ನು ಕೊಡುತ್ತಾರಷ್ಟೇ. ರಾಷ್ಟ್ರಕೂಟರು ಕನ್ನಡಿಗ ರಾದ್ದರಿಂದ ಎಷ್ಟೋ ಮಂದಿ ಕನ್ನಡ ಬ್ರಾಹ್ಮಣರಿಗೆ ನಾಸಿಕ ಪ್ರಾಂತ ದಲ್ಲಿಯೂ ಮಧ್ಯಪ್ರಾಂತದಲ್ಲಿಯೂ ಇದ್ದ ಹಳ್ಳಿಗಳನ್ನು ಉಂಬಳಿಯಾಗಿ ಕೊಟ್ಟರು. ದೇವಳಿಯ ಶಾಸನದಲ್ಲಿ ೩ ನೆಯ ಕೃಷ್ಣನು ಒಬ್ಬ **ಕನ್ನಡ** ಬ್ರಾಹ್ಮಣನಿಗೆ ನಾಗಪುರದ ನೆರೆಯಲ್ಲಿದ್ದ ಒಂದು ಹಳ್ಳಿಯನ್ನು ದಾನ ಕೊಟ್ಟನೆಂದು ಸ್ಪಷ್ಟವಾಗಿ ಬರೆದಿದೆ.

೮. ಇವರ ಕಾಗದಪತ್ರಗಳು ಬಹುಶಃ ಕನ್ನಡ ಲಿಪಿಯಲ್ಲಿಯೂ ಕನ್ನಡ ನುಡಿಯಲ್ಲಿಯೂ ಬರೆದವುಗಳಾಗಿದ್ದವು.

೯. ಇವರು ತಮ್ಮ ಕಾಲದಲ್ಲಿ ಆದ ಕನ್ನಡ ಕವಿಗಳಿಗೆ ಉದಾ ರಾಶ್ರಯವನ್ನಿತ್ತರೆಂದು ಕಂಡುಬರುತ್ತದೆ.

**ರಾಜ್ಯಪದ್ಧತಿ**—ರಾಷ್ಟ್ರಕೂಟರ ರಾಜ್ಯಪದ್ಧತಿಯು ಬಾದಾವಿ ಚಾಳುಕ್ಯರ ರಾಜ್ಯಪದ್ಧತಿಯಿಂದ ವಿಶೇಷವಾಗಿ ಭಿನ್ನವಾಗಿದ್ದಿಲ್ಲೆಂದು

ತೋರುತ್ತದೆ. ಮೊದಲಿನಂತೆ ಮಂತ್ರಿಗಳೂ ದಂಡನಾಯಕರೂ ಮಂಡಲೇಶ್ವರರೂ ಸಾಮಂತರೂ ತಂತಮ್ಮ ಕೆಲಸಗಳನ್ನು ಮಾಡು ತ್ತಿದ್ದರು. ಆದರೆ ಮೊದಲಿನ ಏಳು ಮಂದಿ ಸಾರ್ವಭೌಮರ ಪಟ್ಟಾಭಿ ಷೇಕದ ಕಾಲಕ್ಕೆ ಎಡೆಬಿಡದೆ ಒಳಜಗಳಗಳು ನಡೆದುದರಿಂದ ಅವರಲ್ಲಿ ರಾಜನಿಷ್ಠೆಯೂ ಸ್ವಾಮಿಭಕ್ತಿಯೂ ಕಡಮೆಯಾಗಿತ್ತೆಂದು ಧಾರಾಳ ವಾಗಿ ಹೇಳಬಹುದು. ಮುಂದೆ ೪ ನೆಯ ಗೋವಿಂದನ ಪಾಣ್ಬೆಕೆ ದುಂಡುಗಾರಿಕೆಗಳು ಅಧಿಕಾರಿಗಳನ್ನು ಒಟ್ಟುಗೂಡಿಸಿದ್ದರಿಂದ ಅವರು ಗೋವಿಂದನ ತರುವಾಯ ಅಮೋಘವರ್ಷ ವಡ್ಡಿಗನನ್ನು ಒಮ್ಮನಸ್ಸಿ ನಿಂದ ಸಾರ್ವಭೌಮನನ್ನಾಗಿ ಆರಿಸಿ, ತಮ್ಮ ಅಧಿಕಾರವನ್ನು ಮಿತಿಮಿಾರಿ ಬೆಳಸಿಕೊಂಡರು. ಆದರೆ ಅಕಸ್ಮಾತ್ತಾಗಿ ದೊರೆತ ತಮ್ಮ ಅಧಿಕಾರವನ್ನು ನೆಲೆಯಾಗಿ ಇಟ್ಟುಕೊಳ್ಳುವಷ್ಟು ದೂರದೃಷ್ಟಿಯೂ ಸ್ವಾರ್ಥತ್ಯಾಗವೂ ವಿವೇಕವೂ ಅವರಲ್ಲಿ ಹುಟ್ಟದ್ದರಿಂದ ಆ ಅಮೌಲ್ಯ ವಾದ ಅಧಿಕಾರವು ವಡ್ಡಿಗನು ಸತ್ತಕೂಡಲೆ ಅವರ ಕಯ್ಬಿಟ್ಟಿತು.

**ವಿದ್ಯಾ ಪ್ರಸಾರ**—ಬಾದಾಮಿ ಚಾಳುಕ್ಯರು ಅಯ್ಹೊಳೆ(ಆರ್ಯ ಪುರ)ಯಲ್ಲಿ ಒಂದು ಮಹಾವಿದ್ಯಾಲಯವನ್ನು ಸ್ಥಾಪಿಸಿರಬಹುದೆಂದು ಅವರ ಆಳಿಕೆಯ ವರ್ಣನೆಯಲ್ಲಿ ಬರೆದಿರುತ್ತೇವಷ್ಟೇ. ರಾಷ್ಟ್ರಕೂಟರು ಆ ವಿದ್ಯಾಲಯಕ್ಕೆ ಆಶ್ರಯಕೊಟ್ಟ ಕುರುಹುಗಳಾವವೂ ಕಂಡುಬರು ವುದಿಲ್ಲ. ಆದರೆ, ವಿಜಾಪುರ ಜಿಲ್ಲಾ ಇಂಡಿ ತಾಲೂಕು ಸಾಲೊಟ್ಟಿಗೆ ಶಿಲಾಲೇಖದಲ್ಲಿ ೩ ನೆಯ ಕೃಷ್ಣನು ಪಾವಟಿಗೆಯ ಮಹಾವಿದ್ಯಾಲಯಕ್ಕೆ ಕೆಲದಾನಗಳನ್ನು ಕೊಟ್ಟನೆಂದು ಬರೆದಿದೆ. ಆದರೆ ಈ ಮಹಾವಿದ್ಯಾಲಯ ವನ್ನು ಯಾರು ಎಂದು ಸ್ಥಾಪಿಸಿದರೆಂಬುದು ಗೊತ್ತಾಗುವುದಿಲ್ಲ. ಇವನ ತಂದೆಯಾದ ಅಮೋಘವರ್ಷ ವಡ್ಡಿಗನು ಬ್ರಾಹ್ಮಣರಿಗೆ ಒಂದು ಅಗ್ರಹಾರವನ್ನು ಹಾಕಿಕೊಟ್ಟನೆಂದು ಡಾ॥ ಭಾಂಡಾರಕರರು ಬರೆಯು ತ್ತಾರೆ. ಇದೇ ಪಾವಟಿಗೆಯ ಮಹಾವಿದ್ಯಾಲಯವಾಗಿದ್ದರೂ ಆಗಿರ ಬಹುದು.

ವೇದಶಾಸ್ತ್ರ ಪುರಾಣೇತಿಹಾಸಗಳ ಜ್ಞಾನ ಪ್ರಸಾರವು ರಾಷ್ಟ್ರ ಕೂಟರ ಕಾಲದಲ್ಲಿ ಎಷ್ಟು ಬೆಳೆಯಿತೆಂಬುದು ನಮಗೆ ನಿಶ್ಚಯವಾಗಿ

ತಿಳಿಯದಿದ್ದರೂ, ಅವರ ಆಳಿಕೆಯ ಆರಂಭದಲ್ಲೇ ನಮ್ಮ ತಾಯ್ನಾಡಿನ ಶಿಲ್ಪಕಲಾ ಜ್ಞಾನವು ಅತ್ಯುನ್ನತ ಶಿಖರವನ್ನೇರಿತೆಂದು ಬರೆಯಲಿಕ್ಕೆ ಏನೂ ಅಡ್ಡಿಯಿಲ್ಲ. ಸಾತವಾಹನರ ಬುನಾದಿಯ ರಾಜಧಾನಿಯಾದ ಬನವಾಸಿಯ ಒಬ್ಬ ಕನ್ನಡ ವ್ಯಾಪಾರಿಯು **ಕಾರ್ಲೆಯ** ಗುಡ್ಡದಲ್ಲಿ ಒಂದು ದಿವ್ಯವಾದ ಸಭಾಮಂಟಪವನ್ನು ಕೊರೆಯಿಸಿದನೆಂದು ಹಿಂದೆ ಬರೆದಿರುತ್ತೇವಷ್ಟೇ*. ಇದು ಕನ್ನಡಿಗರ ೧ನೆಯ ಕೊರೆದ ಗವಿ ಯೆಂದು ಎಣಿಸಿದರೆ, ೨ ನೆಯ ಪುಲಿಕೇಶಿಯ ಕಕ್ಕನಾದ ಮಂಗಳೇಶನು ಬಾದಾವಿ ಗುಡ್ಡದಲ್ಲಿ ಕೊರೆಯಿಸಿದ ವಿಷ್ಣು ಗವಿಯೇ ಕರ್ನಾಟಕದಲ್ಲಿ ಕೊರೆಯಿಸಿದ ಎರಡನೆಯ ಗವಿಯಾಗುವುದು. ಮೂರಕ್ಕೆ ಮುಕ್ತಿ ಎಂಬ ಗಾದೆಯು ವಾಚಕರಿಗೆ ಗೊತ್ತಿದ್ದ ಮಾತೇ ಸರಿ. ಈ ಮೂರನೆಯ ಮತ್ತು ಕಡೆಯ ಕೊರೆದ ಗುಡಿಯು ಏಳೂರು ಅಥವಾ ವೇರೂಳಿ ನಲ್ಲಿದ್ದ **ಕೈಲಾಸ** ಗುಡಿಯು ಆಗಿರುತ್ತದೆಂದು ಬರೆಯಲಿಕ್ಕೆ ಅತ್ಯಾ ನಂದಪಡುತ್ತೇವೆ. ಇದನ್ನು ರಾಷ್ಟ್ರಕೂಟ ೧ ನೆಯ ಕೃಷ್ಣನು ಕೊರೆಯಿಸಿದನೆಂದು ಅವನ ಆಳಿಕೆಯ ವರ್ಣನೆಯಲ್ಲಿ ಬರೆದಿರುತ್ತೇವಷ್ಟೇ. ಅದನ್ನು ಕೊರೆದು ಈಗ ಸುಮಾರು ೧,೧೫೦ ವರ್ಷಗಳಾದರೂ ದ್ವೀಪಾಂತರದ ನಿವಾಸಿಗಳು ಅದನ್ನು ನೋಡಿ ಬೊಟ್ಟುಕಚ್ಚಿಕೊಂಡು ಆನಂದಾಶ್ಚರ್ಯಭರಿತರಾಗುತ್ತಾರೆಂಬುದು ಯಥಾರ್ಥ ವರ್ಣನೆಯೇ ಸರಿ.

ಮೊದಲನೆಯ ಕೃಷ್ಣನ ಹೊರತು ಯಾವ ರಾಷ್ಟ್ರಕೂಟ ಸಾರ್ವ ಭೌಮರೂ ಯಾವ ದೇವಾಲಯವನ್ನಾಗಲಿ ಜಿನಾಲಯವನ್ನಾಗಲಿ ಕಟ್ಟಿಸಿದಂತೆ ಕಂಡುಬರುವುದಿಲ್ಲ. ೯ ನೆಯ ಶತಮಾನದಲ್ಲಿ ಇವರು ತಮ್ಮ ಹೊಸ ರಾಜಧಾನಿಯಾದ ಮಳಖೇಡವನ್ನು ಕಟ್ಟಿಸಿದರೆಂಬು ದಕ್ಕೆ ಸಂದೇಹವಿಲ್ಲ. ಅದರಲ್ಲಿ ಎಷ್ಟೋ ವಿಶಾಲವಾದ ಭವ್ಯವಾದ ಮತ್ತು ರಮಣೀಯವಾದ ಗುಡಿಗುಂಡಾರಗಳೂ ಗೋಪುರಗಳೂ ಬೇರೆ ಹಲವು ತರದ ಕಟ್ಟಡಗಳೂ ಇದ್ದಿರಬಹುದು. ಆದರೆ ಹಗೆಗಳ ಹಾವಳಿಯಿಂದಲೂ ಕಾಲಧರ್ಮದಿಂದಲೂ ಆ ಕಟ್ಟಡಗಳ ಅವಶೇಷ

* ಕರ್ನಾಟಕ ಸಾಮ್ರಾಜ್ಯ, ಸಂ. ೧, ಭಾ. ೧, ಪು. ೫೨–೫೩.

ಗಳಾವವೂ ಉಳಿದಿಲ್ಲ. ಆದ್ದರಿಂದ ರಾಷ್ಟ್ರಕೂಟರ ಕಾಲದಲ್ಲಿ ಗೃಹ ಶಿಲ್ಪವು ಎಷ್ಟುಮಟ್ಟಿಗೆ ಬೆಳೆಯಿತೆಂಬುದನ್ನು ನಿರ್ಣಯಿಸಲಿಕ್ಕೆ ನಮಗೆ ಸಾಧನ ಸಾಮಗ್ರಿಗಳೇ ಸಿಕ್ಕುವುದಿಲ್ಲ.

**ಮತ ವಿಚಾರ**—ರಾಷ್ಟ್ರಕೂಟರ ಕಾಲದಲ್ಲಿ ಅದ್ವೈತ ಮತ ಜೈನ ಮತ ಈ ಎರಡು ಮತಗಳು ರೂಢಿಯಲ್ಲಿದ್ದವು. ಅದ್ವೈತ ಮತವು ಬೇರುಬಿಟ್ಟಿದ್ದರೂ ಜೈನ ಮತವು ಪ್ರಬಲವಾಗಲಿಕ್ಕೆ ಹೆಣಗುತ್ತಿತ್ತು. ಯಜ್ಞಯಾಗಾದಿಗಳು ಪೂರ್ಣವಾಗಿ ನಿಂತುಹೋಗಿದ್ದುದರಿಂದ ಯಾವ ರಾಷ್ಟ್ರಕೂಟ ಸಾರ್ವಭೌಮನೂ ಒಂದು ಯಜ್ಞವನ್ನಾದರೂ ಮಾಡ ಲಿಲ್ಲ. ನೃಪತುಂಗನು ಜೈನನಾಗಿದ್ದನೆಂಬ ಮಾತಿಗೆ ಸಾಕಷ್ಟು ಆಧಾರ ವಿಲ್ಲದಿದ್ದರೂ ಅವನ ಕಾಲದಲ್ಲಿ ಕೆಲ ಜೈನ ವಿದ್ವಾಂಸರು ಪ್ರಸಿದ್ಧಿಗೆ ಬಂದರು. ಅವರು ಬರೆದ ಕನ್ನಡ ಗ್ರಂಥಗಳು ಸ್ವಾಭಾವಿಕವಾಗಿ ಸಾಮಾನ್ಯ ಜನರ ಮನಸ್ಸನ್ನು ಸೆಳೆದುಕೊಂಡುದಲ್ಲದೆ ಅವರ ಪ್ರೀತಿಗೆ ಪಾತ್ರವಾದವು. ಅದ್ವೈತ ಜೈನ ಮತಗಳೊಳಗೆ ಶ್ರೇಷ್ಠತ್ವದ ಬಗ್ಗೆ ಮೇಲಾಟವು ಎಡೆಬಿಡದೆ ನಡೆದಿದ್ದರೂ ಒಬ್ಬರು ಮತ್ತೊಬ್ಬರನ್ನು ಹಿಂಸಿಸಲಿಕ್ಕೆ ಎಂದೂ ಪ್ರಯತ್ನಮಾಡಲಿಲ್ಲೆಂದು ಬರೆಯಲಿಕ್ಕೆ ಸಂತೋಷಪಡುತ್ತೇನೆ.

**ಸಾಮಾಜಿಕ ಮತ್ತು ನೈತಿಕ ಸ್ಥಿತಿ**—ರಾಷ್ಟ್ರಕೂಟರ ಕಾಲ ದಲ್ಲಿ ಜನರ ಸ್ಥಿತಿಯಲ್ಲಿಯೂ, ನಡತೆಯಲ್ಲಿಯೂ, ಗುಣಗಳಲ್ಲಿಯೂ, ವಿಚಾರದಲ್ಲಿಯೂ ಕೆಲ ಮಾರ್ಪಾಡುಗಳಾಗಿದ್ದವೆಂದು ಕಂಡುಬರುತ್ತದೆ. ಕರ್ನಾಟಕ ಸಾಮ್ರಾಜ್ಯದ ವಿಸ್ತಾರವು ನರ್ಮದಾ ಹೊಳೆಯಿಂದ ಕಂಚಿಯ ವರೆಗೆ ಹಬ್ಬಿದುದರಿಂದಲೂ, ಆಗಿಂದಾಗ ನಡೆಯುತ್ತಿದ್ದ ಯುದ್ಧಗಳಲ್ಲಿ ದೊರೆತ ಹೇರಳ ಸುಲಿಗೆಯಿಂದಲೂ ಉದ್ಯೋಗ ವ್ಯಾಪಾರ ಕಲಾಕೌಶಲ್ಯಗಳ ಅಭಿವೃದ್ಧಿಯಿಂದಲೂ ನಮ್ಮ ತಾಯ್ನಾಡಿನ ಸಂಪತ್ತು ಬೆಳೆಯಿತು; ಜನರಲ್ಲಿ ಸ್ವಾರ್ಥಪರತ್ವವೂ ಅಹಂಕಾರವೂ ಅಸೂಯೆಯೂ ಹುಟ್ಟಿದವು; ಮತ್ತು ಅವರ ನೈತಿಕ ಸಾಮರ್ಥ್ಯವು ಕುಗ್ಗಿತು. ರಾಜ್ಯಲೋಭವೂ, ರಾಜದ್ರೋಹವೂ, ಕೃತಘ್ನತೆಯೂ, ಹೊಟ್ಟೆಕಿಚ್ಚೂ, ಪಾಣ್ಬೆಕೆಯೂ, ಒಳಸಂಚುಗಳೂ, ಒಳಜಗಳಗಳೂ,

ಬಂಡಾಯಗಳೂ, ಪರಸ್ಪರ ಕಲಹಗಳೂ ಹೆಚ್ಚಿದವು. ದಂತಿದುರ್ಗನು ೧ನೆಯ ಕೃಷ್ಣನೊಡನೆಯೂ, ೧ನೆಯ ಕೃಷ್ಣನು ರಾಹಪ್ಪ ಮುಂತಾದವರೊಡನೆಯೂ, ೨ನೆಯ ಗೋವಿಂದನು ಧ್ರುವನೊಡನೆಯೂ, ಧ್ರುವನು ಚಾಳುಕ್ಯ ಗಂಗ ಮುಂತಾದವರೊಡನೆಯೂ, ೩ನೆಯ ಗೋವಿಂದನು ೧೨ ಮಂದಿ ಅರಸರೊಡನೆಯೂ, ಶರ್ವಮಹಾರಾಜ ಅಥವಾ ನೃಪತುಂಗನು ತನ್ನ ಪ್ರತಿಸ್ಪರ್ಧಿಗಳಾದ ರಾಷ್ಟ್ರಕೂಟರೊಡನೆಯೂ, ೨ನೆಯ ಕೃಷ್ಣನು ಪೂರ್ವ ಚಾಳುಕ್ಯರೊಡನೆಯೂ ಎಡೆಬಿಡದೆ ಕಾದಾಡಿದ್ದನ್ನೂ, ೪ನೆಯ ಗೋವಿಂದನು ಸಿತಗನಾಗಿ ರಾಷ್ಟ್ರಕೂಟ ಮನೆತನದ ಅಭಿಮಾನಿಗಳಾದ ಎಲ್ಲ ಶೂರರ ಮನಸ್ಸು ಕೆಡಿಸಿಕೊಂಡುದನ್ನೂ ಹಿಂದಿನ ೩ ಅಧ್ಯಾಯಗಳಲ್ಲಿ ವಿಸ್ತಾರವಾಗಿ ವಿವರಿಸಿರುತ್ತೇವೆ.

ಕ್ರಿಸ್ತ ಶಕದ ಆರಂಭದ ಶತಮಾನಗಳಲ್ಲಿ ಹೆಂಗಸರಿಗಿದ್ದ ಸ್ವಾತಂತ್ರ್ಯವು ಬಾದಾವಿ ಚಾಳುಕ್ಯರ ಕಾಲದಲ್ಲಿ ಕಡಮೆಯಾಗಿತ್ತೆಂದು ಈ ಇತಿಹಾಸದ ೧ನೆಯ ಸಂಪುಟದಲ್ಲಿ ಬರೆದಿರುತ್ತೇವಷ್ಟೇ*. ಈ ರಾಷ್ಟ್ರಕೂಟರ ಕಾಲದಲ್ಲಿ ಅದು ತೀರ ಇಲ್ಲದಂತಾಗಿತ್ತೆಂದರೆ ಅತಿಶಯೋಕ್ತಿಯಾಗಲಾರದೆಂದು ತೋರುತ್ತದೆ. ಚಾಳುಕ್ಯರ ಕಾಲದಲ್ಲಿ ಅರಸುಮನೆತನಕ್ಕೆ ಹೊಂದಿದ ೩ ಮಂದಿ ಹೆಂಗಸರು ಒಂದು ಬಸತಿಯನ್ನೂ, ಎರಡು ಈಶ್ವರ ದೇವಾಲಯಗಳನ್ನೂ ಕಟ್ಟಿಸಿದರು. ಈ ರಾಷ್ಟ್ರಕೂಟರ ಕಾಲದಲ್ಲಿ ಒಬ್ಬ ಹೆಂಗಸಾದರೂ ಒಂದು ಗುಡಿಯನ್ನಾಗಲಿ ಒಂದು ಬಸತಿಯನ್ನಾಗಲಿ ಕಟ್ಟಿಸಿದಳೆಂದು ಒಂದು ಶಾಸನದಲ್ಲಿಯಾದರೂ ಬರೆದಿಲ್ಲ. ಮತಶ್ರದ್ಧೆಯು ಹೆಂಗಸರಲ್ಲಿ ಜಾಗ್ರುತವಾಗಿದ್ದಷ್ಟು ಗಂಡಸರಲ್ಲಿ ಇರುವುದಿಲ್ಲೆಂಬುದು ಎಲ್ಲರಿಗೂ ಗೊತ್ತಿದ್ದ ಮಾತೇ ಸರಿ. ರಾಷ್ಟ್ರಕೂಟ ಸಾರ್ವಭೌಮರ ರಾಣಿಯರಾಗಲಿ ಅರಸುಮನೆತನದ ಹೆಣ್ಣುಮಕ್ಕಳಾಗಲಿ ಯಾವ ದೇವಾಲಯವನ್ನೂ ಕಟ್ಟಿಸಲಿಲ್ಲ. ಇಷ್ಟೇ ಅಲ್ಲ, ಯಾವ ಗುಡಿಗೂ ದಾನಕೊಟ್ಟ ಉದಾಹರಣೆಗಳು ವಿಶೇಷವಾಗಿ ಕಂಡುಬರುವುದಿಲ್ಲ. ಆದ್ದರಿಂದ ೯ನೆಯ ಮತ್ತು ೧೦ನೆಯ ಶತ

---

* ಕರ್ನಾಟಕ ಸಾಮ್ರಾಜ್ಯ, ಸಂ. ೧, ಭಾ. ೨, ಅ. ೪, ಪು. ೩೧೫–೧೬.

ಮಾನಗಳಲ್ಲಿ ಸ್ತ್ರೀ ಶಿಕ್ಷಣವು ಕಡಮೆಯಾಗಿತ್ತೆಂತಲೂ ಸ್ತ್ರೀ ಸ್ವಾತಂತ್ರ್ಯವು ಕಡಮೆಯಾಗಿತ್ತೆಂತಲೂ ಊಹಿಸಬಹುದು.

ಈಗಿನಂತೆ ರಾಷ್ಟ್ರಕೂಟರ ಕಾಲದಲ್ಲಿ ಜಾತಿಗಳ ಸಂಖ್ಯೆಯು ಬೆಳೆದಿದ್ದಿಲ್ಲ. ಜನರ ವೃತ್ತಿಯಂತೆ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ಎಂಬ ನಾಲ್ಕು ವರ್ಣಗಳು ಮಾತ್ರ ಇದ್ದವು; ಮತ್ತು ಮೇಲಿನ ಮೂರು ವರ್ಣಗಳೊಳಗೆ ರೋಟಿ ಬೇಟಿ ವ್ಯವಹಾರಗಳು ನಿರಾತಂಕವಾಗಿ ನಡೆಯುತ್ತಿದ್ದವು. ಆದ್ದರಿಂದ ರಾಷ್ಟ್ರಕೂಟ ಚಾಳುಕ್ಯ ಚೇದಿ ಗಂಗ ಗಂಗಪಲ್ಲವ ಈ ಮನೆತನಗಳೊಳಗೆ ಶರೀರಸಂಬಂಧಗಳು ಆಗುತ್ತಿದ್ದವೆಂದು ಹಿಂದಿನ ಅಧ್ಯಾಯಗಳಲ್ಲಿ ಬರೆದಿರುತ್ತೇವೆ. ಮತ ಭೇದವು ಮದುವೆಗೆ ಅಡ್ಡ ಬರುತ್ತಿದ್ದಿಲ್ಲೆಂದು ತೋರುತ್ತದೆ. ಏಕೆಂದರೆ, ಮೇಲೆ ಬರೆದ ಮನೆತನಗಳೊಳಗೆ ಗಂಗರು ಜೈನರಾಗಿದ್ದರೆಂದು ಕಂಡುಬರುತ್ತದೆ.

**ಪರದೇಶದ ಪ್ರಯಾಣಿಕರು**—೧೦ ನೆಯ ಶತಮಾನದಲ್ಲಿ ಪರದೇಶದವರು ವಿಶೇಷವಾಗಿ ಅರಬಸ್ಥಾನದ ಪ್ರಯಾಣಿಕರು ನಮ್ಮ ತಾಯ್ನಾಡಿಗೆ ಬರಲಾರಂಭಿಸಿದರೆಂತಲೂ, ಅವರು ಇಲ್ಲಿ ಆಳುವ ಬಲಾಢ್ಯ ಮನೆತನದ ಸಾರ್ವಭೌಮರನ್ನು **ಬಲ್ಹರಾರು** ಎಂದೂ, ಅವರ ರಾಜಧಾನಿಯನ್ನು **ಮಾಂಕಿರ** ಎಂದೂ ತಮ್ಮ ಲೇಖಗಳಲ್ಲಿ ಕರೆದಿರುತ್ತಾರೆಂತಲೂ ಡಾ|| ಭಾಂಡಾರಕರರು ಬರೆಯುತ್ತಾರೆ*. ವಲ್ಲಭರಾಜ ಶಬ್ದದ ಅಪಭ್ರಂಶವೇ ಬಲ್ಹರಾರು ಮತ್ತು ಮಾನ್ಯಖೇಟದ ಅಪಭ್ರಂಶವೇ ಮಾಂಕಿರ ಎಂದು ಅವರೇ ನಿರ್ಣಯಿಸಿದ್ದಾರೆ. ವಲ್ಲಭ ಎಂಬ ಬಿರುದು ಚಾಳುಕ್ಯರಿಂದ ರಾಷ್ಟ್ರಕೂಟರಿಗೆ ಬಂತೆಂಬುದರಲ್ಲಿ ಸಂದೇಹವಿಲ್ಲ.

**ಕನ್ನಡ ನುಡಿಯ ಬೆಳವಣಿಗೆ**—ಈ ರಾಷ್ಟ್ರಕೂಟರ ಅಥವಾ ನಾಡುಗವುಡರ ಕಾಲದಲ್ಲಿ ನಮ್ಮ ತಾಯ್ನುಡಿಯು ಎಷ್ಟು ಮಟ್ಟಿಗೆ ಮುಂದರಿಯಿತೆಂಬುದನ್ನೂ, ಅದಕ್ಕೆ ಯಾವ ಯಾವ ಸಾರ್ವಭೌಮರಾಗಲಿ ಸಾಮಂತರಾಗಲಿ ದಂಡನಾಯಕರಾಗಲಿ ಎಷ್ಟೆಷ್ಟು ಆಶ್ರಯ

* ಮುಂಬಯಿ ಇಲಾಖಾ ಗ್ಯಾಜೆಟಿಯರ, ಸಂ. ೧, ಭಾ. ೨, ಪು. ೨೦೯.

ಕೊಟ್ಟರೆಂಬುದನ್ನೂ ಗೊತ್ತಾದ ಮಟ್ಟಿಗೆ ವಿವರಿಸಿ ಈ ಅಧ್ಯಾಯವನ್ನು ಮುಗಿಸುವೆವು.

ಈಗ ನಮಗೆ ದೊರೆತ ಕನ್ನಡ ಹೊತ್ತಗೆಗಳಲ್ಲಿ 'ಕವಿರಾಜಮಾರ್ಗ'ವೇ ಎಲ್ಲಕ್ಕೂ ಹಳೆಯದಾಗಿರುತ್ತದೆಂದು ಹಿಂದೆ ಬರೆದಿರುತ್ತೇವಷ್ಟೇ. ಈ ಅಲಂಕಾರ ಗ್ರಂಥದಲ್ಲಿ ಅದರ ಸ್ವಾಮಿಯಾದ ನೃಪತುಂಗ ದೇವನು ತನ್ನ ಹಿಂದೆ ಎಷ್ಟೋ ಮಂದಿ ಆಚಾರ್ಯರು ಕನ್ನಡದಲ್ಲಿ ಗದ್ಯ ಪದ್ಯ ಗ್ರಂಥಗಳನ್ನು ಬರೆದಿಟ್ಟಿದ್ದಾರೆಂದು ಹೇಳಿ* ಆ ಬರಹಗಾರರೊಳಗೆ ಮುಖ್ಯರಾದ ಕೆಲ ಕವಿಗಳ ಹೆಸರುಗಳನ್ನು ಕೆಳಗೆ ಉದ್ಧರಿಸಿದ ಶ್ಲೋಕಗಳಲ್ಲಿ ಕೊಡುತ್ತಾನೆ:—

ವಿಮಳೋದಯ ನಾಗಾರ್ಜುನ। ಸಮೇತ ಜಯಬಂಧು
ದುರ್ವಿನೀತಾದಿಗಳೀ ॥
ಕ್ರಮದೊಳ್ನೆಗಳ್ಚಿ ಗದ್ಯಾ। ಶ್ರಮಪದಗುರುತಾಪ್ರತೀತಿಯಂ
ಕೈಕೊಂಡರ್ ॥ ೨೯ ॥
ಪರಮ ಶ್ರೀವಿಜಯ ಕವೀ। ಶ್ವರ ಪಂಡಿತ ಚಂದ್ರಲೋಕ
ಪಾಲಾದಿಗಳಾ ॥
ನಿರತಿಶಯ ವಸ್ತು ವಿಸ್ತರ। ವಿರಚನೆ ಲಕ್ಷ್ಯಂ ತದಾದ್ಯ
ಕಾವ್ಯಕ್ಕೆಂದುಂ ॥ ೩೩ ॥

ಮೇಲಿನ ೨೯ನೆಯ ಶ್ಲೋಕದಲ್ಲಿ ಹೇಳಿದ ಗದ್ಯಗ್ರಂಥಕರ್ತರೊಳಗೆ ವಿಮಲ, ಉದಯ, ನಾಗಾರ್ಜುನ, ಜಯಬಂಧು ಈ ನಾಲ್ವರು ಯಾರೆಂಬುದಾಗಲಿ ಯಾವ ಕನ್ನಡ ಗ್ರಂಥವನ್ನು ಬರೆದರೆಂಬುದಾಗಲಿ ಗೊತ್ತಾಗುವುದಿಲ್ಲ. ಕವಿಚರಿತೆಕಾರರು ಬರೆಯುವಂತೆ ದುರ್ವಿನೀತನು ಗಂಗಮನೆತನದ ಅರಸನು (೬೦೫—೬೫೦) ಆಗಿರಲಿಕ್ಕೆ ಬೇಕು.

---

* ಮಿಗೆ ಕನ್ನಡ ಗಬ್ಬಂಗಳೊ।
ಳಗಣಿತ ಗುಣ ಗದ್ಯ ಪದ್ಯ ಸಮ್ಮಿಶ್ರಿತಮಂ ॥
ನಿಗದಿಸುವರ್ಗದ್ಯಕಥಾ।
ಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ ॥

ಪ್ರಥಮ ಪರಿಚ್ಛೇದ, ಶ್ಲೋಕ ೨೭.

ಆದರೆ ಇವನು ಯಾವ ಕನ್ನಡ ಗ್ರಂಥವನ್ನು ಬರೆದನೆಂಬುದು ಈವರೆಗೆ ಗೊತ್ತಾಗಿಲ್ಲ.

ಮೇಲೆ ಕೊಟ್ಟ ೩೩ನೆಯ ಶ್ಲೋಕದಲ್ಲಿ ೫ ಮಂದಿ ಪದ್ಯ ಗ್ರಂಥ ಕಾರರ ಹೆಸರುಗಳಿರುತ್ತವೆ. ಅವರೊಳಗೆ ಮೊದಲನೆಯವನಾದ ಶ್ರೀವಿಜಯನು ಚಂದ್ರಪ್ರಭಾ ಪುರಾಣವನ್ನು ಚಂಪೂ ರೂಪವಾಗಿ ಬರೆದ ನೆಂಬುದಕ್ಕೂ ಅವನು ಪ್ರೌಢ ಕವಿಯಾಗಿದ್ದನೆಂಬುದಕ್ಕೂ ಸಾಕಷ್ಟು ಸಬಲವಾದ ಆಧಾರಗಳು ದೊರೆಯುತ್ತಿದ್ದರೂ ನಮ್ಮ ಉದಾಸೀನತೆಯ ಮೂಲಕವಾಗಿ ಅವನು ಬರೆದ ಗ್ರಂಥಗಳಾವವು ಇನ್ನೂ ಸಿಕ್ಕಿಲ್ಲ, ಮತ್ತು ಅವನ ಕಾಲವೂ ನಿಶ್ಚಯವಾಗಿ ಗೊತ್ತಾಗುವುದಿಲ್ಲ. ಉಳಿದ ನಾಲ್ಕು ಮಂದಿ ಕವಿಗಳ ಅಂದರೆ ಕವೀಶ್ವರ, ಪಂಡಿತ, ಚಂದ್ರ, ಲೋಕ ಪಾಲ ಇವರ ಕಾಲವಾಗಲಿ ಇವರು ಬರೆದ ಗ್ರಂಥಗಳ ಹೆಸರಾಗಲಿ ಇನ್ನೂ ಗೊತ್ತಾಗಿಲ್ಲ.

ರಾಷ್ಟ್ರಕೂಟ ಸಾರ್ವಭೌಮನಾದ ನೃಪತುಂಗನು (೮೧೫–೮೭೮) ವಿದ್ಯಾಪಕ್ಷಪಾತಿಯೂ ಕನ್ನಡದಲ್ಲಿ ಪಂಡಿತನೂ ಆದ್ದರಿಂದ ತನ್ನ ಕಾಲದ ಎಲ್ಲ ಕವಿಗಳಿಗೆ ಉದಾರಾಶ್ರಯವನ್ನು ಕೊಟ್ಟಿದ್ದ ನೆಂಬುದಕ್ಕೆ ಸಂದೇಹವಿಲ್ಲ. ಆದರೆ ಮೇಲೆ ಹೇಳಿದ ಕವಿಗಳೊಳಗೆ ಯಾರಾರು ಅವನ ಆಸ್ಥಾನಕವಿಗಳಾಗಿದ್ದರೆಂಬುದಾಗಲಿ ಮತ್ತೆ ಬೇರೆ ಯಾವ ಕವಿಗಳನ್ನು ಅವನು ಪೋಷಿಸುತ್ತಿದ್ದನೆಂಬುದಾಗಲಿ ತಿಳಿದು ಕೊಳ್ಳಲಿಕ್ಕೆ ನಮಗೆ ಸಾಧನಗಳಾವವು ಇನ್ನೂ ದೊರೆತಿಲ್ಲ. ನೃಪ ತುಂಗನೇ 'ಕವಿರಾಜಮಾರ್ಗ'ವನ್ನು ಬರೆದನೆಂಬುದಕ್ಕಿದ್ದ ಸಾಧಕ ಬಾಧಕ ಪ್ರಮಾಣಗಳನ್ನು ವಿಸ್ತಾರವಾಗಿ ಹಿಂದೆ ನೃಪತುಂಗನ ಆಳಿಕೆಯ ವರ್ಣನೆಯಲ್ಲಿ ಬರೆದಿದ್ದೇವೆ*.

ಮದ್ರಾಸ ಪ್ರಾಚ್ಯಕೋಶಾಲಯದಲ್ಲಿದ್ದ ಚಂಪೂರೂಪವಾದ ಸೂಪಶಾಸ್ತ್ರವನ್ನು ಜಯಬಂಧುನಂದನನೆಂಬುವನು ಬರೆದಿರುತ್ತಾನೆ. ಆದರೆ ಅವನ ವಿಷಯಕ್ಕೆ ಹೆಚ್ಚಿನಾವ ಸಂಗತಿಗಳು ಗೊತ್ತಾಗುವುದಿಲ್ಲ.

---

* ಹಿಂದೆ ಪುಟ ೯೪-೧೦೦.

ಗಂಗರಸನಾದ ಶಿವಮಾರನೆಂಬೊಬ್ಬನು (೭೭೭-೮೧೭) **ಗಜ ಶಾಸ್ತ್ರ**ವೆಂಬ ಪುಸ್ತಕವನ್ನು ಬರೆದನು. ಇವನ ಗಜಾಷ್ಟಕವು ಒನಕೆಯ ಹಾಡಾಗಿತ್ತೆಂದು ಒಂದು ಶಾಸನದಲ್ಲಿ ಬರೆದಿದೆ. ಆದರೆ ಈ ಗಜ ಶಾಸ್ತ್ರವು ಇನ್ನೂ ದೊರೆತಿಲ್ಲ.

ಗುಣನಂದಿ, ೧ನೆಯ ಗುಣವರ್ಮ, ಕವಿವ್ಯಾಸ ಈ ಮುವ್ವರು ಉದ್ದಾಮಕವಿಗಳು ನೃಪತುಂಗನ ಸಮಕಾಲೀನರಾಗಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ. ಗುಣನಂದಿಯು ತರ್ಕವ್ಯಾಕರಣ ಶಾಸ್ತ್ರ ಪಂಡಿತನೂ ಸಾಹಿತ್ಯವಿದ್ಯಾಪತಿಯೂ ಆಗಿದ್ದನೆಂದೂ, ಹೆಸರು ವಾಸಿಯಾದ ದೇವೇಂದ್ರಮುನಿಯು ಇವನ ಶಿಷ್ಯನಾಗಿದ್ದನೆಂದೂ ಶ್ರವಣಬೆಳಗೊಳದ ಶಾಸನಗಳು ಹೇಳುತ್ತವೆ. ಈ ದೇವೇಂದ್ರಮುನಿಯೇ ಆದಿಪಂಪನ ಗುರುವಾಗಿದ್ದನು. ಆದರೆ ಇವನು ಆವ ಕನ್ನಡ ಗ್ರಂಥ ವನ್ನು ಬರೆದನೆಂಬುದು ಇನ್ನೂ ಗೊತ್ತಾಗಿಲ್ಲ. ಮೊದಲನೆಯ ಗುಣ ವರ್ಮನು 'ನೇಮಿನಾಥಪುರಾಣ'* ಅಥವಾ 'ಹರಿವಂಶ'ವೆಂಬ ಗ್ರಂಥ ವನ್ನೂ 'ಶೂದ್ರಕ'ವೆಂಬ ಮತ್ತೊಂದು ಗ್ರಂಥವನ್ನೂ ಬರೆದನೆಂದು ಬೇರೆ ಕವಿಗಳ ಬರಹದಿಂದ ತಿಳಿದರೂ ಈ ಎರಡೂ ಗ್ರಂಥಗಳು ನಮಗೆ ಇನ್ನೂ ಸಿಕ್ಕಿಲ್ಲ. ೧೩ನೆಯ ಶತಮಾನದಲ್ಲಿದ್ದ ಮಲ್ಲಿಕಾರ್ಜುನನ 'ಕಾವ್ಯಸಾರ' ಅಥವಾ 'ಸೂಕ್ತಿಸುಧಾರ್ಣವ'ದಲ್ಲಿ ಈ ಶೂದ್ರಕ ಗ್ರಂಥದ ಕೆಲ ಪದ್ಯಗಳು ಉದಾಹೃತವಾಗಿವೆ. ಅವುಗಳಲ್ಲಿ ಗುಣವರ್ಮನು ಮಹೇಂದ್ರಾಂತಕ, ಗಂಗ ಚಕ್ರಾಯುಧ, ಗಂಗಜರ್ಜುನ, ಕಾಮದ ಎಂಬ ಬಿರುದುಳ್ಳ ಒಬ್ಬ ಗಂಗರಸನನ್ನು ಶೂದ್ರಕರಾಜನಿಗೆ ಹೋಲಿಸುತ್ತಾನೆ. ಈ ಗಂಗರಸನು ೮೮೬ರಿಂದ ೯೧೩ರ ವರೆಗೆ ಗಂಗವಾಡಿಯನ್ನಾಳಿದ ಎರೆಯಪ್ಪನೇ ಆಗಿರಲಿಕ್ಕೆ ಬೇಕು. ಆದ್ದರಿಂದ ಗುಣವರ್ಮನು ನೃಪತುಂಗನ ಈಚೆಯ ಕವಿಯೆಂತಲೂ, ಎರೆಯಪ್ಪನ ಆಶ್ರಯದಲ್ಲಿದ್ದನೆಂತಲೂ ನಿಶ್ಚಯವಾಗಿ ಹೇಳಬಹುದು. ಕವಿವ್ಯಾಸನು ಯಾವನಾಗಿದ್ದನೋ ಎಂದು ಇದ್ದನೋ

---

* ಈಗ 'ಕಾವ್ಯಕಲಾನಿಧಿ'ಯವರು ಅಚ್ಚುಹಾಕಿಸಿದ ನೇಮಿನಾಥ ಪುರಾಣವು ೧೨, ೧೩ನೆಯ ಶತಮಾನಗಳಲ್ಲಿದ್ದ ನೇಮಿಚಂದ್ರನ ಅರ್ಧನೇಮಿ ಪುರಾಣವಾಗಿರುತ್ತದೆ.

ಯಾರ ಆಶ್ರಯದಲ್ಲಿದ್ದು ಯಾವ ಗ್ರಂಥಗಳನ್ನು ಬರೆದನೋ ಗೊತ್ತಾಗುವುದಿಲ್ಲ.

ಇವರೆಲ್ಲರೂ ೮ ನೆಯ ಮತ್ತು ೯ ನೆಯ ಶತಮಾನಗಳಲ್ಲಿದ್ದ ಕನ್ನಡ ಕವಿಗಳಾಗಿದ್ದರು. ಇನ್ನು ೧೦ ನೆಯ ಶತಮಾನದಲ್ಲಿ ರಾಷ್ಟ್ರಕೂಟರ ಆಳಿಕೆಯು ಮುಗಿಯುವ ವರೆಗೆ ಆರು ಮಂದಿ ಕವಿಗಳು ಇದ್ದರೆಂದು ಕಂಡುಬರುತ್ತದೆ. ೧. ಶ್ರೀವಿಜಯ ದಂಡನಾಥ, ೨. ರವಿನಾಗಭಟ್ಟ, ೩. ಕವಿರಾಜರಾಜ, ೪. ಆದಿಪಂಪ, ೫. ಅಸಗ, ೬. ಪೊನ್ನ—ಇವರೇ ಈ ೬ ಜನ ಕವಿಗಳು. ಇವರ ವಿಷಯವಾಗಿ ತಿಳಿದ ಅಂಶಗಳನ್ನು ಕೆಳಗೆ ಕೊಡುವೆವು:—

೧. ಮದ್ರಾಸ ಇಲಾಖೆ ಕಡಪಾ ಜಿಲ್ಲೆ ದಾನವುಲವಾಡು ಎಂಬ ಹಳ್ಳಿಯ ಶಾಸನದಲ್ಲಿ ಶ್ರೀವಿಜಯ ದಂಡನಾಥನು 'ಅನುಪಮ ಕವಿ,' 'ಅಱಿವಿಂಗೋಜ' ಎಂದು ಹೊಗಳಿ, ಇವನು ರಾಷ್ಟ್ರಕೂಟ ಸಾರ್ವಭೌಮನಾದ ೩ ನೆಯ ಇಂದ್ರ(೯೧೪-೯೧೬)ನ ದಂಡನಾಯಕನಾಗಿದ್ದನೆಂತಲೂ, ಜೈನ ಮತದವನೂ ಬಳಿಕುಲದವನೂ ಮಹಾಪರಾಕ್ರಮಶಾಲಿಯೂ ಆಗಿದ್ದನೆಂತಲೂ, ಕೊನೆಗೆ ಸನ್ಯಾಸನ ವಿಧಿಯಿಂದ ನಿರ್ವಾಣ ಹೊಂದಿದನೆಂತಲೂ ಬರೆದಿರುತ್ತದೆ. ಆದರೆ ಇವನು ಎಲ್ಲಿಯವನೆಂಬುದಾಗಲಿ ಯಾವ ಕನ್ನಡ ಗ್ರಂಥವನ್ನು ಬರೆದನೆಂಬುದಾಗಲಿ ಗೊತ್ತಾಗುವುದಿಲ್ಲ.

೨. ಧಾರವಾಡ ಜಿಲ್ಲೆ ನರಗುಂದದ ಹತ್ತಿರಿದ್ದ ಒಂದು ಶಿಲಾಲೇಖದಲ್ಲಿ ಕಂಠಮಗೆರೆಗೆ ಕೆಲ ಜನರು ಭೂಮಿಯನ್ನೂ, ಆಯವನ್ನೂ ಬಿಟ್ಟರೆಂದು ಉಲ್ಲೇಖವಿದೆ. ಈ ಶಾಸನವನ್ನು ರವಿನಾಗಭಟ್ಟನೆಂಬ ಕವಿಯು ಶಕೆ ೮೪೧(೯೧೯)ರಲ್ಲಿ ಅಂದರೆ ರಾಷ್ಟ್ರಕೂಟ ಸಾರ್ವಭೌಮನಾದ ೪ ನೆಯ ಗೋವಿಂದನ (೯೧೮-೯೩೩) ಆಳಿಕೆಯಲ್ಲಿ ಬರೆದನು. ಈ ಶಾಸನದ ಕಾಲದಿಂದ ಇವನು ಆದಿಪಂಪನ ಸಮಕಾಲೀನನಾಗಿದ್ದನೆಂತಲೂ, ಇವನ ಪದ್ಯ ರಚನೆಯಿಂದ ಇವನು ಪ್ರೌಢ ಕವಿಯಾಗಿದ್ದನೆಂತಲೂ, ಇವನ ಹೆಸರಿನಿಂದ ಇವನು ಬ್ರಾಹ್ಮಣನಾಗಿದ್ದನೆಂತಲೂ ಈ

ಮೂರೂ ಸಂಗತಿಗಳಿಂದ ಇವನು ಬ್ರಾಹ್ಮಣರಲ್ಲಿ **ಆದಿಕವಿ** ಆಗಿರಬಹುದೆಂತಲೂ ಕವಿಚರಿತೆಕಾರರು ಊಹಿಸುತ್ತಾರೆ. ಆದರೆ ಇವನ ಕುಲಗೋತ್ರಗಳಾಗಲಿ, ಇವನ ಹುಟ್ಟೂರಾಗಲಿ, ಇವನು ಬರೆದ ಕನ್ನಡ ಗ್ರಂಥವಾಗಲಿ ಗೊತ್ತಾಗುವುದಿಲ್ಲ.

೩. ಕವಿರಾಜರಾಜನು ಧಾರವಾಡ ಜಿಲ್ಲಾ ಗದಗ ತಾಲೂಕ ಕಳಸದಲ್ಲಿ ಸಿಕ್ಕ ಶಕ ೮೫೧ (೯೨೯)ನೆಯ ಒಂದು ಶಾಸನವನ್ನು ಬರೆದಿದ್ದಾನೆ. ಈ ಶಾಸನದಲ್ಲಿ ೪ನೆಯ ಗೋವಿಂದನು (೯೧೮-೯೩೩) ಅಥವಾ ಗೊಜ್ಜಿಗನು* ಎರೆಯುಸಕಾಡಿಯೂರೆಂಬ ಹಳ್ಳಿಯನ್ನು ಸರ್ವನಮಸ್ಯವಾಗಿಕೊಟ್ಟನೆಂದು ಬರೆದಿದೆ. ಆದರೆ ಇವನ ಹೆಸರಾಗಲಿ ಊರಾಗಲಿ ಕುಲಗೋತ್ರಗಳಾಗಲಿ ಬರೆದ ಗ್ರಂಥಗಳಾಗಲಿ ಇನ್ನೂ ಗೊತ್ತಾಗಿಲ್ಲ.

೪. ಆದಿಪಂಪನ ಅಜ್ಜನ ಅಜ್ಜನಾದ ಮಾಧವಸೋಮಯಾಜಿ ಎಂಬೊಬ್ಬ ಸದ್ಬ್ರಾಹ್ಮಣನು ವೆಂಗಿಮಂಡಲದ ಒಂದು ಅಗ್ರಹಾರದಲ್ಲಿರುತ್ತಿದ್ದನು. ಅವನ ಮಮ್ಮಗನಾದ ಅಭಿರಾಮದೇವರಾಯನೆಂಬವನು ಜೈನ ಮತವನ್ನು ಸ್ವೀಕರಿಸಿದನು. ಅವನ ಮಗನೇ ನಮ್ಮ ಪ್ರಸಿದ್ಧ ಕವಿಯಾದ **ಆದಿಪಂಪನು.** ಇವನು ಜೈನಮತದ ಕೊಂಡಕುಂಡಾನ್ವಯಕ್ಕೆ ಸೇರಿದ್ದನು. ಇವನು ಪುಲಿಗೆರೆಯ ಸಾಮಂತಶ್ರೇಷ್ಠನಾದ ಚಾಳುಕ್ಯ ಅರಿಕೇಸರಿಯ ಆಶ್ರಯದಲ್ಲಿದ್ದು ತನ್ನ **'ಆದಿಪುರಾಣ'**ವನ್ನು ಶಕ ೮೬೩ (೯೪೧)ರೊಳಗೆ ೬ ತಿಂಗಳಲ್ಲಿಯೂ, ತರುವಾಯ ತನ್ನ **ಭಾರತ** ಅಥವಾ **'ವಿಕ್ರಮಾರ್ಜುನ ವಿಜಯ'** ಎಂಬ ಗ್ರಂಥವನ್ನು ೩ ತಿಂಗಳಲ್ಲಿಯೂ ಪ್ರತಿಜ್ಞೆಮಾಡಿದಂತೆ ಮುಗಿಸಿದನೆಂದು ತನ್ನ ಭಾರತದಲ್ಲಿ ಹೇಳಿಕೊಳ್ಳುತ್ತಾನೆ. ಈತನ ಗುರು ದೇವೇಂದ್ರಮುನಿಯು. ಈತನಿಗೆ ಕವಿತಾಗುಣಾರ್ಣವ, ಪುರಾಣಕವಿ, ಸುಕವಿಜನಮನೋಮಾನಸ

---

* ಬೆಸೆದೊಡೊಸೆದೊಡೆ ಕೊಳಲ್ ರ।
ಕ್ಷಿ ಸಲಂತಕರಾಜನಬ್ಜಸಂಭವನೆನಲೀ ||
ವಸುಧಾತಳದೊಳ್ ಕೋಪ।
ಪ್ರಸಾದಮುಂ ಪೊಗಬಿಲಾರ್ಪರಾರ್ಗೊಜ್ಜಿಗನಾ ||

ಸೋತ್ತಂಸ ಹಂಸ, ಸರಸ್ವತೀ ಮಣಿಹಾರ, ಸಂಸಾರ ಸಾರೋದಯ— ಎಂಬ ಬಿರುದುಗಳಿದ್ದವು. ಇವನ ಎರಡೂ ಗ್ರಂಥಗಳ ವಿಷಯವಾಗಿ ಕವಿ ಚರಿತೆಕಾರರು ಕೊಟ್ಟ ಅಭಿಪ್ರಾಯವನ್ನು ಸಂಕ್ಷಿಪ್ತವಾಗಿ ಕೆಳಗೆ ಕೊಡುತ್ತೇವೆ:—

ಆದಿಪುರಾಣವು ಆದಿತೀರ್ಥಕರನಾದ ಪುರುದೇವನ ಚರಿತವು. ಇದು ಚಂಪೂರೂಪವಾಗಿದ್ದು ೧೬ ಆಶ್ವಾಸಗಳಲ್ಲಿ ವಿಭಾಗಿಸಲ್ಪಟ್ಟಿದೆ. ಈ ಗ್ರಂಥವನ್ನು ಕವಿಯು ಉತ್ಕೃಷ್ಟ ಭಾಷೆಯಲ್ಲಿ ರಚಿಸಿದ್ದಾನೆ. ಪದದ ಜೋಡಣೆ ಕಿವಿಗಿಂಪಾಗಿಯೂ, ಲಲಿತವಾಗಿಯೂ, ಹೃದಯಂಗಮವಾಗಿಯೂ ಇದೆ. ಪದಗಳು ಮುತ್ತುಕೋದಂತೆ ಹೊಂದಿಕೆಯಾಗಿವೆ. ಬಂಧವು ಗಂಭೀರವಾಗಿಯೂ, ಭಾವಗರ್ಭಿತವಾಗಿಯೂ ಇದೆ. ಇವನ ವಾಗ್ಧೋರಣೆ ಪ್ರಾಯಃ ಇತರ ಕನ್ನಡ ಕವಿಗಳಲ್ಲಿ ದೊರೆಯಲಾರದೆಂದು ತೋರುತ್ತದೆ. ಈ ಗ್ರಂಥದಿಂದ ಮಾದರಿಗಾಗಿ ಒಂದು ಪದ್ಯವನ್ನು ಕೊಡುವೆವು:—

**ಅಳಿಯನಿಗೆ ಅತ್ತೆಮಾವಂದಿರು ಹೇಳುವ ಹಿತೋಕ್ತಿ**

ಬಗೆದುಂ ನಿನ್ನನ್ನವಾಯೋನ್ನತಿಯನಿವಳತಿಸ್ನೇಹ ಸಂಬಂಧಮಂ ನೀಂ!
ಬಗೆದುಂ ಸಂದೆಮ್ಮ ನಣ್ಪಂ ಬಗೆದು ಮಱೆಯದೇನಾನುಮೆಂದಾಗಳುಂ ಮೆ ॥
ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದೆರ್ದೆಗಿಡದಂತಾಗೆ ಪಾಲಪ್ಪುದಿಂತೀ।
ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ ಬೇಡಿದೆಂ ವಜ್ರಜಂಘಾ ॥ ೩೯ ॥

ಭಾರತ ಅಥವಾ ವಿಕ್ರಮಾರ್ಜುನ ವಿಜಯವು ಚಂಪೂರೂಪವಾಗಿದೆ. ಇದರಲ್ಲಿ ಕವಿ ಪಾಂಡವರ ಜನನದಿಂದ ಕೌರವವಧೆಯ ವರೆಗೆ ಭಾರತ ಕಥೆಯನ್ನು ಸಂಕ್ಷೇಪವಾಗಿ ಹೇಳಿ, ಕೊನೆಯಲ್ಲಿ ಅರ್ಜುನನಿಗೆ ಪಟ್ಟಾಭಿಷೇಕವಾದಂತೆ ವರ್ಣಿಸಿದ್ದಾನೆ. ತನ್ನ ಪೋಷಕನಾದ ಅರಿಕೇಸರಿಯೆಂಬ ಚಾಳುಕ್ಯ ರಾಜನನ್ನು ಅರ್ಜುನನಿಗೆ ಹೋಲಿಸಿದ್ದಾನೆ.

ಈ ಗ್ರಂಥವನ್ನು ಅರಿಕೇಸರಿಯ ಅಪ್ಪಣೆಯ ಮೇರೆಗೆ ಬರೆದುದಾಗಿ ಹೇಳು ತ್ತಾನೆ. ಗ್ರಂಥವು ೧೪ ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. ಗ್ರಂಥಾವ ತಾರದಲ್ಲಿ ಅರಿಕೇಸರಿಯನ್ನು ವಿಷ್ಣುವಿಗೂ, ಪರಮೇಶ್ವರನಿಗೂ, ಸೂರ್ಯ ನಿಗೂ, ಮನ್ಮಥನಿಗೂ ಹೋಲಿಸಿ, ಬೇರೆ ಬೇರೆ ಮಂಗಳ ಶ್ಲೋಕಗಳನ್ನು ಮಾಡಿದ್ದಾನೆ. ಬಳಿಕ ಸರಸ್ವತಿಯನ್ನೂ ವಿನಾಯಕನನ್ನೂ ನುತಿಸಿದ್ದಾನೆ. ತರುವಾಯ—'ಹಿಂದೆ ಅನೇಕರು ಭಾರತ ಕಥೆಯನ್ನು ಬರೆದಿದ್ದಾರೆ. ಆದರೆ, ಆವ ಸಂಗತಿಯನ್ನು ಬಿಡದಂತೆ ಕ್ರಮವಾಗಿಯೂ ಮನೋಹರ ವಾಗಿಯೂ ಬರೆವುದಕ್ಕೆ ಇನ್ನಾರೂ ಸಮರ್ಥರಿಲ್ಲ'—ಎಂದು ವಿದ್ವಾಂಸರು ಕೇಳಿಕೊಳ್ಳಲು "ಪೇೞಲೊಡರ್ಚಿದೇನೀ ಪ್ರಬಂಧಮಂ" ಎನ್ನುತ್ತಾನೆ. ಆಮೇಲೆ ತನ್ನ ಪೋಷಕನ ವಂಶಾವಳಿಯನ್ನು ಹೇಳಿ ಕಥೆಯನ್ನು ಆರಂಭಿಸುತ್ತಾನೆ. ಮಾದರಿಗಾಗಿ ಈ ಗ್ರಂಥದ ಒಂದು ಪದ್ಯವನ್ನು ಕೆಳಗೆ ಕೊಡುತ್ತೇವೆ:—

### ರಾಜಧರ್ಮ (ಅರ್ಜುನೋಕ್ತಿ)

ಒತ್ತಿ ತೞುಂಬಿನಿಂದ ರಿಪುಭೂಜ ಸಮಾಜದ ಬೇರ್ಗಳಂ ಸಭ।
ಕ್ಕೆತ್ತದೆ ಬಂದು ತನ್ನ ಮಱೆವೊಕ್ಕೊಡೆ ಕಾಯದೆ ಚಾಗದೊಳ್ಪಿನ ॥
ಜೊಟ್ಟುತ್ತದೆ ಪೂಣ್ದು ಬಾೞ್ವ ಪುೞುವಾನಸನೆಂಬನಜಾಂಡ
ಮೆಂಬದೊಂ।
ದತ್ತಿಯ ಪಣ್ಣೊಳಿರ್ಪ ಪುೞುವಲ್ಲದೆ ಮಾನಸನೇ ಮುರಾಂತಕಾ ॥

ಈ ಗ್ರಂಥದ ಬಂಧವು ಆದಿಪುರಾಣದ ಬಂಧದಷ್ಟು ಲಲಿತವಾಗಿಲ್ಲ; ಪ್ರೌಢವಾಗಿಯೂ ಭಾವಗರ್ಭಿತವಾಗಿಯೂ ಇದೆ. ಅದರಲ್ಲಿ ಸಂಸ್ಕೃತ ಪದಗಳು ಹೆಚ್ಚು; ಇದರಲ್ಲಿ ಕನ್ನಡ ಪದಗಳು ಹೆಚ್ಚು.

೫. ಅಸಗನ ಹೆಸರನ್ನು ನಯಸೇನನೂ ಪೊನ್ನನೂ ದುರ್ಗ ಸಿಂಹನೂ ತಂತಮ್ಮ ಗ್ರಂಥಗಳಲ್ಲಿ ಹೇಳಿದ್ದರಿಂದ ಅವನ ಕಾಲವು ಸುಮಾರು ೯೪೫ ಆಗಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ. ಆದರೆ ಇವನು ಎಲ್ಲಿಯವನೆಂಬುದಾಗಲಿ ಯಾರ ಆಶ್ರಯದಲ್ಲಿದ್ದನೆಂಬು ದಾಗಲಿ ಯಾವ ಗ್ರಂಥವನ್ನು ಬರೆದನೆಂಬುದಾಗಲಿ ಇವನ ಕುಲಗೋತ್ರ ಗಳು ಯಾವವಿದ್ದವೆಂಬುದಾಗಲಿ ಇನ್ನೂ ಗೊತ್ತಾಗಿಲ್ಲ.

೬. **ಪೊನ್ನನು** ಸುಪ್ರಸಿದ್ಧನಾದ ಜೈನ ಕವಿಯು. ಇಂದ್ರನಂದಿ ಯೆಂಬವನು ಇವನ ಗುರು. **ಪೊನ್ನ**, **ಪೊನ್ನಿಗ**, **ಪೊನ್ನಮಯ್ಯ**, ಸವಣ, ಕುರುಳ್ಗಳ ಸವಣ ಎಂಬುವೇ ಇವನ ಹೆಸರುಗಳು. ಕವಿಚಕ್ರವರ್ತಿ, ಉಭಯ ಕವಿಚಕ್ರವರ್ತಿ, ಸರ್ವದೇವ ಕವೀಂದ್ರ, ಸೌಜನ್ಯ ಕಂದಾಂಕುರ ಎಂಬುವೇ ಇವನ ಬಿರುದುಗಳು. **ಉಭಯ ಕವಿಚಕ್ರವರ್ತಿ** ಎಂಬ ಬಿರುದನ್ನು ರಾಷ್ಟ್ರಕೂಟ ಸಾರ್ವಭೌಮನಾದ ೩ನೆಯ ಕೃಷ್ಣನು (೯೪೦–೯೬೯) ತನಗೆ ಕೊಟ್ಟನೆಂದು ಪೊನ್ನನು ತನ್ನ 'ಶಾಂತಿಪುರಾಣ'ವೆಂಬ ಗ್ರಂಥದಲ್ಲಿ ಹೇಳಿಕೊಳ್ಳುತ್ತಾನೆ*. ಪಂಪ **ಪೊನ್ನ** ರನ್ನರು **ರತ್ನತ್ರಯ**ರಾಗಿದ್ದರೆಂದು ರನ್ನನು ತನ್ನ ಅಜಿತಪುರಾಣದಲ್ಲಿ ಹೇಳುತ್ತಾನೆ†. ವೆಂಗಿ ವಿಷಯದ ಕಮ್ಮೆನಾಡಿನ ಪುಂಗನೂರವರೂ ೩ನೆಯ ಕೃಷ್ಣನ ದಂಡನಾಯಕರೂ ಆದ ಮಲ್ಲಪ, ಪುನ್ನಿಮಯ್ಯ ಎಂಬ ಇಬ್ಬರು ಜೈನ ಬ್ರಾಹ್ಮಣರಾದ ಅಣ್ಣ ತಮ್ಮಂದಿರು ಇವನ ಆಶ್ರಯದಾತರಾಗಿದ್ದರೆಂದು ಕಂಡುಬರುತ್ತದೆ. ಇವನು ಬಹು ಚತುರ ಕವಿಯಾದ್ದರಿಂದ ಕನ್ನಡ ಕವಿಗಳೊಳಗೆ ಅಸಗನಿಗಿಂತಲೂ, ಸಂಸ್ಕೃತ ಕವಿಗಳೊಳಗೆ ಕಾಳಿದಾಸನಿಗಿಂತಲೂ ತಾನು ನೂರ್ಮಡಿ ಹೆಚ್ಚಿನವನಾಗಿರುತ್ತೇನೆಂದು ಕೆಳಗೆ ಕೊಟ್ಟ ಪದ್ಯದಲ್ಲಿ ಹೊಗಳಿಕೊಂಡಿರುತ್ತಾನೆ: —

ಕನ್ನಡ ಕವಿತೆಯೊಳಗಸಗಂ।
ಗನ್ನೂರ್ಮಡಿ ರೇಖೆಗಗ್ಗಳಂ ಸಕ್ಕದದೊಳ್ ॥
ಮುನ್ನುಳ್ಳ ಕಾಳಿದಾಸಂ।
ಗನ್ನೂರ್ಮಡಿ ರಚನೆಯೊಳ್ ಕುರುಳ್ಗಳಸವಣಂ ॥

---

* ಭುವನದ ಕನ್ನಡ ಸಕ್ಕದ।
ಕವಿಗಳ್ ಸಲೆ ಸಾಲೆ ಸೋಲೆ ಸವಣಂಗಿತ್ತಂ।
ಸವಿವೇಕಮುಭಯಕವಿಚ।
ಕ್ರವರ್ತಿ ಪೆಸರಂ ನಿಜಾಹಿತೋಷ್ಣಂ ಕೃಷ್ಣಂ ॥

† ಕವಿಜನದೊಳ್ ರತ್ನತ್ರಯ।
ಪವಿತ್ರರೆನೆ ನೆಗೞ್ದ ಪಂಪನುಂ ಪೊನ್ನಿಗನುಂ।
ಕವಿರತ್ನನುಮೀ ಮೂವರ್।
ಕವಿಗಳ್ ಜಿನಸಮಯದೀಪಕರ್ ಪೆಱರೊಳರೇ ॥

ಪೊನ್ನನು ಬರೆದ ಸಂಸ್ಕೃತ ಗ್ರಂಥಗಳಾವವೂ ಇನ್ನು ದೊರೆತಿಲ್ಲ. ಇವನ ಕನ್ನಡ ಗ್ರಂಥಗಳೊಳಗೆ ಶಾಂತಿಪುರಾಣ, ಜಿನಾಕ್ಷರಮಾಲೆ ಎಂಬ ಎರಡು ಪುಸ್ತಕಗಳು ಮಾತ್ರ ಸಿಕ್ಕಿವೆ. ಇವನು ೧೪ ಆಶ್ವಾಸಗಳುಳ್ಳ ರಾಮಕಥೆ ಅಥವಾ ಭುವನೈಕರಾಮಾಭ್ಯುದಯ ಎಂಬದೊಂದು ಕನ್ನಡ ಗ್ರಂಥವನ್ನೂ, ಗತಪ್ರತ್ಯಾಗತವೆಂಬ ಸಂಸ್ಕೃತ ಗ್ರಂಥವನ್ನೂ ಬರೆದಿರಬಹುದೆಂದು ಶಾಂತಿಪುರಾಣದ ಕೆಲವು ವಚನಗಳಿಂದ ಕಂಡುಬರುತ್ತದೆ. ಇವೆರಡೂ ಕಲ್ಯಾಣದ ಚಾಳುಕ್ಯ ಮನೆತನದ ಸ್ಥಾಪಕನಾದ ನೂರ್ಮಡಿ ತೈಲಪನ ಸ್ತುತಿಪರ ಗ್ರಂಥಗಳಾಗಿದ್ದರೂ ಆಗಿರಬಹುದು. ಏಕೆಂದರೆ, ಇವನಿಗೆ ಆಶ್ರಯಕೊಟ್ಟ ಮಲ್ಲಪ ಪುನ್ನಿಮಯ್ಯರು ಮುಂದೆ ತೈಲಪನ ದಂಡನಾಯಕರಾಗಿದ್ದರೆಂದು ಶಾಸನಗಳಿಂದ ಕಂಡುಬರುತ್ತದೆ.

ಶಾಂತಿಪುರಾಣವು ಚಂಪೂರೂಪವಾಗಿದ್ದು ೧೬ನೆಯ ತೀರ್ಥಕರನಾದ ಶಾಂತಿನಾಥನನ್ನು ವರ್ಣಿಸುತ್ತದೆ. ಇದರಲ್ಲಿ ೧೨ ಆಶ್ವಾಸಗಳುಂಟು. ಇದನ್ನು ಕವಿಯು ಪುರಾಣಚೂಡಾಮಣಿಯೆಂದು ಕರೆದಿದ್ದಾನೆ. ಇದರ ಬಂಧವು ಪ್ರೌಢವಾಗಿದೆ. ಇದರ ಒಂದು ಪದ್ಯವನ್ನು ಮಾದರಿಗಾಗಿ ಕೆಳಗೆ ಕೊಡುತ್ತೇವೆ:—

## ಚಂದ್ರೋದಯ

ಉದಯಕ್ಷ್ಮಾಭೃತ್ತಟಂ ರಂಗಮನುಡುತತಿ ಪುಷ್ಪಾಂಜಲಿ
ಕ್ಷೇಪಮಂ ಪ।
ರ್ವಿದಗುರ್ವಸ್ಥಾಂಧಕಾರಂ ನವ ಯವನಿಕೆಯಂ ನಾಲ್ಕು
ಜಾವಂಗಳುಂ ತ॥
ಪ್ಪದೆ ನಾಲ್ಕಂಕಂಗಳಂ ಪೋಲ್ತಮರ್ದಿರೆ ಹಿಮಕೃನ್ನಾಟಕಾ
ಸೂತ್ರಧಾರಾ।
ಭ್ಯುದಯ ಪ್ರಾರಂಭದಿಂದಾಶೆಯೊಳೆನೆಸೆಯೆನೆ ಚೆಲ್ವಾಯ್ತು
ಶೀತಾಂಶು ಬಿಂಬಂ ॥

ಜಿನಾಕ್ಷರಮಾಲೆಯು ಪೊನ್ನನ ೨ನೆಯ ಪುಟ್ಟ ಗ್ರಂಥವು. ಇದು ಜಿನಸ್ತುತಿಪರವಾಗಿದ್ದು, ಇದರಲ್ಲಿ ಕಕಾರದಿಂದ ಳಕಾರದವರೆಗೆ ೩೯

ಕಂದಪದ್ಯಗಳಿವೆ. ಇದರ ಒಂದು ಪದ್ಯವನ್ನು ಮಾದರಿಗಾಗಿ ಇಲ್ಲಿ ಕೊಡುವೆವು:—

ಜವನಂ ಭಾವಲಯಂ ಸಿಂ।
ಹವಿಷ್ಟರಂ ಚಮರಮಮರ ತೂರ್ಯಮಶೋಕಂ ॥
ಧವಳಚ್ಛತ್ರಂ ಸುರಪು।
ಷ್ಪವೃಷ್ಟಿ ಜಿನನಾಥ ನಿಮ್ಮೊಳೆಸೆವುದು ನಿಚ್ಚಂ ॥

## ಪರಿಶಿಷ್ಟ

ಮದ್ರಾಸದ ವಿಚಿತ್ರ ವಸ್ತುಸಂಗ್ರಹಾಲಯದಲ್ಲಿದ್ದ ಪೂರ್ವ ಚಾಳುಕ್ಯ ಅರಸನಾದ ೧ ನೆಯ ಅಮ್ಮನ (೯೧೮–೨೫) ಶಾಸನ.

೧. ಸರ್ವ್ವೋಪಕಾರಮಶೇಷಸ್ಯ ಜಗತಃ ಸರ್ವದಾ ಶಿವಂ।
ಗೋಬ್ರಾಹ್ಮಣ ನೃಪಾಣಾಂ ಚ ಶಿವಂ ಭವತು ಸರ್ವದಾ ॥

೨. ಸ್ವಸ್ತಿ ॥ ಶ್ರೀಮತಾಂ ಸಕಲ ಭುವನ ಸಂಸ್ತೂಯಮಾನ
ಮಾನವ್ಯಸ ಗೋತ್ರಾಣಾಂ ಹಾರೀತೀ ಪುತ್ರಾಣಾಂ ಕೌ

೩. ಶಿಕೀ ವರಲಬ್ಧ ರಾಜ್ಯಾನಾಂ ಮಾತೃಗಣಪರಿಪಾಲಿತಾನಾಂ
ಸ್ವಾಮಿ ಮಹಾಸೇನ ಪಾದಾನುಧ್ಯಾತಾ

೪. ನಾಂ ಭಗವನ್ನಾರಾಯಣ ಪ್ರಸಾದಾಸಾದಿತ ವರಾಹ
ಲಾಂಛನೇಕ್ಷಣ ಕ್ಷಣವ

೫. ಶೀಕೃತಾರಾತಿಮಂಡಲಾನಾಂ ಅಶ್ವಮೇಧಾವಭೃತ
ಸ್ನಾನ ಪವಿತ್ರೀಕೃತ ವಪುಷಾಂ ಚಲುಕ್ಯಾ

೬. ನಾಂ ಕುಲಮಲಂಕರಿಷ್ಣೋಃ ಸತ್ಯಾಶ್ರಯವಲ್ಲಭಸ್ಯ ಭ್ರಾತಾ
ಕುಬ್ಜವಿಷ್ಣುವರ್ದ್ಧನೋಽಷ್ಟಾದ

೭. ಶ ವರ್ಷಾಣಿ। ತತ್ಪುತ್ರೋ ಜಯಸಿಂಹವಲ್ಲಭಸ್ತ್ರಯಸ್ತ್ರಿಂಶ
ದ್ವರ್ಷಾಣಿ। ತದ್ಭ್ರಾತುರಿನ್ದ್ರರಾಜ ನಂ

೮. ದನೋ ವಿಷ್ಣುವರ್ದ್ಧನೋ ನವ ವರ್ಷಾಣಿ। ತತ್ಪುತ್ರೋ
ಮಂಗಿ ಯುವರಾಜಃ ಪಂಚವಿಂಶತಿ ಸಂವತ್ಸರಾನ್

೯. ತತಸ್ಸೂನುರ್ಜಯಸಿಂಹಸ್ತ್ರಯೋದಶ ಸಂವತ್ಸರಾನ್ । ತದ್ದೈವಲೆ
ಮಾತುರಾನುಜಃ ಕೊಕ್ಕಿಲಿಃ
೧೦. ಷಣ್ಮಾಸಾನ್ । ತದಗ್ರಜೋ ವಿಷ್ಣುರಾಜಸ್ತ್ವನುಜ
ಮುಚ್ಚಾಟ್ಯ ಸಪ್ತತ್ರಿಂಶತ್ಸಂವತ್ಸರಾನ್ ತ
೧೧. ತ್ಪುತ್ರೋ ವಿಜಯಾದಿತ್ಯ ಭಟ್ಟಾರಕಃ ಅಷ್ಟಾದಶಾಬ್ದಾನ್ ।
ತನ್ನಂದನೋ ವಿಷ್ಣುವರ್ದ್ಧನಃ ಷಟ್‌ತ್ರಿಂಶ
೧೨. ದಬ್ದಾನ್ । ತತ್ಪುತ್ರಃ ಗಂಗ್ಗ ರಟ್ಟಬಲೈಸ್ಸಾರ್ದ್ಧಂ ದ್ವಾದ
ಶಾಬ್ದಾನಹನ್ನಿಶಂ ಭುಜಾರ್ಜ್ಜಿತಬಲಂ
೧೩. ಖಡ್ಗ ಸಹಾಯೋ ನಯವಿಕ್ರಮೈಃ ॥ ಅಷ್ಟೋತ್ತರಂ
ಯುದ್ಧಶತಂ ಯುದ್ಧ್ವಾ ಶಂಭೋರ್ಮ್ಮಹಾ
೧೪. ಲಯಾನ್ । ತತ್ಸಂಖ್ಯಯಾ ಕರೋದ್ವೀರೋ ವಿಜಯಾದಿತ್ಯ
ಭೂಪತಿಃ ॥ ಕೃತ್ವಾ ರಾಜ್ಯಂ
೧೫. ಸವೇಂಗೀಶಸ್ಸಚತ್ವಾರಿಂಶತಸ್ಸಮಾನ್ । ಚತುರುತ್ತರ
ಸಂಖ್ಯಾತಾನ್ ಯಯೌ ಸಖ್ಯಂ ಶಚೀಪತೇಃ ॥
೧೬. ತತಸ್ಸೂನುರ್ಸಯವಿದ್ವೀರಃ ಕಲ್ಯಾದಿರ್ವ್ವಿಷ್ಣುವರ್ದ್ಧನಃ ।
ವೇಂಗೀನಾಥಾಸ್ಸಮಸ್ತಾನಾಮಾಯುಧಾ
೧೭. ನಾಂ ಕಳೌಕೃತೀ ॥ ವರ್ಣಾಶ್ರಮಸ್ಥಿತಿ ನಿಯೋಜನದಕ್ಷ
ರಕ್ಷಾಶಿಕ್ಷಾಪರಪುರಂಜಯ ಸ
೧೮. ತ್ಯಬಾಹುಃ । ನಿತ್ಯನ್ತ್ರಿವರ್ಗ್ಗ ಪರಿಪಾಳನ ತನ್ತ್ರಮನ್ತ್ರಿ ಸಂವರ್ದ್ಧಿ
ತಾಖಿಲ ಧರಾತಲ ಲಬ್ಧ ತೇಜಾಃ ॥
೧೯. ಗಜವಾಜಿ ಯುದ್ಧಕುಶಲಸ್ಸಾರ್ದ್ಧ ಸಂವತ್ಸರಂಪ್ಪತಿಃ ।
ಬಭೂವ ರಾಜ್ಯೇನ ಯುವಿ
೨೦. ದಭಿಷಿಕ್ತಃ ಕುಲೋನ್ನತೇಃ । ತತ್ಸುತೋಜನಿ ಸಮಸ್ತ
ಭೂಭೃತಾಂ ಶಾಸಕಃ ಸಕಲ ಸಂಪದಾಂ ಪ
೨೧. ತಿಃ । ಧೈರ್ಯ್ಯ ದಾನ ಧೃತಿ ನಿರ್ಮ್ಮಲ ಶ್ರೀ ಪ್ರತಾಪಧರ
ಮೂರ್ತ್ತಿರ್ವಿಶ್ರುತಃ ॥ ಸಮರನಿ

೨೨. ರತಾರಾತಿವ್ರಾತಾನನೇಕ ಧರೇಶ್ವರಾನ್ ಪ್ರಕೃತಿಬಲ ಸಂಪನ್ನ
ಸ್ತೇಜಸ್ತ್ರಿಕ್ರ

೨೩. ಮಜೋನ್ನತಿಃ। ವಿಲಸದಸಿನಾ ಜಿತ್ವಾ ಸೂರ್ಯ್ಯಂ
ಪ್ರತಾಪಯಶೋಮಯ್ಯೈರ್ಜ್ಜಗತಿ ವಿಜಯಾದಿ

೨೪. ತ್ಯೋ ನಿತ್ಯಂ ಗುಣೈಶ್ಚ ಜಿಗಾಯ ಸಃ। ಗಂಗ್ಗಾನಂಗಜವೈರಿ
ಶಕ್ತ್ರಿರಸವಾನ್ ರಟ್ಟೇಶ ಸಂಚೋದಿತೋ

೨೫. ಜಿತ್ವಾ ಮಂಗಿಶಿರೋಹರತ್ ಯುಧಿ ಮಹಾಬಾಹ್ವಾಪ್ತ
ವೀರ್ಯ್ಯಾರ್ಯ್ಯವಾ। ಕೃಷ್ಣಂ ಸಂಕಿಲಮಂ

೨೬. ಕಿತಾಖಿಲ ಬಲಪ್ರಾಪ್ತೋರುಸದ್ವಿಕ್ರಮೋ ಭೀತ್ವಾರ್ತಂ ಚ
ವಿಧಾಯ ತತ್ಪುರವರಂ ಯೋ

೨೭. ನಿರ್ದ್ದದಾಹ ಪ್ರಭುಃ ॥ ಸಸಮಸ್ತ ಭುವನಾಶ್ರಯ
ಶ್ರೀ ವಿಜಯಾದಿತ್ಯಶ್ಚತುಶ್ಚತ್ವಾರಿಂ

೨೮. ಶದ್ವರ್ಷಾಣಿ। ...........................................



# ಕರ್ನಾಟಕ ಸಾಮ್ರಾಜ್ಯ

## ೨ ನೆಯ ಸಂಪುಟ, ಭಾಗ ೨



## ೧ ನೆಯ ಅಧ್ಯಾಯ

### ಬಾದಾಮಿಯ ಮತ್ತು ಕಲ್ಯಾಣದ ಚಾಳುಕ್ಯರ ಸಂಬಂಧವು

ಹಿಂದೆ ಆಗಿ ಹೋದ ಅರಸುಮನೆತನಗಳ ವಂಶಾವಳಿಯನ್ನು ಆಯಾ ಅರಸರು ಕೊರೆಯಿಸಿಟ್ಟ ಶಿಲಾಲೇಖಗಳಿಂದಲೂ ಅವರು ಕೊಟ್ಟ ತಾಮ್ರಶಾಸನಗಳಿಂದಲೂ ಗೊತ್ತುಮಾಡುತ್ತೇವಷ್ಟೇ. ಆದರೆ ಅಳಿದ ಅರಸುಮನೆತನಗಳ ಶಾಸನಗಳಿರುವುದು ಎಷ್ಟುಮಾತ್ರವೂ ಸಂಭವವಿಲ್ಲ. ಇಂತಹ ಅಳಿದ ಮನೆತನದ ಸುಪುತ್ರನೊಬ್ಬನು ಪುನಃ ಅರಸುಮನೆತನವನ್ನು ಸ್ಥಾಪಿಸಿದರೆ, ಅವನಿಗೂ ಹಿಂದಿನ ಮನೆತನದ ಕಡೆಯ ಚಕ್ರವರ್ತಿಗೂ ಇದ್ದ ಶರೀರಸಂಬಂಧವನ್ನು ಸಪ್ರಮಾಣವಾಗಿ ತೋರಿಸುವುದು ಅಸಾಧ್ಯವಾದ ಕೆಲಸವೇ ಸರಿ. ಬಾದಾಮಿ ಚಾಳುಕ್ಯರ ಸಾಮ್ರಾಜ್ಯವು ಅಳಿದು ಹೋಗಿ ೨೨೫ ವರ್ಷಗಳಾದ ಬಳಿಕ ೨ ನೆಯ ತೈಲಪನೆಂಬ ಚಾಳುಕ್ಯ ಮಹಾವೀರನು ತನ್ನ ಸೌಹೃದಯ ಬುದ್ಧಿ ಶೌರ್ಯ ಧೈರ್ಯ ಸಾಹಸಗಳಿಂದಲೂ ಪೊಲಬಿನ ಅನುಕೂಲತೆಯಿಂದಲೂ ದೈವಾನುಗ್ರಹದಿಂದಲೂ ಸಾಮ್ರಾಜ್ಯವನ್ನು ರಾಷ್ಟ್ರಕೂಟರಿಂದ ಕಿತ್ತಿಕೊಂಡು, ಚಾಳುಕ್ಯ ಸಾಮ್ರಾಜ್ಯವನ್ನು ಪುನರುಜ್ಜೀವಿಸಿದನೆಂದು ಇದೇ ಗ್ರಂಥದ ೨ ನೆಯ ಸಂಪುಟದ ೧ ನೆಯ ಭಾಗದ ಕೊನೆಯಲ್ಲಿ ಬರೆದಿರುತ್ತೇವಷ್ಟೇ. ಈ ತೈಲಪನು ಬಾದಾಮಿ ಚಾಳುಕ್ಯ ಚಕ್ರವರ್ತಿಯ ಮುಖ್ಯ ಮನೆತನದವನಾಗಿದ್ದನೋ ಅಥವಾ ಬಿರಾದರ ಚಾಳುಕ್ಯ ಮನೆತನದವನಾಗಿದ್ದನೋ ರಾಷ್ಟ್ರಕೂಟರ ಸಾರ್ವಭೌಮತ್ವದ ಕಾಲದಲ್ಲಿ ಈ ತೈಲಪನ ಪೂರ್ವಜರು ಎಲ್ಲೆಲ್ಲಿ ಹೇಗೆ ಹೇಗೆ ಉಪಜೀವನಮಾಡಿಕೊಂಡಿದ್ದರೋ? ಈ ಪ್ರಶ್ನೆಗಳನ್ನು ಸರ್ವಸಮರ್ಪಕವಾಗಿ ಬಿಡಿಸುವುದು ಕಷ್ಟಸಾಧ್ಯವಾದ ಮಾತೇ

ಸರಿ. ಶಾಬ್ದಪ್ರಮಾಣಗಳ ಅಭಾವದ ಮೂಲಕ ಅನುಮಾನ ಪ್ರಮಾಣ ದಿಂದಲೇ ಈ ಪ್ರಶ್ನಗಳನ್ನು ಆದಷ್ಟು ಮಟ್ಟಿಗೆ ಬಿಡಿಸಲಿಕ್ಕೆ ಯತ್ನಿಸು ವುದೇ ಈ ಅಧ್ಯಾಯದ ಮುಖ್ಯ ಕೆಲಸವಾಗಿರುತ್ತದೆ. ಆದ್ದರಿಂದ ಈ ವಿಷಯವನ್ನು ಕುರಿತು ಮೊದಲಿನ ಗ್ರಂಥಕಾರರು ಏನು ಅಭಿಪ್ರಾಯ ವನ್ನು ಕೊಟ್ಟಿರುತ್ತಾರೆಂಬುದನ್ನು ನೋಡೋಣ.

(ಅ) ಡಾ॥ ಭಾಂಡಾರಕರರು ಈ ಸಂಬಂಧದಿಂದ ಬರೆಯುವುದೇ ನಂದರೆ:—ಬಾದಾಮಿ ಚಾಳುಕ್ಯ ಮನೆತನದ ಕೊನೆಯ ಸಾರ್ವಭೌಮ ನಾದ ೨ನೆಯ ಕೀರ್ತಿವರ್ಮನಿಂದ ರಾಷ್ಟ್ರಕೂಟ ದಂತಿದುರ್ಗನು ಕಿತ್ತಿಕೊಂಡ ಸಾಮ್ರಾಜ್ಯವನ್ನು ಚಾಳುಕ್ಯ ಮನೆತನದವನಾದ ತೈಲಪನು ರಾಷ್ಟ್ರಕೂಟರ ಕೊನೆಯ ಸಾರ್ವಭೌಮನಾದ ಕಕ್ಕಲನಿಂದ ಶಕ ೮೯೫ ರಲ್ಲಿ ಮರಳಿ ಸೆಳೆದುಕೊಂಡನಷ್ಟೇ. ಈ ಕೀರ್ತಿವರ್ಮ ತೈಲಪರ ನಡುವೆ ೭ ಮಂದಿ ಅರಸರು ಆಗಿ ಹೋದರೆಂದು ವಿಂಜಿಯ ತಾಮ್ರಶಾಸನವೂ ಏವೂರಿನ ಶಿಲಾಲೇಖವೂ ಹೇಳುತ್ತವೆ. ಕೀರ್ತಿವರ್ಮನು ಶಕ ೬೭೯ ರಲ್ಲಿ ಪಟ್ಟವೇರಿದ್ದರಿಂದ ೬೭೯ರಿಂದ ೮೯೫ರ ವರೆಗೆ ೨೧೬ ವರ್ಷ ಗಳಾದವು ಮತ್ತು ಒಂದೊಂದು ತಲೆಗೆ ಸರಾಸರಿ ೩೧ ವರ್ಷಗಳು ಬಿದ್ದವು. ಆದರೆ ಒಬ್ಬೊಬ್ಬನ ಆಳಿಕೆಗೆ ೩೧ ವರ್ಷಗಳು ಬೀಳುವುದು ಅಬದ್ಧವೇ ಸರಿ. ಈ ಕಾಲಕ್ಕೆ ಚಾಳುಕ್ಯ ಮನೆತನವು ತೀರ ದುಸ್ಥಿತಿ ಯಲ್ಲಿದ್ದುದರಿಂದ ಚಾಳುಕ್ಯರು ತಮ್ಮ ವಂಶಾವಳಿಯನ್ನು ಎಚ್ಚರದಿಂದ ಸರಿಯಾಗಿಡಲಿಲ್ಲೆಂದು ಕಂಡುಬರುತ್ತದೆ. ಈ ಕಾಲದ ಚಾಳುಕ್ಯರ ಶಾಸನಗಳೇ ಇಲ್ಲುದರಿಂದ, ಇವರು ಎಲ್ಲಿ ಆಳುತ್ತಿದ್ದರೆಂಬುದಾಗಲಿ ಇವರ ಅಧಿಕಾರವು ಎಷ್ಟಿತ್ತೆಂಬುದಾಗಲಿ ಸರಿಯಾಗಿ ತಿಳಿಯುವುದಿಲ್ಲ. ರಾಷ್ಟ್ರಕೂಟರು ಸಾರ್ವಭೌಮತ್ವವನ್ನು ಕಿತ್ತಿಕೊಂಡಾಗ ಬಾದಾಮಿ ಚಾಳುಕ್ಯ ಮನೆತನದ ಎಷ್ಟೋ ಟಿಸಲುಗಳು ರಾಷ್ಟ್ರಕೂಟರ ಸಾಮ್ರಾ ಜ್ಯದಲ್ಲಿ ಹಬ್ಬಿರಬಹುದೆಂತಲೂ ಬೊಡ್ಡಿಯ ಮನೆತನವು ನಷ್ಟವಾದ್ದರಿಂದ ಯಾವುದೋ ಒಂದು ಮೂಲೆಯಲ್ಲಿದ್ದ ಟಿಸಲಿಗೆ ತೈಲಪನು ಸೇರಿರಬಹು ದೆಂತಲೂ ನನಗೆ ಹೊಳೆಯುತ್ತದೆ. ಏಕೆಂದರೆ, ಬಾದಾಮಿ ಚಾಳುಕ್ಯರು ತಾವು ಮಾನವ್ಯಗೋತ್ರದವರೆಂತಲೂ ಹಾರಿತಿ ವಂಶದವರೆಂತಲೂ ಹೇಳಿ

ಕೊಳ್ಳುತ್ತಿದ್ದರು. ಆದರೆ ಈ ಹೊಸ ಚಾಳುಕ್ಯರು ವಿುರಜಿಯ ಒಂದು ಶಾಸನವನ್ನು ಬಿಟ್ಟು ಉಳಿದ ಯಾವ ಶಾಸನದಲ್ಲಿಯೂ ಈ ಎರಡೂ ಹೆಸರುಗಳನ್ನು ಹೇಳದೆ, ತಾವು ಸತ್ಯಾಶ್ರಯನ ವಂಶದವರೆಂದು ಹೇಳಿಕೊಳ್ಳುತ್ತಾರೆ. ವಿುರಜಿಯ ಶಾಸನವನ್ನು ಬರೆದವನಿಗಾದರೂ ಪೂರ್ಣ ವಂಶಾವಳಿಯು ಗೊತ್ತಿದ್ದಿಲ್ಲೆಂದು ತೋರುತ್ತದೆ. ಆದ್ದರಿಂದ ಅವನು ಕೀರ್ತಿವರ್ಮ ತೈಲಪರ ನಡುವೆ ೬ ಮಂದಿ ಅರಸರ ಹೆಸರುಗಳನ್ನು ಮಾತ್ರ ಸೇರಿಸಿರುತ್ತಾನೆ. ಈ ಕಾಲದ ಚಾಳುಕ್ಯ ಮನೆತನದ ಐತಿಹ್ಯವು ಪಾಂಕ್ತವಾಗಿ ಬಂದಿದ್ದಿಲ್ಲೆಂದು ನಿಶ್ಚಯವಾಗಿ ಹೇಳಬಹುದು. ಏಕೆಂದರೆ ಬಾದಾಮಿ ಚಾಳುಕ್ಯರಲ್ಲಿ ಜಗದೇಕಮಲ್ಲ, ತ್ರಿಭುವನಮಲ್ಲ ಮುಂತಾದ ಹೆಸರುಗಳಿದ್ದಿಲ್ಲ; ಆದರೆ ಕಲ್ಯಾಣದ ಚಾಳುಕ್ಯರೊಳಗೆ ಈ ಹೆಸರುಗಳಿರುತ್ತವೆ. ಶಕ ೭೩೫ರಲ್ಲಿ ಬಲವರ್ಮನ ಮೊಮ್ಮಗನೂ ಯಶೋವರ್ಮನ ಮಗನೂ ಆದ ವಿಮಲಾದಿತ್ಯನೆಂಬೊಬ್ಬ ಚಾಳುಕ್ಯನು ಕುನುಂಗಿ ದೇಶವನ್ನು ಆಳುತ್ತಿದ್ದನೆಂದು ಮೈಸೂರು ಸಂಸ್ಥಾನದ ಕಡಬದ ಶಾಸನದಲ್ಲಿ ಬರೆದಿರುತ್ತದೆ*. ಈ ಮೂವ್ವರ ಹೆಸರುಗಳು ಕಲ್ಯಾಣದ ಚಾಳುಕ್ಯರ ವಂಶವೃಕ್ಷದಲ್ಲಿ ಕಂಡುಬರುವುದಿಲ್ಲ. ರಾಷ್ಟ್ರಕೂಟರ ಕಾಲದಲ್ಲಿ ಮತ್ತೊಂದು ಚಾಳುಕ್ಯ ಮನೆತನವು ಧಾರವಾಡ ಜಿಲ್ಲೆಗೆ ಸೇರಿದ ಜೋಳದ ನಾಡಿನಲ್ಲಿ ಆಳುತ್ತಿತ್ತು. ಪ್ರಸಿದ್ಧ ಕನ್ನಡ ಕವಿಯಾದ ಆದಿಪಂಪನು ಈ ಮನೆತನದ ವೀರನಾದ **ಅರಿಕೇಸರಿ** ಎಂಬವನ ಆಶ್ರಯದಲ್ಲಿ ತನ್ನ ಭಾರತ ಅಥವಾ ವಿಕ್ರಮಾರ್ಜುನ ವಿಜಯವೆಂಬ ಗ್ರಂಥವನ್ನು ಶಕ ೮೬೩ರಲ್ಲಿ ಬರೆದನು. ಈ ಪಂಪನು ತನ್ನ ಒಡೆಯನ ವಂಶಾವಳಿಯನ್ನು ಕೆಳಗೆ ಬರೆದಂತೆ ಕೊಡುತ್ತಾನೆ:—

೧. ಯುದ್ಧಮಲ್ಲ
|
೨. ಅರಿಕೇಸರಿ
|
೩. ನರಸಿಂಹ
|

* ಕರ್ನಾಟಕ ಸಾಮ್ರಾಜ್ಯ, ಸಂ. ೧, ಭಾ. ೨, ಅ. ೩, ಪು. ೩೦೪.

೪. ದುಗ್ಧಮಲ್ಲ
|
೫. ಬಡ್ಡಿಗ
|
೬. ಯುದ್ಧಮಲ್ಲ
|
೭. ನರಸಿಂಹ
|
೮. ಅರಿಕೇಸರಿ

ಈ ಎಂಟು ಮಂದಿ ಚಾಳುಕ್ಯ ಅರಸರ ಹೆಸರುಗಳಲ್ಲಿ ಒಂದಾದರೂ ಕಲ್ಯಾಣದ ಚಾಳುಕ್ಯರ ವಂಶಾವಳಿಯಲ್ಲಿ ಕಂಡುಬರುವುದಿಲ್ಲ.

ಶ್ರೀಮಚ್ಛಂಕರಾಚಾರ್ಯರ ಪಟ್ಟ ಶಿಷ್ಯರಾದ ಸುರೇಶ್ವರಾಚಾರ್ಯರ ಒಬ್ಬ ಸರ್ವಜ್ಞಾತ್ಮನೆಂಬ ಶಿಷ್ಯನು ಮನುವಂಶದ ಕ್ಷತ್ರಿಯ ಕುಲದ ಅನುಲ್ಲಂಘನೀಯ ಶಾಸನನಾದ ಒಬ್ಬ **ಆದಿತ್ಯ**ನೆಂಬ ಅರಸನು ಪೃಥ್ವಿಯನ್ನು ಆಳುತ್ತಿರುವಾಗ, ತನ್ನ 'ಸಂಕ್ಷೇಪ ಶಾರೀರಕ'ವೆಂಬ ವೇದಾಂತ ಗ್ರಂಥವನ್ನು ಬರೆದೆನೆಂದು ಆ ಗ್ರಂಥದ ಕೊನೆಯಲ್ಲಿ ಬರೆದಿರುತ್ತಾನೆ*. ಇನ್ನು ಬಾದಾಮಿ ಚಾಳುಕ್ಯರೊಳಗೆ ೫ ಮಂದಿ ಸಾರ್ವಭೌಮರು ತಮ್ಮ ಹೆಸರಿನಲ್ಲಿ ಆದಿತ್ಯ ಎಂಬ ಶಬ್ದವುಳ್ಳವರಾಗಿದ್ದರು:- ೧. ಆದಿತ್ಯವರ್ಮ, ೨. ಮೊದಲನೆಯ ವಿಕ್ರಮಾದಿತ್ಯ, ೩. ವಿನಯಾದಿತ್ಯ, ೪. ವಿಜಯಾದಿತ್ಯ, ೫. ಎರಡನೆಯ ವಿಕ್ರಮಾದಿತ್ಯ. ಪಾಶ್ಚಿಮಾತ್ಯ ಪಂಡಿತರು ಮಾಡಿದ ಕಾಲನಿರ್ಣಯವು ಸರಿಯಾಗಿದ್ದರೆ, ಶ್ರೀಮಚ್ಛಂಕರಾಚಾರ್ಯರು ಶಕ ೭೧೦–೭೪೨ರ ವರೆಗೆ ಇದ್ದಿರಬಹುದು. ಆದ್ದರಿಂದ ಅವರ ಶಿಷ್ಯನ ಶಿಷ್ಯನಾದ ಸರ್ವಜ್ಞಾತ್ಮನು ಸುಮಾರು ಶಕ ೮೦೦ರಲ್ಲಿ ಇದ್ದಿರಬಹುದು. ಆದರೆ ಈ ಪಾಶ್ಚಿಮಾತ್ಯರ ಊಹೆಯು ಶುದ್ಧ ತಪ್ಪು. ಏಕೆಂದರೆ, ಮೇಲೆ ಕೊಟ್ಟ ಸಾರ್ವಭೌಮರೊಳಗಿನ ಕಡೆಯವನಾದ

---

*ಶ್ರೀ ದೇವೇಶ್ವರ ಪಾದಪಂಕಜ ರಜಃ ಸಂಪರ್ಕ ಪೂತಾಶಯಃ।
ಸರ್ವಜ್ಞಾತ್ಮಗಿರಾಂಕಿತೋ ಮುನಿವರಃ ಸಂಕ್ಷೇಪಶಾರೀರಕಂ ॥
ಚಕ್ರೇ ಸಜ್ಜನ ಬುದ್ಧಿವರ್ಧನಮಿದಂ ರಾಜನ್ಯವಂಶೇ ನೃಪೇ।
ಶ್ರೀಮತ್ಯಕ್ಷತ ಶಾಸನೇ ಮನುಕುಲಾದಿತ್ಯೇ ಭುವಂ ಶಾಸತಿ ॥

೨ನೆಯ ವಿಕ್ರಮಾದಿತ್ಯನ ಆಳಿಕೆಯು ಶಕ ೬೬೯ರಲ್ಲಿ ಮುಗಿದುದರಿಂದ ಸರ್ವಜ್ಞಾತ್ಮನು ಹೇಳುವ ಆದಿತ್ಯನು ಬಾದಾವಿ ಚಾಳುಕ್ಯ ಸಾರ್ವಭೌಮನೇ ಆಗಿದ್ದರೆ, ಶ್ರೀಮಚ್ಛಂಕರಾಚಾರ್ಯರ ಕಾಲವು ೫ನೆಯ ಅಥವಾ ೬ನೆಯ ಶತಮಾನವಾಗಿರಬೇಕೆಂದು ಧಾರಾಳವಾಗಿ ಹೇಳಬಹುದು.

ವಿರಜಿಯ ೯೪೬ನೆಯ ಶಕದ ಜಯಸಿಂಹನ ಶಾಸನದಲ್ಲಿ ೨ನೆಯ ಕೀರ್ತಿವರ್ಮ ತೈಲಪರ ನಡುವೆ ಕೆಳಗೆ ಬರೆದಂತೆ ೬ ಜನ ಅರಸರ ಹೆಸರುಗಳಿರುತ್ತವೆ:—




ಮೇಲೆ ಕೊಟ್ಟ ಶ್ರೀಮಚ್ಛಂಕರಾಚಾರ್ಯರ ಕಾಲನಿರ್ಣಯವು ಸರಿಯಾಗಿದ್ದರೆ ೨ನೆಯ ಕೀರ್ತಿವರ್ಮನ ತರುವಾಯ ೩ನೆಯ ಅರಸನಾದ ವಿಕ್ರಮಾದಿತ್ಯನು ಸರ್ವಜ್ಞಾತ್ಮನು ಹೇಳಿದ ಚಾಳುಕ್ಯ ಅರಸನಾಗಬಹುದು. ಆದರೆ ಈ ವಿಕ್ರಮಾದಿತ್ಯನು ಸಾಮಂತನೇ ಹೊರತು ಸಾರ್ವ

ಭೌಮನಾಗಲಾರನು. ಆದ್ದರಿಂದ ಅನುಲ್ಲಂಘನೀಯ ಶಾಸನವೆಂಬ ವರ್ಣನೆಯು ಇವನಿಗೆ ಎಷ್ಟು ಮಾತ್ರವೂ ಸಲ್ಲದು. ಆದಕಾರಣ ಆದಿ ಶಂಕರಾಚಾರ್ಯರ ಕಾಲವು ಶಕೆ ೭೧೦ಕ್ಕಿಂತ ಮೊದಲೇ ಆಗಿರಲಿಕ್ಕೆ ಬೇಕು*.

(ಇ) ಈ ವಿಷಯವನ್ನು ಕುರಿತು ಡಾ॥ ಫ್ಲೀಟರು ಬರೆಯುವುದೇ ನಂದರೆ:—ಈ ಮೇರೆಗೆ ತೈಲಪನು ಚಾಲುಕ್ಯ ಅಥವಾ ಚಲುಕ್ಯ ಎಂದು ಕರೆಯಲ್ಪಡುವ ಬಾದಾವಿ ಚಾಳುಕ್ಯರ ಸರಳವಂಶದವರದೊಂದು ಅರಸುಮನೆತನವನ್ನು ಸ್ಥಾಪಿಸಿದನು. ನಮಗೆ ದೊರೆತ ಯಾವ ಶಾಸನದಲ್ಲಿಯೂ ಬಾದಾವಿ ಮನೆತನದ ಕೊನೆಯ ಚಕ್ರವರ್ತಿಯಾದ ೨ನೆಯ ಕೀರ್ತಿವರ್ಮನಿಗೆ ಗಂಡುಮಕ್ಕಳಿದ್ದ ಉಲ್ಲೇಖವಿಲ್ಲ. ಬಾದಾವಿ ಕಲ್ಯಾಣ ಮನೆತನಗಳ ಐತಿಹ್ಯ ಸಂಬಂಧವನ್ನು ೧೦೦೯ನೆಯ ಇಸ್ವಿಯ ಕೌಠೆಮ್ಮದ ಶಾಸನವು ತೋರಿಸುತ್ತದೆ. ಆದ್ದರಿಂದ ಅದರಲ್ಲಿ ಕೊಟ್ಟ ವಂಶವೃಕ್ಷವನ್ನು ಕೆಳಗೆ ಕೊಡುತ್ತೇವೆ:—

ಸತ್ಯಾಶ್ರಯ ಸಮಸ್ತ ಭುವನಾಶ್ರಯ
ವಿಜಯಾದಿತ್ಯ
(೬೯೬–೭೩೩)

| | |
|---|---|
| ಸತ್ಯಾಶ್ರಯ ೨ನೆಯ ವಿಕ್ರಮಾದಿತ್ಯ (೭೩೩–೭೪೭) | ೧ನೆಯ ಭೀಮ |
| ಸತ್ಯಾಶ್ರಯ ನೃಪಸಿಂಹ ೨ನೆಯ ಕೀರ್ತಿವರ್ಮ (೭೪೭–೭೫೭) | ೩ನೆಯ ಕೀರ್ತಿವರ್ಮ |
| | ೧ನೆಯ ತೈಲ |
| | ೩ನೆಯ ವಿಕ್ರಮಾದಿತ್ಯ |
| | ೨ನೆಯ ಭೀಮ |

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೧೧, ೨೧೨, ೨೨೯.

೧ ನೆಯ ಅಯ್ಯಣ
|
೪ ನೆಯ ವಿಕ್ರಮಾದಿತ್ಯ
|
ಆಹವಮಲ್ಲ ನೂರ್ಮಡಿ ೨ ನೆಯ ತೈಲ

ವಿಜಯಾದಿತ್ಯನ ಮರಣದಿಂದ ತೈಲಪನ ಪಟ್ಟಾಭಿಷೇಕದ ವರೆಗೆ ಅಂದರೆ ೭೩೪ರಿಂದ ೯೭೪ರ ವರೆಗೆ ೨೪೦ ವರ್ಷಗಳಾದವು. ಮೇಲೆ ಕೊಟ್ಟ ವಂಶಾವಳಿಯು ಇಷ್ಟು ಕಾಲದಲ್ಲಿ ೭ ತಲೆಗಳು ಮಾತ್ರ ಆದವೆಂದು ಹೇಳುವುದರಿಂದ ಒಂದೆರಡು ತಲೆಗಳನ್ನು ಬಿಟ್ಟಿರುತ್ತಾರೆಂದು ಊಹಿಸಬಹುದು. ಮೊದಲಿನ ೫ ಜನರ ಅಂದರೆ ೧ ನೆಯ ಭೀಮ, ೩ ನೆಯ ಕೀರ್ತಿವರ್ಮ, ೧ ನೆಯ ತೈಲ, ೩ ನೆಯ ವಿಕ್ರಮಾದಿತ್ಯ, ೨ ನೆಯ ಭೀಮ—ಇವರ ವಿಷಯವಾಗಿ ನಮಗೆ ಏನೂ ಗೊತ್ತಾಗುವುದಿಲ್ಲ. ಆದರೆ ೧ ನೆಯ ಅಯ್ಯಣನು ಒಬ್ಬ ಕೃಷ್ಣನ ಮಗಳನ್ನು ಮದುವೆಯಾಗಿ, ತನ್ನ ಮನೆತನವನ್ನು ಮುಂದಕ್ಕೆ ತಂದನೆಂದು ಶಾಸನದಲ್ಲಿ ಬರೆದಿರುತ್ತದೆ. ಈ ಕೃಷ್ಣನು ಬಹುಶಃ ರಾಷ್ಟ್ರಕೂಟ ೨ ನೆಯ ಕೃಷ್ಣನೇ ಆಗಿರಬಹುದು. ಅಯ್ಯಪದೇವನೆಂಬವನು ಪಲ್ಲವ ಅರಸನಾದ ವೀರಮಹೇಂದ್ರನ ದಳವಾಯಿಯಾಗಿದ್ದನೆಂತಲೂ ಅವನು ಗಂಗರಸನಾದ ಎರೆಯಪ್ಪನೊಡನೆ ಕಾದಿ ಕಾಳೆಗದಲ್ಲಿ ಮಡಿದನೆಂತಲೂ ಬೇಗೂರಿನ ಶಾಸನದಲ್ಲಿ ಬರೆದಿರುತ್ತದಷ್ಟೇ. ಈ ಅಯ್ಯಪದೇವನು ಚಾಳುಕ್ಯ ಅಯ್ಯಣನಾಗಿದ್ದರೆ, ಅವನು ಸುಮಾರು ೯೩೫ರಲ್ಲಿದ್ದನೆಂದು ಹೇಳಬಹುದು. ಆದರೆ ರಾಯಿಸ ಸಾಹೇಬರು ಅಯ್ಯಪದೇವನು ಪಲ್ಲವನಾಗಿದ್ದನೆಂದು ಅಭಿಪ್ರಾಯಪಡುವುದರಿಂದ ಇದು ವಾದಗ್ರಸ್ತ ವಿಷಯವಾಗುತ್ತದೆ. ೪ ನೆಯ ವಿಕ್ರಮಾದಿತ್ಯನು ಕಳಚುರಿ ಮನೆತನದ ಬೊಂಥಾದೇವಿಯೆಂಬುವಳನ್ನು ಮದುವೆಯಾಗಿದ್ದನು. ಈಕೆಯು ತಿವಾರ ಅಥವಾ ತ್ರಿಪುರದ ಅರಸನಾದ ೧ ನೆಯ ಕೊಕ್ಕಲನ ಮೊಮ್ಮಗನಾದ ಲಕ್ಷ್ಮಣನೆಂಬವನ ಮಗಳಾಗಿದ್ದಳು.

ಬೆಳಗಾವಿ ಜಿಲ್ಲಾ ಕೋಟೂರಿನ ಶಾಸನವು ೧೦ ನೆಯ ಶತಮಾನದ್ದೇ ಆಗಿರಬಹುದು. ಅದರಲ್ಲಿ ಶಂಭು ಎಂಬೊಬ್ಬ ಶೈವನು ಕೈಲಾಸಕ್ಕೆ

ಹೋಗಬೇಕೆಂಬ ಉದ್ದೇಶದಿಂದ ಅಗ್ನಿಪ್ರವೇಶಮಾಡಿ ಪ್ರಾಣಬಿಟ್ಟ ನೆಂದು ಬರೆದಿದೆ. ಅದೇ ಶಿಲಾಲೇಖದಲ್ಲಿ ಪರಹಿತರಾಜನೆಂಬ ಒಬ್ಬ ಚಾಳುಕ್ಯ ಸಾಮಂತನ ಹೆಸರು ಅಥವಾ ಬಿರುದು ಕಂಡುಬರುತ್ತದೆ. ೮೧೩ರ ಕಡಬದ ಶಿಲಾಲೇಖದಲ್ಲಿ ಬಲವರ್ಮನ ಮೊಮ್ಮಗನೂ ಯಶೋ ವರ್ಮನ ಮಗನೂ ಕುನಿಂಗಲ ದೇಶದ ಅಧಿಪತಿಯೂ ಆದ ವಿಮಲಾದಿತ್ಯನೆಂಬ ಒಬ್ಬ ಚಾಳುಕ್ಯ ಅರಸನ ಹೆಸರು ಇರುತ್ತದೆ. ಮೈಸೂರ ಸಂಸ್ಥಾನ ವರುಣದ ಶಾಸನದಲ್ಲಿ ಗಾವಿಲಬ್ಬರಸಿಯ ಗಂಡ ನಾದ ನರಸಿಂಹನೆಂಬೊಬ್ಬ ಚಾಳುಕ್ಯ ಮಹಾಸಾಮಂತನ ಹೆಸರು ಬಂದಿದೆ. ಗೊಗ್ಗಿ ಅಥವಾ ಗುಗ್ಗನೆಂಬ ಒಬ್ಬ ಚಾಳುಕ್ಯ ಮಹಾ ಸಾಮಂತನು ಮೈಸೂರು ನಾಡಿನಲ್ಲಿ ಆಳುತ್ತಿದ್ದನೆಂತಲೂ ಪೊಲುಕೇಸಿ, ಬೂದಿಗ ಎಂಬಿಬ್ಬರ ಕಡಿದಾಟದಲ್ಲಿ ಅವನೊಬ್ಬ ಅನುಯಾಯಿಯು ಸತ್ತನೆಂತಲೂ ಮೈಸೂರು ತಾಲೂಕಿನ ೩೬, ೩೭, ೩೮, ೪೧ರಿಂದ ೪೪ ನಂಬರಿನ ಶಾಸನಗಳು ಹೇಳುತ್ತವೆ. ಇದಲ್ಲದೆ ೯೦೩ರಲ್ಲಿ ಹುಟ್ಟಿದ ಕರ್ನಾಟಕದ ಪ್ರಸಿದ್ಧ ಕವಿಯಾದ ಆದಿಪಂಪನು ೯೪೧ರಲ್ಲಿ ಬರೆದ ತನ್ನ 'ವಿಕ್ರಮಾರ್ಜುನ ವಿಜಯ'ವೆಂಬ ಗ್ರಂಥದಲ್ಲಿ ತನ್ನ ಯಜಮಾನನಾದ ೨ನೆಯ ಅರಿಕೇಸರಿಯ ಪೂರ್ವಜರ ವೃತ್ತಾಂತವನ್ನು ಕೆಳಗೆ ಬರೆದಂತೆ ಕೊಡುತ್ತಾನೆ:—

(೧) ಚಾಳುಕ್ಯಮನೆತನದ ೧ನೆಯ ಯುದ್ಧಮಲ್ಲನು ಸಪಾದಲಕ್ಷ (೧,೨೫,೦೦೦) ನಾಡನ್ನು ಆಳುತ್ತಿದ್ದನು. (೨) ಅವನ ಮಗನಾದ ೧ನೆಯ ಅರಿಕೇಸರಿಯು ಬಂಗಿರಿಷಯ(ವೆಂಗಿವಿಷಯ?)ದ ಮಂತ್ರಿ ಗಳನ್ನು ಕೂಡಿಕೊಂಡು, ನಿರುಪಮದೇವನೆಂಬವನ ರಾಜ್ಯವನ್ನೊಳ ಸುಗ್ಗಿದನು. (೩) ಅವನ ಮಗನು ನರಸಿಂಹಭದ್ರದೇವನು. (೪) ಅವನ ಮಗನು ದುಗ್ಧಮಲ್ಲನು. (೫) **ಸೋಲದಗಂಡ**ನೆಂಬ ಬಿರು ದುಳ್ಳ ಅವನ ಮಗನಾದ ಬದ್ದೆಗನು ನೀರೊಳಗಿದ್ದ ಮೊಸಳೆಯನ್ನು ಹಿಡಿಯುವಂತೆ ಸೊಕ್ಕಿನಿಂದ ಭೀಮನನ್ನು ಹಿಡಿದನು. (೬) ಅವನ ಮಗನು ೨ನೆಯ ಯುದ್ಧಮಲ್ಲನು. (೭) ಅವನ ಮಗನಾದ ನರಸಿಂಹ ನೆಂಬವನಿಗೆ ಸುಭದ್ರುಮುನಿಯೆಂಬವನು ಗುರುವಾಗಿದ್ದನು. ಅವನು

ಎರಪನೆಂಬವನಿಗೆ ಒಂದು ಪ್ರಾಂತವನ್ನು ಕೊಟ್ಟುದಲ್ಲದೆ, ಏಳು ಮಾಲಲ (?)ಗಳ ಮುಖ್ಯಸ್ಥರನ್ನು ಹತ್ತಿಕ್ಕಿ, ಗುರ್ಜರ ರಾಜನನ್ನು ಸೋಲಿಸಿ, ಮಹಿಪಾಲನೆಂಬ ಅರಸನನ್ನು ಗೆದ್ದು, ಗಂಗೆಯ ಸಂಗಮದಲ್ಲಿ ತನ್ನ ಕುದುರೆಗಳ ಮೆಯ್ತೊಳೆದನು. (೮) ಕವಿಗೆ ಆಶ್ರಯಕೊಟ್ಟ ೨ನೆಯ ಅರಿಕೇಸರಿಯು ಈ ಯುದ್ಧಮಲ್ಲ ಅವನ ಹೆಂಡತಿ ಚಂದ್ರಾಸನೆ ಇವರಿಬ್ಬರ ಮಗನು. ಇವನ ರಾಜ್ಯಕ್ಕೆ ಬೆಳ್ವೊಳು ನಾಡೆಂಬ ಹೆಸರು. ಇವನು ಗೊಜ್ಜಿಗ ಅಥವಾ ಗುಜ್ಜಿಗ ಎಂಬ ಅರಸಿನ ಸಿಟ್ಟಿಗೆ ಗುರಿಯಾದ ವಿಜಯಾದಿತ್ಯನೆಂಬವನನ್ನು ಕಾಪಾಡಿದ್ದಲ್ಲದೆ, ತನ್ನ ಸ್ತುತಿಪರವಾಗಿ ಬರೆದ 'ವಿಕ್ರಮಾರ್ಜುನ ವಿಜಯ'ವೆಂಬ ಮಹಾಕಾವ್ಯವನ್ನು ಬರೆದ ಆದಿಪಂಪನಿಗೆ ಬಚ್ಚೆಸಾಸಿರದಲ್ಲಿದ್ದ ಧರ್ಮಪುರವೆಂಬ ಗ್ರಾಮವನ್ನು ಇನಾಮಾಗಿ ಕೊಟ್ಟನು.

ಇನ್ನು ಈ ವರ್ಣನೆಯಲ್ಲಿ ಬಂದ ಹೊರಗಿನ ಹೆಸರುಗಳ ಬಗ್ಗೆ ವಿಚಾರಮಾಡುವಾ. ಗೊಜ್ಜಿಗ ಅಥವಾ ಗುಜ್ಜಗನು ರಾಷ್ಟ್ರಕೂಟ ಸಾರ್ವಭೌಮನಾದ ಸುವರ್ಣವರ್ಷ ೪ನೆಯ ಗೋವಿಂದನಾಗಿದ್ದನು (೯೧೮-೯೩೩). ವಿಜಯಾದಿತ್ಯನು ಪೂರ್ವ ಚಾಳುಕ್ಯ ಮನೆತನದ ಕೊಲ್ಲಬಿಗಂನೆವೆಂಬ ಬಿರುದುಳ್ಳ ೪ನೆಯ ವಿಜಯಾದಿತ್ಯನಾಗಿದ್ದನು (೯೧೮). ಎರಪನು ಮೊದಲನೆಯ ಅಯ್ಯಪದೇವ-ಅಯ್ಯಣನ ಸಂಬಂಧದಿಂದ ಹೇಳಿದ ಗಂಗರಸನಾದ ಎರೆಯಪ್ಪನಾಗಿರಬಹುದು. ಭೀಮನು ಪೂರ್ವ ಚಾಳುಕ್ಯ ಮನೆತನದ ೧ನೆಯ ಭೀಮನಾಗಿದ್ದನು (೮೮೮-೯೧೮). ತಲಾಂತರಮಾನದಿಂದ ಎಣಿಸಿದರೆ, ೮೦೪ಕ್ಕಿಂತ ತುಸು ಮೊದಲಿದ್ದ ಕಲಿವಲ್ಲಭ ನಿರುಪಮ ಧಾರಾವರ್ಷ ಧ್ರುವನೇ (೭೮೪-೭೯೪) ನಿರುಪಮದೇವನಾಗಿರಬಹುದು. ಈ ಗೊತ್ತುಪಡೆಗಳಿಂದ (Identifications) ಪಂಪನು ಕೊಟ್ಟ ವಂಶಾವಳಿಯು ಸರಿಯಾದ್ದೆಂದು ಹೇಳಬಹುದು. ಇದಲ್ಲದೆ ಆದಿಪಂಪನು ಪುಲಿಗೆರೆ(ಲಕ್ಷ್ಮೇಶ್ವರ)ಯ ತಿರುಳ್ಗನ್ನಡದಲ್ಲಿ ಬರೆಯುತ್ತೇನೆಂದು ಹೇಳಿಕೊಳ್ಳುವುದರಿಂದ ಗದಗ ತಾಲೂಕಿನಲ್ಲಿದ್ದ ಡಂಬಳವೇ ಅವನು ಹೆಸರುಗೊಂಡ ಧರ್ಮಪೂರಾಗಿತ್ತೆಂದು ನಿಶ್ಚಯವಾಗಿ ಹೇಳಬಹುದು. ಏಕೆಂದರೆ ೧೦೯೫ ನೆಯ ಇಸ್ವಿಯ

ಒಂದು ಶಾಸನದಲ್ಲಿ ಡಂಬಳವನ್ನು ಧರ್ಮಪುರ ಅಥವಾ ಧರ್ಮವೊಳ ಲೆಂದು ಕರೆದಿರುತ್ತಾರೆ*. ಆದರೆ ಬಚ್ಚೆಸಾಸಿರದ ವಿಸ್ತಾರವು ಗೊತ್ತಾಗುವುದಿಲ್ಲ. ಆದರೂ ಡಂಬಳವು ೨ನೆಯ ಅರಿಕೇಸರಿಯ ನಾಡಿಗೆ ಸೇರಿತ್ತೆಂದು ಹೇಳಬಹುದು.

ಇನ್ನೂ ಒಂದು ಬಲು ಬಿಕ್ಕಟ್ಟಿನ ಪ್ರಶ್ನವು ಉಳಿಯಿತು. ಆದಿಪಂಪನು ಹೇಳುವ ೧ನೆಯ ಯುದ್ಧಮಲ್ಲನು ಬಾದಾವಿ ಚಾಳುಕ್ಯ ಸಾರ್ವಭೌಮರೊಳಗೆ ಯಾವನಾಗಿದ್ದನೆಂಬುದೇ ಈ ಪ್ರಶ್ನವು. ಆದಿಪಂಪನು ವೆಂಗಿಮಂಡಲದಲ್ಲಿ ಹುಟ್ಟಿದವನಾದ್ದರಿಂದ ಯುದ್ಧಮಲ್ಲನು ವೆಂಗಿಯ ಅರಸರೊಳಗೊಬ್ಬನು ಆಗಿರಬಹುದೆಂದು ಕಲ್ಪಿಸಿದರೆ, ಆ ಕಲ್ಪನೆಯು ಸರಿಯಾಗಲಾರದು. ಏಕೆಂದರೆ, ೯೨೫ರ ವರೆಗೆ ಆದ ವೆಂಗಿಮಂಡಲದ ಅರಸರೊಳಗೆ ಒಬ್ಬನಿಗಾದರೂ ಯುದ್ಧಮಲ್ಲನೆಂಬ ಬಿರುದಿದ್ದಿಲ್ಲ. ಆದಿಪಂಪನು ೨ನೆಯ ಅರಿಕೇಸರಿಯ ಆಶ್ರಯದಲ್ಲಿದ್ದುದರಿಂದ ಯುದ್ಧಮಲ್ಲನು ಬಾದಾವಿ ಚಾಳುಕ್ಯ ಸಾರ್ವಭೌಮರೊಳಗೊಬ್ಬನಾಗಿದ್ದನೆಂದು ಕಲ್ಪಿಸಿದರೂ ಅದೇ ತರದ ತೊಂದರೆಯು ಮುಂದರಿಸುತ್ತದೆ. ಕೌಠೆಮ್ಮದ ಶಾಸನದಲ್ಲಿ ಸತ್ಯಾಶ್ರಯ ವಿನಯಾದಿತ್ಯನ ಬದಲು ಯುದ್ಧಮಲ್ಲನ ಹೆಸರು ಕಂಡುಬರುತ್ತದೆ. ಈ ಬದಲಾವಣೆಗೆ ವಿರುದ್ಧವಾದ ೩ ಕಾರಣಗಳಿರುತ್ತವೆ:—(೧) ವಿನಯಾದಿತ್ಯನಿಗೆ ಯುದ್ಧಮಲ್ಲನೆಂದು ಮತ್ತಾವ ಶಾಸನದಲ್ಲಿಯೂ ಬರೆದಿಲ್ಲ; (೨) ವಿನಯಾದಿತ್ಯನು ೬೮೦ರಿಂದ ೬೯೬ರ ವರೆಗೆ ಆಳಿದ ಕಾರಣ ತಲಾಂತರಮಾನದಿಂದ ಅವನು ಬಹಳ ಹಳಬನಾಗುತ್ತಾನೆ; (೩) ಆದಿಪಂಪನ ನಿರುಪಮದೇವ, ಕಲಿವಲ್ಲಭ ನಿರುಪಮ ಧಾರಾವರ್ಷ ಧ್ರುವ ಇವರಿಬ್ಬರ ಗೊತ್ತುಪಡೆಯು ಕೌಠೆಮ್ಮ ಶಾಸನದ ಬದಲಾವಣೆಯನ್ನು ಅಲ್ಲಗಳೆಯುತ್ತದೆ. ಆದ್ದರಿಂದ ಆದಿಪಂಪನು ಕೊಟ್ಟ ೨ನೆಯ ಅರಿಕೇಸರಿಯ ವಂಶಾವಳಿಯು ಸರಿಯಾಗಿದ್ದರೂ ಅದನ್ನು ಬಾದಾವಿ ಚಾಳುಕ್ಯ ವಂಶಾವಳಿಗಾಗಲಿ ವೆಂಗಿಯ ಚಾಳುಕ್ಯ ವಂಶಾವಳಿಗಾಗಲಿ

---

* ಧರ್ಮವೊಳಲ್ = ಧಮ್ಮೊಳಲ್, ಧಂಬೊಳ = ಡಂಬಳ.

ಹೇಗೆ ಕೂಡಿಸಬೇಕೆಂಬುದು ನಮಗೆ ತಿಳಿಯುಲೊಲ್ಲದೆಂದು ಡಾ॥ ಫ್ಲೀಟರು ಬರಯುತ್ತಾರೆ*.

(ಉ) ಪ್ರಸಿದ್ಧ ಇತಿಹಾಸಕಾರರಾದ ವಿನ್ಸೆಂಟ ಎ. ಸ್ಮಿಥರು ಬಾದಾಮಿ ಕಲ್ಯಾಣ ಚಾಳುಕ್ಯರ ಸಂಬಂಧವನ್ನು ತೋರಿಸುವ ಗೋಜಿಗೆ ಹೋಗದೆ, ತೈಲನು ಬಾದಾಮಿ ಚಾಳುಕ್ಯ ಮನೆತನಕ್ಕೆ ಸೇರಿದವನಾಗಿದ್ದ ನೆಂದು ಬರೆದುಬಿಡುತ್ತಾರೆ.

ಮೇಲೆ ಕೊಟ್ಟ ಮೂರು ಮಂದಿ ವಿದ್ವಾಂಸರ ಅಭಿಪ್ರಾಯಗಳಿಂದ ತಿಳಿಯುವುದೇನಂದರೆ:—ಕಲ್ಯಾಣದ ಚಾಳುಕ್ಯರು ಬಾದಾಮಿ ಚಾಳುಕ್ಯರ ವಂಶದವರಾಗಿದ್ದರೆಂಬುದಕ್ಕೆ ಸಂದೇಹವಿಲ್ಲದಿದ್ದರೂ ಅವರು ಯಾವ ಬಾದಾಮಿ ಚಾಳುಕ್ಯ ಸಾರ್ವಭೌಮನ ವಂಶದವರಾಗಿದ್ದರೆಂದು ನಿರ್ಣಯಿಸಲಿಕ್ಕೆ ಅಡಚಣಗಳು ಬರುತ್ತವೆ. ಡಾ॥ ಭಾಂಡಾರಕರರು ಕೊಟ್ಟ ಮಿರಜಿಯ ಶಾಸನದ ವಂಶಾವಳಿಯನ್ನು ಡಾ॥ ಫ್ಲೀಟರು ಕೊಟ್ಟ ಕೌಠೆಮ್ಮದ ಶಾಸನದ ವಂಶಾವಳಿಗೆ ಹೊಂದಿಸಿ ನೋಡಿದರೆ, ಒಂದೆರಡು ವ್ಯತ್ಯಾಸಗಳು ಕಂಡುಬರುತ್ತವೆ. ಕೌಠೆಮ್ಮದ ಶಾಸನವು ಮಿರಜಿಯ ಶಾಸನಕ್ಕಿಂತ ತುಸು ಹಳೆಯದು. ಅದರಲ್ಲಿ ವಿಜಯಾ ದಿತ್ಯನ ಕಿರಿಮಗನ ಹೆಸರು ಭೀಮನೆಂದು ಸ್ಪಷ್ಟವಾಗಿ ಬರೆದಿರುತ್ತದೆ. ಮಿರಜಿಯ ಶಾಸನದಲ್ಲಿ ವಿಕ್ರಮಾದಿತ್ಯನ ತರುವಾಯ ಅಯ್ಯಣನ ಹೆಸರಿದ್ದು, ಕೌಠೆಮ್ಮದ ಶಾಸನದಲ್ಲಿ ಆ ಎರಡು ಹೆಸರುಗಳ ನಡುವೆ ೨ನೆಯ ಭೀಮನ ಹೆಸರಿರುತ್ತದೆ.

ಮೇಲೆ ಹೇಳಿದ ಎರಡು ಶಾಸನಗಳಲ್ಲದೆ, ಮೈಸೂರ ಸಂಸ್ಥಾನ ದಾವಣಗೆರೆಯಲ್ಲಿದ್ದ ಆಂಜನೇಯ ಗುಡಿಯ ಕಯ್ಸಾಲೆಯ ಪಡವಣ ಗೋಡೆಗೆ ನಟ್ಟಿರುವ ಒಂದು ಬರಹಗಲ್ಲು ಈ ಎರಡೂ ಚಾಳುಕ್ಯ ಮನೆ ತನದ ವಂಶಾವಳಿಯನ್ನು ಕೊಡುತ್ತದೆ†. ಇದನ್ನು ೧೧೨೩ರಲ್ಲಿ ತ್ರಿಭುವನಮಲ್ಲ ವಿಕ್ರಮಾದಿತ್ಯನು (೬ನೆಯ ವಿಕ್ರಮಾದಿತ್ಯ ೧೦೭೬–೧೧೨೬) ಕೊರೆಯಿಸಿದನೆಂದು ಮೆ॥ ಲುಯಿರಾಯಿಸರು ಅಭಿಪ್ರಾಯ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೩೭೮–೩೮೧.

† ಕರ್ನಾಟಕ ಶಾಸನ ಸಂಗ್ರಹ, ಸಂ. ೧೧, ಪುಟ ೫೩–೫೬.

ಪಡುತ್ತಾರೆ. ಇದರಲ್ಲಿ ಕೊಟ್ಟ ವಂಶಾವಳಿಯೊಳಗೆ ೨ನೆಯ ಪುಲಿಕೇಸಿ ಯಿಂದ ತೈಲಪನ ವರೆಗೆ ಇದ್ದ ಭಾಗವನ್ನು ಕೆಳಗೆ ಕೊಡುತ್ತೇವೆ:—



ಕೌಠೆಮ್ಮದ ಶಾಸನದಲ್ಲಿ ಕೊಟ್ಟಂತೆ ಈ ದಾವಣಗೆರೆಯ ಶಾಸನದಲ್ಲಿಯಾದರೂ ವಿನಯಾದಿತ್ಯನಿಗೆ (೬೮೦-೬೯೬) ಯುದ್ಧಮಲ್ಲನೆಂಬ ಬಿರುದನ್ನು ಕೊಟ್ಟಿರುತ್ತಾರೆ. ಆದ್ದರಿಂದ ವಿನಯಾದಿತ್ಯನಿಗೆ ಯುದ್ಧಮಲ್ಲನೆಂಬ ಬಿರುದಿತ್ತೆಂದು ಹೇಳಲಿಕ್ಕೆ ಅಡ್ಡಿತೋರುವುದಿಲ್ಲ. ಕವಿ ರನ್ನನು ಇವನಿಗೆ ದುರ್ಧರಮಲ್ಲನೆಂದು ಕರೆದಿರುತ್ತಾನೆ*. ಕವಿ ರನ್ನನು ಕೊಟ್ಟ ಕಲ್ಯಾಣ ಚಾಳುಕ್ಯ ವಂಶಾವಳಿಗೆ ಈ ಶಾಸನದ ವಂಶಾವಳಿಯನ್ನು ಹೊಂದಿಸಿ ನೋಡಿದರೆ, ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ. ೨ನೆಯ ಕೀರ್ತಿವರ್ಮನ ತರುವಾಯ—೧೪. ಭೀಮಪರಾಕ್ರಮ, ೧೫. ಎರಡನೆಯ (ಮೂರನೆಯ) ಕೀರ್ತಿವರ್ಮ, ೧೬. ಪಿರಿಯ ತೈಲಪ, ೧೭. ಮುಕುಂದಿಯ ಕೊಂದ ಕುಂದಿಯ ಭೀಮ, ೧೮. ವಿಕ್ರಮಾದಿತ್ಯ, ರಣರಂಗಮಲ್ಲ, ೧೯. ಅಯ್ಯಣದೇವ, ಉತ್ತುಂಗಮಲ್ಲ ಎಂಬ ೮ ಹೆಸರುಗಳನ್ನು ಕವಿ ರನ್ನನು ಕೊಡುತ್ತಾನೆ. ಆದರೆ, ದಾವಣಗೆರಿ ಶಾಸನದಲ್ಲಿ ಕವಿ ರನ್ನನು ತೈಲನ ತರುವಾಯ ಕೊಟ್ಟ ೨ ಹೆಸರುಗಳು ಹಿಂದೆ ಮುಂದೆ ಆಗಿರುವುವಲ್ಲದೆ, ರಣರಂಗಮಲ್ಲ ಉತ್ತುಂಗಮಲ್ಲ ಎಂಬೆರಡು ಹೆಸರುಗಳು ಲೋಪಹೊಂದಿರುತ್ತವೆ. ಇವು ಬಿರುದುಗಳಿರಬಹುದೆಂದು ಎಣಿಸಿದರೆ, ಎರಡು ವಂಶಾವಳಿಗಳು ಒಟ್ಟಿನ ಮೇಲೆ ಕೂಡುತ್ತವೆಂದು ಹೇಳಬಹುದು.

ಇನ್ನು ಆದಿಪಂಪನ ೧ನೆಯ ಯುದ್ಧಮಲ್ಲನು ಯಾರಾಗಿದ್ದನೆಂಬ ಪ್ರಶ್ನವು ಹಾಗೇ ಉಳಿಯಿತು. ಡಾ॥ ಫ್ಲೀಟರು ಬರೆಯುವಂತೆ ಅವನು ವಿನಯಾದಿತ್ಯ (೬೯೬) ಆಗಲಾರನು. ಏಕೆಂದರೆ, ಈ ಯುದ್ಧಮಲ್ಲನ ಮಗನಾದ ಅರಿಕೇಸರಿಯೇ ರಾಷ್ಟ್ರಕೂಟ ನಿರುಪಮ ಧ್ರುವನ ರಾಜ್ಯವನ್ನೊಳಸುಗ್ಗಿದನೆಂದು ಆದಿಪಂಪನು ಸ್ಪಷ್ಟವಾಗಿ ಬರೆಯುತ್ತಾನೆ. ಆದ್ದರಿಂದ ಬಾದಾಮಿ ಚಾಳುಕ್ಯ ಮನೆತನದ ಕೊನೆಯ ಸಾರ್ವಭೌಮನಾದ ೨ನೆಯ ಕೀರ್ತಿವರ್ಮನನ್ನೇ ಆದಿಪಂಪನು ೧ನೆಯ ಯುದ್ಧಮಲ್ಲನೆಂದು ಕರೆದಿರಬಹುದೆಂಬ ಅನುಮಾನವನ್ನು ಮಾಡಲಿಕ್ಕೆ ಸಾಕಷ್ಟು ಆಸುವು ದೊರೆಯುತ್ತದೆ. ಏಕೆಂದರೆ ಜೈನ ಕವಿಗಳು ಪರಂಪ

* ಕರ್ನಾಟಕ ಸಾಮ್ರಾಜ್ಯ, ಸಂ. ೧, ಭಾ. ೨, ಅ. ೧, ಪು. ೧೮೭.

ರಾಗತ ಐತಿಹಾಸಿಕ ಸತ್ಯತೆಗೆ ಹೆಚ್ಚು ಲಕ್ಷ್ಯಕೊಡದೆ, ತಮ್ಮ ಕಲ್ಪನಾ ಚಾತುರ್ಯಕ್ಕೆ ಹೆಚ್ಚು ಇಂಬುಕೊಟ್ಟು, ಹೆಸರುಗಳಲ್ಲಿಯೂ ಕೃತಿಗಳಲ್ಲಿಯೂ ಮನಸ್ಸಿಗೆ ಬಂದಂತೆ ಬದಲಾವಣೆಗಳನ್ನು ಮಾಡಿರುತ್ತಾರೆಂಬ ಮಾತು ಪಂಪ ಭಾರತ, ಪಂಪ ರಾಮಾಯಣಗಳನ್ನು ಓದಿದವರ ಮನವರಿಕೆ ಆಗಿರಬಹುದು. ಪಂಪ ರಾಮಾಯಣದ ರಾಮನು ವಾಲ್ಮೀಕಿಯ ರಾಮನಲ್ಲ, ಲಕ್ಷ್ಮಣನು ವಾಲ್ಮೀಕಿಯ ಲಕ್ಷ್ಮಣನಲ್ಲ. ಕುರುಕ್ಷೇತ್ರದ ಯುದ್ಧ ಮುಗಿದ ಬಳಿಕ ಧರ್ಮರಾಜನು ಪಟ್ಟವೇರದೆ, ಅರ್ಜುನನು ಪಟ್ಟವೇರಿದನು !! ಆದಕಾರಣ ಮೇಲಿನ ನನ್ನ ಅನುಮಾನಕ್ಕೆ ಬೇರೆ ಯಾವ ಆಧಾರವು ಇನ್ನೂ ದೊರೆಯದಿದ್ದರೂ ಈ ಅನುಮಾನವನ್ನು ಗ್ರಹಿಸಿದರೆ, ಆದಿಪಂಪನು ವರ್ಣಿಸಿದ ಮುಂದಿನ ಎಲ್ಲ ಕೃತಿಗಳು ಸರಿಯಾಗಿ ನಡೆದವೆಂದು ಬರೆಯಲಿಕ್ಕೆ ಅಡ್ಡಿ ಇಲ್ಲ.

ಆದಿಪಂಪನ ಆಶ್ರಯದಾತನಾದ ೨ ನೆಯ ಅರಿಕೇಸರಿಯ ಪೂರ್ವಜರೊಳಗೆ ಕೆಲವರು ತಮ್ಮ ಮನೆತನದ ಹಗೆಗಳಾದ ರಾಷ್ಟ್ರಕೂಟರೊಡನೆ ಕಾದಿದರು. ಮತ್ತೆ ಕೆಲವರು ಅವರ ಸಾಹಾಯಕರಾಗಿ ಅವರ ದಿಗ್ವಿಜಯಕ್ಕೆ ನೆರವಾದರು. ೨ ನೆಯ ಅರಿಕೇಸರಿಯಂತೂ ರಾಷ್ಟ್ರಕೂಟ ೪ ನೆಯ ಗೋವಿಂದ(ಗೊಜ್ಜಿಗ)ನ ವಿರೋಧಿಯಾದ ವೆಂಗಿಯ ವಿಜಯಾದಿತ್ಯನ ಬೆನ್ನುಕಟ್ಟಿ, ಆ ಗೊಜ್ಜಿಗನನ್ನು ಪಟ್ಟದಿಂದ ತಳ್ಳಿ ಅಥವಾ ಕೊಲ್ಲಿಸಿ, ತನಗೆ ಶರಣುಬಂದ ಬಡ್ಡೆಗದೇವನನ್ನು ಮಳಖೇಡದ ಪಟ್ಟದ ಮೇಲೆ ಕೂಡ್ರಿಸಿದನು. ಆದರೆ, ಇವನಾಗಲಿ ಇವನ ಮಕ್ಕಳು ಮೊಮ್ಮಕ್ಕಳಾಗಲಿ ರಾಷ್ಟ್ರಕೂಟರ ಸಾಮ್ರಾಜ್ಯವನ್ನು ಸೆಳೆದುಕೊಳ್ಳಲಿಲ್ಲ. ಏಕೆಂದರೆ, ಇವನ ಪೂರ್ವಜರ ಹೆಸರುಗಳು ಕಲ್ಯಾಣದ ಚಾಳುಕ್ಯರ ಪೂರ್ವಜರ ಹೆಸರುಗಳಿಂದ ತೀರ ಭಿನ್ನವಾಗಿವೆ.

ಚಾಳುಕ್ಯ ಸಾಮ್ರಾಜ್ಯವನ್ನು ಪುನಃ ಸ್ಥಾಪಿಸಿದ ತೈಲಪನು ಬಾದಾವಿ ಚಾಳುಕ್ಯ ಮನೆತನದ ಯಾವ ಶಾಖೆಗೆ ಸೇರಿದ್ದನೆಂಬ ಪ್ರಶ್ನವು ಇಲ್ಲಿ ಹುಟ್ಟುತ್ತದೆ. ಇವನು ೨ ನೆಯ ಅರಿಕೇಸರಿಯ ಶಾಖೆಗೆ ಸೇರಿದವನಾಗಿದ್ದಿಲ್ಲೆಂದು ಮೇಲಿನ ಬರಹದಿಂದ ಸ್ಪಷ್ಟವಾಗಿ ಕಂಡುಬರುತ್ತದೆ. ಆದ್ದರಿಂದ ಇವನು ಮತ್ತೊಂದು ಚಾಳುಕ್ಯ ಶಾಖೆಗೆ ಸೇರಿದವನಾಗಿರಲಿಕ್ಕೆ

ಬೇಕು. ಈ ಶಾಖೆಯು ಯಾವದೆಂಬುದು ಮಿರಜಿ, ಕೌಠೆಮ, ದಾವಣಗೇರಿ ಶಾಸನಗಳಿಂದಲೂ, ಕವಿರನ್ನನು ತನ್ನ ಗದಾಯುದ್ಧವೆಂಬ ಗ್ರಂಥದಲ್ಲಿ ಕೊಟ್ಟ ತನ್ನ ಆಶ್ರಯದಾತನ ವಂಶಾವಳಿಯಿಂದಲೂ ಸಾಮಾನ್ಯವಾಗಿ ತಿಳಿಯುತ್ತದೆ. ಏಕವಾಕ್ಯತೆಯು ಇಲ್ಲದಿದ್ದರೂ ಈ ಲೇಖಗಳು ಬಾದಾಮಿ ಚಾಳುಕ್ಯ ಮನೆತನದ ಭೀಮನೆಂಬವನೇ ಕಲ್ಯಾಣ ಚಾಳುಕ್ಯರ ಮೂಲಪುರುಷನಾಗಿದ್ದನೆಂದು ಸೂಚಿಸುತ್ತವೆ. ಮಿರಜಿಯ ಶಾಸನದಲ್ಲಿ ಹೆಸರು ಕೊಡದೆ, ವಿಜಯಾದಿತ್ಯ(೬೯೬–೭೩೩)ನ ಎರಡನೆಯ ಒಬ್ಬ ಮಗನೆಂದು ಮಾತ್ರ ಬರೆದಿರುತ್ತದೆ. ಕೌಠೆಮ, ದಾವಣಗೆರೆಯ ಶಾಸನಗಳಲ್ಲಿ ವಿಜಯಾದಿತ್ಯನ ೨ನೆಯ ಮಗ **ಭೀಮ**ನೆಂದು ಸ್ಪಷ್ಟವಾಗಿ ಬರೆದಿರುತ್ತದೆ. ಆದರೆ ಕವಿರನ್ನನು ''.......... ವಿಜಯಾದಿತ್ಯ ಭಟ್ಟಾರಕನಿಂ, ತತ್ಸೂನು ಮಿತ್ರನಪ್ಪ ವಿಕ್ರಮಾರ್ಣವಮೆನಿಸಿದ ಕೊಂಕಣ ವಿಕ್ರಮಾದಿತ್ಯನಿಂ, ತತ್ಸೂನು ಮಿತ್ರನಪ್ಪ ಕೀರ್ತಿವರ್ಮನಿಂ, **ಆತನ** ಕಿರಿಯಮಗನಪ್ಪ, ಭೀಮಪರಾಕ್ರಮನಿಂ'' ಎಂದು ಬರೆಯುತ್ತಾನೆ*. ಈ ವಾಕ್ಯದಲ್ಲಿದ್ದ ''ಆತನ'' ಎಂಬ ಸರ್ವನಾಮವು ಕೀರ್ತಿವರ್ಮ—ವಿಕ್ರಮಾದಿತ್ಯರಿಬ್ಬರಿಗೂ ಅನ್ವಯಿಸಬಹುದಾದರೂ ಅದು ವಿಕ್ರಮಾದಿತ್ಯನೊಬ್ಬನಿಗೆ ಮಾತ್ರ ಅನ್ವಯಿಸುತ್ತದೆಂದು ಎಣಿಸುವುದು ಹೆಚ್ಚು ಸಯುಕ್ತಿಕವಾಗಿ ತೋರುತ್ತದೆ'' ಆದಕಾರಣ ಕವಿರನ್ನನ ಅಭಿಪ್ರಾಯದಂತೆ ಭೀಮನು ೨ನೆಯ ವಿಕ್ರಮಾದಿತ್ಯನ ಮಗನೂ ಕೀರ್ತಿವರ್ಮನ ತಮ್ಮನೂ ಆಗಿದ್ದನೆಂದು ಹೇಳಬಹುದು.

ಮಿರಜಿ, ಕೌಠೆಮ, ದಾವಣಗೇರಿ ಈ ಮೂರು ಶಾಸನಗಳಂತೆ ಭೀಮನು ೨ನೆಯ ಕೀರ್ತಿವರ್ಮನ ಕಕ್ಕನಾಗುತ್ತಿದ್ದು, ಕವಿರನ್ನನ ಬರಹದಂತೆ ಅವನು ಅವನ ತಮ್ಮನಾಗುತ್ತಾನೆ. ಈ ಎರಡು ಸಂಬಂಧಗಳಲ್ಲಿ ಕವಿರನ್ನನು ಕೊಟ್ಟ ಸಂಬಂಧವೇ ನಿಜವಾದ್ದಿರಬಹುದೆಂದು ನನ್ನ ಅಲ್ಪಮತಿಗೆ ತೋರುತ್ತದೆ. ಕೆಳಗೆ ಕೊಟ್ಟ ಕಾರಣಗಳು ಈ ಊಹೆಯನ್ನು ಬಲಪಡಿಸುತ್ತವೆ:—

* ಗದಾಯುದ್ಧ, ಆಶ್ವಾಸ ೨, ಪು. ೨೧, ೨೨, ೨೩.

೧. ಕೌಥೆಮದ ಶಾಸನವು ೧೦೦೯ರಲ್ಲಿಯೂ, ಮಿರಜಿ ದಾವಣಗೇರಿ ಶಾಸನಗಳು ಸುಮಾರು ೧೦೨೪ರಲ್ಲಿಯೂ ಬರೆಯಲ್ಪಟ್ಟವು. ಆದರೆ ಇವುಗಳಿಗಿಂತ ಮುಂಚೆಯೇ ಅಂದರೆ ೯೮೪ರಲ್ಲಿ ಕವಿರನ್ನನು ತನ್ನ ಗದಾಯುದ್ಧವನ್ನು ಬರೆದನು.

೨. ಈ ಮೂರೂ ಶಾಸನಗಳು ರಾಜಧಾನಿಯಿಂದ ದೂರಾಗಿದ್ದ ಊರುಗಳಲ್ಲಿ ಬರೆಯಲ್ಪಟ್ಟವು. ಕವಿರನ್ನನು ಆಸ್ಥಾನಕವಿಯಾದ್ದರಿಂದ ಅರಮನೆ ದರಬಾರಗಳಲ್ಲಿದ್ದ ವೃದ್ಧಸ್ತ್ರೀಪುರುಷರ ಅನುಮತಿಯಿಂದ ಈ ವಂಶಾವಳಿಯನ್ನು ಬರೆದನು.

೩. ಶಾಸನ ಲೇಖಕರಿಗಿಂತ ಕವಿರನ್ನನು ಹೆಚ್ಚು ಬುದ್ಧಿವಂತನೂ ಹೆಚ್ಚು ಶೋಧಕನೂ ಆದ್ದರಿಂದ ಅವನ ಬರಹವು ಹೆಚ್ಚು ವಿಶ್ವಾಸಕ್ಕೆ ಪಾತ್ರವಾದ್ದೆಂದು ಬರೆಯಲಿಕ್ಕೆ ಅಡ್ಡಿಯಿಲ್ಲ.

ಭೀಮನ ತರುವಾಯ ೧. ಕೀರ್ತಿವರ್ಮ, ೨. ತೈಲ, ೩. ವಿಕ್ರಮಾದಿತ್ಯ, ೪. ಭೀಮ, ೫. ಅಯ್ಯಣ, ೬. ವಿಕ್ರಮಾದಿತ್ಯ—ಈ ಆರು ಹೆಸರುಗಳು ಕೌಥೆಮ, ದಾವಣಗೇರಿ ಶಾಸನಗಳಲ್ಲಿ ಸರಿಯಾಗಿ ಕ್ರಮದಿಂದ ಬರೆಯಲ್ಪಟ್ಟಿವೆ. ಮಿರಜಿಯ ಶಾಸನದಲ್ಲಿ ಭೀಮನ ಹೆಸರೇ ಇಲ್ಲ ಮತ್ತು ರನ್ನನು ತನ್ನ ವಂಶಾವಳಿಯಲ್ಲಿ ತೈಲನ ತರುವಾಯ ಭೀಮನ ಹೆಸರನ್ನು ಬರೆದು ಬಳಿಕ ವಿಕ್ರಮಾದಿತ್ಯನ ಹೆಸರನ್ನು ಬರೆಯುತ್ತಾನೆ. ಶಾಸನಗಳಲ್ಲಿ ಭೀಮ ವಿಕ್ರಮಾದಿತ್ಯರ ಹೆಸರುಗಳು ಹಿಂದೆ ಮುಂದೆ ಆದುದು ಲೇಖಕರ ಹಸ್ತದೋಷವಾಗಲಿ ಸ್ಮೃತಿದೋಷವಾಗಲಿ ಆಗಿರಬಹುದೆಂದು ಎಣಿಸಿದರೆ, ಚಾಳುಕ್ಯಸಾಮ್ರಾಜ್ಯವನ್ನು ಪುನರುಜ್ಜೀವಿಸಿದ ತೈಲಪನ ಶಾಖಾ ವಂಶಾವಳಿಯು ನಿಶ್ಚಯವಾಗಿ ಸಿದ್ಧವಾಗುತ್ತದೆ. ಅದನ್ನು ಕೆಳಗೆ ಕೊಡುತ್ತೇವೆ:—

೨ನೆಯ ವಿಕ್ರಮಾದಿತ್ಯ
(೭೩೪–೭೪೬)



೨. (೩ ನೆಯ) ಕೀರ್ತಿವರ್ಮ

|

೩. ಪಿರಿಯ ತೈಲಪ

|

೪. ಮುಕುಂದಿಯ ಕೊಂದ ಕುಂದಿಯು

(೨ ನೆಯ) ಭೀಮ

|

೫. (೩ ನೆಯ) ವಿಕ್ರಮಾದಿತ್ಯ

|

೬. ಅಯ್ಯಣದೇವ

|

೭. (೪ ನೆಯ) ವಿಕ್ರಮಾದಿತ್ಯ

ಈ ಶಾಖಾ ವಂಶಾವಳಿಯು ನಿರ್ದುಷ್ಟವಾಗಿರುತ್ತದೆಂದು ಧಾರಾಳ ವಾಗಿ ಹೇಳಬಹುದು. ಏಕೆಂದರೆ ಡಾಕ್ಟರದ್ವಯ(ಭಾಂಡಾರಕರ, ಫ್ಲೀಟ)ರಿಗೆ ಬಂದ ಕಾಲಮಾನದ ಸಂಶಯವು ಈ ಶಾಖಾ ವಂಶಾವಳಿ ಯಿಂದ ಪೂರ್ಣವಾಗಿ ಪರಿಹಾರವಾಗುತ್ತದೆ. ಡಾ॥ ಭಾಂಡಾರಕರರು ಬರೆಯುವುದೇನಂದರೆ:—ಬಾದಾಮಿ ಚಾಳುಕ್ಯ ಮನೆತನದ ಕಡೆಯ ಸಾರ್ವಭೌಮನಾದ ೨ನೆಯ ಕೀರ್ತಿವರ್ಮ, ಚಾಳುಕ್ಯ ಸಾಮ್ರಾಜ್ಯ ವನ್ನು ತಿರುಗಿ ಸ್ಥಾಪಿಸಿದ ತೈಲಪ—ಇವರಿಬ್ಬರ ನಡುವೆ ೬ ಮಂದಿ ಚಾಳುಕ್ಯ ರಾಜರು ಆದರೆಂದು ಮಿರಜಿ ಎವೂರ ಶಾಸನಗಳು ಹೇಳುತ್ತವೆ. ೨ನೆಯ ಕೀರ್ತಿವರ್ಮನು ಶಕ ೬೬೯ರಲ್ಲಿ ಪಟ್ಟವೇರಿದನು ಮತ್ತು ತೈಲಪನು ಶಕ ೮೯೫ರಲ್ಲಿ ರಾಷ್ಟ್ರಕೂಟರ ಕೊನೆಯ ಅರಸನಾದ ಕಕ್ಕಲ ನಿಂದ ಸಾಮ್ರಾಜ್ಯವನ್ನು ಕಿತ್ತಿಕೊಂಡನು. ೬೬೯–೮೯೫ ಇವುಗಳ ನಡುವೆ ೨೨೬ ವರ್ಷಗಳು ಕಳೆದುಹೋದವು. ಈ ೨೨೬ ವರ್ಷಗಳಲ್ಲಿ ಕೀರ್ತಿವರ್ಮನನ್ನು ಹಿಡಿದು ೭ ಮಂದಿ ಚಾಳುಕ್ಯ ರಾಜರು ಆಗಿಹೋದ ದಿಂದ ಒಬ್ಬೊಬ್ಬನಿಗೆ ೩೨ ವರ್ಷಗಳು ಬಿದ್ದವು. ಒಬ್ಬೊಬ್ಬನ ತಲೆಗೆ ಇಷ್ಟು ವರ್ಷಗಳು ಬರುವುದು ಅನುಭವಕ್ಕೆ ತೀರ ವಿರುದ್ಧವಾದ ಮಾತಾಗಿರುತ್ತದೆ*. ಇನ್ನು ನಾನು ಮೇಲೆ ಕೊಟ್ಟ ಚಾಳುಕ್ಯ ಶಾಖಾ

* ಮುಂಬಯಿ ಇಲಾಖೆಯ ಗ್ಯಾಜಿಟಿಯರ, ಸಂ. ೧, ಭಾ. ೨, ಪು. ೨೧೧.

ವಂಶಾವಳಿಯಿಂದ, ಈ ೨೨೬ ವರ್ಷಗಳಲ್ಲಿ ಕೀರ್ತಿವರ್ಮನನ್ನು ಹಿಡಿದು ೮ ಮಂದಿ ಚಾಳುಕ್ಯ ರಾಜರು ಆಗಿಹೋದರು. ಆದ್ದರಿಂದ ಒಬ್ಬೊಬ್ಬ ನಿಗೆ (೨೨೬÷೮=೨೮) ಇಪ್ಪತ್ತೆಂಟು ವರ್ಷಗಳು ಮಾತ್ರ ಬರುವು ದರಿಂದ ಡಾ॥ ಭಾಂಡಾರಕರರ ಕಾಲಾತಿಶಯದ ದೋಷವು ಸಂಪೂರ್ಣ ವಾಗಿ ದೂರಾಯಿತೆಂದು ನಿಸ್ಸಂದೇಹವಾಗಿ ಬರೆಯಲಿಕ್ಕೆ ಅಡ್ಡಿಯಿಲ್ಲ.

ತೈಲಪನ ಚಾಳುಕ್ಯ ವಂಶ ಶಾಖೆಯು ಆದಿಪಂಪನ ಆಶ್ರಯು ದಾತನಾದ ೨ನೆಯ ಅರಿಕೇಸರಿಯ ವಂಶ ಶಾಖೆಯಿಂದ ಭಿನ್ನವಾಗಿ ತ್ತೆಂದು ಹಿಂದೆ ಬರೆದಿರುತ್ತೇವಷ್ಟೇ. ಈ ಅರಿಕೇಸರಿಯು ಗದಗು, ಲಕ್ಷ್ಮೇಶ್ವರ, ಡಂಬಳ ಈ ಊರುಗಳನ್ನೊಳಗೊಂಡ ನಾಡಿಗೆ ಒಡೆಯ ನಾಗಿದ್ದನು. ಆದರೆ ತೈಲಪನ ಪೂರ್ವಜರು ಎಲ್ಲಿ ಆಳುತ್ತಿದ್ದರೆಂಬು ದಾಗಲಿ ಎಲ್ಲಿ ವಾಸಮಾಡಿಕೊಂಡಿದ್ದರೆಂಬುದಾಗಲಿ ಯಾವ ಲೇಖ ದಿಂದಲೂ ಗೊತ್ತಾಗುವುದಿಲ್ಲ. ಪ್ರತ್ಯಕ್ಷ ಅಥವಾ ಶಾಬ್ದಪ್ರಮಾಣ ದಿಂದ ತಿಳಿಯದ್ದನ್ನು ಅನುಮಾನದಿಂದಲೇ ಕಂಡುಹಿಡಿಯಲು ಪ್ರಯತ್ನಿಸಬೇಕಲ್ಲವೇ?

ಬಾದಾವಿ ಚಾಳುಕ್ಯರಿಂದ ಸಾಮ್ರಾಜ್ಯವನ್ನು ಸೆಳೆದುಕೊಂಡು ರಾಷ್ಟ್ರಕೂಟರು ಆಳುತ್ತಿದ್ದಾಗ, ೪ ಮಂದಿ ಚಾಳುಕ್ಯ ಸಾಮಂತರು ಅವರ ಕಯ್ಕೆಳಗಿದ್ದರೆಂದು ಪ್ರಾಕ್ತನ ವಿಮರ್ಶ ವಿಚಕ್ಷಣರು ಗೊತ್ತು ಮಾಡಿರುತ್ತಾರಷ್ಟೇ*. ಈ ನಾಲ್ಕು ಒಳಮನೆತನಗಳಾವವೆಂದರೆ:— ೧. ಬೆಳಗಾವಿ ಜಿಲ್ಲಾ ಕೋಟೂರ ಪ್ರಾಂತದಲ್ಲಿದ್ದ ಪರಹಿತರಾಜನ ಮನೆತನ, ೨. ಮೈಸೂರ ಸಂಸ್ಥಾನ ಕುಣಿಗಲ ನಾಡಿನ ಒಡೆಯನಾದ ವಿಮಲಾದಿತ್ಯನ ಮನೆತನ, ೩. ಮೈಸೂರ ಸಂಸ್ಥಾನ ವರುಣ ಪ್ರಾಂತದ ಮಹಾಸಾಮಂತನಾದ ನರಸಿಂಹನೆಂಬವನ ಮನೆತನ, ೪. ಪುಲಿಗೆರೆ ನಾಡಿ ನಲ್ಲಿ ಸಾಮಂತ ಶ್ರೇಷ್ಠನಾಗಿದ್ದ ಅರಿಕೇಸರಿಯ ಮನೆತನ. ಚಾಳುಕ್ಯ ಸಾಮ್ರಾಜ್ಯವನ್ನು ಪುನರುಜ್ಜೀವಿಸಿದ ತೈಲಪನ ಮನೆತನವು ಮೇಲೆ ಬರೆದ ನಾಲ್ಕೂ ಒಳಮನೆತನಗಳಿಗೆ ಸೇರಿದ್ದಿಲ್ಲವಾದಕಾರಣ ಇದು

* ಕರ್ನಾಟಕ ಸಾಮ್ರಾಜ್ಯ, ಸಂ. ೧, ಭಾ. ೨, ಪು. ೩೦೪—೩೦೫.

ಬಾದಾವಿ ಚಾಳುಕ್ಯರ ಮುಖ್ಯ ಮನೆತನಕ್ಕೆ ಸೇರಿತ್ತೆಂತಲೂ, ಈ ಮನೆತನದ ವಾಸಸ್ಥಳವು ಬಾದಾವಿಯು ಪ್ರದೇಶವೇ ಆಗಿತ್ತೆಂತಲೂ ಊಹಿಸಬಹುದು. ಏಕೆಂದರೆ, ದಾವಣಗೇರಿಯ ಶಾಸನದಲ್ಲಿಯೂ ರನ್ನನ ಗದಾಯುದ್ಧದಲ್ಲಿಯೂ ಚಾಳುಕ್ಯ ಸಾಮ್ರಾಜ್ಯವನ್ನು ಕಳೆದುಕೊಂಡ ೨ನೆಯ ಕೀರ್ತಿವರ್ಮನ ತಮ್ಮನು (ಅಥವಾ ಕಕ್ಕನು) ಆದ ಭೀಮನಿಗೆ **ಭೀಮ ಪರಾಕ್ರಮ**ನೆಂದು ಕರೆದಿರುತ್ತಾರೆ. ಪರಾಕ್ರಮ ಶಬ್ದವನ್ನು ಅವನ ಹೆಸರಿಗೆ ಜೋಡಿಸಲಿಕ್ಕೆ ಕಾರಣವೇನಿರಬಹುದು? ಅವನು ಯಾವುದಾದರೊಂದು ದೊಡ್ಡ ಕಲಿತನದ ಕೆಲಸವನ್ನು ಮಾಡಿರಬೇಕಲ್ಲವೇ? ಈ ಶೌರ್ಯದ ಕೆಲಸವು ಯಾವುದು? ರಾಷ್ಟ್ರಕೂಟ ದಂತಿದುರ್ಗನು ಒಳಸಂಚುಮಾಡಿ ಚಾಳುಕ್ಯ ಮಂತ್ರಿ ದಳವಾಯಿಗಳನ್ನೊಡಕೊಂಡು ರಾಜ್ಯಕ್ರಾಂತಿಯನ್ನಾರಂಭಿಸಿದಾಗ, ಚಾಳುಕ್ಯರ ಪ್ರಸಿದ್ಧ ರಾಜಧಾನಿಯಾದ ಬಾದಾವಿಯನ್ನು ಉಳಿಸಿಕೊಂಡುದೇ ಈ ಪರಾಕ್ರಮವಾಗಿರಬಹುದೆಂದು ನನ್ನ ಅಲ್ಪಮತಿಗೆ ತೋರುತ್ತದೆ. ಕೆಳಗೆ ಕೊಟ್ಟ ಕಾರಣಗಳು ಈ ಊಹೆಯನ್ನು ಕೆಲಮಟ್ಟಿಗೆ ಬಲಪಡಿಸುತ್ತವೆ:—

೧. ರಾಷ್ಟ್ರಕೂಟರು ಚಾಳುಕ್ಯರ ಪ್ರಸಿದ್ಧ ರಾಜಧಾನಿಯಾದ ಬಾದಾವಿಯನ್ನು ಮುತ್ತಿದಾಗ ಭೀಮನು ಕಲಿತನದಿಂದ ಕಾದಿ ಹಗೆಗಳನ್ನು ಮುರಿಬಡಿದು ಓಡಿಸಿದ್ದರಿಂದ ಅವನಿಗೆ ಭೀಮಪರಾಕ್ರಮನೆಂಬ ಹೆಸರು ಬಂದಿರಬಹುದೆಂದು ಮೇಲೆ ಬರೆದಿರುತ್ತೇವಷ್ಟೇ. ಆದರೆ ರಾಷ್ಟ್ರಕೂಟ ದಂತಿದುರ್ಗನಾಗಲಿ ಕೃಷ್ಣನಾಗಲಿ ಅವರ ಹಿಂದೆ ಆಳಿದ ಸಾರ್ವಭೌಮರಾಗಲಿ ಬಾದಾವಿಯನ್ನು ಹಿಡಿದುಕೊಂಡರೆಂದು ಯಾವ ಲೇಖದಲ್ಲಿಯೂ ಬರೆದಿಲ್ಲ.

೨. ಮಳಖೇಡ(ಮಾನ್ಯಖೇಟ)ವನ್ನು ಕಟ್ಟಿಸುವ ವರೆಗೆ ಯಾವ ಊರು ರಾಷ್ಟ್ರಕೂಟರ ರಾಜಧಾನಿಯಾಗಿತ್ತೆಂಬುದು ನಿಶ್ಚಯವಾಗಿ ಗೊತ್ತಾಗುವುದಿಲ್ಲ.

೩. ರಾಷ್ಟ್ರಕೂಟರ ನೂರಾರು ಶಾಸನಗಳು ದೊರೆತಿದ್ದರೂ ಅವುಗಳೊಳಗೆ ಒಂದರಲ್ಲಿಯಾದರೂ ಬಾದಾವಿಯ ಹೆಸರಿಲ್ಲ.

ತೈಲಪನ ಪೂರ್ವಜರ ನೆಲೆವೀಡಿನ ವಿಷಯವಾಗಿ ಮೇಲೆ ಕೊಟ್ಟ ೩ ಕಾರಣಗಳು ನೀಟಾದ ಆಧಾರಗಳಿರದೆ ಸುತ್ತಲಿನ ಆಧಾರಗಳಾಗಿರುತ್ತ ವೆಂಬುದು ಮೇಲೇ ಕಾಣಿಸುತ್ತದೆ. ಆದಕಾರಣ ಈ ಸಂಬಂಧದ ಹೊಸ ಶೋಧಗಳಾಗುವ ವರೆಗೆ ಭೀಮಪರಾಕ್ರಮ ಮುಂತಾದ ತೈಲಪನ ಪೂರ್ವಜರ ಮುಖ್ಯ ವಾಸಸ್ಥಾನವು ಬಾದಾಮಿಯೇ ಆಗಿತ್ತೆಂದು ಗ್ರಹಿಸಿ ಮುಂದೆ ಸಾಗುವೆವು.

---

# ೨ ನೆಯ ಅಧ್ಯಾಯ

## ರಾಜ್ಯಕ್ರಾಂತಿ

ದೀಪದ ಕೆಳಗೇ ಕತ್ತಲೆ ಎಂಬ ಗಾದೆಯು ಓದುವವರಿಗೆ ಗೊತ್ತಿದ್ದ ಮಾತೇ ಸರಿ. ಗಂಗ ಕದಂಬ ಬಾದಾಮಿ ಚಾಳುಕ್ಯ ರಾಷ್ಟ್ರಕೂಟರು ತಮ್ಮ ಶೌರ್ಯ ಧೈರ್ಯ ಸಾಹಸಾದಿ ಗುಣಗಳಿಂದ ವಿಸ್ತಾರವಾದ ರಾಜ್ಯವನ್ನು ಸಂಪಾದಿಸಿ, ತಮ್ಮ ಅಧಿಕಾರ ಸಂಪತ್ತು ವೈಭವಗಳಿಂದ ದೇದೀಪ್ಯಮಾನರಾಗಿದ್ದರೂ ಅವರವರ ಮೂಲಪುರುಷರು ರಾಜ್ಯ ದೊರಕಿಸಿದ ವಿವರವು ಕತ್ತಲೆಯಲ್ಲಿ ಕವಿದಿರುವಂತೆ, ತೈಲಪನು ಚಾಳುಕ್ಯ ಸಾಮ್ರಾಜ್ಯವನ್ನು ಮರಳಿ ಹೇಗೆ ಸ್ಥಾಪಿಸಿದನೆಂಬ ಸಂಗತಿಯಾದರೂ ಅಂಧಃಕಾರದಲ್ಲಿ ಮುಚ್ಚಲ್ಪಟ್ಟಿದೆ. ಕಲ್ಯಾಣದ ಚಾಳುಕ್ಯರ ಶಾಸನಗಳೆಲ್ಲ ತೈಲಪನು ರಾಷ್ಟ್ರಕೂಟರಿಂದ ರಾಜ್ಯಲಕ್ಷ್ಮಿಯನ್ನು ಕಿತ್ತಿಕೊಂಡನೆಂದು ಅವನನ್ನು ಹೊಗಳುತ್ತವೆ ಹೊರತು, ಅವನು ಸಾಮ್ರಾಜ್ಯವನ್ನು ಗಳಿಸಿದ ಬಗೆಯನ್ನು ಎಳ್ಳಷ್ಟಾದರೂ ಸೂಚಿಸುವುದಿಲ್ಲ. ಆದಕಾರಣ ನಾವು ಅಲ್ಲಿ ಇಲ್ಲಿ ದೊರೆಯುವ ಹರುಕು ಮುರುಕು ಮಾತುಗಳನ್ನು ಒಟ್ಟುಗೂಡಿಸಿ ಅನುಮಾನದಿಂದ ಈ ಬಗೆಯನ್ನು ಕಂಡು ಹಿಡಿಯಬೇಕಾಗಿದೆ.

ಭೀಮಪರಾಕ್ರಮನು ತನ್ನ ಶೌರ್ಯದಿಂದ ಬಾದಾಮಿ ಚಾಳುಕ್ಯರ ನೆಗಳ್ತೆ ರಾಜಧಾನಿಯಾದ ಬಾದಾಮಿಯನ್ನು ರಾಷ್ಟ್ರಕೂಟರಿಂದ ಉಳಿಸಿ

ಕೊಂಡನೆಂದು ಹಿಂದಿನ ಅಧ್ಯಾಯದಲ್ಲಿ ಅನುಮಾನಮಾಡಿರುತ್ತೇವಷ್ಟೇ. ತೈಲಪನ ವಂಶ ಶಾಖೆಯಲ್ಲಿ ಭೀಮನ ತರುವಾಯ ಬರುವ ಕೀರ್ತಿವರ್ಮ ಪಿರಿಯತೈಲಪ ಇವರಿಬ್ಬರ ವಿಷಯವಾಗಿ ನಮಗೆ ಏನೂ ಗೊತ್ತಾಗುವುದಿಲ್ಲ. ಮುಂದಿನವನನ್ನು ಮುಕುಂದಿಯು ಕೊಂದ ಕುಂದಿಯ ಭೀಮನೆಂದು ಕವಿ ರನ್ನನು ಕರೆಯುತ್ತಾನೆ. ದಾವಣಗೇರಿಯ ಶಾಸನದಲ್ಲಿ ಇವನಿಗೆ ''ಅರಿಭೀಕರ'' (ಹಗೆಗಳನ್ನು ಹೆದರಿಸುವವ) ಎಂಬ ವಿಶೇಷಣವನ್ನು ಹಚ್ಚಿರುತ್ತಾರೆ. ಆದ್ದರಿಂದ ಈ ಕುಂದಿಯ ಭೀಮನು ತನ್ನ ಮೇಲೆ ದಂಡೆತ್ತಿ ಬಂದ ರಾಷ್ಟ್ರಕೂಟ ದಳವಾಯಿಯಾದ ಮುಕುಂದಿ ಎಂಬವನನ್ನು ಕೊಂದು ಅವನ ದಂಡನ್ನು ದಿಕ್ಕಾಪಾಲಾಗಿ ಓಡಿಸಿದನೆಂದು ಊಹಿಸಬಹುದು. ಈ ಬಡಿದಾಟವು ಬಹುಶಃ ನೃಪತುಂಗನ ಆಳಿಕೆಯ (೮೧೫–೮೭೮) ಆರಂಭದಲ್ಲಿ ಆಗಿರಬಹುದು. ಕುಂದಿಯ ಭೀಮನ ಮಗನಾದ ವಿಕ್ರಮಾದಿತ್ಯನು ಶೂರನೂ ಜಾಣನೂ ಸಾಹಸಿಯೂ ಆದ್ದರಿಂದ ಪುಂಡಾಟಿಗೆಯಿಂದ ತನ್ನ ರಾಜ್ಯವನ್ನು ಬೆಳಿಸಿಕೊಂಡು ರಾಷ್ಟ್ರಕೂಟರನ್ನು ಹೆದರಿಸಲಾರಂಭಿಸಿರಬಹುದು.

ರಾಷ್ಟ್ರಕೂಟ ದಂತಿದುರ್ಗನು ಚಾಳುಕ್ಯರಿಂದ ಸಾಮ್ರಾಜ್ಯವನ್ನು ಕಿತ್ತಿಕೊಂಡಂದಿನಿಂದ ನೃಪತುಂಗನ ಮರಣದ ವರೆಗೆ ಸುಮಾರು ೧೨೦ ವರ್ಷ ತೈಲಪನ ಪೂರ್ವಜರು ರಾಷ್ಟ್ರಕೂಟರ ಹಗೆಗಳಾಗಿದ್ದರೆಂದರೆ ತಪ್ಪಾಗಲಿಕ್ಕಿಲ್ಲ. ಮುಂದೆ ೨ನೆಯ ಕೃಷ್ಣನು (೮೭೮–೯೧೪) ರಾಜ್ಯಭಾರದ ಕಟ್ಟು ಸಡಿಲಾದ್ದರಿಂದಲೋ ಬಾದಾಮಿ ಚಾಳುಕ್ಯರನ್ನು ಮಣಿಸುವುದು ಅಸಾಧ್ಯವೆಂಬ ತಿಳಿವಳಿಕೆಯಿಂದಲೋ ದಂಡೋಪಾಯವನ್ನು ಬಿಟ್ಟು, ದಾನೋಪಾಯವನ್ನು ಕಯ್ಕೊಂಡು, ವಿಕ್ರಮಾದಿತ್ಯನ ಮಗನಾದ ಅಯ್ಯಣಾರ್ಯನಿಗೆ ತನ್ನ ಮಗಳನ್ನು ಕೊಟ್ಟು ಬಳವಳಿಯಾಗಿ ಎಷ್ಟೋ ಗ್ರಾಮಗಳನ್ನು ಕೊಟ್ಟನು. ಈ ಮದುವೆಯಿಂದ ಅಯ್ಯಣಾರ್ಯನ ನಾಡು ಬೆಳೆದುದಲ್ಲದೆ, ದರಬಾರಿನಲ್ಲಿ ಅವನ ಅಧಿಕಾರವೂ ಸಾಮ್ರಾಜ್ಯದಲ್ಲಿ ಅವನ ವರ್ಚಸ್ಸೂ ಬೆಳೆದವು. ಆದರೆ ತನ್ನ ಮಾವನಿಗೆ ಬಂದ ವಿಪತ್ತಿನಲ್ಲಾಗಲಿ ಅವನು ಹಿಂದುಗಡೆ

ಕಯ್ಕೊಂಡ ದಂಡಯಾತ್ರೆಗಳಲ್ಲಾಗಲಿ ಇವನು ಕೃಷ್ಣನಿಗೆ ಎಷ್ಟು ಮಟ್ಟಿಗೆ ನೆರವಾದನೆಂಬುದು ಗೊತ್ತಾಗುವುದಿಲ್ಲ.

ಅಯ್ಯಣಾರ್ಯನ ಕಾಲದಿಂದ ತೈಲಪನ ಪೂರ್ವಜರ ಸಂಪತ್ತು ಬೆಳೆಯಿತು. ಅವರು ರಾಷ್ಟ್ರಕೂಟರ ಸಮಾನಸ್ಕಂಧರಾದರು. ರಾಷ್ಟ್ರಕೂಟ ಚೇದಿ ಅರಸರ ನಡುವೆ ಶರೀರಸಂಬಂಧವು ಎಡೆಬಿಡದೆ ನಡೆದಿತ್ತಷ್ಟೇ. ಈಗ ಚೇದಿಯ ಅರಸನಾದ ಲಕ್ಷ್ಮಣನು ತನ್ನ ಮಗಳಾದ ಬೊಂತಾದೇವಿಯನ್ನು ಅಯ್ಯಣಾರ್ಯನ ಮಗನಾದ ವಿಕ್ರಮಾದಿತ್ಯನಿಗೆ ಮದುವೆಮಾಡಿಕೊಟ್ಟನು. ಈ ಲಗ್ನದಿಂದ ಬಾದಾವಿ ಚಾಳುಕ್ಯ ಮನೆತನವೆಂಬ ಚೊಕ್ಕ ಬಂಗಾರಕ್ಕೆ ಕುಂದಣ ಹಾಕಿದಂತಾಯಿತು. ಸಾಮ್ರಾಜ್ಯದಲ್ಲಿ ಅಯ್ಯಣಾರ್ಯನ ಅಧಿಕಾರ ವರ್ಚಸ್ಸುಗಳು ಹೆಚ್ಚಾದವು. ರಾಷ್ಟ್ರಕೂಟ ಮಂತ್ರಿ ದಂಡನಾಯಕರು ಅವನಿಗೆ ಹೆದರಿ ನಡೆಯಲಾರಂಭಿಸಿದರು.

ಈ ಅಯ್ಯಣಾರ್ಯನ ಮಗನಾದ ವಿಕ್ರಮಾದಿತ್ಯನು ಶೂರನೂ ಸಾಹಾಸಿಯೂ ಹೆಬ್ಬಯಕೆಯವನೂ ಸತ್ಯವಂತನೂ ಆಗಿದ್ದನೆಂದು ದಾವಣಗೇರಿಯ ಶಿಲಾಲೇಖದಲ್ಲಿ ಬರೆದಿದೆ*. ಇವನು ಹತ್ತನೆಯ ಶತಮಾನದ ಮಧ್ಯ ಭಾಗದಲ್ಲಿ ಇದ್ದಿರಬಹುದು. ೩ನೆಯ ಕೃಷ್ಣನ ದಂಡಯಾತ್ರೆಯಲ್ಲಿ ಇವನು ಎಷ್ಟು ಮಟ್ಟಿಗೆ ನೆರವಾದನೆಂಬುದು ಗೊತ್ತಾಗುವುದಿಲ್ಲ. ಇವನು ದಂಡಯಾತ್ರೆಯಲ್ಲಿ ಕೃಷ್ಣನನ್ನು ಹಿಂಬಾಲಿಸದೆ, ರಾಜಧಾನಿಯಲ್ಲಿದ್ದು ರಾಜ್ಯಪಾಲನ ಕೆಲಸದಲ್ಲಿ ತೊಡಗಿದ್ದರೂ ತೊಡಗಿರಬಹುದು. ಅದು ಹೇಗೇ ಇರಲಿ, ೩ನೆಯ ಕೃಷ್ಣನ ಆಳಿಕೆಯಲ್ಲಿ ಗಂಗರಸನಾದ ಬೂತುಗನ ತರುವಾಯ ಇವನೇ ಮುಖ್ಯ ಸರದಾರನಾಗಿರಬಹುದೆಂದು ಊಹಿಸಲಿಕ್ಕೆ ಅಡ್ಡಿ ತೋರುವುದಿಲ್ಲ.

೨ನೆಯ ಕೃಷ್ಣನ ಆಳಿಕೆಯಿಂದ (೮೭೮–೯೧೪) ರಾಷ್ಟ್ರಕೂಟರ ಇಳಿಗಾಲವೂ ಕೊಟ್ಟಿಗದೇವನಿಂದ (೯೬೯–೯೭೧) ಅವರ ಅಳಿಗಾಲವೂ

---

* ಅಭವತ್ತಸಯೋಸ್ತನುಜೋ ವಿಭವಭವಾಸೀ ವಿರೋಧಿ ವಿಧ್ವಂಸೀ।
ತೇಜೋವಿಜಿತಾದಿತ್ಯಸತ್ಯಧನೋ ವಿಕ್ರಮಾದಿತ್ಯಃ।
ಕರ್ನಾಟಕ ಶಾಸನ ಸಂಗ್ರಹ, ಸಂ. ೧೧, ಪು. ೪೫.

ಆರಂಭಿಸಿದನೆಂದು ಇದೇ ಸಂಪುಟದ ೧ ನೆಯ ಭಾಗದ ೪ ನೆಯ ಮತ್ತು ೫ ನೆಯ ಅಧ್ಯಾಯಗಳಲ್ಲಿ ಬರೆದಿರುತ್ತೇವಷ್ಟೇ. ಅರಸರ ಬಲವು ಕುಗ್ಗಿದಂತೆ ಹಗೆಗಳೂ ದ್ರೋಹಿಗಳೂ ಹೆಚ್ಚೆಚ್ಚು ಮಲೆತು ನಿಲ್ಲುವುದು ಸ್ವಾಭಾವಿಕವಾದ ಮಾತೇ ಸರಿ. ವೆಂಗಿಯ ಚಾಳುಕ್ಯರು ಬಲಿತು ೨ ನೆಯ ಕೃಷ್ಣನಿಗೆ ೧೦ ವರ್ಷ ಅಜ್ಞಾತವಾಸ ಮಾಡಿಸಿದರು. ೩ ನೆಯ ಇಂದ್ರನು ರಾಜಧಾನಿಯನ್ನು ಬಿಟ್ಟು ಲಾಟಪ್ರಾಂತದ ಒಂದು ಊರಲ್ಲಿ ಪಟ್ಟಾಭಿಷೇಕವನ್ನು ಮಾಡಿಸಿಕೊಂಡನು. ಮರಘಟಿಂಗನಾದ ಗೋವಿಂದನು ತನ್ನ ಅಣ್ಣನನ್ನು ಪಟ್ಟದಿಂದ ತಳ್ಳಿ ತಾನೇ ಸಾರ್ವಭೌಮನಾಗಿ ದುಂದುಗಾರಿಕೆಯಲ್ಲಿ ಕಾಲಕಳೆದನು. ಇವನ ಆಳಿಕೆಯಲ್ಲೇ ರಾಜ್ಯಭಾರದ ಕಟ್ಟುಪಾಡುಗಳೆಲ್ಲ ಕಳಚಿ ಹೋದುದರಿಂದ ಸರದಾರರೆಲ್ಲ, ವಿಶೇಷವಾಗಿ ೨ ನೆಯ ಅರಿಕೇಸರಿಯು ಇವನನ್ನು ಪಟ್ಟದಿಂದ ತಳ್ಳಿಸಿ, ತನಗೆ ಶರಣುಬಂದ ವಡ್ಡಿಗನಿಗೆ ಪಟ್ಟಗಟ್ಟಿದನೆಂತಲೂ ಗೋವಿಂದನ ವಿರೋಧಿಯಾದ ವಿಜಯಾದಿತ್ಯನೆಂಬವನ ಬೆನ್ನುಕಟ್ಟಿದನೆಂತಲೂ ತನ್ನ ಮೇಲೆ ಏರಿಬಂದ ರಾಷ್ಟ್ರಕೂಟರ ಕೊನೆಯ ಅರಸನಾದ ಕಕ್ಕಲನ ತಮ್ಮನಾದ ಬಪ್ಪುವನ ದಂಡನ್ನು ಸೋಲಿಸಿದನೆಂತಲೂ ಆದಿಪಂಪನು ಬರೆಯುತ್ತಾನೆ*.

ರಾಷ್ಟ್ರಕೂಟರ ಆಳಿಕೆಯಲ್ಲಿ ೫ ಚಾಳುಕ್ಯ ಮನೆತನಗಳಿದ್ದುವೆಂದು ಹಿಂದೆ ಬರೆದಿರುತ್ತೇವಷ್ಟೇ. ಅವುಗಳೊಳಗೆ ಬೆಳಗಾವಿ ಮೈಸೂರಿನ ೩ ಮನೆತನಗಳು ಅರಜೀವಿಗಳಾಗಿದ್ದುವೆಂತಲೂ ಪುಲಿಗೆರೆ ಬಾದಾಮಿಯ ಮನೆತನಗಳು ಪ್ರಬಲವಾಗಿದ್ದುವೆಂತಲೂ ಹೇಳಬಹುದು. ಆದರೆ ಅರಿಕೇಸರಿಯ ಮನೆತನವು ರಾಷ್ಟ್ರಕೂಟರಿಗೆ ವಿರುದ್ಧವಾಗಿದ್ದು ತೈಲಪನ ಮನೆತನದವರು ಅವರಿಗೆ ಅನುಕೂಲರಾಗಿದ್ದರೆಂದು ಮೇಲೆ ಬರೆದ ಸಂಗತಿಗಳಿಂದ ಕಂಡುಬರುತ್ತದೆ. ಆದ್ದರಿಂದ ಅರಿಕೇಸರಿ ತೈಲಪರ ಚಾಳುಕ್ಯಶಾಖಾಮನೆತನಗಳ ನಡುವಿನ ಸಂಬಂಧವು ಯಾವ ತರದ್ದಿತ್ತೆಂಬ ಪ್ರಶ್ನವು ಇಲ್ಲಿ ಹುಟ್ಟುತ್ತದೆ.

---

* ಪಂಪಭಾರತ, ಆಶ್ವಾಸ ೯, ಪು. ೨೩೪.

ಅರಿಕೇಸರಿ ತೈಲಪರ ಮನೆತನಗಳು ಒಂದಕ್ಕೊಂದು ವಿರುದ್ಧ ವಾಗಿರದೆ, ಸ್ನೇಹದಿಂದಿದ್ದವೆಂದು ನನ್ನ ಊಹೆಯು. ೪ನೆಯ ಗೋವಿಂದನ (೯೧೮-೯೩೩) ಪಾಣ್ಬಿಕೆ ದುಂದುಗಾರಿಕೆ ಕೆಡಕು ತನಕ್ಕೆ ಎಲ್ಲ ಸರದಾರರು ಬೇಸತ್ತಿದ್ದರು. ಆದಕಾರಣ ಉಳಿದ ಸರದಾರರ ಒಳೊಪ್ಪಿಗೆಯಿಂದಲೇ ಅರಿಕೇಸರಿಯು ವೆಂಗಿಯ ವಿಜಯಾದಿತ್ಯನಿಗೆ ಆಶ್ರಯಕೊಟ್ಟನೆಂದು ಹೇಳಬಹುದು. ಏಕೆಂದರೆ, ಮುಂದೆ ತುಸು ದಿವಸದಲ್ಲೇ ಅರಿಕೇಸರಿ ಅಯ್ಯಣಾರ್ಯ ಮುಂತಾದ ಎಲ್ಲ ಸರದಾರರು ಒಟ್ಟುಗೂಡಿ ಗೋವಿಂದನನ್ನು ಪಟ್ಟದಿಂದ ತಳ್ಳಿ ಅಥವಾ ಕೊಲ್ಲಿಸಿ ವಡ್ಡಿಗದೇವನನ್ನು ಮಳಖೇಡದ ಪಟ್ಟದಮೇಲೆ ಕೂಡ್ರಿಸಿದರೆಂದು ಎಲ್ಲ ಶಾಸನಗಳೂ, ಪಂಪ ಭಾರತವೂ ಸಾರಿ ಹೇಳುತ್ತವೆ.

ದೀಪವು ಆರುವಾಗ ಭಗ್ಗೆಂದು ಬೆಳಗಿ ನೊಂದುತ್ತದೆಂಬ ಸಂಗತಿಯು ಎಲ್ಲರಿಗೂ ಗೊತ್ತಿರುತ್ತದಷ್ಟೇ. ಅದರಂತೆ ರಾಷ್ಟ್ರಕೂಟ ಸಾಮ್ರಾಜ್ಯವು ಮುರಕಳಿಗೆ ಬಂದಾಗ ೩ನೆಯ ಕೃಷ್ಣನು (೯೪೧-೯೬೯) ಗಂಗರಸರಾದ ಬೂತುಗ ಮಾರಸಿಂಹರ ನೆರವಿನಿಂದ ತಂಜಾವರ ಕಂಚಿ ಗುಜರಾಥ ಮಾಳವ ಪ್ರಾಂತಗಳಲ್ಲಿ ದಿಗ್ವಿಜಯಮಾಡಿದನು. ಮುಂದೆ ಅವನ ತರುವಾಯ ಪಟ್ಟವೇರಿದ ಕೊಟ್ಟಿಗನನ್ನು ಮಾಳವೆಯ ಅರಸನಾದ ಸಿಯಾಕಹರ್ಷನು ಸೋಲಿಸಿ ಅವನ ಪಾಳೆಯವನ್ನು ಸುಲಿದುದಲ್ಲದೆ, ಅವನ ರಾಜಧಾನಿಯಾದ ಮಳಖೇಡವನ್ನು ಸೂರೆ ಗೊಂಡನು (೯೭೧).

'ಗೂಳಿ ಬಿದ್ದರೆ ಆಳಿಗೊಂದು ಕಲ್ಲು' ಎಂಬ ಗಾದೆಯು ವಾಚಕ ರಿಗೆ ಗೊತ್ತಿರಬಹುದು. ತುಂಟರು ಹಣಗಾರರನ್ನು ಸುಲಿದರು, ಪುಂಡರು ಹಳ್ಳಿಪಳ್ಳಿಗಳನ್ನು ಸೂರೆಗೊಂಡರು, ಚಿಕ್ಕಪುಟ್ಟ ಸಾಮಂತರು ತಂತಮ್ಮ ಜಹಗೀರಿನ ಸುತ್ತಮುತ್ತಲಿದ್ದ ಊರುಗಳನ್ನು ಹಿಡ ಕೊಂಡರು. ಸಿಕ್ಕವರಿಗೆ ಸೀರುಣಿಗೆ ಆಯಿತು. ಆಸ್ತಿಮಾನಗಳನ್ನು ಕಾಯಲಿಕ್ಕೆ ರಾಜಾಧಿಕಾರಿಗಳೇ ಇಲ್ಲದಂತಾದರು. ಸಾಮ್ರಾಜ್ಯ ದಲ್ಲಿ ಅನಾಯಕತ್ವವೂ ರಾಜಧಾನಿಯಲ್ಲಿ ಪುಂಡಾಟಿಗೆ ಕೊಲೆ ಸುಲಿಗೆ ಗಳೂ ಹಬ್ಬಿದವು. ಆಳುವ ಅರಸಿಲ್ಲ, ಕೇಳುವ ಪ್ರಧಾನಿಯಿಲ್ಲ ಎಂಬಂತಹ

ಸ್ಥಿತಿಯು ಬಂದೊದಗಿತು. ಕೊಟ್ಟಿಗನು ಎದೆಯೊಡಕೊಂಡು ಸತ್ತನು. ಅವನ ತಮ್ಮನ ಮಗನಾದ ಕಕ್ಕ ಅಥವಾ ಕಕ್ಕಲನು ಹೆಸರು ಮಾತ್ರಕ್ಕೆ ಸಾರ್ವಭೌಮನಾದನು.

ಹೆಬ್ಬಯಕೆಯುಳ್ಳ ಗಟ್ಟಿಗರಿಗೆ ಇದು ರಾಜ್ಯ ದೊರಕಿಸಲಿಕ್ಕೆ ಸುಸಂಧಿಯೇ ಸರಿ. ಈ ಕಾಲಕ್ಕೆ ತೈಲಪನ ತಂದೆಯಾದ ವಿಕ್ರಮಾದಿತ್ಯನು ಜೀವಂತನಾಗಿದ್ದನೋ ಇಲ್ಲೋ ಎಂಬುದಾಗಲಿ ರಾಷ್ಟ್ರಕೂಟ ದರಬಾರಿನಲ್ಲಿ ತೈಲಪನಿಗೆ ಯಾವ ಅಧಿಕಾರವಿತ್ತೆಂಬುದಾಗಲಿ ತಿಳಿಸುವ ಶಾಸನಗಳು ಇನ್ನೂ ಸಿಕ್ಕಿಲ್ಲ. ಚಿತ್ರದುರ್ಗದ ೨೫ನೆಯ ಶಾಸನವು ವಿಶ್ವಸನೀಯವಾದರೆ ೯೭೧ರಲ್ಲಿ ತೈಲಪನ ತಂದೆಯಾದ ವಿಕ್ರಮಾದಿತ್ಯನು ಸಾರ್ವಭೌಮನಾಗಿದ್ದನೆಂದು ಮೆ॥ ರಾಯಿಸ ಸಾಹೇಬರು ಬರೆಯುತ್ತಾರೆ*. ಆದರೆ ಈ ಬರಹವು ತೀರ ನಿರಾಧಾರವಾದ್ದೆಂದು ತೋರುತ್ತದೆ. ಏಕೆಂದರೆ:—

೧. ಈ ಶಾಸನದ ಇಂಗ್ಲಿಷ ಅಕ್ಷರದ ಪ್ರತಿಯಲ್ಲಿ "ವಿಕ್ರಮಾದಿತ್ಯದೇವಮ್ ಶ್ರೀ ಪೃಥ್ವೀವಲ್ಲಭಮ್" ಎಂದು ಬರೆದಿದ್ದು, ಕನ್ನಡ ಪ್ರತಿಯಲ್ಲಿ "..ದೇವಮ್ ಶ್ರೀ ಪೃಥ್ವೀವಲ್ಲಭಮ್" ಎಂದು ಮಾತ್ರ ಇದೆ. ಕನ್ನಡ ಪ್ರತಿಯು ಮೂಲಶಾಸನಕ್ಕೆ ಸರಿಯಾಗಿರುವುದರಿಂದ ಇಂಗ್ಲಿಷದಲ್ಲಿದ್ದ 'ವಿಕ್ರಮಾದಿತ್ಯ' ಎಂಬ ಅಕ್ಷರಗಳು ಕಯ್ಗಂಟಲ್ಲವೇ? ಶಿಲಾಲೇಖದಲ್ಲಿ ಸವೆದು ಕಾಣಿಸದಂತಹ ಅಕ್ಷರಗಳು ಕೊಟ್ಟಿಗ ಅಥವಾ ಕಕ್ಕಲ ಏಕೆ ಆಗಿರಬಾರದು†?

೨. ತೈಲಪನೇ ಚಾಳುಕ್ಯ ಸಾಮ್ರಾಜ್ಯವನ್ನು ಪುನಃ ಸ್ಥಾಪಿಸಿದನೆಂದು ರನ್ನನ ಗದಾಯುದ್ಧವೂ ಕಲ್ಯಾಣದ ಚಾಳುಕ್ಯರ ಎಲ್ಲ ಶಾಸನಗಳೂ ಸಾರುತ್ತಿದ್ದು, ಅವನ ತಂದೆಯಾದ ವಿಕ್ರಮಾದಿತ್ಯನೇ ಅವನಿಗಿಂತ ಮೊದಲು ಸಾರ್ವಭೌಮನಾಗಿದ್ದನೆಂಬುದು ಅಬದ್ಧವಲ್ಲವೇ?

---

* ಶಾಸನಗಳಿಂದ ತಿಳಿಯುವ ಮೈಸೂರು ಕೊಡಗು ಪ್ರಾಂತಗಳು, ಪುಟ ೭೩.

† ಕರ್ನಾಟಕ ಶಾಸನ ಸಂಗ್ರಹ, ಸಂ. ೧೧; ಇಂಗ್ಲಿಷ ಬರಹದ ಪುಟ ೧೩ ಮತ್ತು ಕನ್ನಡ ಬರಹದ ಪುಟ ೧೬.

೩. ಕೊಟ್ಟಿಗನು ಸತ್ತ ಬಳಿಕ ವಿಕ್ರಮಾದಿತ್ಯನು ಕಕ್ಕಲನನ್ನು ಪಟ್ಟದ ಮೇಲೆ ಕೂಡ್ರಿಸಿರಬಹುದು. ಅವನೇ ಮುಖ್ಯ ರಾಜಕರ್ತನಾಗಿರ ಬಹುದು. ಅವನ ಕಯ್ಯಲ್ಲೇ ಪಿಸಕಾದ ರಾಜ್ಯಸೂತ್ರಗಳಿದ್ದಿರಬಹುದು. ಆದರೂ ಅವನು ಶ್ರೀ ಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಪರಮಭಟ್ಟಾರಕ ಮುಂತಾದ ಬಿರುದುಗಳನ್ನು ಧರಿಸುವ ಸಂಭವವು ಎಷ್ಟು ಮಾತ್ರವೂ ಇಲ್ಲ.

೯೭೧ರಲ್ಲಿ ತೈಲಪನ ತಂದೆಯಾದ ವಿಕ್ರಮಾದಿತ್ಯನು ಸಾರ್ವಭೌಮ ನಾಗಿದ್ದಿಲ್ಲೆಂಬುದು ಮೇಲಿನ ಬರಹದಿಂದ ಸ್ಪಷ್ಟವಾಗಿ ಕಂಡುಬರು ತ್ತದಷ್ಟೇ. ಆ ವರ್ಷ ವಿಕ್ರಮಾದಿತ್ಯನು ಜೀವಂತನಾಗಿದ್ದನೋ ಇಲ್ಲೋ ಎಂಬ ಸಂಶಯುವು ಬರುತ್ತದೆ. ಅವನು ಜೀವಂತನಾಗಿದ್ದರೆ ಮಾಳವೆ ಯರು ರಾಜಧಾನಿಯನ್ನು ಸುಲಿದಾಗಾಗಲಿ ಮರುವರುಷಾಗಲಿ ಅವನು ಸತ್ತಿರಬೇಕು. ಏಕೆಂದರೆ ಅವನು ಇರುವಾಗಲೇ ತೈಲಪನು ಸಾರ್ವ ಭೌಮನಾಗಲಾರನು. ಆದ್ದರಿಂದ ೯೭೧ರಲ್ಲಿಯಾಗಲಿ ಅದಕ್ಕೂ ಮುಂಚಿತವಾಗಲಿ ವಿಕ್ರಮಾದಿತ್ಯನು ಸತ್ತಿದ್ದನೆಂದು ಊಹಿಸುವುದೇ ಹೆಚ್ಚು ಸಯುಕ್ತಿಕವಾದ್ದೆಂದು ಕಂಡುಬರುತ್ತದೆ.

ಅಳಿದ ಊರಿಗೆ ಉಳಿದವನೇ ಗವುಡ ಎಂಬ ಗಾದೆಯನ್ನು ವಾಚಕರು ಕೇಳಿರಬಹುದು. ಸಿಯಾಕಹರ್ಷನು ಕೊಟ್ಟಿಗನನ್ನು ಸರಿ ಸೋಲಿಸಿ, ಅವನ ಪಾಳೆಯವನ್ನು ಸುಲಿದ ಬಳಿಕ ಅವನ ಮಗನಾದ ಮುಂಜನು ಏನು ಅಡ್ಡಿಯಿಲ್ಲದೆ ರಾಷ್ಟ್ರಕೂಟರ ಪ್ರಸಿದ್ಧ ರಾಜಧಾನಿ ಯಾದ ಮಳಖೇಡಕ್ಕೆ ಬಂದು ಅದನ್ನು ಮುತ್ತಿದನು. ಇಂತಹ ಪ್ರಸಂಗದಲ್ಲಿ ಎಷ್ಟೋ ಜನರು ವಾಡಿಕೆಯಾಗಿ ತಂತಮ್ಮ ಲಾಭ ಸಂರಕ್ಷಣೆಗಳ ಮಾರ್ಗವನ್ನು ಹುಡುಕುತ್ತಾರೆ ಹೊರತು ರಾಜನಿಷ್ಠೆ ಯಿಂದ ಕಾದಲಿಕ್ಕೆ ಸಿದ್ಧರಾಗುವುದಿಲ್ಲೆಂಬುದು ಎಲ್ಲರಿಗೂ ಗೊತ್ತಿದ್ದ ಮಾತೇ ಸರಿ. ಮಾಳವೆಯರನ್ನು ಎದುರಿಸಲಿಕ್ಕೆ ಸಾಕಾಗುವಷ್ಟು ದಂಡು ರಾಜಧಾನಿಯಲ್ಲಿದ್ದಿಲ್ಲ. ಇದ್ದ ದಳವಾಯಿಗಳೂ ರಾಜ ಕುಮಾರರೂ ಜನರನ್ನು ಹುರಿದುಂಬಿಸಿ ಕಾದಲಿಕ್ಕೆ ಅನುವಾಗದೆ ವಿಜಾನಮೇಷಮಾಡುತ್ತ ಕುಳಿತರು. ರಾಜಧಾನಿಯನ್ನು ಕಾಪಾಡುವುದ

ಕ್ಕೋಸ್ಕರ ಪ್ರಾಣಕೊಡಲಿಕ್ಕೆ ಸಿದ್ಧರಾದ ಬಂಟರಿಗೆ ಸಾಕಷ್ಟು ಬೆಂಬಲವೇ ದೊರೆಯಲಿಲ್ಲ, ಪಟ್ಟಣದೊಳಗಿದ್ದವರು ಮುಂದೆ ಏನು ಮಾಡಬೇಕೆಂದು ಆಲೋಚಿಸುತ್ತ ಕುಳಿತಿರುವಾಗ, ಗೆಲವಿನಿಂದ ಉಬ್ಬಿದ ಮಾಳವೆಯರು ಕೋಟೆಯ ಗೋಡೆಗಳನ್ನೇರಿ ಕಾವಲುಗಾರರನ್ನು ತುಂಡರಿಸಿ, ಹೆಬ್ಬಾಗಿಲುಗಳನ್ನು ತೆರೆದು, ತಮ್ಮ ದಂಡಿನವರನ್ನು ಒಳಗೆ ಬರಗೊಟ್ಟರು. ಆಗ ಆ ಪೊಳಲಲ್ಲಿ ಆದ ಹಾಹಾಕಾರವನ್ನು ಬಣ್ಣಿಸಲಳವಲ್ಲ. ಅರಮನೆಯ ಹೆಂಗಸರೂ ಹೇಡಿಗಳೂ ಕಳ್ಳದಾರಿಯಿಂದ ಓಡಿ ಹೋದರು. ಕೆಲ ಎದೆಗಾರರು ತಂತಮ್ಮ ಆಸ್ತಿಮಾನಗಳನ್ನು ಕಾಯ್ದು ಕೊಳ್ಳಲಿಕ್ಕೆ ಕಾದಿ ಪ್ರಾಣಕ್ಕೆ ಎರವಾದರು. ಪತಿವ್ರತೆಯರು ತಮ್ಮ ಮಾನಸಂರಕ್ಷಣೆಗೋಸ್ಕರ ಬಾವಿ ಕೆರೆಯ ಪಾಲಾದರು. ಪರದೇಶಿಗಳಾದ ಮಕ್ಕಳ, ವಿಧವೆಗಳಾದ ಹೆಂಗಸರ, ಗಾಯಹೊಂದಿದ ಜನರ ಗೋಳಾಟವು ಊರಲ್ಲೆಲ್ಲ ಕೇಸರಿಟ್ಟಿತು. ನಿರಂಕುಶರಾದ ಮಾಳವೆಯರು ನಿಶ್ಚಿಂತತೆಯಿಂದ ಯಥಾವಕಾಶವಾಗಿ ರಾಜಧಾನಿಯನ್ನು ಸುಲಿದರು !!!

ಮಳಖೇಡವು ಮಾಳವೆಯರ ಕಯ್ಸೇರಿದಾಗ ವೀರಗಲಿಯಾದ ತೈಲಪನು ರಾಜಧಾನಿಯಲ್ಲಿದ್ದಿದ್ದಿಲ್ಲ. ಮಳಖೇಡದ ಸುಲಿಗೆಯ ಸುದ್ದಿಯು ಬಾದಾವಿಗೆ ಬಂದಕೂಡಲೆ, ಅವನ ಕೋಪಾಟೋಪವು ಹೆಚ್ಚಿತು. ಮಾಳವೆಯರಂತಹ ಕೀಳರು ಮಳಖೇಡದಂತಹ ಕರ್ನಾಟಕ ರಾಜಧಾನಿಯನ್ನು ಸುಲಿಯುವುದು ಕನ್ನಡಿಗರಿಗೆ ಬಹಳ ನಾಚಿಕೆಯ ಮಾತಾಯಿತೆಂದು ಅವನು ಮನಸ್ಸಿನಲ್ಲಿ ನೊಂದುಕೊಂಡನು. ಕಾಳೆ ಹೊಲೆಯನದಾದರೂ ಬಿರುದು ಒಡೆಯನದೆಂಬ ಗಾದೆಯ ಮಾತು ಅವನ ನೆನಪಿಗೆ ಬಂತು. ರಾಷ್ಟ್ರಕೂಟರು ತನ್ನ ಪೂರ್ವಜರಿಂದ ಮೋಸಮಾಡಿ ಕಿತ್ತಿಕೊಂಡ* ಸಾಮ್ರಾಜ್ಯವು ನ್ಯಾಯದಿಂದ ತನ್ನದೇ ಆಗಿರುತ್ತದೆಂಬ

---

* . . . . . . ಯೋ ರಾಷ್ಟ್ರಕೂಟಕುಟಿಲೈರ್ಗಮಿತಾಮಧಸ್ತಾತ್ ||
ಉದ್ಧೃತ್ಯ ಮಾಧವಯಿವಾದಿವಾರಾಹರೂಪೋವಭ್ರೆ||

೧ ನೆಯ ನಂಬರಿನ ದಾವಣಗೇರಿ ಶಾಸನ, ಕರ್ನಾಟಕ ಶಾಸನ ಸಂಗ್ರಹ, ಸಂ. ೧೧, ಕನ್ನಡ ಭಾಗ ಪುಟ ೫೪.

ಅಭಿಮಾನವು ಅವನಲ್ಲಿ ಹೆಚ್ಚಿತು. ಇದಲ್ಲದೆ ಕೊಟ್ಟಿಗನು ತನ್ನ ಮಾವ ನಾದ್ದರಿಂದ ಅವನ ಸೋಲಿನ ಸೇಡು ತೀರಿಸಿಕೊಳ್ಳುವುದು ತನ್ನ ಕರ್ತವ್ಯವೆಂಬ ತಿಳಿವಳಿಕೆಯೂ ಅವನಲ್ಲಿ ಹುಟ್ಟಿತು. ಆದಕಾರಣ ಅವನು ಲಗುಬಗೆಯಿಂದ ತನ್ನ ದಂಡನ್ನೆಲ್ಲ ಕೂಡಿಸಿಕೊಂಡು, ತನ್ನ ಆಪ್ತರೂ ಮಿತ್ರರೂ ಆದ ಸಾಮಂತರಿಗೆ ಬೇಗನೆ ತಂತಮ್ಮ ದಂಡುಗಳ ಸಹಿತವಾಗಿ ಬಂದು ತನ್ನನ್ನು ಕೂಡಬೇಕೆಂದು ತಿಳಿಸಲಿಕ್ಕೆ ದೂತರನ್ನಟ್ಟಿ, ಮಾಳವೆ ಯರ ಮೇಲೆ ದಂಡೆತ್ತಿ ಹೊರಟನು. ಇವನಂತೆಯೇ ಗಂಗರಸನಾದ ಮಾರಸಿಂಹನೂ ರಾಷ್ಟ್ರಕೂಟರಿಂದ ಪೋಷಿತನಾದ ಸವದತ್ತಿಯ ರಟ್ಟ ಸಾಮಂತನೂ ಮಳಖೇಡದ ದಾರಿಯನ್ನು ಹಿಡಿದರು.

ಮೂರು ದಿಕ್ಕುಗಳಿಂದ ೩ ದಂಡುಗಳು ತನ್ನ ವಿರುದ್ಧವಾಗಿ ಹೊರ ಟಿರುತ್ತವೆಂಬ ಸುದ್ದಿಯನ್ನು ಬೇಹಿನವರು ಮುಂಜನಿಗೆ ತಿಳಿಸಲು, ಅವನು ಮುಂದೆ ಏನುಮಾಡಬೇಕೆಂಬ ವಿಚಾರದಲ್ಲಿ ಮುಳುಗಿದನು. ಮೂರು ದಂಡುಗಳು ಒಟ್ಟುಗೂಡಿದರೆ, ತನ್ನ ದಂಡೆಲ್ಲ ನಾಶವಾಗಿ ತಾನು ಕಯ್ಸೆರೆ ಸಿಕ್ಕಬಹುದೆಂಬ ಹೆದರಿಕೆಯಿಂದ ಮುಂಜನು ಕಳವಳಗೊಂಡು, ಆದಷ್ಟು ಸುಲಿಗೆಯನ್ನು ಹೇರಿಕೊಂಡು ಮಳಖೇಡವನ್ನು ಬಿಟ್ಟು, ತನ್ನ ನಾಡಿನ ದಾರಿಯನ್ನು ಹಿಡಿದನು. ಮುಂದೆ ತುಸು ದಿವಸಗಳಲ್ಲೇ ವೀರಗಲಿಯಾದ ತೈಲಪನು ಮಳಖೇಡಕ್ಕೆ ಬಂದು ನೋಡುತ್ತಾನೆ, ಮಾಳವೆಯರು ಪಲಾಯನವ ಮಾಡಿದ್ದರು. ತಡಮಾಡಿದರೆ ಮಾಳವೆ ಯರು ತಪ್ಪಿಸಿಕೊಳ್ಳಬಹುದೆಂಬ ಹೆದರಿಕೆಯಿಂದ ತೈಲಪನು ತನ್ನ ಆಪ್ತ ನಾದ ೨ ನೆಯ ಅರಿಕೇಸರಿಯನ್ನು ಮಳಖೇಡದ ಸಂರಕ್ಷಣೆಗೋಸ್ಕರ ಇಟ್ಟು, ತನ್ನನ್ನು ಹೊಸತಾಗಿ ಕೂಡಿದ ಉಳಿದ ಸಾಮಂತರ ದಂಡು ಗಳೊಡನೆ ಮಾಳವೆಯರನ್ನು ಅವಸರದಿಂದ ಬೆನ್ನಟ್ಟ ಹೋದನು (೯೭೨?). ಮಾಳವೆಯರು ದಾರಿಯಲ್ಲಿ ಸಿಕ್ಕರು. ಮುಂದೆ ಆದ ೨-೩ ಕಾಳೆಗಗಳಲ್ಲಿ ತೈಲಪನು ಅವರನ್ನು ನೆರೆಸೋಲಿಸಿ, ಅವರು ಒಯ್ಯುತ್ತಿದ್ದ ಎಲ್ಲ ಸುಲಿಗೆಯನ್ನು ಕಸಕೊಂಡನು. ರಾಷ್ಟ್ರಕೂಟರ ಎಲ್ಲ ರಾಜ ಚಿಹ್ನಗಳೂ ಹರಳುಕಲ್ಲು ಮುತ್ತು ಬಂಗಾರದ ಒಡವೆಗಳೂ ನಗದು ಹಣವೂ ತೈಲಪನ ಕಯ್ಸೇರಿದವು.

ಅತ್ತ ತೈಲಪನು ಮುಂಜನನ್ನು ಬೆನ್ನಟ್ಟಿ ಹೋದ ಕೆಲ ದಿವಸಗಳ ಮೇಲೆ ಗಂಗವಾಡಿಯಿಂದ ಮಾರಸಿಂಹನೂ ಸೌದತ್ತಿಯಿಂದ ರಟ್ಟರೂ ಮಳಖೇಡಕ್ಕೆ ಬಂದರು. ಚಾಳುಕ್ಯ ಅರಿಕೇಸರಿಯು ಬಂಡುಗಾರರನ್ನೂ ಪುಂಡ ಸಾವಂತರನ್ನೂ ತುಂಟರನ್ನೂ ದಂಡಿಸತೊಡಗಿದ್ದರಿಂದ ರಾಜಧಾನಿಯಲ್ಲಿ ತಕ್ಕಮಟ್ಟಿಗೆ ಶಾಂತತೆಯು ಹಬ್ಬಿತ್ತು. ಓಡಿಹೋಗಿ ಅಡಗಿಕೊಂಡ ಅರಮನೆಯವರು ಮರಳಿ ಬರಹತ್ತಿದ್ದರು. ಸಂತೆ ಪೇಟೆಗಳು ಪೂರ್ವದಂತೆ ಯಥಾಪ್ರಕಾರವಾಗಿ ನಡೆಯಲಾರಂಭಿಸಿದ್ದವು. ಮಾಳವೆಯರಿಂದ ಸೋತು ಓಡಿ ಹೋದ ದಂಡಾಳುಗಳೂ ದಳವಾಯಿಗಳೂ ತಿರುಗಿ ಬರಲಾರಂಭಿಸಿದ್ದರು. ಇದನ್ನೆಲ್ಲ ನೋಡಿ ಗಂಗ ರಟ್ಟ ಸಾಮಂತರು ಭಯಭೀತರಾದರು. ತೈಲಪನು ತಿರುಗಿ ಬರುವ ವರೆಗೆ ಅರಿಕೇಸರಿಯನ್ನು ರಾಜಧಾನಿಯಲ್ಲಿರಗೊಟ್ಟರೆ ರಾಷ್ಟ್ರಕೂಟರ ಸಾಮ್ರಾಜ್ಯವು ಚಾಳುಕ್ಯರ ಪಾಲಾಗುವುದೆಂದು ನಿಶ್ಚಯಿಸಿದರು. ಈ ಅನಿಷ್ಟ ನಿವಾರಣೆಗೋಸ್ಕರ ಯಾವ ಉಪಾಯವನ್ನು ಕಯ್ಕೊಳ್ಳಬೇಕೆಂಬ ವಿಚಾರಬಿತ್ತು. ದಂಡೋಪಾಯದಿಂದ ಅದು ಸಾಧಿಸಲಿಕ್ಕಿಲ್ಲೆಂದು ಅವರ ತಿಳಿವಳಿಕೆ ಆಯಿತು. ಏಕೆಂದರೆ ಅರಿಕೇಸರಿಯು ಕೋಟೆಯ ಗೋಡೆಗಳ ದುರಸ್ತಿಯನ್ನು ಮಾಡಿಸಿದ್ದರಿಂದ ತೈಲಪನು ತಿರುಗಿ ಬರುವುದರೊಳಗೆ ರಾಜಧಾನಿಯನ್ನು ಹಿಡಿದುಕೊಳ್ಳುವುದು ತಮ್ಮ ಕಯ್ಯಿಂದ ಆಗದ ಮಾತೆಂದು ಅವರು ಮನಗಂಡಿದ್ದರು. ಆದಕಾರಣ ಸಾಮ ದಾನ ಭೇದೋಪಾಯಗಳನ್ನು ಮಾಡತೊಡಗಿದರು. ಅರಮನೆಯಲ್ಲಿಯೂ ದರಬಾರಿನಲ್ಲಿಯೂ ಪಟ್ಟಣವಾಸಿಗಳಲ್ಲಿಯೂ ಅವರ ಗೊತ್ತಿನವರೂ ಆಪ್ತೇಷ್ಟರೂ ನಂಬಿಗಸ್ಥರೂ ಎಷ್ಟೋ ಜನರಿದ್ದರು. ಇದಲ್ಲದೆ ಚಾಳುಕ್ಯರು ರಾಷ್ಟ್ರಕೂಟ ಮನೆತನದ ವಂಶಪರಂಪರರಾದ ವಿರೋಧಿಗಳೆಂಬ ತಿಳಿವಳಿಕೆಯು ಜನರಲ್ಲಿ ಹಬ್ಬಿತ್ತು. ಆದ್ದರಿಂದ ಮುಖ್ಯ ಮುಖ್ಯ ಜನರು ತನಗೆ ಅನುಕೂಲರಾಗಿದ್ದುದನ್ನು ಕಂಡು, ಮಾರಸಿಂಹನು ಚಾಳುಕ್ಯ ಅರಿಕೇಸರಿಯನ್ನು ರಾಜಧಾನಿಯಿಂದ ಹೊರಗೆ ಹಾಕಲಿಕ್ಕೆ ಒಂದು ಹಂಚಿಕೆಯನ್ನು ತೆಗೆದನು. ಮುಂಜನು ಮಳಖೇಡವನ್ನು ಹೊಕ್ಕಾಗ ಕೊಟ್ಟಿಗನು ಮಡಿದಿದ್ದನಷ್ಟೇ. ತೆರವಾದ ರಾಷ್ಟ್ರಕೂಟ ಸಿಂಹಾಸನದ ಮೇಲೆ ಅವನ ತಮ್ಮನ ಮಗನಾದ

ಕರ್ಕರ ಅಥವಾ ಕಕ್ಕಲನನ್ನು ಕೂಡ್ರಿಸುವುದು ಅವಶ್ಯವೆಂದು ಅವನೂ ರಟ್ಟ ಸಾಮಂತನೂ ಉಳಿದ ಕೆಲಸರದಾರರೂ ಒಟ್ಟುಗೂಡಿ ಅರಿಕೇಸರಿಗೆ ಸೂಚಿಸಿದರು. ಅದಕ್ಕವನು—ಮಾಳವೆಯರನ್ನು ಮಳಖೇಡದಿಂದ ಓಡಿಸಿದವನು ತೈಲಪನು. ಅವನೇ ಸಾಮ್ರಾಜ್ಯಕ್ಕೆ ಬಂದ ಮಾಳವೆಯರ ಕಾಟವನ್ನು ತಪ್ಪಿಸಿದವನು. ಬೇಗನೆ ತಿರುಗಿ ಬರಬೇಕೆಂದು ಅವನಿಗೆ ನಾನು ೫ ಮಂದಿ ಒಂಟೆಸ್ವಾರರನ್ನು ಕಳಿಸುವೆನು. ಅವನು ಬಂದ ಬಳಿಕ ಅವನ ಸಮ್ಮತಿಯಿಂದ ಯಾವನಾದರೊಬ್ಬ ಅರಸುಮಗನನ್ನು ಆರಿಸಬಹುದು. ಅವನನ್ನು ಕೇಳದೆ ಪಟ್ಟಬಂಧೋತ್ಸವವನ್ನು ಮಾಡುವುದು ಸರಿಯಲ್ಲ ಎಂದು ಖಂಡಿತವಾಗಿ ಹೇಳಿದನು. ಈ ಉತ್ತರದಿಂದ ಮಾರಸಿಂಹ ರಟ್ಟ ಸಾಮಂತರ ಸಂಶಯವು ಹೆಚ್ಚಿತು. ಜಯಶಾಲಿಯಾದ ತೈಲಪನು ತಿರುಗಿ ಬಂದ ಬಳಿಕ ರಾಷ್ಟ್ರಕೂಟ ಸಾಮ್ರಾಜ್ಯವು ಚಾಳುಕ್ಯರ ಪಾಲಾಗುವುದೆಂಬ ಹೃದ್ರೋಗವು ಅವರಿಗೆ ಹತ್ತಿತು. ಆದ್ದರಿಂದ ಅವರು ತಮಗೆ ಜನಸಾಹಾಯ್ಯವಿದ್ದುದರಿಂದ ಅವಸರದಿಂದ ಎಲ್ಲ ಸಿದ್ಧತೆಯನ್ನು ಮಾಡಿಸಿ ಕಕ್ಕಲನಿಗೆ ಪಟ್ಟಗಟ್ಟಿದರು. ಅವನು ಸಾರ್ವಭೌಮನಾದ ಕೂಡಲೆ ರಾಜಧಾನಿಯನ್ನು ಬಿಟ್ಟು ತನ್ನ ಊರಿಗೆ ಹೋಗಬೇಕೆಂದು ಆಜ್ಞಾಪತ್ರವನ್ನು ಅರಿಕೇಸರಿಗೆ ಕಳುಹಿದನು. ಹಗೆಗಳ ನಡುವೆ ಒಬ್ಬಂಟಿಗನಾದ ಅರಿಕೇಸರಿಯು ಮುಂದುಗಾಣದೆ ನಿರುಪಾಯನಾಗಿ ತನ್ನ ಊರಾದ ಬಾದಾವಿಯ ದಾರಿಯನ್ನು ಹಿಡಿದನು.

ತೈಲಪನು ತಿರುಗಿ ಬರುವುದಕ್ಕಿಂತ ಮೊದಲೇ ಅರಿಕೇಸರಿಯನ್ನು ಮುರಿಬಡಿದು, ಅವನನ್ನು ಸೆರೆಹಿಡಿಯಬೇಕೆಂಬುದೇ ಮಾರಸಿಂಹನ ಆಲೋಚನೆಯಾಗಿತ್ತು. ಆದಕಾರಣ ಅವನು ಅರಿಕೇಸರಿಯು ಹೋದ ೧-೨ ದಿವಸಗಳಲ್ಲೇ ಮಂಗಿ ಎಂಬ ದಳವಾಯಿಯನ್ನು ಅರಿಕೇಸರಿಯ ದಂಡಿನ ಮೇಲೆ ಬಿದ್ದು ಅವನನ್ನು ಸೋಲಿಸಿ ಸೆರೆಹಿಡಿದು ತರಲಿಕ್ಕೆ ಕಳುಹಿದನು. ದೈವರಕ್ಷಿತರಿಗೆ ಯಾರಿಂದ ಏನು ಭಯ? ಎಂತಹ ಗಂಡಾಂತರ ಬಂದರೂ ದೇವರು ಅವರನ್ನು ಕಾಪಾಡುವನು*. ಉಬ್ಬಿನಿಂದ

* ಅರಕ್ಷಿತಸ್ತಿಷ್ಠತಿ ದೈವರಕ್ಷಿತಃ।
ಸುರಕ್ಷಿತೋ ದೈವಹತೋವಿನಶ್ಯತಿ॥ ಸುಭಾಷಿತ.

ಅರಿಕೇಸರಿಯನ್ನು ಹಿಡಿಯಲಿಕ್ಕೆ ಬಂದ ಮುಂಗಿಯ ಹಾಡು ೧೭ನೆಯ ಶತಮಾನದಲ್ಲಿ ಶಿವಾಜಿಯನ್ನು ಸೆರೆಹಿಡಿಯಲಿಕ್ಕೆ ಬಂದ ಅಬ್ಜುಲ್ಲಖಾನನ ಹಾಡಾಯಿತು. ವೀರಮಣಿಯಾದ ಅರಿಕೇಸರಿಯು ರಾಷ್ಟ್ರಕೂಟ ದಂಡನ್ನು ನೆರೆಸೋಲಿಸಿ, ಮುಂಗಿಯ ಶಿರಚ್ಛೇದವನ್ನು ಮಾಡಿದನು!!! ಈ ಸುದ್ದಿಯನ್ನು ಕೇಳಿ ಬಯಕೆಗೆಟ್ಟ ಮಾರಸಿಂಹನು ವಿಶ್ವಪ್ರಯತ್ನಮಾಡಿ, ಹೊಸದೊಂದು ದೊಡ್ಡ ದಂಡನ್ನು ಕೂಡಿಸಿ, ಅರಿಕೇಸರಿಯನ್ನು ನಿರ್ಮೂಲಮಾಡಲಿಕ್ಕೆ ಕಳುಹಿಕೊಟ್ಟನು (೯೭೩?). ಈ ದಂಡಿನ ದಳವಾಯಿಯು ಕಕ್ಕಲನ ತಮ್ಮನಾದ ಬಪ್ಪುವನೆಂಬವನಾಗಿದ್ದನು. ಅವನು ಹೋಗಿ ಬಾದಾಮಿಯ ಕೋಟೆಯನ್ನು ಮುತ್ತಿದನು. ಜಾಗರೂಕನಾದ ಅರಿಕೇಸರಿಯು ಹಗೆಗಳಿಗೆ ಅನ್ನಸಾಮಗ್ರಿಯು ದೊರೆಯದಂತೆ ಏರ್ಪಾಡುಮಾಡಿ, ಒಂದು ದಿನ ಅವರು ಎಚ್ಚರದಪ್ಪಿ ಮಲಗಿದ ಇರಳಿನಲ್ಲಿ ಅವರ ಪಾಳೆಯದ ಮೇಲೆ ಬಿದ್ದು, ಎದುರಾದವರನ್ನು ತುಂಡರಿಸಿ, ಎಲ್ಲ ದಂಡನ್ನು ದಿಕ್ಕುಪಾಲಾಗಿ ಓಡಿಸಿಬಿಟ್ಟನು. ಮರುದಿವಸ ಬೆಳಿಗ್ಗೆ ನೋಡಲು ಒಬ್ಬ ದಂಡಾಳಾದರೂ ಬಾದಾಮಿಯ ನೆರೆಯಲ್ಲಿ ಕಾಣಿಸಲಿಲ್ಲ.

ಅತ್ತ ವೀರಶಿರೋಮಣಿಯಾದ ತೈಲಪನು ಮುಂಜನನ್ನು ಅಲ್ಲಲ್ಲಿ ಸೋಲಿಸುತ್ತ ಬೆನ್ನಟ್ಟಿ ಹೋಗುತ್ತಿರುವಾಗ ಅರಿಕೇಸರಿಯು ಕಳಿಸಿದ ಒಂಟೆಸ್ವಾರರು ಬಂದು, ಅರಿಕೇಸರಿಯು ಕೊಟ್ಟ ಪತ್ರವನ್ನು ಅವನ ಮುಂದಿಟ್ಟು, ಮಳಖೇಡದಲ್ಲಿ ನಡೆದಿರುವ ಎಲ್ಲ ಸಂಗತಿಗಳನ್ನು ತಮಗೆ ಗೊತ್ತಿದ್ದಷ್ಟು ವಿವರಿಸಿ ಹೇಳಿದರು.

ತೈಲಪನು ಅರಿಕೇಸರಿಯ ಪತ್ರವನ್ನು ಲಕ್ಷ್ಯಪೂರ್ವಕವಾಗಿ ಓದಿದನು. ಮಾರಸಿಂಹನ ಸ್ವಾರ್ಥಪರತ್ವವನ್ನೂ ಹುಚ್ಚ ಪ್ರಯತ್ನವನ್ನೂ ನೋಡಿ ಅವನು ಮುಗುಳುನಗೆ ನಕ್ಕನು. "ರಾಷ್ಟ್ರಕೂಟರು ನನ್ನ ಪೂರ್ವಜನನ್ನು ಮೋಸಮಾಡಿ ಸಾಮ್ರಾಜ್ಯವನ್ನು ಸೆಳೆದುಕೊಂಡರು. ಅವರ ಪುಣ್ಯವು ತೀರಿತು. ಆದ್ದರಿಂದ ಅವರಿಗೆ ದೈವಬಲವು ತಪ್ಪಿತು. ಆದಕಾರಣ ಅವರ ಯಾವ ಪ್ರಯತ್ನವೂ ಸಫಲವಾಗಲಾರದು" ಎಂದು ಮನಸ್ಸಿನಲ್ಲಿ ಆಲೋಚಿಸಿ, ತನ್ನ ಕಯ್ಕೆಳಗಿನ ದಳವಾಯಿಗಳನ್ನು ಕರೆದು

"ಇನ್ನು ಮುಂದೆ ಮಾಳವೆಯರನ್ನು ಬೆನ್ನಟ್ಟುವ ಕಾರಣವಿಲ್ಲ. ಮಳಖೇಡಕ್ಕೆ ಬೇಗನೆ ತಿರುಗಿ ಹೋಗಬೇಕಾಗಿದೆ. ನಾಳಿನ ಬೆಳಗಿನ ಜಾವದಲ್ಲೇ ಈ ಸ್ಥಳವನ್ನು ಬಿಡುವ ಸಿದ್ಧತೆಯನ್ನು ಮಾಡಿರಿ" ಎಂದು ಅಪ್ಪಣೆಯನ್ನಿತ್ತನು.

ಬಪ್ಪುವಿನ ದಂಡು ರಾಜಧಾನಿಯನ್ನು ಬಿಟ್ಟ ೧೦–೧೨ ದಿವಸಗಳ ಮೇಲೆ ವೀರಶಿರೋಮಣಿಯಾದ ತೈಲಪನು ಮಳಖೇಡದ ಹತ್ತಿರಕ್ಕೆ ಬಂದನು. ಆಗ ಮಾರಸಿಂಹನಿಗಾದ ಭಯವಿಸ್ಮಯವನ್ನು ಬಣ್ಣಿಸಲಳವಲ್ಲ. ರಾಜಧಾನಿಯನ್ನು ಕಾಪಾಡುವಷ್ಟು ದಂಡಿದ್ದಿಲ್ಲ; ಬೊಕ್ಕಸದಲ್ಲಿ ಹಣವಿದ್ದಿಲ್ಲ; ಅವನ ಕೃಷ್ಣಕಾರ್ಯಕ್ಕೆ ಬೇಸತ್ತ ಸರದಾರರು ತೈಲಪನನ್ನು ಆಶ್ರಯಿಸಲಿಕ್ಕೆ ಮೇಲೊರೆಯುತ್ತಿದ್ದರು. ಇಂತಹ ದುರ್ಧರ ಪ್ರಸಂಗದಲ್ಲಿಯಾದರೂ ಮಾರಸಿಂಹನು ಎದೆಗುಂದಲಿಲ್ಲ. ಅರಮನೆಯ ಹೆಂಗಸರ ಚಿನ್ನ ಹರಳುಕಲ್ಲು ಮುತ್ತಿನ ಒಡವೆಗಳೂ ಕಿರೀಟ ಮುಂತಾದ ರಾಜಚಿಹ್ನಗಳೂ ಸಾವುಕಾರರ ಮನೆಯ ದಾರಿಹಿಡಿದವು. ಅವುಗಳನ್ನು ಅಡವಾಗಿಟ್ಟು ಸಾಲತೆಗೆದು, ಹೊಸ ದಂಡಾಳುಗಳನ್ನಿಟ್ಟುಕೊಂಡು, ತೈಲಪನನ್ನು ಎದುರಿಸಲಿಕ್ಕೆ ಹೊರಟನು. ತೈಲಪ ಮಾರಸಿಂಹರಿಬ್ಬರೂ ಅನುಭವವುಳ್ಳ ಶೂರ ದಳವಾಯಿಗಳಾಗಿದ್ದರೂ ಮಾರಸಿಂಹನ ದಂಡು ಬಿಟ್ಟಿಯವರದಾಗಿತ್ತು. ಅದರಲ್ಲಿ ಶಿಸ್ತಾಗಲಿ ವಿಧೇಯತ್ವವಾಗಲಿ ಹುರುಪಾಗಲಿ ಕಂಡುಬರುತ್ತಿದ್ದಿಲ್ಲ. ತೈಲಪನ ದಂಡಾಳುಗಳು ಕಾಳಗಗಳಲ್ಲಿ ನುರಿತವರೂ, ಗೆಲವಿನಿಂದ ಉಬ್ಬಿದವರೂ, ತೈಲಪನಿಗೆ ಮೆಚ್ಚಿದವರೂ ಆಗಿದ್ದರು. ಎರಡೂ ದಂಡುಗಳ ನಡುವೆ ಕಾಳಗವೆಸಗಿತು. ಈ ಕಾಳಗದ ಪರಿಣಾಮದ ಮೇಲೆ ತನ್ನ ಸರ್ವಸ್ವವು ಅವಲಂಬಿಸಿದ್ದುದರಿಂದ ಮಾರಸಿಂಹನು ಪ್ರಾಣದ ಹಂಗುದೊರೆದು ಅತಿಸಾಹಸಮಾಡಿದನು. ತೈಲಪನಾದರೂ ಕಡಮೆ ಸಾಹಸಮಾಡಲಿಲ್ಲ. ಅವನು ಎಚ್ಚರದಿಂದ ತನ್ನ ದಂಡನ್ನು ಹುರಿದುಂಬಿಸುತ್ತ ಮಾರಸಿಂಹನಿದ್ದಲ್ಲಿ ತಾನೇ ಹೋಗಿ ಕಾದುತ್ತ ಶತ್ರುಗಳ ಆಟ ಸಾಗದಂತೆ ಮಾಡಿದನು. ಕೊನೆಗೆ ಒಲಿದ ಜಯಲಕ್ಷ್ಮಿಯು ಅವನ ಕೊರಳೊಳಗೆ ಮಾಲೆಯನ್ನು ಹಾಕಿದಳು (೯೭೩). ಈ ಕಾಳಗಕ್ಕೆ **ಮಳಖೇಡ ಕಾಳಗ**ವೆನ್ನಬಹುದು.

ಮರುದಿವಸ ಜಯಶಾಲಿಯಾದ ತೈಲಪನು ರಾಷ್ಟ್ರಕೂಟರ ರಾಜಧಾನಿಯಾದ ಮಳಖೇಡವನ್ನು ಪ್ರವೇಶಿಸಿ ನೋಡಲು, ಅಲ್ಲಿ ಕಕ್ಕಲನೂ ಇದ್ದಿಲ್ಲ; ಮಾರಸಿಂಹನೂ ಇದ್ದಿಲ್ಲ. ಅರಮನೆಯಲ್ಲಿ ಒಂದು ಪಿಳ್ಳೆಯಾದರೂ ಇದ್ದಿಲ್ಲ. ಮಾರಸಿಂಹನು ಅರಸುಮನೆತನದ ಎಲ್ಲ ಜನರನ್ನು ಕಟ್ಟಿಕೊಂಡು ಊರು ಬಿಟ್ಟು ಹೋಗಿದ್ದನು. ಆದಕಾರಣ ನಮ್ಮ ವೀರಶಿರೋಮಣಿಯು ಮಳಖೇಡದಲ್ಲೇ ಕೆಲದಿವಸ ನಿಂತು, ಶತ್ರುಗಳು ಮುಂದೆ ಏನು ಮಾಡುವ ಆಲೋಚನೆಯಲ್ಲಿರುತ್ತಾರೆಂಬುದನ್ನು ತಿಳಿದುಕೊಳ್ಳಲಿಕ್ಕೆ ಗುಪ್ತಚಾರರನ್ನು ಕಳುಹಿದನು. ಅವರೊಳಗೊಬ್ಬನು ಬೇಗನೆ ತಿರುಗಿ ಬಂದು ಹೇಳಿದ್ದೇನಂದರೆ:—"ಜೀಯಾ, ನಾನು ಸನ್ಯಾಸಿಯ ವೇಷ ಧರಿಸಿ, ಮಾರಸಿಂಹನನ್ನು ಅರಸುತ್ತ ಹೋದೆನು. ಅವನು ಕೃಷ್ಣಾನದಿಯ ಆಚೆಗೆ ಮುದಗಲ್ಲಿನ ಹತ್ತಿರ ಪಾಳೆಯಹಾಕಿಕೊಂಡು ನಿಂತಿದ್ದಾನೆ. ಸವದತ್ತಿಯ ರಟ್ಟರೂ ಬೇರೆ ಕೆಲವರೂ ಅವನಿಗೆ ನೆರವಾಗಲಿಕ್ಕೆ ಬರುವವರಿದ್ದಾರಂತೆ. ಅವರ ದಾರಿಯನ್ನು ನೋಡುತ್ತ ಅವನು ಕುಳಿತಿದ್ದಾನೆ. ಅವರು ಬಂದ ಕೂಡಲೆ ತಮ್ಮ ಮೇಲೆ ಸಾಗಿ ಬರುವವನಿದ್ದಾನಂತೆ. ಕಕ್ಕಲ ಮಹಾರಾಜರು ಅದೇ ಪಾಳೆಯದಲ್ಲಿರುತ್ತಾರೆ. ಇದ್ದ ಸಂಗತಿಯನ್ನು ಅರಿಕೆಮಾಡಿಕೊಂಡಿರುತ್ತೇನೆ. ದಿವ್ಯ ಚಿತ್ತಕ್ಕೆ ಬಂದಂತೆ ಮಾಡಬಹುದು."

ಈ ಸುದ್ದಿಯನ್ನು ಕೇಳಿದ ಕೂಡಲೆ ನಮ್ಮ ವೀರಶಿರೋಮಣಿಯ ಎದೆ ಉಬ್ಬಿತು, ಕಣ್ಣು ಕೆಂಪಗಾದವು, ಮೈಯ್ಯಲ್ಲಿ ವೀರಶ್ರೀಯು ತುಂಬಿತು, ಗಂಗ ರಟ್ಟರ ದಂಡುಗಳನ್ನು ತುಂಡರಿಸುವ ಸಂಕಲ್ಪವು ತಲೆದೋರಿತು. ಕೂಡಲೆ ತನ್ನ ಎಲ್ಲ ದಳವಾಯಿಗಳನ್ನು ಕರೆಯಿಸಿ, ಮರುದಿವಸ ಮುಂಜಾವಿನಲ್ಲಿ ಮುದಗಲ್ಲಿಗೆ ಹೊರಡಬೇಕೆಂದು ಕಟ್ಟಪ್ಪಣೆಯನಿತ್ತನು. ತೈಲಪನು ಒತ್ತರದಿಂದ ಹೋಗಿ ರಟ್ಟರ ದಂಡು ಬರುವುದಕ್ಕಿಂತ ಮೊದಲೇ ಮಾರಸಿಂಹನ ದಂಡಿನ ಮೇಲೆ ಬಿದ್ದನು. ಮಾರಸಿಂಹನು ಎಷ್ಟು ಹೋರಾಡಿದರೂ ಗೆಲವು ತೈಲಪನಿಗೆ ಬಂತು. ಮಾರಸಿಂಹನ ದಂಡು ದಿಕ್ಕಾಪಾಲಾಯಿತು. ಕಕ್ಕಲನು ಕಾಳಗದಲ್ಲಿ ಮಡಿದನೋ ಓಡಿ

ಹೋಗುವಾಗ ನುಡಿದನೋ ಗೊತ್ತಾಗುವುದಿಲ್ಲ. ಮಾರಸಿಂಹನು ಕೆಲ ಸಂಗಡಿಗರೊಡನೆ ಪಾರಾಗಿ ಓಡಿಹೋದನು.

ಈ ಗೆಲವಿನಿಂದ ತೈಲಪನ ಅರ್ಧ ಚಿಂತೆಯು ಕಡಮೆಯಾಯಿತು. ಇನ್ನು ಸೌದತ್ತಿಯ ರಟ್ಟರ ಸಮಾಚಾರವ ತೆಗೆದುಕೊಳ್ಳುವುದೊಂದೇ ಕೆಲಸ ಮಾತ್ರ ಉಳಿಯಿತು. ತೈಲಪನು ಮುಂಬುಂಬ ಎಚ್ಚರುಳ್ಳವನೂ ಕಾರ್ಯದಕ್ಷನೂ ಆದ್ದರಿಂದ ತಡಮಾಡದೆ ಸೌದತ್ತಿಯ ಮೇಲೆ ದಂಡೆತ್ತಿ ಹೋದನು. ಹಾದಿಯಲ್ಲೇ ರಟ್ಟರ ದಂಡು ಸಿಕ್ಕಿತು. ಕೂಡಲೆ ಅದರ ಮೇಲೆ ಬಿದ್ದು, ಸೋಲಿಸಿ, ಓಡಿಸಿ ಬೆನ್ನಟ್ಟಿದನು. ಅವನು ಸೌದತ್ತಿಯ ಸಮೀಪಕ್ಕೆ ಬರಲು, ರಟ್ಟ ಸಾಮಂತನಾದ ಶಾಂತಿ ವರ್ಮನು ಹೆದರಿ ಶರಣು ಬಂದು, ತೈಲಪನ ಸಾಮಂತನಾಗಿರಲಿಕ್ಕೆ ಒಡಂಬಟ್ಟು, ಹೇರಳ ಕಪ್ಪುಗಾಣಿಕೆಯನ್ನೊಪ್ಪಿಸಿದನು. ದೂರದೃಷ್ಟಿ ಯಾದ ತೈಲಪನು ಅವನನ್ನು ಕ್ಷಮಿಸಿ, ಮಾರಸಿಂಹನಿಗೆ ಯಾವ ತರದಿಂದಲೂ ಸಾಹಾಯ್ಯಮಾಡಕೂಡದೆಂದು ಅವನಿಂದ ವಚನತೆಗೆದು ಕೊಂಡು, ಸೌದತ್ತಿಯ ಸಾಮಂತಪದದಲ್ಲೇ ಅವನನ್ನು ಇರಗೊಟ್ಟನು. ಅಂದಿನಿಂದ ಸೌದತ್ತಿ ರಟ್ಟರು ಕಲ್ಯಾಣದ ಚಾಳುಕ್ಯರ ಸಾಮಂತರಾಗಿ ನಡೆದುಕೊಂಡರು. ಶಾಂತಿವರ್ಮನು ತಾನು ತೈಲಪ ಸಾರ್ವಭೌಮನ ಮಹಾಸಾಮಂತನೆಂದು ೯೮೦ ನೆಯ ಇಸ್ವಿ ದಶಂಬರ ತಿಂಗಳದ ತನ್ನ ಸೌದತ್ತಿಯ ಶಿಲಾಲೇಖದಲ್ಲಿ ಬರೆಯಿಸಿದ್ದಾನೆ.

ಮಾಳವೆಯ ಮುಂಜನು ಮಳಖೇಡವನ್ನು ಸೂರೆಗೊಂಡಾಗ ವೀರಶಿರೋಮಣಿಯಾದ ತೈಲಪನು ಧೈರ್ಯಮಾಡಿ ಟೊಂಕಕಟ್ಟಿ, ಅವನನ್ನು ಹೊರಗೆ ಹಾಕಿ ಬೆನ್ನಟ್ಟಿದನೆಂತಲೂ ಮಾರಸಿಂಹ (ರಟ್ಟ ಸಾಮಂತ) ಶಾಂತಿವರ್ಮರು ತೈಲಪನನ್ನು ಲೆಕ್ಕಿಸದೆ, ಕಕ್ಕಲನಿಗೆ ಪಟ್ಟಗಟ್ಟಿ ತೈಲಪನ ಸಾಹಾಯಕನಾದ ಅರಿಕೇಸರಿಯನ್ನು ರಾಜಧಾನಿ ಯಿಂದ ಹೊರಗೆ ಹಾಕಿಸಿದ್ದರಿಂದ ತೈಲಪನು ಸಿಟ್ಟಿಗೆದ್ದು ಮಳಖೇಡ, ಮುದಗಲ್ಲು, ಸೌದತ್ತಿ ಕಾಳೆಗಗಳಲ್ಲಿ ಅವರನ್ನು ಸೋಲಿಸಿದನೆಂತಲೂ ಮೇಲೆ ಊಹೆಯಿಂದ ಬರೆದಿರುತ್ತೇವಷ್ಟೇ. ಈ ವಿವರಣೆಗೆ ಸಾಕ್ಷಾತ್ ಶಾಬ್ದಪ್ರಮಾಣಗಳು ಇನ್ನೂ ಸಿಕ್ಕಿಲ್ಲ. ಈಗ ದೊರೆತಿರುವ ಕೆಲ ಲೇಖ

ಗಳನ್ನು ಆಧಾರವಾಗಿಟ್ಟು ಮೇಲಿನ ಸಂಗತಿಗಳನ್ನು ವಿಸ್ತಾರವಾಗಿ ಬರೆದಿರುತ್ತೇನೆ. ಈ ಲೇಖಗಳು ಕೆಳಗೆ ಬರೆದಂತೆ ಇರುತ್ತವೆ:—

೧. ಮಾಳವೆಯ ಸಿಯಾಕಹರ್ಷನಿಂದ ಕೊಟ್ಟಿಗನಿಗೆ ಬಂದ ಸೋಲು, ಮಳಖೇಡದ ಸುಲಿಗೆ—ಇವೆರಡು ಸಂಗತಿಗಳು ಸಾಮ್ರಾಜ್ಯವನ್ನು ಸಂಪಾದಿಸಲಿಕ್ಕೆ ತೈಲಪನಿಗೆ ಅನುಕೂಲತೆಯನ್ನು ಮಾಡಿಕೊಟ್ಟವೆಂದು ಡಾ॥ ಫ್ಲೀಟರು ಬರೆಯುತ್ತಾರೆ*. ಈ ಅಭಿಪ್ರಾಯದಿಂದ ತೈಲಪನು ಮುಂಜನನ್ನು ಮಳಖೇಡದಿಂದ ಹೊರಗೆಹಾಕಿ ಅರಿಕೇಸರಿಯನ್ನು ರಾಜಧಾನಿಯ ಸಂರಕ್ಷಣೆಗಿಟ್ಟು ಮಾಳವೆಯರನ್ನು ಬೆನ್ನಟ್ಟಿದನೆಂದು ಅನುಮಾನಮಾಡಿದ್ದೇನೆ.

೨. ೧೦೦೮ನೆಯ ಇಸ್ವಿಯ ಖಾರೆಪಾಟಣದ ಶಾಸನದಲ್ಲಿ ತೈಲಪನು ಕಕ್ಕಲನನ್ನು ಸೋಲಿಸಿ, ರಾಜ್ಯ ದೊರಕಿಸಿದನೆಂದು ಬರೆದಿದೆ. ಇದರಿಂದ ಮಾರಸಿಂಹ-ಶಾಂತಿವರ್ಮರು ಕಕ್ಕಲನಿಗೆ ಪಟ್ಟಗಟ್ಟಿ ಅರಿಕೇಸರಿಯನ್ನು ಹೊರಗೆ ಹಾಕಿಸಿದ್ದರಿಂದ, ತೈಲಪನು ತಿರುಗಿ ಬಂದು, ಕಕ್ಕಲ ಮಾರಸಿಂಹರನ್ನು ಸೋಲಿಸಿ, ಅವರನ್ನು ಮಳಖೇಡದಿಂದ ಓಡಿಸಿದನೆಂದು ಊಹಿಸಿದ್ದೇನೆ.

೩. ಕಕ್ಕಲನು ತನ್ನ ತಮ್ಮನೊಡನೆ ಒಂದು ದಂಡನ್ನು ಅರಿಕೇಸರಿಯನ್ನು ದಂಡಿಸಲಿಕ್ಕೆ ಕಳುಹಿದನೆಂದು ಪಂಪ ಭಾರತದಲ್ಲಿ ಬರೆದಿದೆ†. ಇದರಿಂದ ಅರಿಕೇಸರಿಯು ತೈಲಪನ ಪಕ್ಷಹಿಡಿದು ಕಕ್ಕಲನ ಪಟ್ಟಾಭಿಷೇಕಕ್ಕೆ ಅಡ್ಡಬಂದುದರಿಂದ ಕಕ್ಕಲನು ಅವನ ಮೇಲೆ ದಂಡು ಕಳುಹಿದನೆಂದು ಅನುಮಾನಮಾಡಿದ್ದೇನೆ.

೪. ಮುಂದೆ ಸಾಮ್ರಾಜ್ಯದ ಸಲುವಾಗಿ ನಡೆದ ಯುದ್ಧವನ್ನು ೧೦೦೯ನೆಯ ಇಸ್ವಿಯ ಕೌಠೆಮ್ಮದ ಶಾಸನವು ಲಾಕ್ಷಣಿಕಭಾಷೆಯಿಂದ ವಿವರಿಸುತ್ತದೆ. ಅದರಲ್ಲಿ ಬರೆದುದೇನಂದರೆ:—"ಅನಾಯಾಸವಾಗಿಯೂ ಬೇರೆ ಬೇರೆಯಾಗಿಯೂ ತೈಲಪನು ಕರ್ಕರನ ಎರಡು ಗೆಲ್ಗಂಬಗಳ ಮೇಲೆ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೨೭.

† ಪಂಪ ಭಾರತ, ಆಶ್ವಾಸ ೯, ಪು. ೨೩೪.

ಏರಿಹೋಗಿ ರಣಾಂಗಣದಲ್ಲಿ ಕಡಿದುಹಾಕಿದನು. ಈ ಜಯಸ್ತಂಭಗಳು ರಾಷ್ಟ್ರಕೂಟ ಮನೆತನದ ಸಾರ್ವಭೌಮತ್ವಕ್ಕೆ ಸಂಬಂಧಿಸಿದ್ದು ದುಷ್ಟ ದೇವತಿಯಾದ ಕಲಿಯ ಪಾದಗಳಂತೆ ಕಸವಿನಿಂದ ಹಬ್ಬಿದ್ದವು. ಅವು ರಾಷ್ಟ್ರಕೂಟ ಮನೆತನವೆಂಬ ಬಳ್ಳಿಯ ಬಲಿಷ್ಟವಾದ ಮತ್ತು ಗಟ್ಟಿಯಾದ ಟಿಸಲುಗಳಾಗಿದ್ದು, ಧರ್ಮೋಪದೇಶಕರ ವಿರೋಧಿಗಳಾಗಿದ್ದವು. ಬಹಳ ವರ್ಷಗಳ ಮೇಲೆ ಆ ಬಳ್ಳಿಯೇ ಕಡಿದುಹಾಕಲ್ಪಟ್ಟಿತು*.''

ಇದೇ ಅರ್ಥದ ಬರಹವು ಮೈಸೂರ ಸಂಸ್ಥಾನ ದಾವಣಗೇರಿಯ ಮೊದಲನೆಯ ಶಾಸನದಲ್ಲಿ ಇರುವುದರಿಂದ ಅದರ ೨ ಸಾಲುಗಳನ್ನು ನಮ್ಮ ಪ್ರಿಯವಾಚಕರ ಸಲುವಾಗಿ ಕೆಳಗೆ ಕೊಡುತ್ತೇವೆ:—

೩೨. ......ಯಸ್ಯ ಅರಿ ರಾಷ್ಟ್ರಕೂಟ ಕುಲ ಸಂಬಂಧಾ
ವುಭೌ ಜಾರ್ಜಿತ್ಯಾ ಚರಣಾವಿವ ಪ್ರಚಳಿತೌ ಸಾಕ್ಷಾತ್ಕಲೇಃ
ಕ್ರಾಮತಃ ॥ ಕ್ರೂರೌ ಬದ್ಧಶರೀರಕೌ ಗು

೩೩. ರುಜನ ದ್ರೋಹಪುರೋಹಾವಿದಕ್ಷ್ಮೋಲಾಖಂಡಿತ ರಾಷ್ಟ್ರ
ಕೂಟಕ ಕುಲ ಶ್ರೀ ವಲ್ಲಿಜಾತಾಂಕುರೌ ಲೂನೌ ಯೇನ
ಸುಖೇನ ಕರ್ಕರ ರಣಸ್ತಂಭೌ ರಣಪ್ರಾಂಗಣೇ ॥ ಇತ್ಥಂ.

ಈ ಲೇಖದ ಅರ್ಥವನ್ನು ಸ್ಪಷ್ಟವಾಗಿಯೂ ವಿಸ್ತಾರವಾಗಿಯೂ ಡಾ॥ ಭಾಂಡಾರಕರರಾಗಲಿ ಡಾ॥ ಫ್ಲೀಟರಾಗಲಿ ಬರೆಯದೇ ಇದ್ದುದು ನಮ್ಮ ದುರ್ದೈವವೇ ಸರಿ. ಇಲ್ಲಿ ಉದಾಹರಿಸಿದ ರಣಸ್ತಂಭಗಳು ಕಲ್ಲುಗಚ್ಚಿನಿಂದ ಕಟ್ಟಿದ ಕಂಬಗಳಾಗಿದ್ದವೆಂಬ ತಿಳಿವಳಿಕೆಯು ಡಾ॥ ಫ್ಲೀಟರದಾಗಿತ್ತೆಂದು ಅವರು ೪೨೬ನೆಯ ಪುಟದಲ್ಲಿ ಬರೆದ ೨ನೆಯ ಟಿಪ್ಪಣಿಯಿಂದ ಸ್ಪಷ್ಟವಾಗಿ ಕಂಡುಬರುತ್ತದೆ. 'ಬದ್ಧಶರೀರಕೌ' ಎಂಬ ವಿಶೇಷಣವು ಹೇಗೆ ಅವರ ಲಕ್ಷ್ಯಕ್ಕೆ ಬರಲಿಲ್ಲೆಂಬುದು ಗೊತ್ತಾಗುವುದಿಲ್ಲ. ಈ ಗೆಲ್ಗಂಬಗಳು ಕಲ್ಲುಗಚ್ಚಿನವಾಗಿರದೆ, ರಾಷ್ಟ್ರಕೂಟರ ಎರಡು ಮಹಾಸಾಮಂತ ಮನೆತನಗಳಾಗಿದ್ದವೆಂದು

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೨೬.

ನನ್ನ ಊಹೆಯು. ಮೇಲಿನ ಶಾಸನ ಭಾಗದಲ್ಲಿದ್ದ "ಅರಿ ರಾಷ್ಟ್ರಕೂಟ ಕುಲ ಸಂಬಂಧಾ", "..........ರಾಷ್ಟ್ರಕೂಟ ಕುಲ ಶ್ರೀ ವಲ್ಲಿಜಾತಾಂಕುರಾ" ಎಂಬ ಎರಡು ವಿಶೇಷಣಗಳು ನನ್ನ ಊಹೆಯನ್ನು ಬಲಪಡಿಸುತ್ತವೆ. ಏಕೆಂದರೆ, ರಾಷ್ಟ್ರಕೂಟ ಗಂಗ ಮನೆತನಗಳ ನಡುವೆ ಶರೀರ ಸಂಬಂಧವು ಒಂದೇಸವನೆ ಎಡೆಬಿಡದೆ ನಡೆದಿತ್ತು; ಮತ್ತು ರಟ್ಟ ಮನೆತನವನ್ನು ರಾಷ್ಟ್ರಕೂಟ ೨ನೆಯ ಕೃಷ್ಣನು ಸ್ಥಾಪಿಸಿದಂದಿನಿಂದ ರಾಷ್ಟ್ರಕೂಟ ಸಾರ್ವಭೌಮರು ರಟ್ಟ ಮನೆತನವನ್ನು ಕಕ್ಕುಲತೆಯಿಂದ ಕಾಪಾಡುತ್ತಿದ್ದರು. ಆದಕಾರಣ ಗಂಗ ರಟ್ಟ ಮನೆತನಗಳು ರಾಷ್ಟ್ರಕೂಟರಿಗೆ ಸಂಬಂಧಿಸಿದವೂ, ಅವರಿಂದಲೇ ಬೆಳಿಸಲ್ಪಟ್ಟವೂ ಆಗಿದ್ದವೆಂದು ಬರೆಯಲಿಕ್ಕೆ ಅಡ್ಡಿಯಿಲ್ಲ. "ಗುರುಜನ ದ್ರೋಹ ಪ್ರರೋಹಾ" ಎಂಬ ವಿಶೇಷಣವಾದರೂ ಈ ಮನೆತನಗಳಿಗೆ ಸಲ್ಲುತ್ತದೆ. ಏಕೆಂದರೆ ಇವರು ತಮ್ಮ ಮೂಲ ಧರ್ಮವಾದ ಸನಾತನ ಧರ್ಮವನ್ನು ಬಿಟ್ಟು ಜೈನಧರ್ಮವನ್ನು ಸ್ವೀಕರಿಸಿದ್ದರು.

ಗಂಗ ರಟ್ಟ ಮನೆತನಗಳೆಂಬ ಎರಡು ರಾಷ್ಟ್ರಕೂಟರ ರಣಸ್ತಂಭಗಳನ್ನು ಬೇರೆ ಬೇರೆಯಾಗಿ ತುಂಡರಿಸಿ, ಅಂದರೆ ಮಾರಸಿಂಹನನ್ನು ರಣಾಂಗಣದಿಂದ ಓಡಿಸಿ, ರಟ್ಟ ಸಾಮಂತನಾದ ಶಾಂತಿವರ್ಮನನ್ನು ಶರಣು ಬರಮಾಡಿಕೊಂಡು, ತೈಲಪನು ತನ್ನ ಪೂರ್ವಜರ ಸಾಮ್ರಾಜ್ಯವನ್ನು ಮರಳಿ ದೊರಕಿಸಿದನೆಂಬ ನನ್ನ ಊಹೆಯು ಈ ಶಾಸನದಿಂದ ನಿರ್ದಿಷ್ಟವಾಗಿರುತ್ತದೆಂದು ಎಲ್ಲ ವಾಚಕರು ಒಡಂಬಡಬಹುದು.

———

# ೩ ನೆಯ ಅಧ್ಯಾಯ

## ಕಲ್ಯಾಣದ ಚಾಳುಕ್ಯರ ಬೆಳವಣಿಗೆ

## ೨ ನೆಯ ಅಥವಾ ನೂರ್ಮಡಿ ತೈಲಪ

(೯೭೩–೯೯೭)

ತೈಲಪನು ರಾಷ್ಟ್ರಕೂಟ ಮನೆತನದ ಕಟ್ಟಭಿಮಾನಿಯಾದ ಮಾರಸಿಂಹನನ್ನು ಮುರಿಬಡಿದು, ರಟ್ಟ ಮಹಾಸಾಮಂತನನ್ನು ಶರಣು ಬರಮಾಡಿಕೊಂಡನೆಂದು ಹಿಂದಿನ ಅಧ್ಯಾಯದಲ್ಲಿ ಬರೆದಿರುತ್ತೇವಷ್ಟೇ. ರಾಷ್ಟ್ರಕೂಟ ಮನೆತನವೆಂಬ ಕಲಿಯ ಎರಡು ಕಾಲುಗಳು ಕತ್ತರಿಸಿ ಬಿದ್ದಬಳಿಕ, ತೈಲಪನು ಮಹಾರಾಜಾಧಿರಾಜ, ಪರಮೇಶ್ವರ, ಪರಮ ಭಟ್ಟಾರಕ, ಶ್ರೀ ಪೃಥ್ವೀವಲ್ಲಭ, ಸಮಸ್ತಭುವನಾಶ್ರಯ ಎಂಬ ಸಾಮಾನ್ಯ ಬಿರುದುಗಳನ್ನೂ, ಆಹವಮಲ್ಲ, ಸತ್ಯಾಶ್ರಯ ಕುಲತಿಲಕ, ಚಾಲುಕ್ಯಾಭರಣ, ಭುಜಬಲ ಚಕ್ರವರ್ತಿ ಎಂಬ ವಿಶಿಷ್ಟ ಬಿರುದುಗಳನ್ನೂ ಧರಿಸಿದನು. ಇವನು ಶಕ ೮೯೬ ನೆಯ ಶ್ರೀಮುಖ ಸಂವತ್ಸರದಿಂದ ೨೪ ವರ್ಷ ರಾಜ್ಯವಾಳಿದನೆಂದು ಧಾರವಾಡ ಜಿಲ್ಲಾ ಗದಗಿನ ವೀರನಾರಾಯಣ ಗುಡಿಯಲ್ಲಿದ್ದ ೧೦೯೮ ನೆಯ ಇಸ್ವಿಯ ೬ ನೆಯ ವಿಕ್ರಮಾದಿತ್ಯನ ಶಿಲಾಲೇಖದಿಂದ ಗೊತ್ತಾಗುತ್ತದೆ. ಶ್ರೀಮುಖ ಸಂವತ್ಸರವು ೯೭೩ ನೆಯ ಇಸ್ವಿಯಲ್ಲಿ ಬರುವುದರಿಂದಲೂ ೯೭೩ ನೆಯ ಜೂನ ತಿಂಗಳದ ಗುಂಡೂರ ಶಾಸನದಲ್ಲಿ ಕಕ್ಕಲನು ಸಾರ್ವಭೌಮನಾಗಿದ್ದನೆಂದು ಬರೆದುದರಿಂದಲೂ ಮುಂದೆ ಆ ಇಸ್ವಿಯ ಅಕ್ಟೋಬರ ನವಂಬರ ಸುಮಾರಕ್ಕೆ ತೈಲಪನು ಸಾರ್ವಭೌಮನಾದನೆಂದು ಅನುಮಾನಮಾಡಲಿಕ್ಕೆ ಅಡ್ಡಿಯಿಲ್ಲ.

ಗೆಲವಿನಿಂದ ಮಾತ್ರ ತನಗೆ ಸಾಮ್ರಾಜ್ಯದ ಒಡೆತನವು ಬಂತೆಂದು ತೈಲಪನು ಸಾರಲಿಲ್ಲ. ಕರ್ನಾಟಕ ಸಾಮ್ರಾಜ್ಯವು ನ್ಯಾಯದಿಂದ ತನ್ನ ಪೂರ್ವಜರದೆಂತಲೂ ರಾಷ್ಟ್ರಕೂಟರು ಕುಟಿಲಮಾರ್ಗದಿಂದ ಅದನ್ನು ಅಪಹರಿಸಿದ್ದರೆಂತಲೂ ರಕ್ತಸಂಬಂಧದಿಂದಲಾದರೂ ತಾನು ರಾಷ್ಟ್ರ

ಕೂಟರ ಪಟ್ಟಕ್ಕೆ ಸರಿಯಾದ ಬಾಧ್ಯಸ್ಥನೆಂತಲೂ ಜಾಹಿರನಾಮೆಗಳನ್ನು ಬರೆಯಿಸಿ, ಸಾಮ್ರಾಜ್ಯದ ಎಲ್ಲ ಮಹಾಮಂಡಲೇಶ್ವರ, ಮಂಡಲೇಶ್ವರ, ಸಾಮಂತ, ಸಂಸ್ಥಾನಿಕ, ನಾಡುಗವುಡ ಇವರಿಗೆ ಕಳುಹಿದನು. ತಾನು ರಾಷ್ಟ್ರಕೂಟ ಅರಸುಮಗಳಾದ ಜಾಕವ್ವೆ (ಜಾಕ್ಕಲದೇವಿ)ಯನ್ನು ಮದುವೆ ಮಾಡಿಕೊಂಡುದರಿಂದಲೂ ಕೊಟ್ಟಿಗ-ಕಕ್ಕಲರಿಗೆ ಗಂಡು ಮಕ್ಕಳಾಗಲಿ ಬೇರೆ ಸಮಿಾಪದ ಹಕ್ಕುದಾರರಾಗಲಿ ಇಲ್ಲುದರಿಂದಲೂ ತಾನೇ ರಾಷ್ಟ್ರಕೂಟ ಸಿಂಹಾಸನಕ್ಕೆ ಸರಿಯಾದ ಬಾಧ್ಯಸ್ಥನೆಂದು ತೈಲಪನು ತಿಳಕೊಂಡಿದ್ದನು. ಈ ಜಾಕವ್ವೆಯು ಬಮ್ಮಹನೆಂಬವನ ಮಗಳಾಗಿದ್ದಳೆಂತಲೂ ಅವನು ರಾಷ್ಟ್ರಕೂಟ ಮನೆತನದ ಭೂಷಣ ನಾಗಿದ್ದನೆಂತಲೂ ಕೌತೆಮ್ಮದ ಶಾಸನದಿಂದ ತಿಳಿದುಬರುತ್ತದೆ. ಈ ಭಮ್ಮಹ ಶಬ್ದವು ಬೇರೊಬ್ಬನ ಹೆಸರಾಗಿತ್ತೋ ಕಕ್ಕಲನ ಬಿರುದಾ ಗಿತ್ತೋ ಎಂದು ಡಾ॥ ಫ್ಲೀಟರು ಸಂಶಯಗೊಳ್ಳುತ್ತಾರೆ*. ಭಮ್ಮಹ ಶಬ್ದವು ಕೊಟ್ಟಿಗನ ಅಥವಾ ಕಕ್ಕಲನ ಬಿರುದಾಗಿರಬಹುದೆಂದು ನನ್ನ ಅಲ್ಪಮತಿಗೆ ತೋರುತ್ತದೆ.

ಕಕ್ಕಲನು ಸತ್ತ ಬಳಿಕ ತೈಲಪನು ತಾನೇ ರಾಷ್ಟ್ರಕೂಟ ಪಟ್ಟಕ್ಕೆ ಸರಿಯಾದ ಬಾಧ್ಯಸ್ಥನಾದ್ದರಿಂದ ಸಾಮ್ರಾಜ್ಯಭಾರದ ಸೂತ್ರಗಳನ್ನು ತಾನೇ ಕಯ್ಕೊಂಡಿರುತ್ತೇನೆಂದು ಎಲ್ಲ ಸಾಮಂತರಿಗೆ ತಿಳಿಸಿದನೆಂದು ಮೇಲೆ ಬರೆದಿರುತ್ತೇವಷ್ಟೇ. ಅದೇ ಸಮಯಕ್ಕೆ ಮುಂದಗಲ್ಲು ಕಾಳಗ ದಿಂದ ಓಡಿಹೋದ ಮಾರಸಿಂಹನು ತನ್ನ ಸೋದರಳಿಯನೂ ೩ನೆಯ ಕೃಷ್ಣನ ಮಗನೂ ಆದ ಇಂದ್ರನೆಂಬ ತರುಣನಿಗೆ ಬನವಾಸಿ(?)ಯಲ್ಲಿ ೪ನೆಯ ಇಂದ್ರನೆಂಬ ಹೆಸರಿನಿಂದ ಪಟ್ಟಗಟ್ಟಿ, ಆ ಸುದ್ದಿಯನ್ನು ತಿಳಿಸಲಿಕ್ಕೆ ಎಲ್ಲ ಮಾಂಡಲಿಕರಿಗೆ ಪತ್ರ ಕಳಿಸಿದನು. ೯೭೩ನೆಯ ಇಸ್ವಿಯ ಅಂತ್ಯಭಾಗದಲ್ಲಿ ಇಂದ್ರ ತೈಲಪರಿಬ್ಬರೂ ತಾವು ಒಡೆಯ ರೆಂದು ಹೇಳಿಕೊಳ್ಳುತ್ತಿದ್ದರು. ಈ ಮೇರೆಗೆ ಇಂದ್ರ ತೈಲಪರು 'ತಾ ಸಾರ್ವಭೌಮ,' 'ತಾ ಸಾರ್ವಭೌಮ' ಎಂದು ಗುದ್ದಿಯಾಡುತ್ತಿರು

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೨೫, ಅಡಿಟಿಪ್ಪಣಿ ೨.

ವಾಗ, ಮಂಡಲೇಶ್ವರರ ಮನಸ್ಸು ಹೊಯ್ದಾಡುವುದು ಸ್ವಾಭಾವಿಕ ವಾದ ಮಾತೇ ಸರಿ. ಉತ್ತರ ಕೊಂಕಣದ ಮಹಾಸಾಮಂತನಾದ ಅಪರಾಜಿತನೂ ಸೆವುಣದೇಶದ ಮಂಡಲೇಶ್ವರನಾದ ಭಿಲ್ಲಮನೂ ಮಾರ ಸಿಂಹನಂತೆ ಮಹತ್ವಾಕಾಂಕ್ಷಿಗಳೂ ಎದೆಗಾರರೂ ಸಾಹಸಿಗಳೂ ಆದ್ದ ರಿಂದ ಇಂದ್ರನ ಪಕ್ಷವನ್ನು ಹಿಡಿದರು. ಕದಂಬಲಿಗೆಯ ಮಹಾ ಸಾಮಂತನಾದ ಜಾತರಸನೂ ಕಿಸುಕಾಡು ಬೆಳ್ವೊಳಗಳ ಸಾಮಂತ ಶ್ರೇಷ್ಠನಾದ ಅರಿಕೇಸರಿಯೂ ಎಡೆನಾಡು ಸಾಂತಲಿಗೆಗಳ ಮಹಾ ಸಾಮಂತರಾದ ಕೀರ್ತಿವರ್ಮ ಶಾಂತಿವರ್ಮರೂ ತೈಲಪನ ಪಕ್ಷಗಟ್ಟಿ ದರು. ಪಟ್ಟದ ಸಲುವಾಗಿ ಯುದ್ಧವು ಮತ್ತೆ ನಡೆಯಿತು.

ವೀರಶಿರೋಮಣಿಯಾದ ತೈಲಪನು ಎದೆಗಾರನೂ ಅನಲಸನೂ ಮೆಯ್ಯುತ್ತುಂಬ ಎಚ್ಚರುಳ್ಳವನೂ ದೀರ್ಘದೃಷ್ಟಿಯುವನೂ ರಣಾಂಗ ಚತುರನೂ ಆದ್ದರಿಂದ, ಮಾರಸಿಂಹನಿಗೆ ಅಪರಾಜಿತಭಿಲ್ಲಮರಿಂದ ದಂಡಿನ ಸಾಹಾಯುವು ಬರುವುದಕ್ಕಿಂತ ಮೊದಲೇ ಅವನನ್ನು ಮುರಿಬಡಿಯ ಬೇಕೆಂದು ನಿಶ್ಚಯಿಸಿ, ಜಾತರಸನಿಗೆ ಸಿದ್ಧನಾಗಿರಲಿಕ್ಕೆ ಸೂಚನೆಯನ್ನು ಕಳಿಸಿ, ಅರಿಕೇಸರಿ ಶಾಂತಿವರ್ಮರನ್ನು ಸಂಗಡ ಕರೆಕೊಂಡು, ಬನ ವಾಸಿಯ ಮೇಲೆ ದಂಡೆತ್ತಿಹೊರಟನು. ದಾರಿಯಲ್ಲಿ ಕದಂಬಲಿಗೆಯ ದಂಡು ಬಂದು ಕೂಡಿತು. ಈ ಸುದ್ದಿಯನ್ನು ಕೇಳಿ, ಅಪರಾಜಿತ ಭಿಲ್ಲ ಮರ ದಂಡುಗಳ ಬರುವನ್ನು ಎದುರುನೋಡುತ್ತ ಕುಳಿತ ಮಾರಸಿಂಹನು ಹೆದರಿದನು. ತೈಲಪನ ದೊಡ್ಡ ದಂಡಿನೊಡನೆ ಕಾದಿ ಗೆಲ್ಲುವುದು ಕಷ್ಟ ಸಾಧ್ಯವೆಂದು ಹೊಳೆದರೂ ಅವನು ತೈಲಪನಿಗೆ ಶರಣುಹೋಗುವಷ್ಟು ಹೇಡಿಯಾಗಿದ್ದಿಲ್ಲ. ಆದ್ದರಿಂದ ಅವನು "ಬಂದುದು ಬರಲಿ" ಎಂದು ದೈವದ ಮೇಲೆ ಭಾರಹಾಕಿ, ಆದಷ್ಟು ಮಟ್ಟಿಗೆ ತನ್ನ ದಂಡನ್ನು ಬೆಳೆಸಿ ಕೊಂಡು, ತೈಲಪನನ್ನು ಅಡ್ಡಗಟ್ಟಲಿಕ್ಕೆ ಬನವಾಸಿಯಿಂದ ಹೊರಟನು. ಎರಡೂ ದಂಡುಗಳ ನಡುವೆ ೨–೩ ಸಣ್ಣಕಾಳೆಗಗಳಾದ ಬಳಿಕ ಬನವಾಸಿ (?)ಯ ಹತ್ತಿರ ಒಂದು ದೊಡ್ಡ ಕೊನೆಯ ಕಾಳೆಗವಾಯಿತು. ಅದರಲ್ಲಿ ಎರಡೂ ದಂಡಿನವರು ಕಲಿತನದಿಂದ ಕಾದಿದರು. ಮಾರಸಿಂಹನಂತೂ ಜೀವದ ಹಂಗುದೊರೆದು ಎದುರಿಸಿದವರನ್ನು ತುಂಡರಿಸುತ್ತ ರಣಾಂಗಣ

ದಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಎಡೆಬಿಡದೆ ಓಡಾಡಿದನು. ಅವನ ನಂಬಿಗಸ್ತನಾದ ಬಾಯುಗನೆಂಬವನು ತನ್ನ ಒಡೆಯನ ಮಕ್ಕಳನ್ನು ಸುರಕ್ಷಿತವಾದ ಎಡೆಯಲ್ಲಿಟ್ಟು, ತಾನು ರಣಾಂಗಣವನ್ನು ಹೊಕ್ಕು ಕಾದು ಮಡಿದನು*. ಮಕ್ಕಳ ಕಕ್ಕುಲತೆಯಿಂದ ಮಾರಸಿಂಹನು ರಣಾಂಗಣವನ್ನು ಬಿಟ್ಟು ತನ್ನ ಮಕ್ಕಳು ಮುಂತಾದವರೊಡನೆ ಬಂಕಾಪುರಕ್ಕೆ ಓಡಿಹೋದನು. ಬನವಾಸಿ ಪಟ್ಟಣವೂ ಪ್ರಾಂತವೂ ಜಯಶಾಲಿಯಾದ ತೈಲಪನ ಕಯ್ಸೇರಿದವು (೯೭೩ ದಶಂಬರ). ಮುಂದೆ ತುಸು ದಿವಸದಲ್ಲೇ ಮಾರಸಿಂಹನು ಬಂಕಾಪುರದಲ್ಲಿ ಸತ್ತನು (೯೭೪).

ಈ ಗೆಲವಿನಿಂದ ತನ್ನ ಮುಖ್ಯ ಶತ್ರುವಾದ ಮಾರಸಿಂಹನ ಕಾಟವು ಪೂರ್ಣವಾಗಿ ತಪ್ಪಿದರೂ ತೈಲಪನು ಉಬ್ಬಿ ಮೆಯ್ಮರೆತು ಬನವಾಸಿಯಲ್ಲಿ ವ್ಯರ್ಥವಾಗಿ ಕಾಲಹರಣಮಾಡಲಿಲ್ಲ. ದಂಡಿನವರಿಗೆ ಸಾಕಷ್ಟು ವಿಶ್ರಾಂತಿಯು ದೊರೆತ ಕೂಡಲೆ, ಮಲೆತುನಿಂತು ಮಾರಸಿಂಹನ ಪಕ್ಷಗಟ್ಟಿದ ಅಪರಾಜಿತನ ಮೇಲೆ ದಂಡೆತ್ತಿ ಹೋದನು. ಹನುಮಂತನ ಮುಂದೆ ಹಾರುವ ಗುಬ್ಬಿಯೇ ಎಂಬ ಗಾದೆಯಂತೆ, ಮಾರಸಿಂಹನನ್ನು ಸೋಲಿಸಿದ ದಂಡಿನ ಮುಂದೆ ಕೊಂಕಣದ ದಂಡಿನ ಆಟ ಸಾಗುವ ಸಂಭವವೆಲ್ಲಿ? ಒಂದೆರಡು ಸಣ್ಣ ಪುಟ್ಟ ಕಾಳೆಗಗಳಲ್ಲಿ ಅಪಜಯ ಹೊಂದಿದ ಅಪರಾಜಿತನಿಗೆ ಪಶ್ಚಾತ್ತಾಪವಾಯಿತು. ಹಗೆತನವನ್ನು ಮುಂದರಿಸಿದರೆ, ರಾಜ್ಯಭ್ರಷ್ಟನಾಗುವುದು ನಿಶ್ಚಯವೆಂದು ಅವನ ಮನವರಿಕೆಯಾದ್ದರಿಂದ, ಅವನು ತೈಲಪನಿಗೆ ಶರಣುಹೋಗಿ ಕಪ್ಪುಗಾಣಿಕೆಯನ್ನೊಪ್ಪಿಸಿ, ತನ್ನ ತಪ್ಪನ್ನು ಕ್ಷಮಿಸಬೇಕೆಂದು ಸೆರಗೊಡ್ಡಿ ಬೇಡಿಕೊಂಡನು. ತೈಲಪನು ಕಾರ್ಯಸಾಧಕನೂ ಧೂರ್ತನೂ ದೂರದೃಷ್ಟಿಯೂ ಆದ್ದರಿಂದ ಅಪರಾಜಿತನನ್ನು ಕ್ಷಮಿಸಿ, ಅವನಿಗಿದ್ದ ಸಾಮಂತಪದದಲ್ಲೇ ಅವನನ್ನಿರಿಸಿ ತಿರುಗಿ ಬಂದನು (೯೭೫?).

ಎಷ್ಟು ವ್ಯಾಪ ಅಷ್ಟು ತಾಪ ಎಂಬ ಗಾದೆಯೂ ಗೂಳಿ ಜಿದ್ದರೆ ಆಳಿಗೊಂದು ಕಲ್ಲೆಂಬ ನಾಣ್ಣುಡಿಯೂ ಓದುವವರಿಗೆ ಗೊತ್ತಿರಬಹುದು.

---

* ಕ. ಸಾ., ಸಂ. ೧, ಭಾ. ೧, ಪು. ೮೮, ಅಡಿಟಿಪ್ಪಣಿ.

ಈ ಎರಡೂ ಗಾದೆಗಳು ಒಂದೇ ಅನುಭವದ ಮಾತನ್ನು ಪರ್ಯಾಯದಿಂದ ತಿಳಿಸುತ್ತವಷ್ಟೇ. ಆಸ್ತಿಯು ಬೆಳೆದಂತೆ ಅದರ ಮೇಲೆ ಕಣ್ಣಿಟ್ಟು ಅಪಹರಿಸಲೆಣಿಸುವವರ ಸಂಖ್ಯೆಯಾದರೂ ಬೆಳೆಯುತ್ತದೆ. ಪರರ ಆಸ್ತಿಯನ್ನು ಎತ್ತಿಬಡಿಯಲಿಕ್ಕೆ ಹೊಂಚುಹಾಕಿಕೊಂಡು ಕುಳಿತಿದ್ದ ಕರ್ತೃತ್ವಿಗಳು ಅಥವಾ ಕೆಡಕರು ಕಾಲುಕೆದರಿ ಜಗಳ ತೆಗೆಯಲಿಕ್ಕೆ ಏನ್ನಾದರೊಂದು ನೆವನವನ್ನು ಹುಡುಕುತ್ತಿರುತ್ತಾರೆ. ಆದ್ದರಿಂದ ಆಸ್ತಿಯುಳ್ಳವರು ಯಾವಾಗಲೂ ಎಚ್ಚರುಳ್ಳವರೂ ಎದೆಗಾರರೂ ಜನ ಧನ ಸಾಹಾಯ್ಯುಳ್ಳವರೂ ಆಗಿರಲಿಕ್ಕೇ ಬೇಕು. ಕರ್ಮ ಧರ್ಮ ಸಂಯೋಗದಿಂದ ಬದುಕುಳ್ಳವರಿಗೆ ಯಾವದಾದರೊಂದು ಅತಿವಿಪತ್ತು ಒದಗಿದರೆ, ಗಟ್ಟಿಗರು ಅಥವಾ ದುಷ್ಟರು ಅವರ ಆಸ್ತಿಯನ್ನು ಹರಿದು ಹಂಚಿಕೊಳ್ಳಲಿಕ್ಕೆ ಹರಪ್ರಯತ್ನಮಾಡುತ್ತಾರೆ. ಆದಕಾರಣ ಎಷ್ಟು ಆಸ್ತಿ ಅಷ್ಟು ಕುಸ್ತಿ ಎಂಬ ಅನುಭವದ ಸಿದ್ಧಾಂತವನ್ನು ಮರೆಯಕೂಡದು.

ಈ ಕಾಲಕ್ಕೆ ರಾಷ್ಟ್ರಕೂಟರ ದೊಡ್ಡ ಸಾಮ್ರಾಜ್ಯವೇ ಕುಸ್ತಿಯ ಆಸ್ತಿಯಾಗಿತ್ತು. ಅದನ್ನು ಕಿತ್ತಿಕೊಳ್ಳುವ ಲವಲವಿಕೆಯಿಂದ ೨ನೆಯ ತೈಲಪನು ಸಡ್ಡುಹೊಡೆದು ರಣಾಂಗಣದಲ್ಲಿ ಬಂದು ನಿಂತು, ವೀರನಾದ ಮಾರಸಿಂಹನನ್ನು ಮುರಿಬಡಿದು, ೪ನೆಯ ಇಂದ್ರನನ್ನು ದಿಕ್ಕೆಟ್ಟು ಓಡಿಸಿ, ಅಪರಾಜಿತನನ್ನು ಸೋಲಿಸಿ, ನಿಶ್ಚಿಂತನಾದೆನೆಂದು ಹಿಗ್ಗುವಷ್ಟರಲ್ಲಿ ಗಂಗವಾಡಿಯಲ್ಲಿ ಮತ್ತೊಬ್ಬ ಹಗೆಯು ಹುಟ್ಟಿರುತ್ತಾನೆಂಬ ಸುದ್ದಿ ಬಂತು. ೯೭೧ರಲ್ಲಿ ಪಾಂಚಾಲದೇವನೆಂಬವನು ಧಾರವಾಡ ಜಿಲ್ಲಾ ಹುಬ್ಬಳ್ಳಿ ತಾಲೂಕು **ಚೆಬ್ಬಿ** ಎಂಬ ಊರಿನ ಸುತ್ತಲಿದ್ದ ೩೦ ಹಳ್ಳಿಗಳ ಒಡೆಯನಾಗಿದ್ದನು. ಇವನು ಮಾರಸಿಂಹನ ಕಯ್ಕೆಳಗಿನ ಸಣ್ಣ ಪಾಳೆಗಾರನಾಗಿದ್ದನೇ ಹೊರತು ಸ್ವತಂತ್ರನಾಗಿದ್ದಿಲ್ಲ. ಆದರೆ ಇವನು ಎದೆಗಾರನೂ ಹೆಬ್ಬಯಕೆಯುವನೂ ಪುಂಡನೂ ಆದ್ದರಿಂದ ಮಾರಸಿಂಹನು ತೈಲಪನೊಡನೆ ಕಾದುತ್ತಿರುವಾಗ ಅವನ ನಾಡನ್ನು ತನ್ನ ಕಯ್ವಶಮಾಡಿಕೊಂಡು, ತೈಲಪನ ಒಡೆತನವನ್ನು ಲೆಕ್ಕಿಸದೆ, ಅವನ ಎದುರಾಳಿಯಾಗಿ ನಿಂತನು. ಆದಕಾರಣ ಅವನನ್ನು ಕುಗ್ಗಬಡಿಯುವುದು ತೈಲಪನಿಗೆ ಅವಶ್ಯವಾಯಿತು. ಅದಕ್ಕೋಸ್ಕರ ಅವನು ಶರಣುಬಂದ ಅಪರಾಜಿತ

ನನ್ನು ಕ್ಷಮಿಸಿ, ಅವನನ್ನು ತನ್ನ ಮಂಡಲೇಶ್ವರನಾಗಿ ಮಾಡಿಕೊಂಡು, ಪಾಂಚಾಲದೇವನ ಮೇಲೆ ದಂಡೆತ್ತಿಹೋದನು. ತೈಲಪನನ್ನು ಎದುರಿಸುವಷ್ಟು ಸಾಮರ್ಥ್ಯವಿಲ್ಲದುದರಿಂದ ಪಾಂಚಾಲನು ಗುಡ್ಡಗಾಡುಗಳಲ್ಲಿ ಅಡಗಿಕೊಂಡಿದ್ದು, ಹಗೆಗಳಿಗೆ ಕಿರುಕುಳ ತೊಂದರೆಗಳನ್ನು ಕೊಡುತ್ತ ಕಾಲಹರಣ ಮಾಡತೊಡಗಿದನು. ಕಟ್ಟಕಡೆಗೆ ಪಾಂಚಾಲನು ಅಡಗಿಕೊಂಡಿದ್ದ ಸ್ಥಳವನ್ನು ಗುಪ್ತಚಾರರಿಂದ ಗೊತ್ತುಹಚ್ಚಿ, ಒಂದು ದಿನ ರಾತ್ರಿ ತೈಲಪನು ಅವನ ದಂಡನ್ನು ಸುತ್ತುಗಟ್ಟಿದನು. ಆ ದಿವಸ ಆದ ರಕ್ತಪಾತವನ್ನು ಬಣ್ಣಿಸಲಳವಲ್ಲ. ಕುರಿಯ ದಡ್ಡಿಯಲ್ಲಿ ತೋಳವು ಹೊಕ್ಕಂತಾಯಿತು. ಪಾಂಚಾಲನ ಅನುಯಾಯಿಗಳು ಚಾಳುಕ್ಯ ದಂಡಾಳುಗಳ ಕತ್ತಿ ಬರ್ಚಿಗಳಿಗೆ ತುತ್ತಾದರು. ಪಾಂಚಾಲನು ಸೆರೆ ಸಿಕ್ಕುದರಿಂದ ತೈಲಪನು ಅವನ ಶಿರಚ್ಛೇದ ಮಾಡಿಸಿ ಬಿಟ್ಟನು. ಈ ಗೆಲವಿನಿಂದ ಮಾರಸಿಂಹನ ನಾಡೆಲ್ಲ ತೈಲಪನ ವಶವಾಯಿತು (೯೭೭?).

ಕಿರೀಟಧಾರಿಯಾದ ತಲೆಯು ತಡೆಯಿಲ್ಲದೆ ತಲ್ಲಣಿಸುತ್ತಿರುತ್ತದೆಂಬ ಪಾಶ್ಚಿಮಾತ್ಯರ ಗಾದೆಯು ಅನುಭವಸಿದ್ಧವಾದುದೇ ಸರಿ. ಕಕ್ಕಲ ಮಾರಸಿಂಹ ಅಪರಾಜಿತ ಪಾಂಚಾಲರನ್ನು ಸದೆಬಡಿದು, ಮೂಡಣ ತೆಂಕಣ ಪಡುವಣ ಕರ್ನಾಟಕದಲ್ಲಿ ನಿಶ್ಯತ್ರುವಾದರೂ ತೈಲಪನು ನಿಶ್ಚಿಂತನಾಗಲಿಲ್ಲ. ಮಾರಸಿಂಹನ ಪಕ್ಷಗಟ್ಟಿದ ಸೇವುಣದೇಶದ* ಮಹಾಮಂಡಲೇಶ್ವರನಾದ ಭಿಲ್ಲಮನು ಮಲೆತು ನಿಂತಿದ್ದನು. ತೈಲಪನು ಸೋಲಿಸಿ ಹಿಂದಕ್ಕಟ್ಟಿದ ಮಾಳವೆಯ ಅರಸನಾದ ಮುಂಜನು ಸೇಡುತೀರಿಸಿಕೊಳ್ಳುವ ಉದ್ದೇಶದಿಂದ ತನ್ನ ದಂಡನ್ನು ಬೆಳಸಿ, ಅನ್ನ ಸಾಮುಗ್ರಿಯನ್ನು ಕೂಡಿಹಾಕಿ, ತೈಲಪನ ಮೇಲೆ ದಂಡೆತ್ತಿಬರುವ ಜೋಡಣೆಯನ್ನು ಜೋರಿನಿಂದ ನಡಿಸಿದ್ದನು. ಆದಕಾರಣ ಇವರಿಬ್ಬರನ್ನು ಮುರಿಬಡಿದ ಹೊರತು, ತಾನು ಇಷ್ಟು ದಿವಸ ಶ್ರಮಬಟ್ಟು ಸಂಪಾದಿಸಿದ ಸಾಮ್ರಾಜ್ಯವು ತೈಲಪನಿಗೆ ದಕ್ಕುವಂತಿದ್ದಿಲ್ಲ. ಈ ವಿಚಾರವನ್ನು ಮನಸ್ಸಿನಲ್ಲಿ ತಂದು, ತನಗೆ ಸಿಕ್ಕ ಕಪ್ಪುಗಾಣಿಕೆ ನುಲಿಗೆಯ

---

* ಅವರಂಗಾಬಾದ ನಾಸಿಕ ಖಾನದೇಶಗಳನ್ನು ಒಳಗೊಂಡ ಪ್ರಾಂತಕ್ಕೆ ಸೇವುಣ ದೇಶವೆಂಬ ಹೆಸರಿತ್ತು.

ಹಣವನ್ನು ವೆಚ್ಚಮಾಡಿ ಹೊಸ ದಂಡನ್ನು ಕಟ್ಟಿ, ಸಾಕಷ್ಟು ಯುದ್ಧ ಸಾಮುಗ್ರಿಗಳ ಪೂರೈಕೆಯನ್ನು ಮಾಡಿಕೊಂಡು, ಭಿಲ್ಲಮನ ಮೇಲೆ ದಂಡೆತ್ತಿಹೊರಟನು (೯೭೮?). ಅವನಿಗಿಂತ ಮೊದಲೇ ಅವನ ಕೀರ್ತಿಯೂ, ಕಲಿತನವೂ, ಯುದ್ಧಚಾತುರ್ಯವೂ, ದೂರದೃಷ್ಟಿಯೂ, ಔದಾರ್ಯವೂ ಸೇವುಣದೇಶಕ್ಕೆ ಹೋಗಿ ಭಿಲ್ಲಮನ ಕಿವಿಗಳನ್ನು ಮುತ್ತಿದ್ದವು. ತಾನು ಪಕ್ಷಗಟ್ಟಿದ ಇಂದ್ರ ಮಾರಸಿಂಹರು ಸೋತು ದಿಕ್ಕೆಟ್ಟು ಓಡಿಹೋದುದರಿಂದಲೂ, ಮಾಳವೆಯ ಮುಂಜನು ಕರ್ನಾಟಕದ ಮೇಲೆ ದಂಡೆತ್ತಿ ಬರುತ್ತಿದ್ದುದರಿಂದಲೂ ತನ್ನಲ್ಲಿ ತೈಲಪನೊಡನೆ ಕಾದುವಷ್ಟು ಸಾಮರ್ಥ್ಯವಿಲ್ಲುದರಿಂದಲೂ ಗಾಳಿ ಗುದ್ದಿ ಮೆಯ್ನೋಯಿಸಿ ಕೊಳ್ಳುವಂತೆ ಸುಮ್ಮನೇ ತೈಲಪನೊಡನೆ ಕಾದಿ ಕೆಡುವುದು ಜಾಣತನದ ಲಕ್ಷಣವಲ್ಲೆಂಬ ವಿಚಾರವು ಭಿಲ್ಲಮನಿಗೆ ಮೊದಲೇ ಹೊಳೆದಿತ್ತು. ಆದ್ದರಿಂದ ಅವನು ತೈಲಪನು ದಂಡೆತ್ತಿ ಬರುತ್ತಾನೆಂಬ ಸುದ್ದಿಯನ್ನು ಕೇಳಿದಕೂಡಲೆ, ತನ್ನ ಮಂತ್ರಿ ಮುಂತಾದ ಪರಿವಾರದೊಡನೆ ಹೊರಟು ತೈಲಪನಿಗೆ ಅನರ್ಘ್ಯವಾದ ಕಪ್ಪುಗಾಣಿಕೆಯನ್ನೊಪ್ಪಿಸಿ, ಶರಣಾಗತನಾಗಿ ತನ್ನ ಅಪರಾಧವನ್ನು ಹೊಟ್ಟೆಯೊಳಗೆ ಹಾಕಿಕೊಂಡು ತನ್ನನ್ನು ಕ್ಷಮಿಸಬೇಕೆಂದು ಸೆರಗೊಡ್ಡಿ ಬೇಡಿಕೊಂಡನು. ಮುತ್ಸದ್ದಿಯಾದ ತೈಲಪನು ತಾನು ಮುಂದೆ ಕಯ್ಕೊಳ್ಳುವ ಮಾಳವೆಯ ದಂಡಯಾತ್ರೆಯಲ್ಲಿ ಭಿಲ್ಲಮನಿಂದ ತನಗೆ ಸಾಹಾಯವಾಗಬಹುದೆಂಬ ಆಲೋಚನೆಯನ್ನು ಮನಸ್ಸಿನಲ್ಲಿ ತಂದು, ಅವನ ಬೇಡಿಕೆಯನ್ನು ಮಾನ್ಯಮಾಡಿ, ಅವನನ್ನು ಕ್ಷಮಿಸಿ, ಅವನನ್ನು ತನ್ನ ಮಹಾಮಂಡಲೇಶ್ವರನಾಗಿ ಮಾಡಿಕೊಂಡು, ಅವನನ್ನು ತನ್ನ ಸಂಗಡ ಕರೆಕೊಂಡು ಮಾಳವೆಯ ಮೇಲೆ ದಂಡೆತ್ತಿಹೋದನು (೯೮೦?).

ತೈಲಪನು ಪಾಂಚಾಲದೇವನನ್ನು ಎಲ್ಲಿ ಕೊಲ್ಲಿಸಿದನೆಂಬುದಾಗಲಿ, ಭಿಲ್ಲಮನು ಅವನಿಗೆ ಎಲ್ಲಿ ಶರಣುಬಂದನೆಂಬುದಾಗಲಿ ಕಂಡುಹಿಡಿಯಲಿಕ್ಕೆ ನಮಗೆ ಯಾವ ಸಾಧನವೂ ಇಲ್ಲ. ಆದ್ದರಿಂದ ತೈಲಪನ ದಂಡಯಾತ್ರೆಯ ದಾರಿಯನ್ನು ವಾಚಕರಿಗೆ ತಿಳಿಸುವುದು ಅಸಾಧ್ಯವೇ ಸರಿ. ಆದರೂ, ಪಾಂಚಾಲನು ಮೈಸೂರ ಸಂಸ್ಥಾನ ಚಿತ್ರದುರ್ಗದ ನೆರೆಯಲ್ಲಿ ಕೊಲ್ಲಿ

ಸಲ್ಪಟ್ಟನೆಂತಲೂ, ನಿಜಾಮ ಸಂಸ್ಥಾನ ನಳದುರ್ಗದ ಹತ್ತಿರ ಭಿಲ್ಲಮನು ತೈಲಪನಿಗೆ ಶರಣುಬಂದನೆಂತಲೂ ಕಲ್ಪಿಸಿದರೆ ದೊಡ್ಡ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

ಅತ್ತ ಮಾಳವೆಯ ಅರಸನಾದ ಮುಂಜನು ಕರ್ನಾಟಕ ದಂಡಯಾತ್ರೆಗೋಸ್ಕರ ದೊಡ್ಡ ದಂಡನ್ನು ಕಟ್ಟಿಕೊಂಡು, ಎಲ್ಲ ಯುದ್ಧ ಸಾಮಗ್ರಿಗಳನ್ನು ಸಂಗ್ರಹಿಸಿಕೊಂಡು, ಉಬ್ಬಿನಿಂದ ತನ್ನ ರಾಜಧಾನಿಯಾದ ಉಜ್ಜಯಿನಿಯನ್ನು ಬಿಟ್ಟು, ನೇಮಾಡದ ಹತ್ತಿರ ನರ್ಮದಾ ನದಿಯನ್ನೂ, ಭುಸಾವಳದ ನೆರೆಯಲ್ಲಿ ತಾಪಿ ನದಿಯನ್ನೂ ದಾಟಿ, ಬುಲಢಾಣಾದಲ್ಲಿ ಪಾಳೆಯಹಾಕಿಕೊಂಡಿದ್ದಾನೆಂಬ ಸುದ್ದಿಯು ತೈಲಪನು ಇದ್ದ ನಳದುರ್ಗಕ್ಕೆ ಬಂದು ಮುಟ್ಟಿತು. ಕೂಡಲೆ ತೈಲಪನು ಭಿಲ್ಲಮನನ್ನು ತನ್ನ ಸಂಗಡ ಕರೆಕೊಂಡು, ಉತ್ತರಾಭಿಮುಖನಾಗಿ ಹೊರಟನು. ಗೋದಾವರಿಯ ದಂಡೆಯ ಮೇಲೆ ಪೈಠಣದ ಹತ್ತಿರ ಈಚೆಯ ದಂಡೆಯ ಮೇಲೆ ತೈಲಪನೂ, ಆಚೆಯ ದಂಡೆಯ ಮೇಲೆ ಮುಂಜನೂ ಪಾಳೆಯ ಹಾಕಿಕೊಂಡು ಕುಳಿತರು. ಎರಡೂ ಪಕ್ಷದ ಗುಪ್ತಚಾರರು ಚಾಳುಕ್ಯರ ಸುದ್ದಿಯನ್ನು ಮಾಳವೆಯರಿಗೂ ಮಾಳವೆಯರ ಸುದ್ದಿಯನ್ನು ಚಾಳುಕ್ಯರಿಗೂ ಎಡೆಬಿಡದೆ ತರಲಾರಂಭಿಸಿದರು. ತೈಲಪನು ಚದುರ ದಳವಾಯಿಯಾದ್ದರಿಂದ ಹೊಳೆಯನ್ನು ದಾಟುವ ಹವ್ಯಾಸವನ್ನು ಪತ್ತಕ್ಕಿಟ್ಟು, ಹಗೆಗಳ ಆಗಮನವನ್ನು ಎದುರು ನೋಡುತ್ತ ಕುಳಿತನು. ಮುಂಜನು ಉಲುಕೋಚಿಯಾದ್ದರಿಂದ ತನ್ನ ಮಂತ್ರಿಯಾದ ರುದ್ರಾದಿತ್ಯನು ಸರ್ವಥಾ ಬೇಡೆಂದು ಎಷ್ಟು ಹೇಳಿದರೂ ಕೇಳದೆ, ಹೊಳೆಯನ್ನು ದಾಟಿ ಹೋಗಿ, ಶತ್ರುಗಳ ಮೇಲೆ ಬೀಳಲಿಕ್ಕೆ ಕಟ್ಟಪ್ಪಣೆಯನ್ನಿತ್ತನು. ಮಾಳವೆಯರು ನದಿಯನ್ನು ದಾಟಿ ಬರುವಾಗ ಅವರೊಡನೆ ಕಾದುತ್ತಿದ್ದ ಕನ್ನಡ ಕಲಿಗಳು ತೈಲಪನ ಅಪ್ಪಣೆಯ ಮೇರೆಗೆ ಒಮ್ಮೆಲೆ ಹಿಂದೆಗೆದರು. ಅವರು ಸೋತು ಓಡುತ್ತಾರೆಂಬ ಭ್ರಾಂತಿಗೊಳಗಾಗಿ ಮುಂಜನು ಮುಂದರಿಸಿದನು. ಕೂಡಲೆ ತೈಲಪನ ದಂಡಾಳುಗಳು ತಿರುಗಿ ನಿಂತು, ಬರ್ಚಿಯಿಂದ ಇರಿದು ಬಾಣಗಳನ್ನು ಎಸೆದು, ಕತ್ತಿಗಳಿಂದ ಹೊಡೆದು, ಮಾಳವೆಯರ ದಂಡನ್ನು ನೆಲಕ್ಕೆ ಉರುಳಿಸಿದರು.

ಅಷ್ಟರೊಳಗೆ ತೈಲಪನ ದಳವಾಯಿಯೊಬ್ಬನು ಅಡರಾಸಿಹೋಗಿ ಮುಂಜನನ್ನು ಸುತ್ತುಗಟ್ಟಿ, ಅವನ ರಾಹುತನನ್ನು ಕೆಡವಿ, ಆನೆಯನ್ನು ಕೊಂದು, ಅವನನ್ನು ಸೆರೆಹಿಡಿದೊಯ್ದು ತೈಲಪನಿಗೆ ಒಪ್ಪಿಸಿದನು. ಆಗ ಮಾಳವೆಯರಲ್ಲಿ ಎದ್ದ ಹಾಹಾಕಾರವನ್ನು ಬಣ್ಣಿಸಲಳವಲ್ಲ. ತಮ್ಮ ಅರಸು ಸೆರೆಸಿಕ್ಕುದನ್ನು ಕಂಡು, ಮಾಳವೆಯರ ಹುರುಪು ಅಳಿಯಿತು, ಧೈರ್ಯ ಕುಗ್ಗಿತು, ತಂತಮ್ಮ ಪ್ರಾಣರಕ್ಷಣೆಯ ಆಲೋಚನೆಯು ಹೆಚ್ಚಿತು. ಕನ್ನಡಿಗರ ಅಬ್ಬರದ ಹೊಡತಕ್ಕೂ ಅವರ ಕಡುಕಡಿತಕ್ಕೂ ಹೆದರಿ ಹವ್ಹಾರಿದ ಮಾಳವೆಯರು ಕಾಲಿಗೆ ಬುದ್ಧಿಹೇಳಿ, ದಿಕ್ಕುಪಾಲಾಗಿ ಓಡಿಹೋದರು. ಜಯಲಕ್ಷ್ಮಿಯು ನಮ್ಮ ವೀರಶಿರೋಮಣಿಯಾದ ತೈಲಪನ ಕೊರಳೊಳಗೆ ಮಾಲೆಯನ್ನು ಹಾಕಿದಳು. ಈ ಕಾಳೆಗವು ಎಲ್ಲಿ ಆಯಿತೆಂಬುದು ನಿಶ್ಚಯವಾಗಿ ತಿಳಿಯುವವರೆಗೆ ಇದಕ್ಕೆ **ಗೋದಾವರಿ ಕಾಳೆಗ**ವೆಂದು ಕರೆಯಬಹುದು (೯೮೦ ?).

ಗೋದಾವರಿ ಕಾಳೆಗದಲ್ಲಿ ಪರಮಾರ ಮುಂಜನು ಸೆರೆಸಿಕ್ಕುದರಿಂದ ತೈಲಪನ ಹಿಗ್ಗು ಹಿಡಿಯಲಾರದಷ್ಟಾಯಿತು. ಈಗ ಅವನಿಗೆ ಶತ್ರುಗಳಾರೂ ಉಳಿಯಲಿಲ್ಲ. ಪೆರಮಡಿ ಮಾರಸಿಂಹನು ಬನವಾಸಿಯ ಕಾಳೆಗದಲ್ಲಿ ಸೋತು ಬಂಕಾಪುರಕ್ಕೆ ಓಡಿಹೋಗಿ ಅಲ್ಲಿ ಸತ್ತನೆಂಬ ಸುದ್ದಿಯು ಹಳೆ ಮಾತಾಗಿತ್ತು. ಅಪರಾಜಿತ ಶಾಂತಿವರ್ಮ ಭಿಲ್ಲಮರು ಶರಣಾಗತರಾಗಿದ್ದರು. ರಾಷ್ಟ್ರಕೂಟರ ಮತ್ತು ತನ್ನ ಪಿರಿಯ ಕಡುಹಗೆಯಾದ ಮುಂಜನಂತೂ ಅವನ ಹಸ್ತಗತನಾಗಿದ್ದನು. ರಾಷ್ಟ್ರಕೂಟರ ಸಾಮ್ರಾಜ್ಯವೆಲ್ಲ ಅವನ ಕಯ್ಸೇರಿತ್ತು. ಆದ್ದರಿಂದ ಈ ಕಾಲಕ್ಕೆ ಅವನ ಹೆಬ್ಬಯಕೆಯು ಸ್ವಾಭಾವಿಕವಾಗಿ ಹೆಚ್ಚಿತು. ಈ ವರೆಗೆ ದೊರೆತ ಗೆಲವಿನಿಂದ ಸಂತುಷ್ಟನಾಗಿ ತಿರುಗಿ ಬಾರದೆ, ಅವನು ಗೋದಾವರಿಯನ್ನು ದಾಟಿ, ತನ್ನ ಪ್ರಸಿದ್ಧ ಪೂರ್ವಜನಾದ ೨ನೆಯ ಪುಲಿಕೇಸಿಯಂತೆ ನರ್ಮದಾನದಿಯ ವರೆಗೆ ತನ್ನ ಸಾಮ್ರಾಜ್ಯವನ್ನು ಬೆಳಿಸುವ ಉದ್ದೇಶದಿಂದ ಜಾಲನಾ ಅಕೋಲಾ ವರ್ಹಾಡ ನಾಗಪುರ ಪ್ರಾಂತಗಳನ್ನು ಹಿಡಿದುಕೊಂಡು, ತನ್ನ ತಾಯಿಯ ತವರುಮನೆಯ ಊರಾದ

ತ್ರಿಪುರಕ್ಕೆ* ಹೋದನು. ಅಲ್ಲಿ ಕೆಲಕಾಲ ನಿಂತು ವಿಶ್ರಾಂತಿ ತೆಗೆದುಕೊಂಡು, ಮುಂದೆ ಉತ್ಕಲ (ಒರಿಸಾ) ಪ್ರಾಂತದ ಮೇಲೆ ದಂಡೆತ್ತಿ ಹೋದನು. ಅಲ್ಲಿಯ ಅರಸು ಅವನಿಗೆ ಶರಣುಬಂದು ಸ್ನೇಹದ ಒಡಂಬಡಿಕೆಯನ್ನು ಮಾಡಿಕೊಂಡುದರಿಂದ ಸುಪ್ರೀತನಾದ ತೈಲಪನು ತನ್ನ ವಿಜಯ ದಂಡಯಾತ್ರೆಯನ್ನು ಮುಗಿಸಿಕೊಂಡು ಮರಳಿ ತನ್ನ ರಾಜಧಾನಿಯಾದ ಮಳಖೇಡಕ್ಕೆ ಬಂದನು (೯೮೩?).

ಪರಮಾರ ವಾಕ್ಪತಿ ಮುಂಜನು ಗೋದಾವರಿಯ ಕಾಳೆಗದಲ್ಲಿ ಸೆರೆಸಿಕ್ಕನೆಂದು ಮೇಲೆ ಬರೆದಿರುತ್ತೇವಷ್ಟೇ. ತೈಲಪನು ಅವನನ್ನು ಕಾವಲಲ್ಲಿರಿಸಿದರೂ ಕೆಲಕಾಲ ಬಹುಮಾನದಿಂದ ನಡಿಸಿಕೊಂಡನು. ಈ ಬಹುಮಾನವು ತೈಲಪನಿಗೆ ಭೂಷಣವಾದರೂ ಮುಂಜನಿಗೆ ತೋಷಣವಾಗಲಿಲ್ಲ. ಏಕೆಂದರೆ, ಸ್ವಾತಂತ್ರ್ಯವು ಎಲ್ಲ ಪ್ರಾಣಿಗಳ ಹುಟ್ಟ ಹಕ್ಕಲ್ಲವೇ? ಅದು ಹೋದರೆ ಸರ್ವಸ್ವವು ಹೋದಂತಾಗುವುದಿಲ್ಲವೇ? ಸೆರೆಸಿಕ್ಕ ಸಾಮಾನ್ಯ ವ್ಯಕ್ತಿಗೆ ಆಟ ನೋಟಗಳು ಸೊಗಯಿಸುವುದಿಲ್ಲ. ವಸ್ತ್ರಭೂಷಣಗಳು ಸೇರುವುದಿಲ್ಲ, ಅನ್ನಪಾನಗಳು ರುಚಿಸುವುದಿಲ್ಲ†. ಮುಂಜನಂತೂ ಸ್ವತಂತ್ರನಾದ ಅರಸಾಗಿದ್ದನು. ಆದ್ದರಿಂದ ಅವನಿಗೆ ತೈಲಪನು ತೋರಿಸಿದ ಔದಾರ್ಯವೂ ಅವನು ಮಾಡಿದ ಆದರಾತಿಥ್ಯವೂ ಸೇರಲಿಲ್ಲ. ತಾನು ಕಾವಲಿಂದ ತಪ್ಪಿಸಿಕೊಂಡು ಹೇಗೆ ತನ್ನ ರಾಜ್ಯಕ್ಕೆ ಮರಳಿ ಹೋಗಬೇಕೆಂಬ ವಿಚಾರವು ಅವನ ಮನಸ್ಸನ್ನು ಯಾವಾಗಲೂ ಕಟಿಯತೊಡಗಿತು. ಒಮ್ಮೆ ಕಾವಲಿಂದ ತಪ್ಪಿಸಿಕೊಂಡು ಓಡಿಹೋಗಲಿಕ್ಕೆ ಅವನು ಮಾಡಿದ ಪ್ರಯತ್ನವು ಗೊತ್ತಾದ್ದರಿಂದ ಅವನ ಬಂದಿಯು ಹೆಚ್ಚು ಬಿಕ್ಕಟ್ಟಾಯಿತು. ಸೆರೆಯು ಬಿಗಿಯಾದ್ದರಿಂದ ಕಾವಲು ಅಸಹ್ಯವಾಯಿತು, ಮತ್ತು ಬಂಧಮುಕ್ತತೆಯ ಬಯಲಾಸೆಯು ಬೆಳೆಯಿತು. ಮುಂಜನು ಮತ್ತೊಮ್ಮೆ ಓಡಿಹೋಗಲಿಕ್ಕೆ ಪ್ರಯತ್ನಮಾಡಲು,

---

* ಇದು ಚೇದಿ ದೇಶದ ರಾಜಧಾನಿಯು. ಇದಕ್ಕೆ ಈಗ ತೇವೂರೆನ್ನುತ್ತಾರೆ. ಇದು ಮಧ್ಯಪ್ರಾಂತದೊಳಗೆ ಜಬ್ಬಲಪುರದ ಹತ್ತಿರ ಇರುತ್ತದೆ.

† ಯದ್ಯತ್ಪರವಶಂ ದುಃಖಮ್ ಯದ್ಯದಾತ್ಮವಶಂ ಸುಖಮ್ ॥ ಮನುಸ್ಮೃತಿ.

ತೈಲಪನು ಸಿಟ್ಟಿಗೆದ್ದು, ಅವನನ್ನು ದಿನಾಲು ಮನೆಮನೆಗೆ ಭಿಕ್ಷಾ ಬೇಡಲಿಕ್ಕೆ ಹಚ್ಚಿ, ಕೊನೆಗೆ ಕ್ರೂರತನದಿಂದ ಕೊಲ್ಲಿಸಿದನು. ಅವನನ್ನು ಸೇವುಣದೇಶದ ಯಾದವ ಮಂಡಲೇಶ್ವರನಾದ ಭಿಲ್ಲಮನೇ ಸೋಲಿಸಿದ ನೆಂದು ಸಂಗಮನೇರ ಶಾಸನದಲ್ಲಿ ಬರೆದಿರುತ್ತದೆ. ಅದು ಹೇಗೇ ಇರಲಿ, ಈ ಕೊಲೆಯಿಂದ ಕಲ್ಯಾಣದ ಚಾಳುಕ್ಯ ಮಾಳವೆಯರ ನಡುವಿದ್ದ ಹಗೆ ತನವು ಹೆಚ್ಚಿ, ಅವರಿಬ್ಬರು ಬಹು ಕಾಲ ಒಂದೇ ಸವನೆ ಗುದ್ದಿಯಾಡಲಿಕ್ಕೆ ಕಾರಣವಾಯಿತು. ದ್ವೇಷದಿಂದ ದ್ವೇಷವು ಬೆಳೆಯುತ್ತದೆ ಹೊರತು ಅದು ಎಂದೂ ಕಡಮೆಯಾಗುವುದಿಲ್ಲ. ಈ ಕೊಲೆಯು ಎಂದು ಎಲ್ಲಿ ಆಯಿತೆಂಬುದು ಗೊತ್ತಾಗಿಲ್ಲ.

ತನ್ನ ವಿಜಯ ದಂಡಯಾತ್ರೆಯನ್ನು ಮುಗಿಸಿಕೊಂಡು ಬಂದ ಬಳಿಕ ತೈಲಪನು ತನ್ನ ರಾಜಧಾನಿಯಲ್ಲೇ ಇದ್ದು, ತಾನು ದೊರಕಿಸಿದ ಸಾಮ್ರಾಜ್ಯದ ಸುವ್ಯವಸ್ಥೆಯನ್ನು ಮಾಡುವುದರಲ್ಲಿಯೂ, ಪುಂಡ ಬಂಡು ಗಾರರನ್ನು ದಂಡಿಸುವುದರಲ್ಲಿಯೂ, ಮಲೆತು ನಿಂತ ಮಾಂಡಲಿಕರನ್ನು ಬಗ್ಗಿಸುವುದರಲ್ಲಿಯೂ, ಪ್ರಜೆಗಳ ಯೋಗಕ್ಷೇಮವನ್ನು ಹೆಚ್ಚಿಸುವ ಏರ್ಪಾಡುಗಳನ್ನು ಮಾಡುವುದರಲ್ಲಿಯೂ ತನ್ನ ಉಳಿದ ಆಯುಷ್ಯವನ್ನು ಕಳೆದನೆಂದು ಹೇಳಬಹುದು. ೧೧ನೆಯ ಮತ್ತು ೧೨ನೆಯ ಶತಮಾನ ಗಳ ಕೆಲ ಶಾಸನಗಳಲ್ಲಿ ತೈಲಪನು ಚೇದಿ, ಉತ್ಕಲ, ಚೋಳ, ನೇಪಾಳ ರಾಜ್ಯಗಳನ್ನು ಗೆದ್ದನೆಂದು ಬರೆದಿರುತ್ತದಷ್ಟೇ. ಅವನು ಚೇದಿ ಉತ್ಕಲ ಗಳಿಗೆ ಹೋಗುವುದು ಸಂಭವನೀಯವಾದ್ದರಿಂದ ಅದನ್ನು ಮೇಲೆ ವಿವರಿಸಿರುತ್ತೇವೆ. ಅವನು ಚೋಳ ಅರಸನನ್ನು ಸೋಲಿಸಿ, ಅವನೊಡನೆ ಒಡಂಬಡಿಕೆಯನ್ನು ಮಾಡಿಕೊಂಡಿರಬಹುದು. ಆದರೆ ಅವನು ನೇಪಾಳ ನಾಡನ್ನು ಗೆಲ್ಲುವುದು ಅಸಂಭವನೀಯವಾದ್ದರಿಂದ ಡಾ॥ ಫ್ಲೀಟರ ಅಭಿಪ್ರಾಯದಂತೆ ಆ ವರ್ಣನೆಯು ಬರಹಗಾರರ ಕಯ್ಗುಂಟೆಂದು ಹೇಳ ಬಹುದು*.

ತೈಲಪನು ಗುಜರಾಥ ಪ್ರಾಂತವನ್ನು ಒಳಸುಗ್ಗಿ ಅದನ್ನು ತನ್ನ ಕಯ್ವಶಮಾಡಿಕೊಂಡಂತೆ ಕಂಡುಬರುವುದಿಲ್ಲ. ಏಕೆಂದರೆ, ಬಾದಾಮಿ

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೩೧.

ಚಾಳುಕ್ಯ ವಂಶದ **ಮೂಲರಾಜ**ನೆಂಬವನು ತನ್ನ ರಾಜಧಾನಿಯಾದ **ಅನ್ಹಿಲ್ವಾಡ**ದಲ್ಲಿದ್ದು ಆ ಪ್ರಾಂತವನ್ನು ೯೪೨ರಿಂದ ೯೯೭ರ ವರೆಗೆ ಆಳಿದನೆಂತಲೂ ಮುಂದೆ ೪೦೦ ವರ್ಷ ಅವನ ವಂಶಜರು ಅಲ್ಲೇ ಆಳಿದರೆಂತಲೂ ಶಾಸನಗಳಿಂದ ಸಿದ್ಧವಾಗುತ್ತದೆ. ಆದರೆ ೯೭೫ರ ಸುಮಾರಕ್ಕೆ **ಬಾರಪ್ಪ**ನೆಂಬ ಒಬ್ಬ ಚಾಳುಕ್ಯನು ಲಾಟಪ್ರಾಂತವನ್ನು ಹಿಡಕೊಂಡನೆಂತಲೂ ಅವನ ವಂಶಜರು ೧೦೫೧ರ ವರೆಗೆ ಅಲ್ಲಿ ಆಳಿದರೆಂತಲೂ ಶಾಸನಗಳಿಂದ ತಿಳಿದುಬರುತ್ತದೆ. ಆದರೆ ಈ ಬಾರಪ್ಪನು ಯಾರೆಂಬುದು ನಿಶ್ಚಯವಾಗಿ ಗೊತ್ತಾಗುವದಿಲ್ಲ. ಕೀರ್ತಿಕೌಮುದಿಯೆಂಬ ಸಂಸ್ಕೃತ ಗ್ರಂಥದಲ್ಲಿ ಬಾರಪ್ಪನು ಲಾಟಪ್ರಾಂತದ ಒಡೆಯನ ದಳವಾಯಿಯಾಗಿದ್ದನೆಂದು ಬರೆದುದರಿಂದ ತೈಲಪನು ಲಾಟಪ್ರಾಂತವನ್ನು ಗೆದ್ದಿದ್ದನೆಂತಲೂ ಆದ್ದರಿಂದ ಬಾರಪ್ಪನು ತೈಲಪನ ದಳವಾಯಿಯಾಗಿದ್ದನೆಂತಲೂ ಡಾ॥ ಭಾಂಡಾರಕರರು ಊಹಿಸುತ್ತಾರೆ*. ಅವನು ಮೂಲರಾಜನ ವಂಶಜನೇ ಆಗಿರಲಿಕ್ಕೆಬೇಕೆಂದು ಡಾ॥ ಫ್ಲೀಟರು ಬರೆಯುತ್ತಾರೆ†. ಅವನು ಕನೋಜದ ಅರಸನ ದಳವಾಯಿ ಆಗಿದ್ದನೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ಬಾರಪ್ಪನು ಯಾರಾಗಿದ್ದನೆಂಬುದು ವಾದಗ್ರಸ್ತ ವಿಷಯವೇ ಸರಿ.

ತೈಲಪನು ರಾಷ್ಟ್ರಕೂಟರ ಇಡಿ ಸಾಮ್ರಾಜ್ಯಕ್ಕೆ ಒಡೆಯನಾದನೆಂದು ಮೇಲೆ ಬರೆದಿರುತ್ತೇವಷ್ಟೇ. ೧೦೦೮ನೆಯ ಇಸ್ವಿಯ ಖಾರೆಪಾಟಣದ ಶಾಸನದಲ್ಲಿ ತೈಲಪನ ಮಗನಾದ ಇರಿವಬೆಡಂಗ ಸತ್ಯಾಶ್ರಯನು **ರಟ್ಟಪಾತಿಯ** ಒಡೆಯನಾಗಿದ್ದನೆಂತಲೂ ಚೋಳರ ಕೆಲ ಶಾಸನಗಳಲ್ಲಿ **ರಟ್ಟಪಾಡಿ ಏಳೂವರೆ ಲಕ್ಷವನ್ನು** ಕಲ್ಯಾಣದ ಚಾಳುಕ್ಯರು ಆಳುತ್ತಿದ್ದರೆಂತಲೂ ಬರೆದಿದೆ. ತೈಲಪನ ಹಿಂದಾದ ಸಾರ್ವಭೌಮರ ಕೆಲ ಶಾಸನಗಳಲ್ಲಿ ಕಲ್ಯಾಣದ ಚಾಳುಕ್ಯರು ಕುಂತಳದೇಶದ ಒಡೆಯರಾಗಿದ್ದರೆಂದು ಸ್ಪಷ್ಟವಾಗಿ ಬರೆದಿದೆ. ಆದರೆ ಈ ಕುಂತಳನಾಡು ಯಾವುದಾಗಿತ್ತೆಂಬುದಾಗಲಿ, ಇದರ ವಿಸ್ತಾರವು ಎಷ್ಟಿತ್ತೆಂಬುದಾಗಲಿ, ಇದಕ್ಕೆ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೧೩.

† ಸದರ ಪು. ೪೩೦.

ಈ ಹೆಸರು ಏಕೆ ಬಂದುದೆಂಬುದಾಗಲಿ ಇನ್ನೂ ನಿಶ್ಚಯವಾಗಿ ಗೊತ್ತಾಗಿಲ್ಲ. ಪೌರಾಣಿಕ ಕಾಲದಲ್ಲಿ ಚಂದ್ರಹಾಸನು ಕುಂತಳನಾಡಿನ ಒಡೆಯನಾಗಿದ್ದನೆಂತಲೂ ಕುಂತಳಪುರ ಅಥವಾ ಕುಂತಳನಗರವು ಅವನ ರಾಜಧಾನಿಯಾಗಿತ್ತೆಂತಲೂ ಜೈಮಿನಿ ಭಾರತದಲ್ಲಿ ವರ್ಣಿಸಿದೆ*. ಮುಂದೆ ನಂದ ಮೌರ್ಯ ಸಾತವಾಹನ ಕದಂಬರ ಚರಿತ್ರೆಯಲ್ಲಿ ಕುಂತಳನಾಡಿನ ಹೆಸರು ಆಗಾಗ್ಗೆ ಬರುತ್ತಿದ್ದರೂ ಅದರ ವಿಸ್ತಾರದ ವರ್ಣನೆಯು ಎಲ್ಲಿಯೂ ಕಂಡುಬರುವುದಿಲ್ಲ. ೬ ನೆಯ ಶತಮಾನದ ವರಹಾಮಿರನ ಬೃಹತ್ಸಂಹಿತೆಯಲ್ಲಿ ಕುಂತಳದೇಶದ ಹೆಸರಿರುತ್ತದೆ. ಅದೇ ಸುಮಾರಿನ ಅಜಂತೆಯ ಒಂದು ಶಾಸನದಲ್ಲಿ ಅದರ ಹೆಸರುಂಟು. ಅಜಂತೆಯು ಕುಂತಳಕ್ಕೆ ಸೇರಿತ್ತೆಂದು ಜನರಲ ಕನಿಂಗ್ಹ್ಯಾಮರು ಬರೆಯುತ್ತಾರೆ. ಆದ್ದರಿಂದ ಉತ್ತರ ಕರ್ನಾಟಕವೇ ಕುಂತಳದೇಶವಾಗಿತ್ತೆಂದು ಸಾಧಾರಣವಾಗಿ ಹೇಳಬಹುದು. ಈ ವಿಷಯವನ್ನು ಕುರಿತು ಡಾ॥ ಫ್ಲೀಟರು ಬರೆಯುವುದೇನೆಂದರೆ:—

ಎಲ್ಲ ಕನ್ನಡ ಜಿಲ್ಲೆಗಳು ಈ ಕುಂತಳನಾಡಿಗೆ ಸೇರಿದ್ದವು. ಇದರ ತೆಂಕಲಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿದ್ದ ಬನವಾಸಿಯೂ, ಮೈಸೂರು ಸಂಸ್ಥಾನದಲ್ಲಿದ್ದ ಬಳಗಾವೆ ಹರಿಹರ ಎಂಬ ಊರುಗಳೂ, ಬಳ್ಳಾರಿ ಜಿಲ್ಲೆಯಲ್ಲಿದ್ದ ಹಂಪಿ ಅಥವಾ ವಿಜಯನಗರೆಂಬ ಊರೂ ಇದ್ದವು. ಇದರ ಬಡಗಲಲ್ಲಿ ಧಾರವಾಡ ಜಿಲ್ಲೆಯ ಹಾನಗಲ್ಲು, ಲಕ್ಷ್ಮೇಶ್ವರ, ಲಕ್ಕುಂಡಿ, ಗದಗು, ಈ ಊರುಗಳೂ, ಬೆಳಗಾವಿ ಜಿಲ್ಲೆಯ ಬೆಳಗಾವಿ, ಸವದತ್ತಿ, ಮನೋಳಿ, ಕೊಣ್ಣೂರು ಎಂಬ ಊರುಗಳೂ, ವಿಜಾಪುರ ಜಿಲ್ಲೆಯ ಪಟ್ಟದಕಲ್ಲು, ಅಯ್ಹೊಳೆ, ವಿಜಾಪೂರ ಎಂಬ ಊರುಗಳೂ, ಸಾಂಗಲಿ ಸಂಸ್ಥಾನದ ತೇರದಾಳ ಎಂಬ ಊರೂ, ನಿಜಾಮ ಸಂಸ್ಥಾನದ ಕಲ್ಯಾಣವೂ ಇದ್ದವು. ಈ ಕುಂತಳನಾಡಿನ ಮುಖ್ಯ ವಿಭಾಗಗಳಾವವೆಂದರೆ: ಬನವಾಸಿ ೧೨,೦೦೦, ಹಾನಗಲ್ಲ ೫೦೦, ಪುಲಿಗೆರೆ ೩೦೦, ಬೆಳ್ವೊಲ ೩೦೦, ಕುಂಡಿ ೩,೦೦೦, ವೇಣುಗ್ರಾಮ ಅಥವಾ ಬೆಳಗಾವಿ ೭೦, ತೊರಗಲ್ಲ ೬,೦೦೦, ಬಾದಾಮಿಯ ನೆರೆಯಲ್ಲಿದ್ದ ಕೆಳವಾಡಿ ೩೦೦, ಕಿಸುಕಾಡ ೭೦,

* ಜೈಮಿನಿ ಭಾರತ, ಸಂಧಿ ೨೮, ಶ್ಲೋಕ ೬, ೧೧, ೧೬.

ಬಾಗಡಿಗೆ ಅಥವಾ ಬಾಗಲಕೋಟೆ ೭೦, ವಿಜಾಪುರದ ಸುತ್ತಲಿನ ಪ್ರದೇಶವಾದ ತರದವಾಡಿ ೧,೦೦೦.

ರಾಷ್ಟ್ರಕೂಟರ ಎಲ್ಲ ಸಾಮಂತ ಮಹಾಸಾಮಂತರು ತೈಲಪನ ಅಧಿರಾಜ್ಯತ್ವಕ್ಕೆ ಒಪ್ಪಿಕೊಂಡಿದ್ದರೆಂಬುದರಲ್ಲಿ ಸಂದೇಹವಿಲ್ಲ. ಕುಂದಿನಾಡಿನಲ್ಲಿದ್ದ ರಟ್ಟ ಮನೆತನದ ೧ನೆಯ ಕಾರ್ತವೀರ್ಯನೂ, ಸೌದತ್ತಿಯಲ್ಲಿದ್ದ ಅದೇ ಮನೆತನದ ಶಾಂತಿವರ್ಮನೂ, ಬನವಾಸಿ, ಸಾಂತಲಿಗೆ, ಕಿಸುಕಾಡಗಳಲ್ಲಿದ್ದ ಭೀಮರಸನೂ, ಉತ್ತರ ಕೊಂಕಣದಲ್ಲಿದ್ದ ಸಿಲ್ಹಾರ ಮನೆತನದ ಅಪರಾಜಿತನೂ, ಸೇವುಣದೇಶದಲ್ಲಿದ್ದ ಯಾದವ ಮನೆತನದ ೨ನೆಯ ಭಿಲ್ಲಮನೂ ತೈಲಪನ ಮಾಂಡಲಿಕರಾಗಿ ಆಳುತ್ತಿದ್ದರೆಂದು ಅವರವರ ಶಾಸನಗಳಿಂದಲೇ ಸ್ಪಷ್ಟವಾಗಿ ಕಂಡುಬರುತ್ತದೆ. ಬನವಾಸಿಯ ಮಹಾಮಂಡಲೇಶ್ವರನಾದ ಭೀಮರಸನು ತೈಲಪನ ಅಂಕಕಾರ (ಬಲಗಯ್ಯ) ಆಗಿದ್ದನೆಂದು ಮೈಸೂರ ಸಂಸ್ಥಾನ ತಾಲಗುಂಡದ ಶಾಸನದಲ್ಲಿ ಬರೆದಿದೆ. ಇವನ ಹೆಸರಿಗೆ ಅರಸು ಶಬ್ದವನ್ನು ಜೋಡಿಸಿರುವುದರಿಂದಲೂ, ಇವನು ತೈಲಪನ ಬಲಗಯ್ಯಾಗಿದ್ದನೆಂದು ವರ್ಣಿಸಿರುವುದರಿಂದಲೂ ಇವನು ಆದಿಪಂಪನ ಆಶ್ರಯದಾತನಾದ ೨ನೆಯ ಅರಿಕೇಸರಿಯಾಗಲಿ ಅವನ ಮಗನಾಗಲಿ ಆಗಿರಬಹುದೆಂದು ಊಹಿಸಲಿಕ್ಕೆ ಅನುವು ದೊರೆಯುತ್ತದೆ. ಏಕೆಂದರೆ, ಆದಿಪಂಪನು ತನ್ನ ಭಾರತದಲ್ಲಿ ಬನವಾಸಿ ದೇಶವನ್ನು ೩ ಪದ್ಯಗಳಲ್ಲಿ ಹೃದಯಂಗಮವಾಗಿ ವರ್ಣಿಸಿರುತ್ತಾನೆ*. ಆದಕಾರಣ ಅವನು ತನ್ನ ಯಜಮಾನನ ಅಥವಾ ಅವನ ಮಗನೊಡನೆ ಕೆಲಕಾಲ ಬನವಾಸಿಯಲ್ಲಿ ಇದ್ದನೆಂದು ಅನುಮಾನ ಮಾಡಲಿಕ್ಕೆ ಏನೂ ಅಡ್ಡಿ ತೋರುವುದಿಲ್ಲ.

ತೈಲಪನಿಗೆ ತೈಲಪ್ಪ, ತೈಲಪಯ್ಯ, ೨ನೆಯ ತೈಲಪ, ನೂರ್ಮಡಿ ತೈಲಪ ಎಂಬ ಹೆಸರುಗಳಿದ್ದವು. ರಾಷ್ಟ್ರಕೂಟ ಮನೆತನದ ಜಾಕಬ್ಬೆ ಅಥವಾ ಜಾಕಲ ಮಹಾದೇವಿಯು ಇವನ ಪಟ್ಟದ ರಾಣಿಯಾಗಿದ್ದಳೆಂದು ಮೇಲೆ ಬರೆದಿರುತ್ತೇವೆ. ಅವಳಿಂದ ಇವನಿಗೆ ಇಬ್ಬರು ಗಂಡುಮಕ್ಕಳು ಹುಟ್ಟಿದರು. ಹಿರಿಮಗನ ಹೆಸರು ಸತ್ಯಾಶ್ರಯ, ಕಿರಿಮಗನ

* ಪಂಪ ಭಾರತ, ಆ. ೪, ಪದ್ಯ ೨೮, ೨೯, ೩೦.

ಹೆಸರು ದಶವರ್ಮ ಅಥವಾ ಯಶೋವರ್ಮ. ಇವನು ೯೯೭ರಲ್ಲಿ ಸತ್ತನು.

ತೈಲಪನ ಸ್ವಂತ ಶಾಸನಗಳಾವವೂ ಇನ್ನೂ ಸಿಕ್ಕಿಲ್ಲ. ಇವನ ಸಾಮಂತರು ಕೊರೆಯಿಸಿದ ೪ ಶಾಸನಗಳು ಮಾತ್ರ ಪ್ರಸಿದ್ಧವಾಗಿವೆ. ಅವಾವವೆಂದರೆ:—

೧. ಬೆಳಗಾವಿ ಜಿಲ್ಲಾ ಸೊಗಲದ ಶಾಸನ. ಕುಂಡಿನಾಡಿನ ಮಹಾಸಾಮಂತನಾದ ೧ನೆಯ ಕಾರ್ತವೀರ್ಯನು ಶಕ ೯೦೨ನೆಯ ವಿಕ್ರಮ ಸಂವತ್ಸರ ಆಷಾಢಮಾಸದಲ್ಲಿ (೯೮೦ ಜೂನ, ಜುಲೈಯಲ್ಲಿ) ಈ ಶಿಲಾಲೇಖವನ್ನು ಕೊರೆಯಿಸಿದನು.

೨. ಬೆಳಗಾವಿ ಜಿಲ್ಲೆ ಸೌದತ್ತಿಯ ಶಿಲಾಲೇಖ. ಸೌದತ್ತಿ ನಾಡಿನ ಮಹಾಸಾಮಂತನಾದ ಶಾಂತಿವರ್ಮನು ಶಕ ೯೦೨ನೆಯ ಮಾಘಮಾಸದಲ್ಲಿ (೯೮೧ ಜನವರಿಯಲ್ಲಿ) ಈ ಶಿಲಾಲೇಖವನ್ನು ಕೊರೆಯಿಸಿದನು.

೩. ಧಾರವಾಡ ಜಿಲ್ಲಾ ನೀಲಗುಂದ ಶಿಲಾಲೇಖ. ಇದು ಶಕ ೯೦೪ನೆಯ ಭಾದ್ರಪದಮಾಸದಲ್ಲಿ (೯೮೨ ಅಗಷ್ಟ) ಕೊರೆಯಿಸಲ್ಪಟ್ಟಿತು.

೪. ಮೈಸೂರು ಸಂಸ್ಥಾನ ತಾಲಗುಂದ ಶಿಲಾಲೇಖ. ಶಕ ೯೧೯ನೆಯ ವೈಶಾಖ ಅಥವಾ ಆಶ್ವಯುಜಮಾಸ (೯೯೭ ಮೇ ಅಥವಾ ಅಕ್ಟೋಬರ)ದಲ್ಲಿ ಬನವಾಸಿ, ಸಾಂತಲಿಗೆ, ಕಿಸುಕಾಡು ಈ ಪ್ರಾಂತಗಳ ಮಹಾಮಂಡಲೇಶ್ವರನಾದ ಭೀಮರಸನು ಇದನ್ನು ಕೊರೆಯಿಸಿದನು.

೨ನೆಯ ತೈಲಪನು ಪ್ರಸಿದ್ಧ ಕನ್ನಡ ಕವಿಯಾದ **ರನ್ನ**ನನ್ನು ತನ್ನ ಆಶ್ರಯದಲ್ಲಿಟ್ಟುಕೊಂಡು, ಅವನನ್ನು ಆಸ್ಥಾನಕವಿಯಾಗಿ ಮಾಡಿಕೊಂಡಿದ್ದನು. ಈ ಸಂಗತಿಯನ್ನು ರನ್ನನು ತನ್ನ ಗದಾಯುದ್ಧ, ೧ನೆಯ ಆಶ್ವಾಸ, ೩೭ನೆಯ ಪದ್ಯದಲ್ಲಿ ವರ್ಣಿಸಿರುತ್ತಾನೆ:—

ಪಡೆಯೆಡೆಯು ಕಡೆಯು ಬಡವ।
ರ್ಕುಡೆ ಪಡೆದರೊ ಚಕ್ರವರ್ತಿಯೊಳ್ತೈಲಪನೊಳ್ ॥

ಪಡೆದಂ ಮಹಿಮೋನ್ನತಿಯಂ।
ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ ॥ ೩೭ ॥

ಸೂರ್ಮಡಿ ತೈಲಪನು ಕರಹಾಟ ಕೊಂಕಣಗಳಿಗೆ ಭಯಂಕರನಾಗಿದ್ದನೆಂತಲೂ, ಪಲ್ಲಿಕೋಟೆಯನ್ನು ಹಿಡಿದುಕೊಂಡನೆಂತಲೂ, ಭದ್ರುಕನನ್ನು ಬೆನ್ನಟ್ಟಿದನೆಂತಲೂ, ಶ್ರಕಲಿಕರಾಜ ಅಕಲಂಕರಾಮರನ್ನು ಸೋಲಿಸಿದನೆಂತಲೂ, ರಾಷ್ಟ್ರಕೂಟ, ಪಾಂಚಾಳ, ಗುರ್ಜರ, ಮಾಳವೆಯರನ್ನು ಗೆದ್ದನೆಂತಲೂ ರನ್ನನು ತನ್ನ ಗದಾಯುದ್ಧದಲ್ಲಿ ಬರೆಯುತ್ತಾನೆ*. ಪಲ್ಲಿಕೋಟೆಯು ಯಾವುದೆಂಬುದಾಗಲಿ, ಭದ್ರುಕ ಮುಂತಾದವರು ಯಾರೆಂಬುದಾಗಲಿ ಇನ್ನೂ ಗೊತ್ತಾಗಿಲ್ಲ. ತೈಲಪ ಸತ್ತಿಗರ ಕಾಲದಲ್ಲಿ ಚಾಳುಕ್ಯ ವಂಶದೊಳಗೆ "ನುಡಿದು ಪುಸಿವುದುಂ, ಆಡಿ ಅಳುಪುವುದುಂ, ಕೂಡಿ ತಪ್ಪುವುದುಂ, ಬೇಡಿದರ್ಗಿಲ್ಲೆಂಬುದುಂ, ಕಾದಿ ಸೋಲ್ಪುದುಂ, ಪೆರವೆಣ್ಣಂ ಪಿಡಿಸುವುದುಂ, ಕನಸಿನೊಳಪ್ಪೊಡಮಿಲ್ಲಂ" ಎಂದು ಕವಿ ರನ್ನನು ವರ್ಣಿಸುತ್ತಾನೆ.

## ೨. ಸತ್ಯಾಶ್ರಯ ಅಥವಾ ಸತ್ತಿಗ

(೯೯೭–೧೦೦೮)

ಸೂರ್ಮಡಿ ತೈಲಪನ ತರುವಾಯ ಅವನ ಹಿರಿಮಗನಾದ **ಸತ್ಯಾಶ್ರಯ** ಅಥವಾ **ಸತ್ತಿಗ** ಎಂಬವನು ಪಟ್ಟವೇರಿದನು (೯೯೭). ಇವನಿಗೆ ಅಕಲಂಕಚರಿತ್ರ, ಇರಿವಬೆಡಂಗ (ಹಗೆಗಳನ್ನು ಇರಿಯುವುದರಲ್ಲಿ ಚಮತ್ಕೃತಿಯುಳ್ಳವನು) ಎಂಬ ಎರಡು ವಿಶಿಷ್ಟ ಬಿರುದುಗಳಿದ್ದವು. ಕವಿಚಕ್ರವರ್ತಿಯಾದ ರನ್ನನು ಇವನು ಯಾರ ಮಗನೆಂಬುದನ್ನು ಕೆಳಗೆ ಕೊಟ್ಟ ಶ್ಲೋಕದಲ್ಲಿ ಹೇಳಿ, ಇವನನ್ನು ಪಂಚಪಾಂಡವರೊಳಗೆ ಭೀಮನಿಗೆ ಹೋಲಿಸಿ ಗದಾಯುದ್ಧವೆಂಬ ಗ್ರಂಥವನ್ನು ಬರೆದಿರುತ್ತಾನೆ:—

ಸಂಗರ ರಂಗದೊಳಿಱಿವಜೆ।
ಡಂಗವೆಸರ್ಗಿಱಿ ನೆಗಱ್ದ ಸಂಗರವಂ ತೋ ॥

* ಗದಾಯುದ್ಧ, ೨ನೆಯ ಆಶ್ವಾಸ, ಪು. ೨೨–೨೩.

ರ್ಗಂ ಗಡ ಸೆಗಲ್ತಿರ್ದ್ದಾಹವಮು ।
ಲ್ಲಂಗಂ ಜಾಕವ್ವೆದೇವಿಗಂ ಪುಟ್ಟಿದುದಂ ॥

ಕವಿ ರನ್ನನು ಸತ್ತಿಗನನ್ನು ಭೀಮನಿಗೆ ಹೋಲಿಸಿದ್ದು ಕವಿತಾ ಚಾತುರ್ಯವೇ ಹೊರತು ವಸ್ತುಸ್ಥಿತಿ ವರ್ಣನೆಯಾಗಿದ್ದಿಲ್ಲ. ಏಕೆಂದರೆ ಸತ್ತಿಗನಲ್ಲಿ ಭೀಮಸೇನನ ಅದ್ಭುತ ಶಕ್ತಿಯು ಇದ್ದಿಲ್ಲ, ಮತ್ತು ಅವನು ಭೀಮನಂತಹ ಯಾವ ಸಾಹಸ ಕೃತ್ಯವನ್ನಾದರೂ ಮಾಡಲಿಲ್ಲ. ಅವನು ದಂಡೆತ್ತಿ ಬಂದ ಕಂಚಿಯ ಅರಸನನ್ನು ಸೋಲಿಸಿ ಹಿಂದಕ್ಕಟ್ಟಿದನೇ ಹೊರತು, ಬೇರೆ ಯಾವ ದಂಡಯಾತ್ರೆಯನ್ನು ಕಯ್ಕೊಳ್ಳಲಿಲ್ಲ, ಮತ್ತು ಯಾವ ಹೊಸ ನಾಡನ್ನು ಗೆಲ್ಲಲಿಲ್ಲ. ತನ್ನ ತಂದೆಯು ಮಾಡಿದ ದಂಡ ಯಾತ್ರೆಯಲ್ಲಿ ಅವನು ತನ್ನ ಪರಾಕ್ರಮವನ್ನು ತೋರಿಸಿರಬಹುದು. ಮುಂದೆ ಸಾರ್ವಭೌಮನಾದ ಬಳಿಕ ತನ್ನ ತಂದೆ ದೊರಕಿಸಿದ ರಾಜ್ಯ ವನ್ನು ಕಾಯ್ದುಕೊಂಡನೇ ಹೊರತು ಅದನ್ನು ಹೆಚ್ಚಿಗೆ ಬೆಳಿಸಲಿಲ್ಲ.

ಬಾದಾವಿ ಚಾಳುಕ್ಯ ಸಾರ್ವಭೌಮರಿಗೂ ಕಂಚಿಯ ಪಲ್ಲವ ಅರಸರಿಗೂ ಎಡೆಬಿಡದೆ ಜಗಳ ನಡೆದಿತ್ತೆಂದು ಹಿಂದೆ ಬರೆದಿರುತ್ತೇವಷ್ಟೇ*. ಈಗ ಪಲ್ಲವರ ಬದಲು ಚೋಳರು ಕಂಚಿ ರಾಜ್ಯವನ್ನು ಆಳುತ್ತಿದ್ದರು. ಈ ಕಾಲಕ್ಕೆ **ಕೋರಾಜ ರಾಜರಾಜ ಕೇಸರಿವರ್ಮ**ನೆಂಬ ಬಲಿಷ್ಠ ಅರಸನು ಚೋಳನಾಡಿನ ಒಡೆಯನಾಗಿದ್ದನು. ಅವನು ತನ್ನ ದಂಡಿನ ಶಕ್ತಿಯ ಕೊಬ್ಬಿನಿಂದಲೋ, ಚಾಳುಕ್ಯರಿಗೂ ಕಂಚಿಯ ಅರಸರಿಗೂ ಮೊದಲಿದ್ದ ಹಗೆತನದ ನೆನಪಿನಿಂದಲೋ ಸತ್ತಿಗನ ರಾಜ್ಯವನ್ನೊಳನುಗ್ಗಿ ದನು (೧೦೦೬?). ಇವನು ೯,೦೦,೦೦೦ ದಂಡನ್ನು ಕಟ್ಟಿಕೊಂಡು, ಸತ್ತಿಗನ ರಾಜ್ಯದ ಮೇಲೆ ದಂಡೆತ್ತಿಬಂದು ಊರುಗಳನ್ನು ಸುಲಿದು, ಹೆಂಗಸರನ್ನೂ ಹುಡುಗರನ್ನೂ ಬ್ರಾಹ್ಮಣರನ್ನೂ ಕೊಲ್ಲಿಸಿ, ಹರೆಯದ ಹುಡುಗಿಯರನ್ನು ಮದುವೆಮಾಡಿಕೊಂಡು, ಜಾತಿಯನ್ನು ಕೆಡಿಸ ತೊಡಗಿದ್ದಾನೆಂಬ ಸುದ್ದಿಯನ್ನು ಕೇಳಿ ಸತ್ತಿಗನು ಸಿಟ್ಟಿಗೆದ್ದು, ತಾನೇ ದಂಡೆತ್ತಿಹೋಗಿ, **ತಾ(ತೋ?)ವರೆಯಗಟ್ಟ**ವೆಂಬಲ್ಲಿ ಚೋಳರ ದಂಡಿನ

---

*ಕ. ಸಾ., ಸಂ. ೧೧, ಭಾ. ೨, ಪು. ೨೬೩.

ಮೇಲೆ ಬಿದ್ದು ಕಲಿತನದಿಂದ ಕಾದಿ, ಚೋಳರನ್ನು ದಿಕ್ಕಾಪಾಲಾಗಿ ಓಡಿಸಿ, ಅವರ ಪಾಳೆಯವನ್ನು ಸುಲಿದು, ತನ್ನ ರಾಜ್ಯದಿಂದ ಹೊರಗೆ ಹೋಗುವ ವರೆಗೆ ಅವರನ್ನು ಬೆನ್ನಟ್ಟಿ, ತನಗೆ ಸುಲಿಗೆಯಲ್ಲಿ ಸಿಕ್ಕ ಹೇರಳ ಸಂಪತ್ತನ್ನು ಹೇರಿಸಿಕೊಂಡು ತನ್ನ ರಾಜಧಾನಿಗೆ ತಿರುಗಿ ಬಂದನು (೧೦೦೮?). ಈ ಗೆಲವಿನಿಂದ ಚೋಳರ ಕಾಟವು ಕಡಮೆಯಾಯಿತು.

ಚೋಳರನ್ನು ಹಿಂದಕ್ಕೆ ಓಡಿಸಿ ಬಂದ ಬಳಿಕ ಸತ್ತಿಗನು ಬಹಳ ದಿವಸ ಬಾಳಲಿಲ್ಲ. ಅವನು ೧೦೦೯ ರಲ್ಲಿ ಸತ್ತನು. ಅಂಬಿಕಾ ಎಂಬ ಫಳು ಅವನ ಹೆಂಡತಿ ಆಗಿದ್ದಳೆಂದು ಮೆ॥ ರಾಯಿಸಸಾಹೇಬರು ತಮ್ಮ ಕಲ್ಯಾಣದ ಚಾಳುಕ್ಯರ ವಂಶಾವಳಿಯಲ್ಲಿ ಬರೆಯುತ್ತಾರೆ. ಆದರೆ ಈ ಬರಹಕ್ಕೆ ಇದ್ದ ಆಧಾರವನ್ನಾಗಲಿ ಆಕೆಯು ಯಾವ ಮನೆತನದವಳಾಗಿದ್ದಳೆಂಬುದಾಗಲಿ ಅವರು ತಿಳಿಸುವುದಿಲ್ಲ. ಡಾ॥ ಭಾಂಡಾರಕರರೂ ಡಾ॥ ಫ್ಲೀಟರೂ ಕೊಟ್ಟ ವಂಶಾವಳಿಗಳಲ್ಲಿ ಅಂಬಿಕೆಯ ಹೆಸರು ಕಂಡು ಬರುವುದಿಲ್ಲ. ಆದ್ದರಿಂದ ಇದು ವಾದಗ್ರಸ್ತ ವಿಷಯವೇ ಸರಿ.

ಡಾಕ್ಟರ ದ್ವಯರ ಅಭಿಪ್ರಾಯದಂತೆ ಸತ್ತಿಗನಿಗೆ ಒಬ್ಬ ಹೆಣ್ಣು ಮಗಳು ಮಾತ್ರ ಇದ್ದಳು. ಮೈಸೂರು ಜಿಲ್ಲಾ ಹುಣಸೂರು ತಾಲೂಕು ಕುಡುಕೂರು ಗ್ರಾಮದ ಬಸವೇಶ್ವರ ಗುಡಿಯ ಬಳಿ ನೆಟ್ಟ ವೀರಗಲ್ಲಿನಲ್ಲಿ ಕೆಳಗೆ ಕೊಟ್ಟ ಬರಹವಿರುತ್ತದೆ*:—

ಸ್ವಸ್ತಿ ಸಕ ವರ್ಷ ೯೧೯ ನೆಯ ಹೇವಳಂ
ಬಿ ಸಂವತ್ಸರಂ ಪ್ರವರ್ತಿಸುತ್ತಿರೆ ಶ್ರೀಮಚ್ಚಾಳುಕ ಪೆರ್ಮಾ ನಡಿ ದೇ
ವರು ತತ್ಪುತ್ರಿಪಂಪಾದೇವಿಯರ ರಾಜ್ಯಾಭ್ಯುದಯದಂದು......

ಈ ಶಾಸನದಿಂದ ಪಂಪಾದೇವಿಯು ಹುಣಸೂರು ತಾಲೂಕಿನಲ್ಲಿ ಆಳುತ್ತಿದ್ದಳೆಂತಲೂ, ಆಕೆಯು ಸತ್ತಿಗನ ಮಗಳಾಗಿರಬಹುದೆಂತಲೂ ರಾಯಿಸಸಾಹೇಬರು ಊಹಿಸುತ್ತಾರೆ†. ಪಂಪಾದೇವಿಯು ಹುಣಸೂರು ಭಾಗದಲ್ಲಿ ಆಳಿದ್ದು ನಿಜವಾಗಿರಬಹುದು. ಏಕೆಂದರೆ ಮುಂದೆ

---

* ಕರ್ನಾಟಕ ಶಾಸನ ಸಂಗ್ರಹ, ಸಂ. ೪, ಭಾ. ೨, ಪು. ೨೪೪.

† ಶಾಸನಗಳಿಂದ ತಿಳಿಯುವ ಮೈಸೂರು ಕೊಡಗು ಪ್ರಾಂತಗಳು, ಪು. ೭೩.

ಸತ್ತಿಗನ ತಮ್ಮನ ಮಗಳಾದ ಅಕ್ಕಾದೇವಿಯು ವಿಜಾಪುರ ಜಿಲ್ಲಾ ಹುನಗುಂದ ತಾಲೂಕು ಅರಸಿಬೀದಿಯಲ್ಲಿ ಆಳಿದ್ದು ಇತಿಹಾಸ ಪ್ರಸಿದ್ಧ ಸಂಗತಿಯಾಗಿರುತ್ತದೆ. ಆದರೆ ಸತ್ತಿಗನಿಗೆ 'ಚಾಳುಕ ಪೆರ್ಮಾನಡಿ' ಎಂಬದೊಂದು ಬಿರುದಿದ್ದುದಕ್ಕೆ ಬೇರೆ ಯಾವ ಆಧಾರವು ಇನ್ನೂ ಸಿಕ್ಕಿಲ್ಲ. ಅದು ಸಿಗುವ ವರೆಗೆ ಈ ಊಹೆಯು ವಾದಗ್ರಸ್ತ ವಿಷಯುವೇ ಸರಿ. ಸತ್ತಿಗನ ಮಗಳು **ಇರಿವನೋಲಂಬಾ**ಧಿರಾಜನೆಂಬ ಪಲ್ಲವ ಮಂಡಲೇಶ್ವರನನ್ನು ಮದುವೆಯಾಗಿದ್ದಳೆಂದು ಡಾ॥ ಫ್ಲೀಟರು ಬರೆಯುತ್ತಾರೆ*.

ಸತ್ತಿಗನಿಗೆ ಗಂಡುಮಕ್ಕಳಿದ್ದಿಲ್ಲೆಂದು ಡಾ॥ ಫ್ಲೀಟ ಭಾಂಡಾರಕರರ ಅಭಿಪ್ರಾಯವಿರುತ್ತದೆ. ಆದರೆ ಅವನಿಗೆ **ಕುಂದಮರ**ಸೆಂಬ ಒಬ್ಬ ಮಗನಿದ್ದನೆಂತಲೂ, ಅವನು ೧೦೧೨ರಲ್ಲಿ ಬನವಾಸಿಯ ಮಹಾಮಂಡಲೇಶ್ವರನಾಗಿ ಬಲಿಪುರ ಅಥವಾ ಬಳಗಾವಿಯಲ್ಲಿ ಆಳುತ್ತಿದ್ದನೆಂತಲೂ ಮೆ॥ ರಾಯಿಸಸಾಹೇಬರು ಬರೆಯುತ್ತಾರೆ. ಮೈಸೂರು ಸಂಸ್ಥಾನ ಶಿವಮೊಗ್ಗೆ ಜಿಲ್ಲಾ ಸಿಕಾರಪುರ ತಾಲೂಕಿನ ೨೮೭, ೧೨೫ ನಂಬರಿನ ಶಾಸನಗಳು ಈ ಬರಹಕ್ಕೆ ಆಧಾರವಾಗಿರುವುದರಿಂದ ಅವುಗಳ ಕೆಲವು ಸಾಲುಗಳನ್ನು ಉದ್ಧರಿಸಿ ಕೆಳಗೆ ಕೊಡುತ್ತೇವೆ:—

೨೮೭ ನೆಯ ನಂಬರಿನ ಶಾಸನ

೨. ............................................ಶ್ರೀಮ

೩. ತ್ರಿಭುವನಮಲ್ಲದೇವ ವಿಜಯ ರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ಧಮಾನಮಾಚಂದ್ರಾರ್ಕ್ಕ

೪. ತಾರಂಬರಂ ಸಲುತ್ತಮಿರೆ ॥ ಶ್ರೀಮದಿಱಿವಬೆಡಂಗದೇವರ ಮಗ ಶ್ರೀಮತು ಕುಂದಮರಸಂ

೫. ಬನವಾಸಿ ಪನ್ನಿಚ್ಛಾಸಿರಮುಮಂ ಸಾಸ್ತಳಿಗೆ ಸಾಸಿರಮುಮಂ ಸುಖಸಂಕಥಾ ವಿನೋದದಿಂದಾ

---

*ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೩೪.

೬. ಳುತ್ತಮಿರೆ ಸಕ ವರ್ಷ ೯೩೩ ನೆಯ ಪರಿಧಾವಿ ಸಂವತ್ಸರದ ಪುಷ್ಯ ಸುದ್ಧ ೧೩ ಸೋಮವಾರದಂದು.

೧೨೫ ನೆಯ ನಂಬರಿನ ಶಾಸನ

೧೬. ಜಗಕ್ಕೆಸೆದಿರೆ ಸಿಂಘವಿಷ್ಟರಮನೇಱಿದನಾ ಜಯಸಿಂಘ ವಲ್ಲಭಂ ||........

೧೭, ೧೮. ....................|| ತತು ಪಾದಪದ್ಮೋ

೧೯. ಪಜೀವಿ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡ ಳೇಶ್ವರಂ ಬನವಾಸಿ ಪುರವರಾಧೀಶ್ವರಂ ಚಾಮುಂಡಾಲಬ್ಧವರ ಪ್ರ

೨೦. ಸಾದಂ..................................

೨೧, ೨೨. ............................ವೈರಿಘ ರ

೨೩. ಟ್ಟಂ ಮಂಡಳಿಕ ಲಲಾಟಪಟ್ಟಂ ಸತ್ತಿಗನ ಚಟ್ಟಂ ಶ್ರೀಮ ದಿಱಿವಬೆಡಂಗದೇವರ ಮಗಂ ಶ್ರೀಮನ್ಮಹಾಮಂಡಳೇಶ್ವರಂ ಕುಂಡ ಮರಸರು ಬನ

೨೪. ವಾಸಿ ಪನ್ನಿಚ್ಛಾಸಿರಮುಮಂ ಸಾಂತಳಿ ಸಾಸಿರಮುಮಂ ಹಯ್ವೆಯುಯ್ನೂಱುಮುಸುಭಯ ಸಾಮ್ಯದಿ ಪಶ್ಚಿಮ ಸಮು

೨೫. ದ್ರ ಪರ್ಯಂತಂಬರಂ ಸುಖಸಂಕಥಾ ವಿನೋದದಿಂ ಬಲಿ ಪುರದ ನೆಲೆವೀಡಿನೊಳು ರಾಜ್ಯಂ ಗೆಯ್ಯುತ್ತಮಿರ್ದು ಶಕ ವರ್ಷ ೯೪೧ ನೆಯ ಸಿದ್ಧಾ

೨೬. ರ್ಥಿ ಸಂವತ್ಸರದ ಪುಷ್ಯ ಶುದ್ಧ ಬಿದಿಗೆ ಆದಿತ್ಯವಾರದಂದಿ ನುತ್ತರಾಯಣ ಸಂಕ್ರಾಂತಿಯ ಪರ್ಬ ನಿಮಿತ್ತದಿಂ ಮೂಲಸ್ಥಾನ ನಂದಿ

೨೭. ಕೇಶ್ವರದೇವರ ದೇವಾಲ್ಯಕ್ಕಂ ಜೀರ್ಣೋದ್ಧಾರಂ ಮಾಡಿ ...................

ಇವೆರಡೂ ತಾಮ್ರ ಶಾಸನಗಳಾಗಿರದೆ ಶಿಲಾಲೇಖಗಳಾಗಿರುತ್ತವೆ. ಆದ್ದರಿಂದ ಇವು ಕೃತಕ ಅಥವಾ ಸುಳ್ಳೆಂದು ಸಂಶಯ ತೆಗೆದು ಕೊಳ್ಳಲಿಕ್ಕೆ ಏನೂ ಕಾರಣವಿಲ್ಲ. ಇವೆರಡರಲ್ಲಿಯೂ ಕಾಲ ನಿರ್ದೇಶವು

ಸ್ಪಷ್ಟವಾಗಿಯೂ ಪೂರ್ಣವಾಗಿಯೂ ಇರುವುದಲ್ಲದೆ, ಇಱೀವಬೆಡಂಗ ದೇವರ ಮಗ ಕುಂದಮರಸೆಂದು ಸ್ಪಷ್ಟವಾಗಿ ಬರೆದಿದೆ. ಆದಕಾರಣ ಸತ್ತಿಗನಿಗೆ ಕುಂದಮರಸೆಂಬ ಒಬ್ಬ ಗಂಡುಮಗನಿದ್ದನೆಂಬುದಕ್ಕೆ ಸಂದೇಹವಿಲ್ಲ. ಇವನು ೧೦೧೨, ೧೦೧೯ ನೆಯ ಇಸ್ವಿಗಳಲ್ಲಿ ಬನವಾಸಿ ಮುಂತಾದ ಪ್ರಾಂತಗಳನ್ನು ಆಳುತ್ತಿದ್ದುದರಿಂದ ಸತ್ತಿಗನು ಸತ್ತಾಗ ಜೀವಂತನಾಗಿದ್ದನೆಂದು ಬರೆಯುಲಿಕ್ಕೆ ಏನೂ ಅಡ್ಡಿಯಿಲ್ಲ.

ಸತ್ತಿಗನಿಗೆ ಕುಂದಮರಸೆಂಬ ಹರೆಯದ ಗಂಡುಮಗನು ಇದ್ದರೂ ಅವನು ಏನು ಕಾರಣ ಪಟ್ಟವೇರಲಿಲ್ಲ ಎಂಬ ಪ್ರಶ್ನವು ಇಲ್ಲಿ ಸ್ವಾಭಾವಿಕವಾಗಿ ಹುಟ್ಟುತ್ತದೆ. ಅವನು ೨ನೆಯ ಪುಲಿಕೇಸಿಯಂತೆ ಅಲ್ಪವಯಿಯಾಗಿರಲಿಲ್ಲ. ಸತ್ತಿಗನ ತಮ್ಮನ ಮಗನಾದ ವಿಕ್ರಮಾದಿತ್ಯನು ರಾಜ್ಯಲೋಭದಿಂದ ಕುಂದಮರಸನೊಡನೆ ಜಗಳವಾಡಿ ಅವನನ್ನು ಸೋಲಿಸಿ, ಬಂದಿಯಲ್ಲಿಟ್ಟು, ತಾನು ಪಟ್ಟವೇರಿದನೆಂದು ಬರೆಯುಲಿಕ್ಕೆ ಎಳ್ಳಷ್ಟಾದರೂ ಆಧಾರವಿಲ್ಲ. ಕುಂದಮರಸನು ಮೇಲೆ ಕೊಟ್ಟ ತನ್ನ ಶಾಸನಗಳಲ್ಲೇ ತ್ರಿಭುವನಮಲ್ಲ (೫ನೆಯ ವಿಕ್ರಮಾದಿತ್ಯ ೧೦೦೯ರಿಂದ ೧೦೧೮), ಜಯಸಿಂಘ (೧೦೧೮-೧೦೪೨) ಇವರಿಬ್ಬರು ತನ್ನ ಒಡೆಯರಾದ ಸಾರ್ವಭೌಮರೆಂದು ಸಂತೋಷದಿಂದ ಒಪ್ಪಿಕೊಂಡಿರುತ್ತಾನೆ. ಆದ್ದರಿಂದ ಪಿತೃವ್ಯಸುತೋಲ್ಲಂಘನಮಾಡಿ ವಿಕ್ರಮಾದಿತ್ಯ ಜಯಸಿಂಹರು ಪಟ್ಟವೇರಿದರೆಂದು ಹೇಳಲಿಕ್ಕೆ ಮಾರ್ಗವಿಲ್ಲ. ಆದಕಾರಣ ಕುಂದಮರಸನ ಜನನದಲ್ಲೇ ಯಾವುದೋ ಶಾಸ್ತ್ರಸಮ್ಮತವಾಗದ ದೋಷವಿತ್ತೆಂದು ಕಂಡುಬರುತ್ತದೆ.

ಡಾಕ್ಟರದ್ವಯರು ತಾವು ಕೊಟ್ಟ ಕಲ್ಯಾಣದ ಚಾಳುಕ್ಯರ ವಂಶಾವಳಿಗಳಲ್ಲಿ ಸತ್ತಿಗನ ಹೆಂಡತಿಯ ಹೆಸರನ್ನು ಕೊಟ್ಟಿಲ್ಲೆಂದು ಮೇಲೆ ಬರೆದಿರುತ್ತೇವಷ್ಟೇ. ಮೆ॥ ರಾಯಿಸ ಸಾಹೇಬರು ಕೊಟ್ಟ ಅಂಬಿಕೆಯ ಹೆಸರಿನ ಮುಂದೆ 'ದೇವಿ,' 'ಅಂಬಾ' ಮುಂತಾದ ಸನ್ಮಾನಾರ್ಥ ಶಬ್ದಗಳು ಇಲ್ಲುದರಿಂದ ಆಕೆಯು ಮದುವೆಯ ಹೆಂಡತಿಯಾಗದೆ, ಬಂಗಾರದವಳಾಗಿದ್ದಳೆಂತಲೂ, ಆಕೆಯಿಂದ ಹುಟ್ಟಿದ ಕುಂದಮರಸನು

ಸತ್ತಿಗನ ಪ್ರೀತಿಯ ಮಗ (ಸತ್ತಿಗನ ಚಟ್ಟಂ)ನಾಗಿದ್ದನೆಂತಲೂ ಊಹಿಸಲಿಕ್ಕೆ ಅನುವು ದೊರೆಯುತ್ತದೆ.

ಸತ್ತಿಗನ ಕಾಲದ ೧೦ ಶಾಸನಗಳು ಪ್ರಸಿದ್ಧವಾಗಿವೆ. ಅವಾವವೆಂದರೆ:—

೧. ಧಾರವಾಡ ಜಿಲ್ಲಾ ಗದಗ ಊರಿನ ತ್ರಿಕುಟೇಶ್ವರ ದೇವಸ್ಥಾನದ ಶಿಲಾಲೇಖ. ಬೆಳ್ವೊಳ ೩೦೦*, ಪುಲಿಗೆರೆ ೩೦೦, ಕುಂದೂರು ೫೦೦, ಕುಕ್ಕನೂರು ೩೦ ಇವುಗಳನ್ನೊಳಗೊಂಡ ಪ್ರಾಂತದ ಮಹಾಸಾಮಂತನಾದ ಸೋಭನರಸನು ಶಕ ೯೨೪ನೆಯ ಶುಭಕೃತು ಸಂವತ್ಸರ ಚೈತ್ರಮಾಸ(೧೦೦೨ ಮಾರ್ಚ ಎಪ್ರಿಲ)ದಲ್ಲಿ ಈ ಶಿಲಾಲೇಖವನ್ನು ಕೊರೆಯಿಸಿದನು.

೨. ವಿಜಾಪುರ ಜಿಲ್ಲಾ ತುಂಬಿಗೆಯ ಶಿಲಾಲೇಖ. ಶಕ ೯೨೬ನೆಯ ಕ್ರೋಧಿ ಸಂವತ್ಸರ(೧೦೦೪–೫)ದಲ್ಲಿ ಈ ಲೇಖವು ಕೊರೆಯಿಸಲ್ಪಟ್ಟಿತು.

೩, ೪. ನಿಜಾಮ ಇಲಾಖೆ ಕುಕ್ಕನೂರು, ಮೈಸೂರ ಸಂಸ್ಥಾನ ಎಳವಾಳ ಈ ಊರುಗಳ ಶಿಲಾಲೇಖಗಳು. ಇವು ಬಹಳವಾಗಿ ಸವೆದುದರಿಂದ ಶಕ ೯೨೦–೯೨೯ರೊಳಗೆ ಕೊರೆಯಿಸಲ್ಪಟ್ಟುದುವೆಂದು ಹೇಳಬಹುದು.

೫. ಧಾರವಾಡ ಜಿಲ್ಲಾ ಕನ್ನೇಶ್ವರದ ಶಾಸನ. ೨ನೆಯ ತೈಲಪನ ಅಂಕಕಾರನೂ ಮಹಾಸಾಮಂತನೂ ಆದ ಭೀಮರಾಜನು ಬನವಾಸಿ, ಸಾಂತಲಿಗೆ, ಕಿಸುಕಾಡಗಳನ್ನಾಳುವಾಗ ಶಕ ೯೨೭ನೆಯ ವಿಶ್ವಾವಸು ಸಂವತ್ಸರ (೧೦೦೫–೬)ದಲ್ಲಿ ಈ ಶಾಸನವನ್ನು ಕೊರೆಯಿಸಿದನು.

೬. ಧಾರವಾಡ ಜಿಲ್ಲಾ ಹೊಟ್ಟೂರು. ಇದು ಶಕ ೯೨೯ನೆಯ ಪ್ಲವಂಗ ಸಂವತ್ಸರ(೧೦೦೭–೮)ದಲ್ಲಿ ಕೊರೆಯಿಸಲ್ಪಟ್ಟಿತು.

---

* ಬೆಳ್ವೊಳದೊಳಗೆ ಧಾರವಾಡ ಜಿಲ್ಲೆಯ ಗದಗು, ಅಣ್ಣಿಗೇರಿ, ಕುರ್ತಕೋಟಿ, ನರಗುಂದ ಈ ಊರುಗಳೂ, ಬೆಳಗಾವಿ ಜಿಲ್ಲೆಯ ಹೂಲಿಯೂ, ನಿಜಾಮ ಇಲಾಖೆಯ ಕುಕ್ಕನೂರೂ ಸೇರಿದ್ದವು.

೭. ರತ್ನಾಗಿರಿ ಜಿಲ್ಲಾ ಖಾರೆಪಾಟಣದ ತಾಮ್ರ ಶಾಸನ. ದಕ್ಷಿಣ ಕೊಂಕಣದ ಶಿಲಾಹಾರ ಮನೆತನದ ಮಂಡಲಿಕನಾದ ರಟ್ಟ ರಾಜನೆಂಬವನು ಸತ್ಯಾಶ್ರಯನು ರಟ್ಟಪಾಟಿಯನ್ನಾಳುವಾಗ ಶಕ ೯೩೦ ನೆಯ ಕೀಲಕ ಸಂವತ್ಸರ ಜ್ಯೇಷ್ಟಮಾಸ(೧೦೦೮ ಜೂನ)ದಲ್ಲಿ ಈ ತಾಮ್ರ ಶಾಸನವನ್ನು ಬರೆಯಿಸಿಕೊಟ್ಟನು.

೮. ಧಾರವಾಡ ಜಿಲ್ಲಾ ಮುನವಳ್ಳಿಯ ಶಿಲಾಲೇಖ. ಶಕ ೯೩೦ ನೆಯ ಕೀಲಕ ಸಂವತ್ಸರ ಶ್ರಾವಣಮಾಸದಲ್ಲಿ ಈ ಶಿಲಾಲೇಖವು ಕೊರೆಯಿಸಲ್ಪಟ್ಟಿತು.

೯. ಅಹಮ್ಮದನಗರ ಜಿಲ್ಲಾ ಸಂಗಮನೇರದ ತಾಮ್ರ ಶಾಸನ. ಶಕ ೯೨೨ ನೆಯ ಶಾರ್ವರಿ ಸಂವತ್ಸರ ಭಾದ್ರಪದಮಾಸ(೧೦೦೦ ಸಪ್ಟಂಬರ)ದಲ್ಲಿ ಸೇವುಣದೇಶದ ೨ ನೆಯ ಭಿಲ್ಲಮನು, ಈ ಶಾಸನ ವನ್ನು ಬರೆಯಿಸಿಕೊಟ್ಟನು. ಆದರೆ ಇದರಲ್ಲಿ ಅವನು ಸತ್ಯಾಶ್ರಯನ ಹೆಸರನ್ನಾಗಲಿ ಬೇರೆ ಯಾವ ಮಹಾರಾಜಾಧಿರಾಜನ ಹೆಸರನ್ನಾಗಲಿ ಕಾಣಿಸಿಲ್ಲ.

೧೦. ಮೈಸೂರು ಜಿಲ್ಲಾ ಕುಡುಕೂರು ಗ್ರಾಮದ ವೀರಗಲ್ಲು. ಇದನ್ನು ಮೇಲೆ ಉದಾಹರಿಸಿರುತ್ತೇವೆ.

## ೩. ಐದನೆಯ ವಿಕ್ರಮಾದಿತ್ಯ

(೧೦೦೯–೧೦೧೪)

ಸತ್ಯಿಗನಿಗೆ ಔರಸಪುತ್ರರು ಇಲ್ಲದರಿಂದ ಅವನ ತಮ್ಮನಾದ ದಶವರ್ಮ ಅಥವಾ ಯಶೋವರ್ಮ ಅವನ ಹೆಂಡತಿ ಭಾಗಲದೇವಿ ಇವರ ಹಿರಿಮಗನಾದ ವಿಕ್ರಮಾದಿತ್ಯನು ೫ ನೆಯ ವಿಕ್ರಮಾದಿತ್ಯ ನೆಂಬ ಹೆಸರಿನಿಂದ ಪಟ್ಟವೇರಿದನು (೧೦೦೯). ಇವನು ತನ್ನ ಪೂರ್ವ ಜರ ಸಾಮ್ರಾಜ್ಯ ಬಿರುದುಗಳನ್ನಲ್ಲದೆ **ತ್ರಿಭುವನಮಲ್ಲ**ನೆಂಬ ವಿಶಿಷ್ಟ ಬಿರುದನ್ನು ಧರಿಸಿದನು. ಇವನು ಪಟ್ಟವೇರಿದ ಕಾಲವು ನಿಶ್ಚಯವಾಗಿ ಗೊತ್ತಾಗಿದ್ದರೂ ಇವನ ಆಳಿಕೆಯು ಮುಗಿದ ಕಾಲವನ್ನು ನಿರ್ಣಯಿ

ಸುವುದು ಕಷ್ಟವಾಗಿದೆ. ಡಾ॥ ಫ್ಲೀಟರು ತಾವು ಕೊಟ್ಟ ಕಲ್ಯಾಣದ ಚಾಳುಕ್ಯರ ವಂಶಾವಳಿಯಲ್ಲಿ ಇವನು ೨-೩ ವರ್ಷ ಮಾತ್ರ ಅಂದರೆ ೧೦೧೧ರ ವರೆಗೆ ಆಳಿದನೆಂದು ಬರೆಯುತ್ತಾರೆ. ಡಾ॥ ಭಾಂಡಾರ ಕರರು ಇವನು ಸ್ವಲ್ಪಕಾಲ ಮಾತ್ರ ಆಳಿದನೆಂದು ಹೇಳಿದರೂ ತಾವು ಕೊಟ್ಟ ವಂಶಾವಳಿಯಲ್ಲಿ ಇವನು ೧೦೧೮ರ ವರೆಗೆ ಆಳಿದನೆಂದು ಬರೆಯುತ್ತಾರೆ. ಮಿ॥ ರಾಯಿಸ ಸಾಹೇಬರು ಡಾ॥ ಭಾಂಡಾರಕರರನ್ನು ಅನುಸರಿಸುತ್ತಾರೆ. ಡಾ॥ ಕಿಲ್ಹಾರ್ನರು ತಾವು ಮಾಡಿದ ಬೇರೆ ಬೇರೆ ಅರಸುಮನೆತನಗಳ ಪಟ್ಟಿಯಲ್ಲಿ ೫ನೆಯ ವಿಕ್ರಮಾದಿತ್ಯನ ಆಳಿಕೆಯು ಎಂದು ಮುಗಿಯಿತೆಂಬುದನ್ನು ಬರೆಯುವುದಿಲ್ಲ. ಡಾ॥ ಎ. ವೆಂಕಟ ಸುಬ್ಬಯ್ಯರು ತಾವು ಹೊಸತಾಗಿ ಮಾಡಿದ ಬೇರೆ ಬೇರೆ ಅರಸುಮನೆ ತನಗಳ ಪಟ್ಟಿಯಲ್ಲಿ ಇವನು ೧೦೧೪ರ ವರೆಗೆ ಆಳಿರಬಹುದೆಂದು ಊಹಿಸುತ್ತಾರೆ. ಈ ಮೇರೆಗೆ ಶಾಸನ ಪಂಡಿತರ ಅಭಿಪ್ರಾಯಗಳು ಒಂದ ಕ್ಕೊಂದು ವಿರುದ್ಧವಾಗಿರುವುದರಿಂದ ಇದು ವಾದಗ್ರಸ್ತ ವಿಷಯವೇ ಸರಿ. ಇವನು ಶಕ ೯೩೫ ಅಂದರೆ ಇಸ್ವಿ ೧೦೧೩-೧೦೧೪ ರಲ್ಲಿ ಆಳುತ್ತಿದ್ದನೆಂದು ಬಳ್ಳಾರಿ ಜಿಲ್ಲೆಯಲ್ಲಿ ಸಿಕ್ಕ ಒಂದು ಶಾಸನವು ಹೇಳುತ್ತದೆ. ಆದ್ದರಿಂದ ಹೊಸ ಶೋಧ ಆಗುವವರೆಗೆ ೫ನೆಯ ವಿಕ್ರಮಾದಿತ್ಯನು ೧೦೧೪ರ ವರೆಗೆ ಸಾರ್ವಭೌಮನಾಗಿದ್ದನೆಂದು ಗ್ರಹಿಸಿ ಮುಂದೆ ಸಾಗುವಾ.

೫ನೆಯ ವಿಕ್ರಮಾದಿತ್ಯನ ಆಳಿಕೆಯಲ್ಲಿ ಯಾವ ರಾಜ್ಯಕಾರ್ಯಗಳು ನಡೆದವೆಂಬುದು ಇನ್ನೂ ಗೊತ್ತಾಗಿಲ್ಲ. ಇವನ ಕಾಲದ ೪ ಶಾಸನಗಳು ಮಾತ್ರ ಸಿಕ್ಕಿವೆ. ಅವುಗಳ ಕಾಲವು ಕೆಳಗೆ ಬರೆದಂತೆ ಇರುತ್ತದೆ:—

೧. ಮಿರಜಿ ಸಂಸ್ಥಾನದ ಕೌಥೆಮದ ತಾಮ್ರ ಶಾಸನವು ಶಕ ೯೩೧ನೆಯ ಸೌಮ್ಯ ಸಂವತ್ಸರ(೬ ಅಕ್ಟೋಬರ ೧೦೦೯)ದಲ್ಲಿ ಕೊರೆಯಿಸಲ್ಪಟ್ಟಿತು.

೨. ಧಾರವಾಡ ಜಿಲ್ಲಾ ಸೂಡಿಯ ಶಿಲಾಲೇಖವು ಶಕ ೯೩೨ನೆಯ ಸಾಧಾರಣ ಸಂವತ್ಸರ (೧೦೧೦-೧೧)ದಲ್ಲಿ ಕೊರೆಯಿಸಲ್ಪಟ್ಟಿತು.

೩. ಗದಗ ತಾಲೂಕು ಆಲೂರಿನ ಶಿಲಾಲೇಖವು ಶಕ ೯೩೨ರಲ್ಲೇ ಕೊರೆಯಿಸಲ್ಪಟ್ಟಿತು. ಪಲ್ಲವ ಮನೆತನದ ಘಟೇಯ ಅಂಕಕಾರನೆಂದು ಕರೆಯಲ್ಪಡುವ ಇರಿವನೊೀಲಂಬಾಧಿರಾಜನು ವಿಕ್ರಮಾದಿತ್ಯನ ಮಹಾ ಸಾಮಂತನಾಗಿದ್ದನೆಂತಲೂ, ಇರಿವಬೆಡಂಗ ಸತ್ಯಾಶ್ರಯನ ಮಗಳು ಅವನ ಹೆಂಡತಿಯಾಗಿದ್ದಳೆಂತಲೂ, ಅವನು ನೊಲಂಬವಾಡಿ ೩೨,೦೦೦, ಕೆಂಗಳಿ ೫೦೦, ಬಲ್ಲಕುಂದೆ ೩೦೦, ಕುಕ್ಕನೂರು ೩೦, ಮಾಸಿಯ ವಾಡಿಯ ೫ ಪಟ್ಟಣ ಇವುಗಳನ್ನು ಆಳುತ್ತಿದ್ದನೆಂತಲೂ ಈ ಶಿಲಾಲೇಖ ದಲ್ಲಿ ಬರೆದಿದೆ.

೪. ಧಾರವಾಡ ಜಿಲ್ಲಾ ಗಳಗನಾಥದ ಶಿಲಾಲೇಖವು ಶಕ ೯೩೩ ನೆಯ ವಿರೋಧಿಕೃತ ಸಂವತ್ಸರ ಭಾದ್ರಪದ(೧೦೧೧ ಅಗಸ್ಟ-ಸಪ್ಟಂಬರ) ದಲ್ಲಿ ಕೊರೆಯಿಸಲ್ಪಟ್ಟಿತು.

೫. ಬಳ್ಳಾರಿ ಜಿಲ್ಲೆಯ ಶಾಸನ. ಇದರಲ್ಲಿ ೫ನೆಯ ವಿಕ್ರಮಾ ದಿತ್ಯನು ಶಕ ೯೩೫ ಅಂದರೆ ೧೦೧೩-೧೦೧೪ನೆಯ ಇಸ್ವಿಯಲ್ಲಿ ಸಾರ್ವ ಭೌಮನಾಗಿದ್ದನೆಂದು ಬರೆದಿದೆ.

## ೪. ಎರಡನೆಯ ಅಯ್ಯಣಯ್ಯ

(೧೦೧೪-೧೦೧೫)

ಡಾ॥ ಫ್ಲೀಟರು ೫ನೆಯ ವಿಕ್ರಮಾದಿತ್ಯನು ೧೦೧೧ರ ವರೆಗೆ ಆಳಿದನೆಂತಲೂ, ಅವನ ತಮ್ಮನಾದ ಅಯ್ಯಣನು ಆಳಲಿಲ್ಲೆಂತಲೂ, ಅವನ ತಮ್ಮನಾದ ಜಯಸಿಂಹನು ೧೦೧೮ರಲ್ಲಿ ಪಟ್ಟವೇರಿದನೆಂತಲೂ ಬರೆ ಯುತ್ತಾರೆ. ಮತ್ತು ೧೦೧೧ರಿಂದ ೧೦೧೮ರ ವರೆಗೆ ೬-೭ ವರ್ಷ ಯಾರು ಆಳಿದರೆಂಬುದರ ಬಗ್ಗೆ ಏನೂ ಬರೆಯುವುದಿಲ್ಲ. ಡಾ॥ ಭಾಂಡಾರ ಕರರಾಗಲಿ ಮೆ॥ ರಾಯಿಸರಾಗಲಿ ಈ ಗೋಜಿಗೆ ಹೋಗದೆ ವಿಕ್ರಮಾ ದಿತ್ಯನೇ ೧೦೧೮ರ ವರೆಗೆ ಆಳಿದನೆಂದು ಹೇಳಿ ಮುಂದೆ ಸಾಗಿದ್ದಾರೆ. ಆದರೆ ಡಾ॥ ವೆಂಕಟಸುಬ್ಬಯ್ಯರು ಈ ಪ್ರಶ್ನವನ್ನೆತ್ತಿ ವಿಕ್ರಮಾದಿತ್ಯನ ತರುವಾಯ ಅಯ್ಯಣನು ಸಾರ್ವಭೌಮನಾಗಿದ್ದನೆಂದು ಬರೆದಿದ್ದಾರೆ.

ಈ ಮಾತಿಗೆ ಆಧಾರವಾಗಿದ್ದ ಕೆಲ ಶಾಸನಗಳ ಸಾಲುಗಳನ್ನು ಉದ್ಧರಿಸಿ ಕೆಳಗೆ ಕೊಡುತ್ತೇನೆ:—

೧. ದಾವಣಗೆರೆಯ ೩೫ ನೆಯ ಸಂಬರಿನ ಶಿಲಾಲೇಖ

೧೦. . . . . . . . . . . . . .॥ ವೃ ॥ ಎಳೆಯಂ ತನ್ನಂದನಂ ತಾಳ್ದಿದ ನವನತವರ್ಧಿಷ್ಣು ಸತ್ಯಾಶ್ರಯೋರ್ವಿತಳ

೧೧. ಪಾಳಂ ಮತ್ತವಲ್ಲಿಂ ಬಳಿಕೆ ತದನುಜಾತಾತ್ಮಜಂ ತಾಳ್ದಿದಂ ದೋರ್ವ್ವಳದೃಪ್ತಂ ವಿಕ್ರಮಾಂಕಂ ಬಳಿಕೆ ತದನುಜನ್ತಾಳ್ದಿದಂ ಚಾ

೧೨. ರುಚಂದ್ರೋಜ್ವಳ ಕೀರ್ತ್ತಿ ವ್ಯಾಪ್ತ ಸಪ್ತಾರ್ಣವ ಪರಿವೃತ ಭೂಚಕ್ರನ **ಪ್ಪಯ್ಯಣಯ್ಯಂ** ॥

೨. ದಾವಣಗೆರೆಯ ೪೧ ನೆಯ ಶಿಲಾಲೇಖ

೧೭. . . . . . . . .॥ ಎನೆ ಶೌರ್ಯೋನ್ನತನಾದ ತೈಲಪನಪತ್ಯಂ ಸತ್ತಿಮಂ ತನ್ನೃಪಾಳನ ಪುತ್ರಂ ವಿಭು ವಿಕ್ರಮಂ ತದನುಜಂ ಸಂದಯ್ಯ

೧೮. ಣಂ ತನ್ಮಹೀಶನ ತಮ್ಮಂ ಜಯಸಿಂಹನಾತನ ಮಗಂ ತ್ರೈಳೋಕ್ಯಮಲ್ಲ ಕ್ಷಿತೀಶನೆನಿಪ್ಪಾಹವಮಲ್ಲನಾತನ ಸುತಂ ಸೋಮೇಶ್ವರೋರ್ವ್ವೀಶ್ವರಂ ॥

೩. ಶಿಕಾರಪುರದ ೧೧೦ ನೆಯ ನಂಬರಿನ ಶಿಲಾಲೇಖ

೭. . . . . . . . . . .॥ ಶ್ರೀಮಚ್ಚಾಳುಕ್ಯ ಚಕ್ರೇಶ್ವರನತುಳಬಳಂ ತೈಲಪಂ ತೀವ್ರ ತೇಜೋಧಾಮಂ ಸತ್ಯಾಶ್ರಯಂ ವಿಕ್ರಮ

೮. ಗುಣನಿಳಯಂ ವಿಕ್ರಮಾದಿತ್ಯನತ್ಯುದ್ದಾಮಂ ಸನ್ದಯ್ಯಣಂ ಸಾಹಸನಿಧಿ ಜಯಸಿಂಗಂ ಧರಾಚಕ್ರ ಲಕ್ಷ್ಮೀಧಾಮಂ ತ್ರೈಳೋಕ್ಯಮ

೯. ಲ್ಲಂ ನೆಗಳೆ ನೆಗಬ್ದಿದೀ ಪ್ರಾಚ್ಯ ಚಾಳುಕ್ಯ ರಾಜ್ಯಂ ॥

೪. ಶಿಕಾರಪುರದ ೧೨೩ ನೆಯ ಸಂಬರಿನ ಶಿಲಾಲೇಖ

೭. . . . . . . . .ರಟ್ಟರಿಂದಪಹೃತವಾದ ವಿಶ್ವಧರಣೀತಳಮಂ ಬಿಡ ದಿಬ್ದಿಕೊಂಡ ತೈಲಪನಾದವುದ್ಧರಿ

೮. ಸಿದಂದಲತರ್ಕ್ಯ ಚಾಳುಕ್ಯ ವಂಶವುಂ ॥ ವಚನ ॥ ತದನಂತರಂ ॥ ಎಳೆಯುಂ ತನ್ನಂದನಂ ತಾಳ್ದಿದನವನಸತವರ್ಧಿಷ್ಣು ಸತ್ಯಾಶ್ರಯೋರ್ವೀ ತಳಪಾಳಂ ಮತ್ತವಲ್ಲಿಂ ಬಱಿಕೆ ತದನುಜಾತಾತ್ಮಜಂ ತಾಳ್ದಿದಂ ದೋರ್ವಳ

೯. ದೃಪ್ತಂ ವಿಕ್ರಮಾಂಕಂ ಬಱಿಕೆ ತದನುಜಂ ತಾಳ್ದಿದಂ ಚಾರು ಚಂದ್ರೋಜ್ವಳ ಕೀರ್ತಿ ವ್ಯಾಪ್ತ ಸಪ್ತಾರ್ಣವ ಪರಿವೃತ ಭೂಚಕ್ರನಪ್ಪ ಯ್ಯಣಯ್ಯಂ ॥

೪. ಶಿಕಾರಪುರದ ೧೩೦ ನೆಯ ನಂಬರಿನ ಶಿಲಾಲೇಖ

೨......ಶ್ರೀಮಚ್ಚಾಳುಕ್ಯ ಚಕ್ರೇಶ್ವರನತುಳಬಳಂ ತೈಲಪಂ

೩. ತೀವ್ರ ತೇಜೋಧಾಮುಂ ಸತ್ಯಾಶ್ರಯಂ ವಿಕ್ರಮಗುಣನಿಳಯಂ ವಿಕ್ರಮಾದಿ

೪. ತ್ಯಸತ್ಯುದ್ದಾಮಃಂ ಸನ್ಧಯ್ಯಣಂ ಸಾಹಸನಿಧಿ ಜಯಸಿಂಹಂ ಧರಾಚಕ್ರಲಕ್ಷ್ಮೀ

೫. ಧಾಮುಂ ತ್ರೈಳೋಕ್ಯಮಲ್ಲಂ ನೆಗಳೆ ನೆಗಳ್ದುದೀ ಪ್ರಾಜ್ಯ ಚಾಳುಕ್ಯ ರಾಜ್ಯಂ ॥

೫. ಶಿಕಾರಪುರದ ೧೯೭ ನೆಯ ನಂಬರಿನ ಶಿಲಾಲೇಖ

೧೪.........॥ ಚಾಳುಕ್ಯ ಭೂಭುಜರ್ದ್ದಿವಿಕೇಳಿಯೊಳಿರೆ ಪೆಱಗೆನೆಱೆ ಕಾಂಪುವೊಲಿರ್ದ್ದ ಭೂವಧುಗೆ ರಟ್ಟರವರಂ ಸೋಸೋ ವುತ್ತಂ ತೈಲನಾಳ್ದಿದಂ ನೆಱೆ ಧರೆಯುಂ ॥ ವೃ ॥ ಅವರ್ದಾ ತೈಲಂಗೆ ಸ

೧೫. ತ್ಯಾಶ್ರಯನೆ ಮಗನವಂಗಾತ್ಮಜಂ ವಿಕ್ರಮುಂ ತಾನವ ನಿಂದಂತಯ್ಯಣಂ ತಾಂ ಕಿಱಿಯನೆ ಜಯಸಿಂಹಾಂಕನುಂ ತಮ್ಮನಂ ತಾಹವಮಲ್ಲಂ ತತ್ಸುತಂ ತತ್ತನಯನೆಸೆವ ಸೋಮೇಶ್ವರಂ ತನ್ಮಹೀಶಂಗೆ ವಲಂ ಪೆರ್ಮಾಡಿದೇವಂ ಮಗ

೧೬. ನವನ ಮಗಂ ತಾನೆ ಭೂಲೋಕಮಲ್ಲಂ ॥

ಮೇಲೆ ಕೊಟ್ಟ ೫ ಶಾಸನಗಳಲ್ಲದೆ ಇನ್ನೂ ಕೆಲ ಶಾಸನಗಳು ಅಯ್ಯಣಯ್ಯನ ಆಳಿಕೆಯನ್ನು ಸಮರ್ಥಿಸುವುದರಿಂದ ಅವನು ಪಟ್ಟ

ವೇರಿದನೆಂಬುದಕ್ಕೆ ಸಂದೇಹವಿಲ್ಲ. ಅವನಿಗೆ "ಚಾರುಚಂದ್ರೋಜ್ವಳ ಕೀರ್ತಿ ವ್ಯಾಪ್ತ ಸಪ್ತಾರ್ಣವ ಪರಿವೃತ ಭೂಚಕ್ರನಪ್ಪ", 'ಅತ್ಯುದ್ದಾಮಂ ಸಸ್ದ' ಎಂಬ ವಿಶೇಷಣಗಳನ್ನು ಕೊಟ್ಟಿರುತ್ತಾರೆಂಬುದನ್ನು ಓದುವವರು ಮರೆಯಕೂಡದು. ಆದರೆ ಅವನ ಕಾಲದ ಒಂದಾದರೂ ಶಾಸನವು ದೊರೆಯದ್ದರಿಂದಲೂ ಕೆಲ ಶಾಸನಗಳಲ್ಲಿ ಅವನ ಹೆಸರನ್ನೇ ಬಿಟ್ಟಿರುವುದರಿಂದಲೂ ಅವನು ಅತ್ಯಲ್ಪಕಾಲ ಅಂದರೆ **ವರ್ಷಾರು** ತಿಂಗಳು ಮಾತ್ರ ಆಳಿದನೆಂದು ಹೇಳಬಹುದು.

---

# ೪ ನೆಯ ಅಧ್ಯಾಯ

## ಕಲ್ಯಾಣದ ಚಾಳುಕ್ಯರ ಮೇಲ್ಮೆ

### ೫. ಎರಡನೆಯ ಜಯಸಿಂಹ

(೧೦೧೫–೧೦೪೨)

ಅಯ್ಯಣಯ್ಯನ ತರುವಾಯ ಅವನ ತಮ್ಮನಾದ ಜಯಸಿಂಹನು ೨ ನೆಯ ಜಯಸಿಂಹನೆಂಬ ಹೆಸರಿನಿಂದ ಪಟ್ಟವೇರಿದನು (೧೦೧೫). ಡಾ॥ ಭಾಂಡಾರಕರ ಫ್ಲೀಟರೂ ರಾಯಿಸ ಸಾಹೇಬರೂ ಇವನು ೧೦೧೮ ರಲ್ಲಿ ಪಟ್ಟವೇರಿದನೆಂದು ಬರೆಯುತ್ತಾರಷ್ಟೇ. ಆದರೆ ಡಾ॥ ವೆಂಕಟಸುಬ್ಬಯ್ಯರು ಮೈಸೂರು ಸಂಸ್ಥಾನ ಸೊರಬ ತಾಲೂಕು ಕೊಡಕಣಿಯ ೧೬ ನೆಯ ನಂಬರಿನ ಶಾಸನದಿಂದ ಇವನು ೧೦೧೫ ರಲ್ಲಿ ಸಾರ್ವಭೌಮನಾದನೆಂದು ಬರೆಯುತ್ತಾರೆ*. ಈ ಆಧಾರವು ಅತಿಬಲಿಷ್ಟವಾಗದಿದ್ದರೂ ಈ ಊಹೆಯು ಪರಿಸ್ಥಿತಿಗೆ ಅನುಕೂಲವಾದುದೂ ಸಯುಕ್ತವಾದುದೂ ಇರುವುದರಿಂದ ಇದೇ ಸರಿಯಾದ ಕಾಲವೆಂದು ಗೃಹಿಸಿ ಮುಂದೆ ಸಾಗುವೆವು.

---

* ೩. ನೃಪಕಾಲಾತೀತ ಸಂವತ್ಸರಸತಂಗಳೊಂಬೈನೂಱ ಮೂವತ್ತೇೞನೆಯ ರಾಕ್ಷ................

೨ ನೆಯ ಜಯಸಿಂಹನು ತನ್ನ ಮನೆತನದ ಸಾಮಾನ್ಯ ಬಿರುದುಗಳನ್ನಲ್ಲದೆ, **ಜಗದೇಕಮಲ್ಲ**ನೆಂಬ ವಿಶಿಷ್ಟ ಬಿರುದನ್ನು ಧರಿಸಿದನು. **ಸುಗ್ಗಲದೇವಿ** ಎಂಬವಳು ಇವನ ಹೆಂಡತಿಯಾಗಿದ್ದಳು. ಇವಳು ಶಿವಭಕ್ತಳಾಗಿದ್ದಳೆಂತಲೂ, ಜೈನರು ಒಂದು ಸಂದುಕದಲ್ಲಿ ಹಾಕಿ ಆಸ್ಥಾನದಲ್ಲಿ ತಂದಿಟ್ಟ ಒಂದು ಘುಟಸರ್ಪವನ್ನು ಇವಳು ತನ್ನ ಗುರುವಾದ ದೇವರದಾಸನೆಂಬವನ ಸಾಹಾಯದಿಂದ ಚಂದ್ರಕಾಂತಶಿಲೆಯ ಲಿಂಗವನ್ನು ಮಾಡಿಸಿ ತೋರಿಸಿ, ತನ್ನ ಗಂಡನಾದ ಜಯಸಿಂಹನನ್ನು ಶಿವಭಕ್ತನಾಗಿ ಮಾಡಿದಳೆಂತಲೂ ಚೆನ್ನಬಸವ ಪುರಾಣದಲ್ಲಿ ಬರೆದಿದೆ*. ಈ ಪುರಾಣದಲ್ಲಿ ಜಯಸಿಂಹನಿಗೆ ದೇಶಿಗನೆಂದು ಕರೆದಿರುತ್ತಾರೆಂತಲೂ ಇವನಿಗೆ ಬಲ್ಲಾಳನೆಂದು ಕರೆದುದು ತಪ್ಪೆಂತಲೂ ಡಾ॥ ಫ್ಲೀಟರು ಬರೆಯುತ್ತಾರಷ್ಟೇ†. ಆದರೆ ಕಲ್ಯಾಣದ ಚಾಳುಕ್ಯರು ಶಿವೋಪಾಸಕರೆಂದು ಪ್ರತೀತಿ ಇರುವುದರಿಂದ ಈ ಪುರಾಣದ ಸುಗ್ಗಲೆಯು ಜಯಸಿಂಹನ ರಾಣಿಯಾಗಿದ್ದಳೆಂಬುದಕ್ಕೂ ಜಯಸಿಂಹನು ಜಿನಭಕ್ತನಾಗಿದ್ದುದಕ್ಕೂ ಮುಂದೆ ಸುಗ್ಗಲೆಯು ತನ್ನ ಗಂಡನನ್ನು ಶಿವಭಕ್ತನಾಗಿ ಮಾಡಿದ್ದಕ್ಕೂ ಸಾಕಷ್ಟು ಆಧಾರಗಳಿಲ್ಲೆಂದು ತೋರುತ್ತದೆ. ಆದ್ದರಿಂದ ಇದು ಇನ್ನೂ ವಿಚಾರ ಮಾಡತಕ್ಕ ವಿಷಯವಾಗಿರುತ್ತದೆಂದು ಧಾರಾಳವಾಗಿ ಹೇಳಬಹುದು.

ರಾಜ್ಯಭಾರದಲ್ಲಿಯಾಗಲಿ ಸಾಮಾನ್ಯ ಜನರ ವ್ಯವಹಾರದಲ್ಲಿಯಾಗಲಿ **'ಒತ್ತಿದರೆ ಸರಿ, ಸರಿದರೆ ಒತ್ತು'** ಎಂಬ ತತ್ವವು ತ್ರಿಕಾಲದಲ್ಲಿಯೂ ಅಬಾಧಿತವಾಗಿರುತ್ತದಷ್ಟೇ. ಸಾರ್ವಭೌಮರಾಗಲಿ ಅರಸರಾಗಲಿ ಸಾಧಾರಣ ವ್ಯಕ್ತಿಗಳಾಗಲಿ ತಮಗೆ ಇದ್ದುದಕ್ಕೆ ಸಂತೋಷಪಟ್ಟು

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೩೭, ಅಡಿಟಿಪ್ಪಣಿ ೫.

† ಜಿನಭಕ್ತನೆಸೆವ ದೇಶಿಗ ಬಲ್ಲಾಳನಾ।
ತನ ಮಡದಿ ಸುಗ್ಗಲೆಯು ಶಿವಭಕ್ತೆ ತನ್ನ ಗುರು।
ವೆನಿಪ ದೇವರದಾಸನಂ ಜಿನರ ಕೂಡೆ ವಾದಂ ಗೆಯ್ಯ ಪೆಟ್ಟಿಗೆಯೊಳು ॥
ತೊನೆವ ಘುಟಸರ್ಪನಂ ಚಂದ್ರಕಾಂತದ ಲಿಂಗ।
ವನೆ ಮಾಡಿ ಗೆಲಿಸಿ ಜೈನರಿಗಾಜ್ಞೆಯಂ ಮಾಡಿ।
ಜಿನಪತಿಯನಂದು ಶಿವಭಕ್ತನಂ ಮಾಡಿದಳದೇನಂಬೆನಚ್ಚರಿಯನು ॥

ಚೆನ್ನಬಸವಪುರಾಣ, ಕಾ. ೫, ಸ. ೪, ಪ. ೧೦.

ಸುಮ್ಮನೆ ಕುಳಿತರೆ, ಅವರ ದ್ವೇಷಿಗಳು ಅವರ ಆಸ್ತಿಯನ್ನು ಹರಣ ಮಾಡಲಿಕ್ಕೂ ಅವರ ಕಯ್ಕೆಳಗಿನವರು ಅವರನ್ನು ಮುರಿಯಲಿಕ್ಕೂ ಎಡೆಬಿಡದೆ ಯತ್ನಮಾಡುತ್ತಾರೆ. ಕಲ್ಯಾಣ ಚಾಳುಕ್ಯ ಅರಸು ಮನೆತನವನ್ನು ಸ್ಥಾಪಿಸಿದ ತೈಲಪನು ಮಾಳವೆಯ ಮುಂಜನನ್ನು ಕೊಲ್ಲಿಸಿದನೆಂತಲೂ, ಚೋಳರನ್ನು ಸೋಲಿಸಿದನೆಂತಲೂ, ಕೊಂಕಣದ ಸಿಲಾಹಾರರನ್ನೂ ಸೇವುಣದೇಶದ ಭಿಲ್ಲಮನನ್ನೂ ತನ್ನ ಮಾಂಡಲಿಕರಾಗಿ ಮಾಡಿಕೊಂಡನೆಂತಲೂ ಅವನ ಮಗನಾದ ಸತ್ಯಾಶ್ರಯನು ತನ್ನ ರಾಜ್ಯವನ್ನೊಳಸುಗ್ಗಿದ ಚೋಳರಸನನ್ನು ಹಿಂದಕ್ಕಟ್ಟಿದನೆಂತಲೂ ಹಿಂದೆ ಬರೆದಿರುತ್ತೇವಷ್ಟೇ. ಮುಂದೆ ೬ ವರ್ಷ ಆಳಿದ ವಿಕ್ರಮಾದಿತ್ಯಯ್ಯಣಯ್ಯರು ಯಾವ ದಂಡಯಾತ್ರೆಯನ್ನು ಕಯ್ಕೊಳ್ಳದೆ, ಸುಖಸಂಕಥಾವಿನೋದದಲ್ಲಿ ಕಾಲಕಳೆದುದರಿಂದ ಪರಮಾರ ಚೋಳರಿಗೆ ಯುದ್ಧಸನ್ನಾಹವನ್ನು ಮಾಡಲಿಕ್ಕೆ ಅನುಕೂಲವಾಯಿತು. ಸಿಲಾಹಾರ ಯಾದವರು ಮಲೆತು ನಿಂತು ತಂತಮ್ಮ ಶಿಲಾಲೇಖಗಳಲ್ಲಿ ಮಹಾರಾಜಾಧಿರಾಜರಾದ ಚಾಳುಕ್ಯ ಸಾರ್ವಭೌಮರ ಹೆಸರು ಕೊರೆಯಿಸುವುದನ್ನೇ ಬಿಟ್ಟುಕೊಟ್ಟರು.

ನೂರ್ಮಡಿ ತೈಲಪನು ವಾಕ್ಪತಿ ಮುಂಜನನ್ನು ಕೊಲ್ಲಿಸಿದ ಬಳಿಕ ಅವನ ತಮ್ಮನ ಮಗನಾದ ಭೋಜನು ಉಜ್ಜಯಿನಿಯ ಅರಸನಾದನು. ಹೊಟ್ಟೆಯುರಿದ ಭೋಜನು ತನ್ನ ಕಕ್ಕನ ಕೊಲೆಗೋಸ್ಕರ ಚಾಳುಕ್ಯರ ಮೇಲೆ ಬೆಂಕಿಯನ್ನು ಕಾರುತ್ತಿದ್ದನು. ಮುಂಜನ ಕೊಲೆಯ ಸೂಡನ್ನು ತೀರಿಸಿಕೊಳ್ಳುವ ವಿಚಾರವು ಅವನ ಮನಸ್ಸಿನಲ್ಲಿ ಯಾವಾಗಲೂ ಕುದಿಯುತ್ತಿತ್ತು. ಆದ್ದರಿಂದ ಅವನು ೪-೫ ವರ್ಷ ಎಡೆಬಿಡದೆ ಶ್ರಮಬಟ್ಟು ವಿಶ್ವಪ್ರಯತ್ನಮಾಡಿ, ದೊಡ್ಡ ದಂಡನ್ನು ಕಟ್ಟಿಕೊಂಡು, ಚಾಳುಕ್ಯರ ಸಾಮ್ರಾಜ್ಯವನ್ನೊಳಸುಗ್ಗಿ, ಹಳ್ಳಿಪಳ್ಳಿಗಳನ್ನು ಸೂರೆಗೊಳ್ಳುತ್ತ ಮುಂದರಿಸಿದನು. ಈ ಸುದ್ದಿಯನ್ನು ಕೇಳಿ ಆ ಭಾಗದಲ್ಲಿದ್ದ ಚಾಳುಕ್ಯ ದಳವಾಯಿಯು ಅವನನ್ನು ತಡೆಯಲಿಕ್ಕೆ ಹೋದನು. ಎರಡೂ ದಂಡುಗಳ ನಡುವೆ ಚಕ್ಕಮುಕಿ ಆಯಿತು. ಚಾಳುಕ್ಯ ದಂಡು ಸಣ್ಣದಾದ್ದರಿಂದ ಸೋತು ಹಿಂಜರಿಯಿತು. ಆಗ ಭೋಜನಿಗೆ ಆದ ಆನಂದವನ್ನು ಬಣ್ಣಿಸ

ಳಳವಲ್ಲ. ಅವನ ಸಂತೋಷವು ಉಕ್ಕೇರಿತು. ಕೂಡಲೆ ಅವನು ತಾನು ಕರ್ನಾಟರನ್ನು ಸೋಲಿಸಿದೆನೆಂದು ಒಂದು ಶಿಲಾಲೇಖವನ್ನು ಕೊರೆಯಿಸಿ, ತನ್ನ ಗೆಲವನ್ನು ಚಿರಸ್ಮರಣೀಯವಾಗಿ ಮಾಡಲೆಳಸಿದನು.

ಭೋಜನ ಈ ದಂಡಯಾತ್ರೆಯ ವಿವರವೂ ಅವನ ಗೆಲವಿನ ಸುದ್ದಿಯೂ ಜಯಸಿಂಹ ಸಾರ್ವಭೌಮನಿಗೆ ಸಕಾಲಕ್ಕೆ ಬಂದು ಮುಟ್ಟಿದವು. ಅವನು ಶೂರನೂ ಸಾಹಸಿಯೂ ಎದೆಗಾರನೂ ಕಾರ್ಯದಕ್ಷನೂ ಜಾಗರೂಕನೂ ಆದ್ದರಿಂದ ವ್ಯರ್ಥವಾಗಿ ಕಾಲಹರಣ ಮಾಡದೆಯೂ ತನ್ನೊಬ್ಬ ದಂಡನಾಯಕನನ್ನು ದಂಡಿನೊಡನೆ ಕಳಿಸದೆಯೂ ತಾನೇ ಸ್ವತಃ ಭೋಜನ ಹಾವಳಿಯನ್ನು ಅಡಗಿಸಲಿಕ್ಕೆ ಹೊರಟನು (೯೧೯). ತಾನು ಹೊರಡುವುದಕ್ಕಿಂತ ಮೊದಲೇ ದಂಡಿನೊಡನೆ ಬಂದು ತನ್ನನ್ನು ದಾರಿಯಲ್ಲಿ ಕೂಡಬೇಕೆಂದು ಸೇವುಣದೇಶದ ೩ ನೆಯ ಭಿಲ್ಲಮನಿಗೆ ಆಜ್ಞಾಪತ್ರವನ್ನು ಕಳುಹಿದ್ದನು. ಆದರೆ ಭಿಲ್ಲಮನು ಆ ಅಪ್ಪಣೆಯನ್ನು ಮನ್ನಿಸದೆ, ಏನೋ ಒಂದು ನೆವನವನ್ನು ಹೇಳಿ ಕಳುಹಿದನು.

ಪರಮಾರ ಚಾಳುಕ್ಯರ ದಂಡುಗಳು ಎಲ್ಲಿ ಕೂಡಿ ಕಾದಿದವೆಂಬುದು ಗೊತ್ತಾಗುವುದಿಲ್ಲ. ಕನ್ನಡ ಕಲಿಗಳ ಅಬ್ಬರದ ಹೊಡತಕ್ಕೆ ಮಾಳವೆಯರು ಈಡಾಗದೆ ಕಾಲಿಗೆ ಬುದ್ಧಿಯನ್ನು ಹೇಳಿದ್ದರಿಂದ, ಜಯಸಿಂಹನು ಅವರನ್ನು ಬೆನ್ನಟ್ಟಿದನು. ಭೋಜನ ದಂಡನ್ನು ಅಲ್ಲಲ್ಲಿ ಸುತ್ತುಗಟ್ಟಿ ತುಂಡರಿಸುತ್ತ ಚಾಳುಕ್ಯ ದಂಡು ಸಾತಪುಡಾ ಗುಡ್ಡದ ವರೆಗೆ ಹೋಯಿತು. ಮಾಳವೆಯರು ಆ ಗುಡ್ಡವನ್ನು ದಾಟಿ, ತಮ್ಮ ನಾಡನ್ನು ಹೊಕ್ಕರು. ಮುಂದೆ ಹೋಗುವುದು ಕ್ಷೇಮಕರವಾಗಲಿಕ್ಕಿಲ್ಲೆಂದು ಕಂಡುಬಂದುದರಿಂದ ಜಾಣನಾದ ಜಯಸಿಂಹನು ಅಲ್ಲಿಂದ ತಿರುಗಿ ಭಿಲ್ಲಮನ ಸಮಾಚಾರ ತೆಗೆದುಕೊಳ್ಳಲಿಕ್ಕೆ ಸೇವುಣದೇಶವನ್ನು ಹೊಕ್ಕನು. ಜಯಶಾಲಿಯಾದ ಜಯಸಿಂಹನ ದಂಡು ತನ್ನ ನಾಡನ್ನೊಳನುಗ್ಗಿದ್ದನ್ನು ಕೇಳಿ, ಭಿಲ್ಲಮನು ಗಾಬರಿಯಾದನು. ಕರ್ನಾಟ ದಂಡನ್ನು ಎದುರಿಸುವಷ್ಟು ಸಾಮರ್ಥ್ಯವಿಲ್ಲುದರಿಂದ ಅವನು ಶರಣುಬಂದು ಕಪ್ಪುಗಾಣಿಕೆಯನ್ನೊಪ್ಪಿಸಿ, ತನ್ನ ತಪ್ಪನ್ನು ಕ್ಷಮಿಸಬೇಕೆಂದು ಅಂಗಲಾಚಿ

ಬೇಡಿಕೊಂಡನು. ಅವನು ಮಾಳವೆಯರನ್ನು ಕೂಡುವುದು ತನಗೆ ಹಾನಿಕರವಾದ್ದರಿಂದ ದೂರದರ್ಶಿಯಾದ ಜಯಸಿಂಹನು ಅವನನ್ನು ಕ್ಷಮಿಸಿ, ಮುಂದೆ ವಿಧೇಯನಾಗಿರುವೆನೆಂದು ಅವನಿಂದ ಆಣೆಕ್ರಿಯೆಗಳನ್ನು ಮಾಡಿಸಿಕೊಂಡು, ಅವನನ್ನು ಕ್ಷಮಿಸಿದನು (೧೦೨೧?).

ಜಯಸಿಂಹನು ಭೋಜನ ಬೆನ್ನಟ್ಟಿಕೆಯನ್ನು ನಿಲ್ಲಿಸಲಿಕ್ಕೂ ಭಿಲ್ಲಮನನ್ನು ಕ್ಷಮಿಸಲಿಕ್ಕೂ ಈ ಕಾಲಕ್ಕೆ ಒಂದು ವಿಶೇಷವಾದ ಕಾರಣವು ತೆಂಕಲಲ್ಲಿ ಒದಗಿತ್ತು. ಸತ್ಯಾಶ್ರಯನು ಸೋಲಿಸಿ ಹಿಂದಕ್ಕಟ್ಟಿದ ಚೋಳರು ಈಗ ಪ್ರಬಲರಾಗಿ ದೊಡ್ಡ ದಂಡನ್ನು ಕಟ್ಟಿಕೊಂಡು ಕರ್ನಾಟಕ ಸಾಮ್ರಾಜ್ಯವನ್ನೊಳನುಗ್ಗಿ, ಎದುರಿಸಿದ ದಂಡನ್ನು ಸೋಲಿಸಿ, ಊರುಗಳನ್ನು ಒಂದರಹಿಂದೊಂದು ಸುಲಿಯತೊಡಗಿದ್ದಾರೆಂಬ ಸುದ್ದಿಯು ಮೇಲಿಂದ ಮೇಲೆ ಬರಲಾರಂಭಿಸಿತ್ತು. ಆದ್ದರಿಂದ ಜಯಸಿಂಹನು ಆದಷ್ಟು ಬೇಗನೆ ಬಡಗಣ ಕೆಲಸವನ್ನು ಮುಗಿಸಿಕೊಂಡು ಚೋಳರ ಸಮಾಚಾರವನ್ನು ತೆಗೆದುಕೊಳ್ಳಲಿಕ್ಕೆ ತೆಂಕಲಿಗೆ ಹೊರಟನು (೧೦೨೨?).

ಈ ಕಾಲಕ್ಕೆ ರಾಜೇಂದ್ರಚೋಳದೇವನೆಂಬವನು ಕಂಚಿಯ ಅರಸನಾಗಿದ್ದನು. ಇವನಿಗೆ ೨ನೆಯ ಮಧುರಾಂತಕನೆಂತಲೂ ಪರಕೇಸರಿವರ್ಮನೆಂತಲೂ ಎರಡು ಬೇರೆ ಹೆಸರುಗಳಿದ್ದವು. ಇವನು ಶೂರನೂ ಹೆಬ್ಬಯಕೆಯವನೂ ಆದ್ದರಿಂದ ದೊಡ್ಡ ದಂಡನ್ನು ಕಟ್ಟಿಕೊಂಡು, ಚಾಳುಕ್ಯ ದಂಡು ಬಡಗಲಲ್ಲಿರುವಾಗ ಕರ್ನಾಟಕ ರಾಜ್ಯವನ್ನೊಳನುಗ್ಗಿ, ಮೈಸೂರು ಸಂಸ್ಥಾನದಲ್ಲಿದ್ದ **ಇಡೈತುರೆ** (ಎಡತುರೆ) ನಾಡನ್ನು ಗೆದ್ದುಕೊಂಡು, ಬನವಾಸಿಯ ನೆರೆಯ ವರೆಗೆ ಬಂದಿದ್ದನು. ಜಯಸಿಂಹನು ಲಗುಬಗೆಯಿಂದ ಪ್ರಯಾಣಮಾಡಿ, ಚೋಳರ ಮೇಲೆ ರಭಸದಿಂದ ಬಿದ್ದು, ಅವರನ್ನು ಸದೆಬಡಿದು ಸೋಲಿಸಿ ಬೆನ್ನಟ್ಟಿದನು. ಮುಂದೆ ಆದ ೨-೩ ಕಾಳೆಗಗಳಲ್ಲಿ ಸೋಲು ಬಂದುದರಿಂದ ರಾಜೇಂದ್ರಚೋಳದೇವನು ಹತಾಶನಾಗಿ ಶರಣುಬಂದು, ಒಡಂಬಡಿಕೆಯನ್ನು ಬೇಡಿಕೊಂಡನು. ಕೊಂಕಣದ ಶಿಲಾಹಾರರ ಹಾವಳಿಯನ್ನು ಹತ್ತಿಕ್ಕಬೇಕಾದ್ದರಿಂದ ಜಾಣನಾದ ಜಯಸಿಂಹನು ಚೋಳನಾಡನ್ನೊಳ

ನುಗ್ಗದೆ ರಾಜೇಂದ್ರಚೋಳನನ್ನು ಕ್ಷಮಿಸಿ, ವಾರ್ಷಿಕ ಪೊಗದಿಯನ್ನು ಕೊಡುವ ಶರ್ತಿನ ಮೇಲೆ ಅವನೊಡನೆ ಒಪ್ಪಂದವನ್ನು ಮಾಡಿಕೊಂಡು, ಕೊಂಕಣದ ಮೇಲೆ ದಂಡೆತ್ತಿ ನಡೆದನು (೧೦೨೪?).

ಕೊಂಕಣದ ಮಂಡಲೇಶ್ವರರಾದ ಸಿಲಾಹಾರರು ರಾಷ್ಟ್ರಕೂಟ ೪ನೆಯ ಇಂದ್ರನ ಬೆನ್ನುಕಟ್ಟಿ, ಮಾರಸಿಂಹನ ಪಕ್ಷಹಿಡಿದುದರಿಂದ ತೈಲಪನು ಅವರನ್ನು ದಂಡಿಸಿ ಕ್ಷಮಿಸಿದನೆಂದು ಹಿಂದೆ ಬರೆದಿರುತ್ತೇವಷ್ಟೇ. ಈಗ ಅವರು ಬಲಿತು ಮಲೆತು ನಿಂತುದರಿಂದ ಜಯಸಿಂಹನಿಗೆ ಅವರ ಮೇಲೆ ದಂಡೆತ್ತಿಹೋಗಬೇಕಾಯಿತು. ಅವನು ಕೊಂಕಣವನ್ನು ಹೊಕ್ಕ ಕೂಡಲೆ ಸಿಲಾಹಾರರು ಗಾಬರಿಯಾಗಿ ಜಯಶಾಲಿಯಾದ ಜಯಸಿಂಹನನ್ನು ತಡೆಯುವುದು ತಮ್ಮಿಂದ ಆಗದ ಕೆಲಸವೆಂದು ನಿಶ್ಚಯಿಸಿ, ಶರಣುಬಂದರು. ಜಾಣನಾದ ಜಯಸಿಂಹನು ಅವರಿಂದ ಹೇರಳ ಕಪ್ಪವನ್ನು ತೆಗೆದುಕೊಂಡು; ಅವರ ಸಾಮಂತಪದವನ್ನು ಅವರಿಗೆ ಬಿಟ್ಟುಕೊಟ್ಟು, ತನ್ನ ದಂಡಿನೊಡನೆ ತಿರುಗಿದನು (೧೦೨೬?).

ಕೊಂಕಣದ ಮಾಂಡಲಿಕರನ್ನು ಮಣಿಸಿದ ಬಳಿಕ ೨ನೆಯ ಜಯಸಿಂಹನು ಎಲ್ಲಿ ಇದ್ದನೆಂಬುದಾಗಲಿ ಯಾವ ರಾಜಕಾರ್ಯದಲ್ಲಿ ತೊಡಗಿದ್ದನೆಂಬುದುದಾಗಲಿ ಗೊತ್ತಾಗುವುದಿಲ್ಲ. ಬಹುಶಃ ಇವನು ಮೈಸೂರು ಸಂಸ್ಥಾನ ಬಲಗಾವಿ(ಬಲಿಪುರ)ಯಲ್ಲಿ ಕೆಲವರ್ಷ ಇದ್ದನೆಂದು ಊಹಿಸಲಿಕ್ಕೆ ಅನುವು ದೊರೆಯುತ್ತದೆ. ಅವನು ಅಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿರುವಾಗ ಹೊಟ್ಟೆಯುರಿದ ಉಜ್ಜಯಿನಿಯ ಪರಮಾರ ಅರಸನು ನೆರೆಹೊರೆಯ ಕೆಲ ಅರಸರನ್ನು ಕೂಡಿಕೊಂಡು ಸೇವುಣದೇಶದ ಭಿಲ್ಲಮನನ್ನು ತನ್ನ ಕಡೆಗೆ ಒಡಕೊಂಡು, ಕರ್ನಾಟಕದ ಮೇಲೆ ದಾಳಿಮಾಡಲಿಕ್ಕೆ ಹೊರಡುವ ಸಿದ್ಧತೆಯಲ್ಲಿದ್ದಾನೆಂಬ ಸುದ್ದಿ ಬಂತು. ಜಾಗರೂಕನಾದ ಜಯಸಿಂಹನು ಕೂಡಲೆ ತನ್ನ ದಂಡನ್ನು ಸಜ್ಜುಗೊಳಿಸಿ ಮಾಳವೆಯರನ್ನು ಮುರಿಬಡಿಯಲಿಕ್ಕೆ ಉತ್ತರಾಭಿಮುಖನಾಗಿ ಹೊರಟನು (೧೦೨೮?).

ರಾಜಕಾರ್ಯದಲ್ಲಾಗಲಿ ನಿತ್ಯ ವ್ಯವಹಾರದಲ್ಲಾಗಲಿ ಸಾಮ ದಾನ ಭೇದೋಪಾಯಗಳು ಪ್ರಯೋಜನಕರವಾದಷ್ಟು ದಂಡೋಪಾಯವು

ಹಿತಕರವಲ್ಲೆಂಬ ಅನುಭವಸಿದ್ಧವಾದ ಸಂಗತಿಯು ಎಲ್ಲ ವಾಚಕರಿಗೂ ಗೊತ್ತಿರಬಹುದು. ಪ್ರತಿಯೊಂದು ಜಗಳವನ್ನು ಕೋರ್ಟು ಕಚೇರಿಗಳಿಗೆ ಒಯ್ಯುವವನು ಜನರಿಗೆ ಅಪ್ರಿಯನೂ ಅಧಿಕಾರಿಗಳಿಗೆ ಬೇಸರಾದವನೂ ಹಣವನ್ನು ವ್ಯರ್ಥವಾಗಿ ಕಳಿಕೊಳ್ಳುವವನೂ ಆಗುತ್ತಾನಷ್ಟೇ. ಆದರೆ ಅಂತಹ ಜಗಳಗಳನ್ನು ಹಿರಿಯರ ಉಪದೇಶದಿಂದಾಗಲಿ ಪಂಚರ ಹೇಳಿಕೆಯಿಂದಾಗಲಿ ತೀರಿಸಿಕೊಳ್ಳುವವನು ಹೆಚ್ಚು ಸುಖಿಯಾಗುತ್ತಾನೆಂಬುದನ್ನು ನಾವು ದಿನಾಲು ನೋಡುತ್ತೇವೆ. ಜಯಸಿಂಹನು ದೂರದೃಷ್ಟಿಯವನೂ ವಿವೇಕಿಯೂ ಆದ್ದರಿಂದ ಪರಮಾರರನ್ನು ಬಗ್ಗುಬಡಿಯಲಿಕ್ಕೆ ತನ್ನ ದಂಡೇ ಮುಖ್ಯ ಸಾಧನವೆಂದೆಣಿಸದೆ, ಅವರನ್ನು ಕೂಡಿದ ಚೇದಿಯ ಅರಸನನ್ನೂ ಭಿಲ್ಲಮನನ್ನೂ ತನ್ನ ಕಡೆಗೆ ಎಳೆದುಕೊಳ್ಳಲಿಕ್ಕೆ ರಾಯಭಾರಿಗಳನ್ನು ಕಳುಹಿದನು. ಈ ಪ್ರಯತ್ನವು ಸಫಲವಾದ್ದರಿಂದ ಮಾಳವೆಯರು ಬಲಗುಂದಿ, ಚಾಳುಕ್ಯ ದಂಡು ಸಮೀಪಕ್ಕೆ ಬಂದ ಕೂಡಲೆ ಹಿಂದಕ್ಕೆ ಸರಿಯಲಾರಂಭಿಸಿದರು. ಜಯಸಿಂಹನು ಅವರನ್ನು ತಾಪಿ ಹೊಳೆಯ ವರೆಗೆ ಬೆನ್ನಟ್ಟಿ, ಅವರಿಂದ ಹೇರಳ ಕಪ್ಪವನ್ನು ತೆಗೆದುಕೊಂಡು, ಒಡಂಬಡಿಕೆಯನ್ನು ಮಾಡಿದನು (೧೦೩೧?).

ಮಾಳವೆಯರ ಕಾಟವು ಅಳಿದ ಬಳಿಕ ಜಯಸಿಂಹನು ಸೇವುಣ ದೇಶಕ್ಕೆ ಹೋಗಿ, ಅಲ್ಲಿ ಭಿಲ್ಲಮನಿಂದ ಆದರಸತ್ಕಾರಹೊಂದಿದನು. ಉಜ್ಜಯಿನಿಯ ಪರಮಾರರು ದೀರ್ಘದ್ವೇಷಿಗಳೆಂದು ಕಂಡುಬಂದುದರಿಂದ ಅವರ ಕಾಟವನ್ನು ಕಡಮೆ ಮಾಡಿಕೊಳ್ಳಲಿಕ್ಕೆ ೩ನೆಯ ಭಿಲ್ಲಮನ ಮನಃಪೂರ್ವಕವಾದ ಸಹಾಯವು ಅವನಿಗೆ ಬೇಕಾಗಿತ್ತು. ಹೆಬ್ಬಯಕೆಯವನಾದ ಭಿಲ್ಲಮನಿಗೆ ಸಾರ್ವಭೌಮನಾದ ಜಯಸಿಂಹನ ಉದಾರಾಶ್ರಯದ ಅಗತ್ಯವಿತ್ತು. ಎರಡೂ ಕಯ್ಗಳು ಕೂಡಿದ ಬಳಿಕ ಚಪ್ಪಾಳೆ ಆಗುವುದಕ್ಕೆ ತಡವೆಲ್ಲಿ? ಜಯಸಿಂಹನು ತನ್ನ ಮಗಳಾದ **ಹಮ್ಮಾ** ಅಥವಾ **ಅವ್ವಲ್ಲದೇವಿ**ಯನ್ನು ೩ನೆಯ ಭಿಲ್ಲಮನಿಗೆ ಅತಿಸಂಭ್ರಮದಿಂದ ಮದುವೆಮಾಡಿಕೊಟ್ಟನು (೧೦೩೧?). ಈ ಶರೀರಸಂಬಂಧದಿಂದ ಚಾಳುಕ್ಯ ಯಾದವ ಮನೆತನಗಳು ಒಟ್ಟುಗೂಡಿದವು.

ಮದುವೆಯ ಸಮಾರಂಭವು ಮುಗಿದ ಬಳಿಕ ತನ್ನ ಅಳಿಯನಾದ ಭಿಲ್ಲಮನ ಅಪ್ಪಣೆ ತೆಗೆದುಕೊಂಡು, ಜಯಸಿಂಹನು ತಿರುಗಿದನು. ಬರುಬರುತ್ತ ದಾರಿಯಲ್ಲಿ ನಿಜಾಮ ಸಂಸ್ಥಾನ ಎತಗಿರಿ (ಯಾತಗೆರೆ) ಎಂಬಲ್ಲಿ ಕೆಲಕಾಲ ನಿಂತು (೧೦೩೨), ಬೇಟೆಯಾಡಿದನೆಂದು ಮೆ|| ರಾಯಿಸರು ಬರೆಯುತ್ತಾರೆ. ಮುಂದೆ ಅಲ್ಲಿಂದ ಹೊರಟು ಬಳ್ಳಾರಿ ಜಿಲ್ಲಾ ಪೊಟ್ಟಲಕೆರೆ(ದಂಡನಾಯಕನಕೆರೆ)ಗೆ ಬಂದು, ಅಲ್ಲಿ ಕೆಲಕಾಲ ಉಳಿದನು. ಅಲ್ಲಿದ್ದಾಗ ಶಕ ೯೫೭ ನೆಯ ಯುವಸಂವತ್ಸರ ಪುಷ್ಯ ಶುದ್ಧ ೧೫ ಆದಿತ್ಯವಾರ ಮಕರಸಂಕ್ರಮಣ ದಿವಸ (೧೦೩೬ ದಶಂಬರ) ಬಲ್ಲಗಾವೆಯಲ್ಲಿ ಪಾಂಡವರು ಸ್ಥಾಪಿಸಿದ ಪಂಚಲಿಂಗಗಳ ಪೂಜಾರ್ಚನ ನೈವಿದ್ಯಕ್ಕೋಸ್ಕರ ವಾದಿರುದ್ರಗಣನೆಂಬ ಲಕುಲೀಶ್ವರ ಪಂಥದ* ಒಬ್ಬ ಪಂಡಿತನಿಗೆ ಅವನು ಕೆಲ ಭೂಮಿಯನ್ನು ಸರ್ವನಮಸ್ಯವಾಗಿ ದಾನ ಕೊಟ್ಟನೆಂದು ಸಿಕಾರಪುರದ ೧೨೬ ನೆಯ ನಂಬರಿನ ಶಾಸನದಲ್ಲಿ ಬರೆದಿದೆ†. ಮುಂದೆ ೨ ವರ್ಷಗಳ ಮೇಲೆ ಅಂದರೆ ಶಕ ೯೬೦ ನೆಯ ಬಹುಧಾನ್ಯ ಸಂವತ್ಸರ ಮಕರಸಂಕ್ರಮಣ ಆದಿತ್ಯವಾರ ದಿವಸ (೧೦೩೯ ದಶಂಬರ) ಅವನು ಘಟ್ಟದಕೆರೆ ನೆಲೆವೀಡಿನಲ್ಲಿದ್ದಾಗ ಬೆಸಕೊಳದ ಸಿದ್ಧೇಶ್ವರದೇವರ ಗಂಧ ಧೂಪ ನಿವೇದ್ಯಕ್ಕೋಸ್ಕರ ಕೆಲ ಭೂಮಿಗಳನ್ನು ಕ್ರಿಯಾಶಕ್ತಿಪಂಡಿತದೇವನೆಂಬವನಿಗೆ ದಾನಕೊಟ್ಟನೆಂದು ಸಿಕಾರಪುರದ ೧೫೩ ನೆಯ ಶಿಲಾಲೇಖದಲ್ಲಿ ಬರೆದಿದೆ. ೨ ನೆಯ ಜಯಸಿಂಹನು ತನ್ನ ಆಯುಷ್ಯದ ಕಡೆಯ ವರ್ಷಗಳನ್ನು ಮೈಸೂರು ಸಂಸ್ಥಾನ ಸಿವಮೊಗ್ಗ

---

* ಈ ಪಂಥದವರು ಶಿವೋಪಾಸಕರು. ಈ ಪಂಥವನ್ನು ಪ್ರಚಾರಗೊಳಿಸಿದ ಲಕುಲೀಶನೆಂಬವನು ಕ್ರಿಸ್ತ ಶಕದ ೧ ನೆಯ ಶತಮಾನದಲ್ಲಿದ್ದನಂತೆ. ಶಾಸನಗಳಿಂದ ತಿಳಿದು ಬರುವ ಮೈಸೂರು ಕೊಡಗು ಪ್ರಾಂತಗಳು, ಪು. ೭೪.

† ಈ ಪೊಟ್ಟಲಕೆರೆಗೆ ಬಸವಪುರಾಣದಲ್ಲಿ ಹೊಟಲಕೆರೆ ಎಂದು ಹೆಸರು ಕೊಟ್ಟಿದ್ದಾರೆ. ಇಲ್ಲಿ ೩೦೦ ಜೈನ ಬಸದಿಗಳೂ ೨೦,೦೦೦ ಶ್ರಾವಕರೂ ಇದ್ದರಂತೆ. ೨ ನೆಯ ಜಯಸಿಂಹನು ಇಲ್ಲಿದ್ದಾಗ, ಅವನ ರಾಣಿಯ ಗುರುವಾದ ದೇವರದಾಸಿಮಯ್ಯನು ಸುಗ್ಗಲದೇವಿಯ ನೆರವಿನಿಂದ ಶ್ರಾವಕರನ್ನು ಪಣದಲ್ಲಿ ಸೋಲಿಸಿ, ಅವರ ಬಸದಿಗಳನ್ನು ಕೆಡವಿಸಿ, ದೇಸಿಂಗ (ಜಯಸಿಂಹ)ನನ್ನು ಶೈವಮತಕ್ಕೆ ಸೇರಿಸಿಕೊಂಡನೆಂದು ಬಸವಪುರಾಣದ ೫೧ ನೆಯ ಸಂಧಿಯ ಸೂಚನೆ, ೧ ನೆಯ ಶ್ಲೋಕ ಇವುಗಳಲ್ಲಿ ಬರೆದಿದೆ.

ಜಿಲ್ಲಾ **ಅಂಧಾಸುರ**ವೆಂಬಲ್ಲಿ ಕಳೆದನೆಂದು ತೋರುತ್ತದೆ. ಏಕೆಂದರೆ ಆ ಕಾಲಕ್ಕೆ ಅಂಧಾಸುರವು ಸಂತಳಿಗೆ ನಾಡಿನ ಮುಖ್ಯ ಪಟ್ಟಣವಾಗಿತ್ತು; ಮತ್ತು ೧೦೪೨ರಲ್ಲಿ ಜಯಸಿಂಹನು ಅಂಧಾಸುರದಲ್ಲಿ ಒಂದು ಅಗ್ರಹಾರವನ್ನು ಸ್ಥಾಪಿಸಿದನೆಂದು ರಾಯಿಸ ಸಾಹೇಬರು ಬರೆಯುತ್ತಾರೆ*. ಆಕಾಲದಲ್ಲಿ ಈ ಸಂತಳಿಗೆ ನಾಡು ಬಲು ಬೆಳೆಯುಳ್ಳದ್ದಾದ್ದರಿಂದ ಅಲ್ಲಿಯ ಜನರಿಗೆ ಹಸಿವೆಯೆಂಬುದು ಗೊತ್ತಿದ್ದಿಲ್ಲೆಂದು ಸಾಗರ ತಾಲೂಕಿನ ೧೦೯ ನೆಯ ಶಾಸನದಲ್ಲಿ ವರ್ಣಿಸಿದೆ.

ಮೇಲೆ ಕೊಟ್ಟ ವಿವರಣೆಯಿಂದ ೨ನೆಯ ಜಯಸಿಂಹನು ರಾಷ್ಟ್ರಕೂಟರ ರಾಜಧಾನಿಯಾದ ಮಳಖೇಡದಲ್ಲಿ ಎಂದೂ ಇರಲಿಲ್ಲೆಂತಲೂ ಅವನು ತನ್ನ ಆಳಿಕೆಯ ೧೪ ವರ್ಷ ಯುದ್ಧದಲ್ಲಿ ಕಳೆದು, ಉಳಿದ ೧೩ ವರ್ಷಗಳನ್ನು ಬಲ್ಲಿಗ್ರಾಮೆ (ಬಲ್ಲಿಗಾವೆ, ಬೆಲಗಾವಿ, ಬಲಿಪುರ), ಯಾತಗಿರಿ, ಪೊಟ್ಟಲಕೆರೆ, ಘಟ್ಟದಕೆರೆ, ಅಂಧಾಸುರ ಈ ಪಟ್ಟಣಗಳಲ್ಲಿ ಕಳೆದ



ಬೆಲಗಾವಿಯ ತ್ರಿಪುರಾಂತಕೇಶ್ವರನ ಗುಡಿಯ ಬಾಗಿಲು

* ಶಾಸನಗಳಿಂದ ತಿಳಿದುಬರುವ ಮೈಸೂರು ಕೊಡಗು ಪ್ರಾಂತಗಳು, ಪು. ೭೪.

ನೆಂತಲೂ ಸ್ಪಷ್ಟವಾಗಿ ಕಂಡುಬರುತ್ತದೆ. ಅವನು ಕೊಳ್ಳಿಪಾಕೆ ಎಂಬ ಪೊಳಲನ್ನು ಕೆಲ ಕಾಲ ತನ್ನ ರಾಜಧಾನಿಯಾಗಿ ಮಾಡಿಕೊಂಡಿದ್ದನೆಂದು ಡಾ॥ ಫ್ಲೀಟರು ಬರೆಯುತ್ತಾರೆ*. ಪ್ರಸಿದ್ಧ ಕನ್ನಡ ಕವಿಯಾದ **ಷಡಕ್ಷರಿಯು** ಲಿಂಗಾಯಿತ ಮತದ ಒಬ್ಬ ಪಂಚಾಚಾರ್ಯನಾದ ಮತ್ತು ಕೊಲ್ಲಿಪಾಕಿಯಲ್ಲಿ ತನ್ನದೊಂದು ಮಠವನ್ನು ಸ್ಥಾಪಿಸಿದ ರೇವಣ ಪ್ರಭುವಿನ ವಂಶದವನಾಗಿದ್ದನೆಂದು ರಾಜಶೇಖರವಿಳಾಸದ ೧ನೆಯ ಆಶ್ವಾಸದ ೫೩-೫೬ ನೆಯ ಶ್ಲೋಕಗಳಿಂದ ತಿಳಿಯುಬಂದರೂ ಈ ಕೊಲ್ಲಿ ಪಾಕೆ(ಕಿ)ಯು ಎಲ್ಲಿರುತ್ತದೆಂಬುದನ್ನು ಈವರೆಗೆ ಯಾರೂ ಕಂಡುಹಿಡಿದಿಲ್ಲ. ಒಂದು ಶಾಸನದಲ್ಲಿ ಇದು ತೆಂಕಣ ಬಾಗಿಲು ಆಗಿತ್ತೆಂದು ಬರೆದಿದೆ. ಅದರಂತೆಯೇ ಘಟ್ಟದಕೆರೆಯು ಎಲ್ಲಿರುತ್ತದೆಂಬುದು ಇನ್ನೂ ಗೊತ್ತಾಗಿಲ್ಲ.

೨ನೆಯ ಜಯಸಿಂಹನು ಸ್ತ್ರೀ ಸ್ವಾತಂತ್ರ್ಯಕ್ಕೆ ಅನುಕೂಲನಾಗಿದ್ದನೆಂದು ಬರೆಯಲಿಕ್ಕೆ ಸಂತೋಷವಾಗುತ್ತದೆ. ಇವನ ಆಳಿಕೆಯಲ್ಲಿ ಇವನ ಅಕ್ಕನಾದ **ಅಕ್ಕಾದೇವಿ** ಎಂಬವಳು ಕಿಸುಕಾಡು ೭೦ರ ಮಂಡಲೇಶ್ವರಿಯಾಗಿ ವೈಭವದಿಂದ ಆಳಿದಳು. ಈಕೆಯು ನಡೆನುಡಿಗಳಲ್ಲಿ ಗುಣದ ಬೆಡಂಗಿಯೂ ಏಕವಾಕ್ಯೆಯೂ ಆಗಿದ್ದಳೆಂತಲೂ ಕಾಳೆಗದಲ್ಲಿ ಭೈರವಿಯಾಗಿದ್ದಳೆಂತಲೂ ಶಾಸನಗಳು ಹೊಗಳುತ್ತವೆ. ಈಕೆಯು ಸುಮಾರು ೧೦೨೧ರಿಂದ ೧೦೫೫ರವರೆಗೆ ಕಿಸುಕಾಡು ೭೦ನ್ನೂ, ತೊರಗರೆ ೬ನ್ನೂ, ಮಾಸವಾಡಿ ೧೪೦ನ್ನೂ ಆಳಿದಳೆಂದು ಕಂಡುಬರುತ್ತದೆ. ಬೆಳಗಾವಿ ಜಿಲ್ಲಾ ಕೋಕಾಗೆ(ಗೋಕಾವಿ)ಯ ಕೊತವಾಲನು ೧೦೪೭ರಲ್ಲಿ ಬಂಡುಹೂಡಿದ್ದರಿಂದ ಈಕೆಯು ಅಲ್ಲಿಗೆ ದಂಡೆತ್ತಿಹೋಗಿ, ಆ ಕೋಟೆಯನ್ನು ಮುತ್ತಿ ಹಿಡಿದುಕೊಂಡು, ಬಂಡಾಯವನ್ನು ಮುರಿದಳು. ವಿಜಾಪುರ ಜಿಲ್ಲಾ ಹುನಗುಂದ ತಾಲೂಕಿನಲ್ಲಿ ಮುಳ್ಳುಗಳ್ಳಿ ಬೆಳೆದು ಹಾಳಾಗಿದ್ದ **ವಿಕ್ರಮಪುರ** ಅಥವಾ **ಅರಸಿಬೀದಿಯೇ** ಈಕೆಯ ರಾಜಧಾನಿಯಾಗಿತ್ತೆಂದು ತೋರುತ್ತದೆ. ೧೦೬೭ರಲ್ಲಿ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೩೭.

ಬನವಾಸಿ ಪಾನುಗಲ್ಲ ಪ್ರಾಂತಗಳ ಮಹಾಮಂಡಲೇಶ್ವರನಾದ ತೋಯಿಮದೇವನು ಈಕೆಯ ಮಗನಾದ್ದರಿಂದ ಈಕೆಯನ್ನು ಒಬ್ಬ ಕದಂಬ ಮಹಾಮಂಡಲೇಶ್ವರನಿಗೆ ಕೊಟ್ಟಿತ್ತೆಂದು ಊಹಿಸಬಹುದು. ಆದರೆ ಅವನ ಹೆಸರಾಗಲಿ ಅವನು ಆಳುತ್ತಿದ್ದ ನಾಡಾಗಲಿ ಇನ್ನೂ ಗೊತ್ತಾಗಿಲ್ಲ.

ಪರಾಕ್ರಮಶಾಲಿಯಾದ ೨ನೆಯ ಜಯಸಿಂಹನು ೧೦೪೨ರಲ್ಲಿ ಸತ್ತನು. ಸುಗ್ಗಲದೇವಿಯೆಂಬವಳು ಇವನ ಪಟ್ಟದ ರಾಣಿಯಾಗಿದ್ದಳು. ಆದರೆ ಈಕೆಯು ಯಾವ ಮನೆತನದವಳಾಗಿದ್ದಳೆಂಬುದು ಇನ್ನೂ ಗೊತ್ತಾಗಿಲ್ಲ. ಇವರಿಗೆ ಸೋಮೇಶ್ವರನೆಂಬ ಒಬ್ಬ ಮಗನೂ ಹವ್ಮಾ ಅಥವಾ ಅವ್ವಲದೇವಿಯೆಂಬ ಒಬ್ಬ ಮಗಳೂ ಇದ್ದರು. ಹವ್ಮೆಯನ್ನು ಸೇವುಣದೇಶದ ಮಹಾಮಂಡಲೇಶ್ವರನಾದ ೩ನೆಯ ಭಿಲ್ಲಮನಿಗೆ ಕೊಟ್ಟಿತ್ತೆಂದು ಮೇಲೆ ಬರೆದಿರುತ್ತೇವೆ.

೨ನೆಯ ಜಯಸಿಂಹನ ಸಾಮ್ರಾಜ್ಯದ ಬೇರೆ ಬೇರೆ ಭಾಗಗಳನ್ನು ಕೆಳಗೆ ಕೊಟ್ಟ ಮಂಡಲೇಶ್ವರರು ಆಳುತ್ತಿದ್ದರು :—

೧. ಕದಂಬ ಮನೆತನದ ಚಟ್ಟ, ಚಟ್ಟಯ್ಯ, ಚಟ್ಟಲದೇವ, ಷಷ್ಠದೇವ ಎಂಬವನು ಗೋವೆ ಪ್ರಾಂತದಲ್ಲಿ ಆಳುತ್ತಿದ್ದನು.

೨. ಸತ್ಯಾಶ್ರಯನ ಮಗನೂ ಸತ್ತಿಗನ ಚಟ್ಟನೂ ಆದ ಕುಂದಮರಸನು ಬಲಿಪುರ ಅಥವಾ ಬಲಗಾವೆಯನ್ನು ತನ್ನ ಮುಖ್ಯ ಪಟ್ಟಣವನ್ನು ಮಾಡಿಕೊಂಡು, ಬನವಾಸಿ ೧೨,೦೦೦ವನ್ನೂ ಸಂತಳಿಗೆ ೧,೦೦೦ವನ್ನೂ ಹಯ್ವೆಯ ೫೦೦ನ್ನೂ ಆಳುತ್ತಿದ್ದನು (೧೦೧೯).

೩. ಸಿಂದ ಮನೆತನದ ಸೇವ್ಯ, ನಾಗಾದಿತ್ಯ ಎಂಬ ಇಬ್ಬರು ಮಹಾಮಂಡಲೇಶ್ವರರು ಬಾಗಡಗೆ (ಬಾಗಲಕೋಟೆ) ಪ್ರಾಂತವನ್ನು ಆಳುತ್ತಿದ್ದರು (೧೦೩೪).

೪. ಹಾನಗಲ್ಲ ಕದಂಬ ಮನೆತನದ ಮಹಾಮಂಡಲೇಶ್ವರನಾದ ೨ನೆಯ ಮಯೂರವರ್ಮನು ಪಾನುಂಗಲ್ ೫೦೦ನ್ನು ಆಳುತ್ತಿದ್ದನು (೧೦೩೪-೩೯).

೫. ಕದಂಬ ಮನೆತನದ ಮಹಾಮಂಡಲೇಶ್ವರನಾದ ತೋಯಿಮ ದೇವನು (ಅಕ್ಕಾದೇವಿಯ ಮಗ) ಬನವಾಸಿ ೧೨,೦೦೦ವನ್ನೂ ಪಾನುಂಗಲ್ ೫೦೦ನ್ನೂ ಆಳುತ್ತಿದ್ದನು (೧೦೩೭).

೬. ತುಂಗಭದ್ರೆಯ ದಂಡೆಯಲ್ಲಿದ್ದ ಮಣಲೂರಿನ ಮನೆತನ ದವರೂ ಮಹಾಸಾಮಂತರೂ ಆದ ಇರಿವಬೆಡಂಗ ಮಾರಸಿಂಹ ಜಯ ಸಿಂಹ ಎಂಬವರಿಬ್ಬರು ಪುರಿಗೆರೆ ೩೦೦ನ ನಾಡಗಾವುಂಡರಾಗಿದ್ದರು (೧೦೩೯).

೭. ರಟ್ಟ ಮನೆತನದ ಮಹಾಸಾಮಂತನಾದ ಎರೆಯಮ್ಮ ಅಥವಾ ಎರೆಗನೆಂಬವನು ಸವದತ್ತಿಯಲ್ಲಿ ಆಳುತ್ತಿದ್ದನು (೧೦೪೦).

೮. ಪಲ್ಲವ ಮನೆತನದ ನೊಳಂಬ ಪಲ್ಲವ ಬೊಮ್ಮಣಯ್ಯನೆಂಬ ಮಹಾಸಾಮಂತನು ಮಾಸವಾಡಿ ನಾಡಿನ ೫ ಪಟ್ಟಣಗಳನ್ನು* ಆಳುತ್ತಿದ್ದನು (೧೦೪೦–೪೩).

೯. ಎರಡನೆಯ ಜಯಸಿಂಹನ ಅಕ್ಕನೂ ಕದಂಬ ಮನೆತನಕ್ಕೆ ಕೊಟ್ಟವಳೂ ಆದ ಅಕ್ಕಾದೇವಿಯು ಮಹಾಮಂಡಲೇಶ್ವರಿಯಾಗಿ ಕಿಸುಕಾಡು ೭೦ನ್ನು ಆಳುತ್ತಿದ್ದಳು.

೧೦. ಯಾದವ ಮನೆತನದ ಮಹಾಮಂಡಲೇಶ್ವರನಾದ ೩ನೆಯ ಭಿಲ್ಲಮನು ತನ್ನ ರಾಜಧಾನಿಯಾದ ಸಿಂದಿನಗರ(ನಾಸಿಕ ಜಿಲ್ಲಾ ಸಿನ್ನರ) ದಲ್ಲಿದ್ದು ಸೆವುಣ ದೇಶವನ್ನು ಆಳುತ್ತಿದ್ದನು (೧೦೨೫).

೧೧. ಸಿಲಾಹಾರ ಮನೆತನದ ಮಹಾಮಂಡಲೇಶ್ವರನಾದ ಚಿತ್ರ ರಾಜನು ಎಲ್ಲ ಕೊಂಕಣವನ್ನು ಆಳುತ್ತಿದ್ದನು (೧೦೨೬).

## ೬. ಮೊದಲನೆಯ ಸೋಮೇಶ್ವರ

(೧೦೪೩–೧೦೬೭)

೨ನೆಯ ಜಯಸಿಂಹನ ತರುವಾಯ ಅವನ ಮಗನಾದ ಸೋಮೇಶ್ವರನು ೧ನೆಯ ಸೋಮೇಶ್ವರನೆಂಬ ಹೆಸರಿನಿಂದ ಪಟ್ಟವೇರಿದನು

---

* ಈ ಪಟ್ಟಣಗಳು ಯಾವವೆಂಬುದು ಇನ್ನೂ ಗೊತ್ತಾಗಿಲ್ಲ.

(೧೦೪೩). ಇವನು ಎಂದು ಸಾರ್ವಭೌಮನಾದನೆಂಬ ವಿಷಯವಾಗಿ ಶಾಸನ ಪಂಡಿತರೊಳಗೆ ಭಿನ್ನಾಭಿಪ್ರಾಯಗಳಿರುತ್ತವೆ. ಇವನು ೧೦೪೦ ರಲ್ಲಿ ಪಟ್ಟವೇರಿದನೆಂದು ಡಾ॥ ಭಾಂಡಾರಕರರೂ, ೧೦೪೨ರಲ್ಲಿ ಸಾರ್ವಭೌಮನಾದನೆಂದು ರಾಯಿಸ ಸಾಹೇಬರೂ, ೧೦೪೪ರಲ್ಲಿ ಇವನ ಆಳಿಕೆಯು ಆರಂಭವಾಯಿತೆಂದು ಡಾ॥ ಫ್ಲೀಟರೂ ಬರೆಯುತ್ತಾರೆ ಆದರೆ ಮೈಸೂರ ಸಂಸ್ಥಾನ ಸಿಕಾರಪುರ ತಾಲೂಕಿನ ೩.೨೩ ನೆಯ ನಂಬರಿನ ಶಿಲಾಲೇಖದಲ್ಲಿಯೂ ಬೆಳಗಾವಿ ಜಿಲ್ಲಾ ಹೂಲಿಯ ಶಿಲಾಲೇಖದಲ್ಲಿಯೂ ಇವನು ೧೦೪೩ರ ಆರಂಭದಲ್ಲಿ ಆಳುತ್ತಿದ್ದನೆಂದು ಬರೆದಿರುವುದರಿಂದ ಇವನು ೧೦೪೩ ನೆಯ ಜನವರಿಯಲ್ಲಿ ಪಟ್ಟವೇರಿದನೆಂದು ಬರೆಯಲಿಕ್ಕೆ ಅಡ್ಡಿತೋರುವುದಿಲ್ಲ. ಇವನು ತನ್ನ ಪೂರ್ವಜರ ಸಾಮಾನ್ಯ ಬಿರುದುಗಳನ್ನಲ್ಲದೆ ತ್ರಿಭುವನಮಲ್ಲ, ಆಹವಮಲ್ಲ ಎಂಬ ವಿಶಿಷ್ಟ ಬಿರುದುಗಳನ್ನು ಧರಿಸಿದನು.

ತಂದೆ ಸತ್ತ ಕೂಡಲೆ ಸೋಮೇಶ್ವರನು ಸಾರ್ವಭೌಮನಾದರೂ ಅವನ ಪಟ್ಟಾಭಿಷೇಕ ಮಹೋತ್ಸವವು ಆಗಬೇಕಾಗಿತ್ತು. ಆ ಸಮಾರಂಭಕ್ಕೆ ತನ್ನ ಇದ್ದ ಒಬ್ಬ ಮಗಳೂ ಅಳಿಯನೂ ಬರಲಿಕ್ಕೇ ಬೇಕೆಂದು ಸುಗ್ಗಲದೇವಿಯು ಹಟ ಹಿಡಿದಳು. ಪ್ರವಾಸವು ದೂರಿನದಾದ್ದರಿಂದಲೂ ಹಗೆಗಳು ಹೊಂಚುಹಾಕಿಕೊಂಡು ಕುಳಿತುದರಿಂದಲೂ ಈಗ ಅವರನ್ನು ಕರೆಯಿಸುವುದು ಬೇಡೆಂದು ಮಗನು ಎಷ್ಟು ಹೇಳಿದರೂ ತಾಯಿಯು ಕೇಳದ್ದರಿಂದ ನಿರುಪಾಯನಾಗಿ ಸೋಮೇಶ್ವರನು ಪಟ್ಟಾಭಿಷೇಕವನ್ನು ಮುಂದಕ್ಕೆ ಹಾಕಿ, ಭಿಲ್ಲಮ ಹಮ್ಮೆಯರನ್ನು ಕರೆತರಲಿಕ್ಕೆ ಒಬ್ಬ ದಂಡನಾಯಕನನ್ನು ಕಳುಹಿದನು. ಅವರು ಬರಲಿಕ್ಕೆ ಒಂದು ವರ್ಷ ಹತ್ತಿತು. ಅವರು ಬಂದ ಬಳಿಕ ಒಂದು ಸುಮುಹೂರ್ತದಲ್ಲಿ ಪಟ್ಟಾಭಿಷೇಕದ ಸಮಾರಂಭವು ಅತಿವಿಜೃಂಭಣೆಯಿಂದ ಬಳ್ಳಿಗಾವೆಯಲ್ಲಿ ಜರಗಿತು (೧೦೪೫). ತರುವಾಯ ಒಂದು ದಿನ ಸೋಮೇಶ್ವರ ಭಿಲ್ಲಮರು ಮಾತಾಡುತ್ತ ಕುಳಿತಿರುವಾಗ ಪರಮಾರ ಭೋಜನು ಮತ್ತೆ ಕರ್ನಾಟಕ ಸಾಮ್ರಾಜ್ಯದ ಮೇಲೆ ದಂಡೆತ್ತಿಬರುವ ಜೋಡಣೆಯನ್ನು ಮಾಡತೊಡಗಿದ್ದಾನೆಂತಲೂ ಚೇದಿಯ ಅರಸನಾದ ಕರ್ಣನು ಅವನನ್ನು

ಕೂಡಿದ್ದಾನೆಂತಲೂ ಭಿಲ್ಲಮನು ಹೇಳಿದನು. ಈ ಸುದ್ದಿಯನ್ನು ಕೇಳಿದ ಕೂಡಲೆ ಶೂರನಾದ ಸೋಮೇಶ್ವರನಿಗೆ ಕೆಂಡದಂತಹ ಸಿಟ್ಟುಬಂತು. ತೈಲಪನ ಕಾಲದಿಂದ ತಮ್ಮ ರಾಜ್ಯಕ್ಕೆ ತೊಂದರೆಕೊಡುತ್ತಿದ್ದ ಪರಮಾರರ ರಾಜ್ಯವನ್ನು ಕಿತ್ತಿಕೊಳ್ಳುವೆನೆಂದು ಅವನು ಆಣೆಯಿಟ್ಟುಕೊಂಡನು. ಸೋಮೇಶ್ವರನ ಈ ವೀರಸಂಕಲ್ಪವನ್ನು ಕೇಳಿ, ಭಿಲ್ಲಮನಿಗೆ ಸಂತೋಷ ವಾಯಿತು. ಅವನು ಹೆಚ್ಚು ಅನುಭವವುಳ್ಳವನಾದ್ದರಿಂದಲೂ ಪರ ಮಾರರ ಕಾಟವು ತನ್ನ ನಾಡಿಗೆ ಆಗಿಂದಾಗ ಆಗುತ್ತಿದ್ದುದರಿಂದಲೂ ಅವನು ಸೋಮೇಶ್ವರನಿಗೆ ಹೇಳಿದ್ದೇನಂದರೆ:—"ಸ್ವಾಮಿ, ತಾವು ಮಾಡಿದ ವೀರಸಂಕಲ್ಪವು ಕೊನೆಗಾಣುವುದೆಂಬುದಕ್ಕೆ ಎಳ್ಳಷ್ಟಾದರೂ ಸಂಶಯವಿಲ್ಲ. ಆದರೆ ತಾವು ಮಾಡಿದ್ದೆಲ್ಲ ಹೊಳೆಯಲ್ಲಿ ಹೋಮಮಾಡಿ ದಂತೆ ಆಗಲಿಕ್ಕಿಲ್ಲವೇ? ಹಿಂದೆ ತಮ್ಮ ಪೂರ್ವಜರು ಎಷ್ಟೋ ಸಾರಿ ಮಾಳವೆಯರನ್ನು ಸೋಲಿಸಿದರು. ಆದರೆ ಅದರ ಫಲವೇನಾಯಿತು? ಪರಮಾರರು ತಿರುತಿರುಗಿ ಮಾಡಿದ ದಾಳಿಯಲ್ಲವೇ? ತಾವು ಮಾಳವೆಯ ಪ್ರಾಂತವನ್ನು ಗೆದ್ದು ಅಲ್ಲಿಯೊಬ್ಬ ಮಂಡಲೇಶ್ವರನನ್ನು ಇಟ್ಟು ತಿರುಗಿ ಬರುವಷ್ಟರಲ್ಲಿ, ಸೋತ ಅರಸರು ಹೊಸ ದಂಡನ್ನು ಕಟ್ಟಿ ಕೊಂಡು ಯುದ್ಧಕ್ಕೆ ಸಿದ್ಧರಾಗುವರು. ಸಾತಪುಡಾ ಪರ್ವತದ ಗುಡ್ಡ ಗಾಡಿನಲ್ಲಿ ಸ್ವಾತಂತ್ರ್ಯಪ್ರಿಯರೂ ಶೂರರೂ ಆದ ಕಾಡುಜನರು ತುಂಬಿರುತ್ತಾರೆ. ತಮಗೆ ಅವರ ದಾಳಿಯ ಸುದ್ದಿಯು ಮುಟ್ಟಿ ತಾವು ಸಹಾಯ ಸೇನೆಯನ್ನು ಕಳಿಸುವಷ್ಟರಲ್ಲಿ, ಅವರು ತಮ್ಮ ಮಂಡಲೇಶ್ವರನನ್ನು ಸೋಲಿಸಿ ಓಡಿಸಿ ಬಿಡುವರು. ಹೀಗಾಗುವುದ ರಿಂದ ತಮ್ಮ ಶ್ರಮವೆಲ್ಲ ವ್ಯರ್ಥವಾಗಲಿಕ್ಕಿಲ್ಲವೇ? ತಾವು ಗಾಳಿ ಗುದ್ದಿ ಮೈಯ್ನೋಯಿಸಿಕೊಂಡಂತೆ ಆಗುವುದಿಲ್ಲವೇ? ಆದಷ್ಟು ಮಾಳವೆಯ ಸಮೀಪದಲ್ಲೇ ತಮ್ಮ ನೆಲೆವೀಡನ್ನು ಮಾಡಿದರೆ ಮಾತ್ರ, ತಮ್ಮ ಗೆಲವಿನ ಫಲವು ತಮಗೆ ದೊರೆಯುವುದೆಂದು ನನಗಂತೂ ತೋರುತ್ತದೆ. ಸಹ್ಯಾ ದ್ರಿಯ ನೆರೆಯಲ್ಲಿದ್ದು ನರ್ಮದಾನದಿಯ ಪ್ರದೇಶವನ್ನಾಳುವುದು ಕಷ್ಟ ಸಾಧ್ಯವಾದ ಕೆಲಸವೇ ಸರಿ. ತಾವು ಬಲ್ಲವರೇ ಇದ್ದೀರಿ. ಹೆಚ್ಚಿಗೆ ಹೇಳುವ ಕಾರಣವಿಲ್ಲ. ತಮಗೆ ಯೋಗ್ಯಕಂಡುದನ್ನು ಮಾಡಬಹುದು."

ಸೋಮೇಶ್ವರನು ಭಿಲ್ಲಮನ ಮಾತನ್ನು ಲಕ್ಷ್ಯಪೂರ್ವಕವಾಗಿ ಕೇಳಿಕೊಂಡು, ಆಲೋಚನೆಯಲ್ಲಿ ಮುಳುಗಿದನು. ಅವನು ಹೇಳಿದ್ದು ಅನುಭವಸಿದ್ಧವಾದ ಮಾತೆಂದು ಅವನಿಗೆ ಕಂಡುಬಂತು. ತನ್ನ ಮನೆತನದ ರಾಜಧಾನಿಯು ಇಲ್ಲುದರಿಂದ ಒಂದು ಊರನ್ನು ನೆಲೆವೀಡಾಗಿ ಮಾಡಿಕೊಳ್ಳುವುದು ಅವಶ್ಯವಾಗಿತ್ತು. ತಾಯಿಯೊಡನೆ ಮಾತಾಡುವಾಗ ಭಿಲ್ಲಮನ ಸಲಹೆಯ ಪ್ರಸ್ತಾಪವು ಹೊರಡಲು, ಸಿಂದಿನಗರದ ಹತ್ತಿರದಲ್ಲಿ ರಾಜಧಾನಿಯನ್ನು ಮಾಡಬೇಕೆಂದು ಆಕೆಯು ಆಗ್ರಹಪೂರ್ವಕವಾಗಿ ಸೂಚಿಸಿದಳು. ಬಡಗಲಲ್ಲಿ ರಾಜಧಾನಿಯನ್ನು ಮಾಡುವುದು ಎಲ್ಲರ ಮನಸ್ಸಿಗೆ ಬಂದುದರಿಂದ ಸೋಮೇಶ್ವರನು ಗೋದಾವರಿಯ ಈಚೆಯ ದಂಡೆಯ ಮೇಲಿದ್ದ ಒಂದು ಯೋಗ್ಯವಾದ ಸ್ಥಳವನ್ನು ರಾಜಧಾನಿಗೋಸ್ಕರ ಆರಿಸಲಿಕ್ಕೆ ತನ್ನಿಬ್ಬರು ಜಾಣರಾದ ಮಂತ್ರಿಗಳನ್ನು ಮುಂದಾಗಿ ಕಳುಹಿ, ತಾನು ಭಿಲ್ಲಮನೊಡನೆ ಮಾಳವೆಯ ಮೇಲೆ ದಂಡೆತ್ತಿಹೋಗುವ ದಿವಸವನ್ನು ಗೊತ್ತುಮಾಡಿದನು. ಮರುದಿವಸ ಬನವಾಸಿಯ ಮಹಾಮಂಡಲೇಶ್ವರನಾದ ಚಾವುಂಡರಾಯರಸನು ಬಂದು, ಸಾಷ್ಟಾಂಗನಮಸ್ಕಾರಮಾಡಿ, ಎರಡೂ ಕಯ್ಜೋಡಿಸಿಕೊಂಡು ನಿಂತು, ಅತಿನಮ್ರತೆಯಿಂದ ಅರಿಕೆ ಮಾಡಿಕೊಂಡುದೇನಂದರೆ :—"ಮಹಾರಾಜಾಧಿರಾಜ ಶ್ರೀವಲ್ಲಭರೇ, ನನ್ನ ಬಡಾಳಿನ ಒಂದು ಸಣ್ಣ ಅರಿಕೆ



ಭೇರುಂಡೇಶ್ವರನ ಕಂಬ

ಯುಂಟು. ತಾವು ಈಗ ವಿಜಯ ದಂಡಯಾತ್ರೆಗೆ ಹೊರಡುವವರಿದ್ದೀ ರಷ್ಟೇ. ಅದರಲ್ಲಿ ತಮಗೆ ನಿಶ್ಚಯವಾಗಿ ಜಯಪ್ರಾಪ್ತಿಯಾಗುವ ದೆಂಬುದಕ್ಕೆ ಸಂದೇಹವಿಲ್ಲ. ಈ ಗೆಲವಿನ ಸೂಚನಾರ್ಥವಾಗಿ ನಾನು ಒಂದು ಭೇರುಂಡೇಶ್ವರನ ಸ್ತಂಭವನ್ನು ಕಟ್ಟಿಸಿ ಸಿದ್ಧಮಾಡಿರುತ್ತೇನೆ. ಅದನ್ನು ತಾವು ಇದೇ ವೈಶಾಖ ಶುದ್ಧ ೧೦ ಗುರುವಾರ ದಿವಸ ಇದೇ ಊರಿನ ಜಗದೇಕಮಲ್ಲೇಶ್ವರನ ಗುಡಿಯ ಮುಂದೆ ಸ್ವಹಸ್ತದಿಂದ ನಡಿಸಿ, ಈ ಬಡಸೇವಕನನ್ನು ಅನುಗ್ರಹಿಸಬೇಕೆಂದು ಸೆರಗೊಡ್ಡಿ ಬೇಡಿ ಕೊಳ್ಳುತ್ತೇನೆ.'' ಈ ಬಿನ್ನಹವನ್ನು ಕೇಳಿ ಸಂತುಷ್ಟನಾದ ಸೋಮೇಶ್ವ ರನು ಭಿಲ್ಲಮನ ಕಡೆಗೆ ನೋಡಿ ''ರಾಯರೇ ನಾಳಿನ ಗುರುವಾರ ಹೋಗೋಣ'' ಎಂದು ನುಡಿಯಲು, ಭಿಲ್ಲಮನು ಏಕಾಗಲೊಲ್ಲದು ಎಂದು ಹೇಳಿದನು. ಬಳಿಕ ಸೋಮೇಶ್ವರನು ಬರುತ್ತೇವೆಂದು ಹೇಳಿ ಚಾವುಂಡರಾಯರಸನಿಗೆ ವೀಳೆಯನಿತ್ತು ಅಪ್ಪಣೆಯನ್ನು ಕೊಟ್ಟನು. ಮುಂದೆ ಗೊತ್ತುಮಾಡಿದ ಬೃಹಸ್ಪತಿವಾರ ದಿವಸ ಸೋಮೇಶ್ವರನು ಶುಭಮುಹೂರ್ತದಲ್ಲಿ ಭೇರುಂಡೇಶ್ವರ ಸ್ತಂಭವನ್ನು ನಡಿಸಿದನು*. ಈ ಸಮಾರಂಭವು ಅತಿವಿಜೃಂಭಣೆಯಿಂದ ನಡೆಯಿತು.

ಮುಂದೆ ಕೆಲದಿವಸಗಳ ಮೇಲೆ ಸೋಮೇಶ್ವರನು ತನ್ನ ತಾಯಿ ತಂಗಿಯಂದರನ್ನು ಸಂಗಡ ಕರೆಕೊಂಡು, ಭಿಲ್ಲಮನೊಡನೆ ಪರಮಾರ ಕಲಚುರಿಯರ ಮೇಲೆ ದಂಡೆತ್ತಿ ಹೊರಟನು (೧೦೪೮?). ಇವನು ಹೋಗುವಷ್ಟರೊಳಗೆ ಮಾಳವೆಯರ ದಂಡು ಗೋದಾವರಿಯನ್ನು

---

* ೪೯.............ಸ್ವಸ್ತಿ ಶ್ರೀಮನ್ಮಹಾಮಂಡಳೇ

೫೦. ಶ್ವರಂ ಚಾಮುಂಡರಾಯರಸರ್ಸಕ ೯೬೯

೫೧. ತ್ತನೆಯ ಸರ್ವಜಿತ್ಸಂವತ್ಸರದ ವೈಶಾಖ ಶು

೫೨. ದ್ಧ ದಶಮಿ ಬೃಹಸ್ಪತಿವಾರದಂದು ಶ್ರೀಮಜ್ಜ

೫೩. ಗದೇಕಮಲ್ಲೇಶ್ವರದೇವರ ಮುಂತೆ ಗಂಡಭೇ

೫೪. ರುಂಡ ಸ್ತಂಭಮಂ ನಿಲಿಸಿ ಮಹಾತ್ಯಾಗಂಗೆಯ್ದು

..........................

ಕರ್ನಾಟಕ ಶಾಸನ ಸಂಗ್ರಹ, ಸಂ. ೭, ಭಾ. ೧, ಕನ್ನಡ ಪು. ೨೫೯.

ದಾಟಿ ಬಂದಿತ್ತು. ೨-೩ ಕಾಳಗಗಳಲ್ಲಿ ಹಗೆಗಳು ಸೋತು ಹಿಂದೆಗೆದುದರಿಂದ ಚಾಳುಕ್ಯ ದಂಡು ಅವರನ್ನು ಬೆನ್ನಟ್ಟಿ ಹೋಗಿ, ಮಾಳವೆಯನ್ನು ಒಳಸುಗ್ಗಿತು. ದಾಳಿಗಾರರನ್ನು ಎದುರಿಸುವಷ್ಟು ಸಾಮರ್ಥ್ಯವಿಲ್ಲುದರಿಂದ ಮಾಳವೆಯ ಅರಸನಾದ ಭೋಜನು ತನ್ನ ರಾಜಧಾನಿಯಾದ ಧಾರಾನಗರವನ್ನು ಹೊಕ್ಕುದರಿಂದ ಸೋಮೇಶ್ವರನು ಆ ನಗರವನ್ನು ಮುತ್ತಿ ಹಿಡಿದುಕೊಂಡನು (೧೦೫೦?). ದಿಕ್ಕೆಟ್ಟು ಓಡಿ ಹೋದ ಭೋಜನನ್ನು ಬೆನ್ನಟ್ಟಿ ಹೋಗಿ ಸೋಮೇಶ್ವರನು ಚೇದಿ ನಾಡನ್ನು ಒಳಸುಗ್ಗಿದನು. ಚೇದಿ ನಾಡಿನ ಅರಸನೂ ಕಲಚುರಿಯ ಮನೆತನದವನೂ ಆದ ಕರ್ಣನು ಕರ್ನಾಟಕ ಸಾರ್ವಭೌಮನ ದಾಳಿಯನ್ನು ತಡೆಯಲಿಕ್ಕೆ ಮಾಡಿದ ಪ್ರಯತ್ನವು ವ್ಯರ್ಥವಾದ್ದರಿಂದ ಅವನು ತನ್ನ ರಾಜಧಾನಿಯಾದ ತ್ರಿಪುರಪುರ (ತೇವೂರು) ವನ್ನು ಹೊಕ್ಕುದರಿಂದ ಸೋಮೇಶ್ವರನು ಅದನ್ನು ಮುತ್ತಿ ಹಿಡಿದುಕೊಂಡನು. ಭೋಜನಂತೆ ಕರ್ಣನಾದರೂ ರಾಜಧಾನಿಯನ್ನು ಕಳೆಕೊಂಡು ದಿಕ್ಕೆಟ್ಟು ಓಡಿದನು.

ರಾಜ್ಯವನ್ನಾಗಲಿ, ಧನವನ್ನಾಗಲಿ, ಅಧಿಕಾರವನ್ನಾಗಲಿ, ಸಾಮರ್ಥ್ಯವನ್ನಾಗಲಿ, ಕೀರ್ತಿಯನ್ನಾಗಲಿ ಗಳಿಸುವುದಕ್ಕಿಂತ ಅವುಗಳನ್ನು ಬಹುಕಾಲ ಇಟ್ಟುಕೊಳ್ಳುವುದು ಹೆಚ್ಚು ಶ್ರಮದ ಕೆಲಸವಾಗಿರುತ್ತದೆಂಬುದು ಎಲ್ಲರಿಗೂ ಗೊತ್ತಿದ್ದ ಸಂಗತಿಯಾಗಿರುತ್ತದಷ್ಟೇ. ಹೆಚ್ಚು ದೂರದರ್ಶಿತ್ವವೂ, ಹೆಚ್ಚು ಸ್ವಾರ್ಥತ್ಯಾಗವೂ, ಹೆಚ್ಚು ಆತ್ಮಸಂಯಮನವೂ, ಹೆಚ್ಚು ಧೈರ್ಯವೂ, ಹೆಚ್ಚು ತಾಳ್ಮೆಯೂ, ಹೆಚ್ಚು ಜಾಗರೂಕತೆಯೂ, ಹೆಚ್ಚು ಜನಾನುಕೂಲತೆಯೂ ಇದ್ದವರು ಮಾತ್ರ ತಾವು ಗಳಿಸಿದ್ದನ್ನು ಕಾಪಾಡಿಕೊಳ್ಳಲಿಕ್ಕೆ ಸಮರ್ಥರಾಗುವರು. ಸೋಮೇಶ್ವರನು ಮಾಳವೆ ಚೇದಿ ನಾಡುಗಳನ್ನು ಗೆದ್ದ ಬಳಿಕ ಅವುಗಳನ್ನು ಹೇಗೆ ತನ್ನ ವಶದಲ್ಲಿ ಇಟ್ಟುಕೊಳ್ಳಬೇಕೆಂದು ವಿಚಾರ ಮಾಡುತ್ತಿರುವಾಗ, ಭೋಜ ಕರ್ಣರು ಶರಣು ಬಂದು ಚಾಳುಕ್ಯ ಸಾರ್ವಭೌಮನ ಮಂಡಲೇಶ್ವರರಾಗಿ ಇರುವೆವೆಂದು ಅಂಗಲಾಚಿ ಬೇಡಿಕೊಂಡರು. ಸೋಮೇಶ್ವರನು ಉದಾರಬುದ್ಧಿಯವನಾದ್ದರಿಂದ ಅವರಿಂದ ಆಣೆಕ್ರಿಯೆಗಳನ್ನು

ಮಾಡಿಸಿಕೊಂಡು, ಅವರವರ ನಾಡುಗಳಿಗೆ ಅವರನ್ನು ಮಂಡಲೇಶ್ವರರಾಗಿ ನಿಯಮಿಸಿ, ಜಯಭೇರಿಯನ್ನು ಹೊಡಿಸುತ್ತ ಅಲ್ಲಿಂದ ತಿರುಗಿ, ತನ್ನ ತಂಗಿಯ ಮನೆಯಿದ್ದ ಸಿಂದಿನಗರಕ್ಕೆ ಬಂದನು (೧೦೫೦ ?). ಅಲ್ಲಿರುವಾಗ ಹೊಸ ರಾಜಧಾನಿಗೆ ಬೇಕಾದ ಯೋಗ್ಯ ಸ್ಥಳವನ್ನು ಗೊತ್ತುಮಾಡ ಲಿಕ್ಕೆ ಕಳಿಸಿದ ಮಂತ್ರಿಗಳು ಬಂದು, ನಳದುರ್ಗದ ಹತ್ತಿರದಲ್ಲಿಯೂ ಮಾಂಜರಾನದಿಯ ಸಮೀಪದಲ್ಲಿಯೂ ಇದ್ದ **ಕಲ್ಯಾಣ**ವೇ ಚಾಳುಕ್ಯ ಸಾರ್ವಭೌಮರ ನೆಲೆವೀಡಾಗಲಿಕ್ಕೆ ತಕ್ಕ ಎಡೆಯಾಗಿರುತ್ತದೆಂದು ಅರಿಕೆ ಮಾಡಿದರು*. ಕೂಡಲೇ ಸೋಮೇಶ್ವರನು ಭಿಲ್ಲಮನೊಡನೆ ಕಲ್ಯಾ ಣಕ್ಕೆ ಹೋಗಿ, ಆ ಸ್ಥಳವನ್ನೂ ಅದರ ನೆರೆಯ ಪ್ರದೇಶವನ್ನೂ ನೋಡಿ ಸಂತೋಷಬಟ್ಟು, ಅಲ್ಲಿ ಅರಮನೆ ಗುರುಮನೆಗಳನ್ನೂ ಕೋಟೆ ಕೊತ್ತಲು ಗಳನ್ನೂ ಕಚೇರಿ ಚಾವಡಿಗಳನ್ನೂ ಗುಡಿ ಗುಂಡಾರಗಳನ್ನೂ ಬಾವಿ ಕೆರೆ ಕಟ್ಟೆಗಳನ್ನೂ ಕಟ್ಟಿಸಲಿಕ್ಕೆ ಆಜ್ಞೆಯನಿತ್ತು, ಭಿಲ್ಲಮನಿಗೆ ತಿರುಗಿ ಹೋಗ ಲಿಕ್ಕೆ ಅಪ್ಪಣೆಯನ್ನು ಕೊಟ್ಟು, ತಾನು ಸಾವಕಾಶವಾಗಿ ತನ್ನ ರಾಜ್ಯ ದೊಳಗೆ ಸುಖಸಂಚಾರಮಾಡುತ್ತ ನಡೆದನು. ಮುಂದೆ ೨-೩ ವರ್ಷ ಗಳಲ್ಲಿ ರಾಜಧಾನಿಯನ್ನು ಕಟ್ಟುವ ಕೆಲಸವು ಮುಗಿದುದರಿಂದ, ಸೋಮೇಶ್ವರನು ತನ್ನ ಎಲ್ಲ ಆಪ್ತೇಷ್ಟರನ್ನೂ ಸಣ್ಣ ದೊಡ್ಡ ಸಾಮಂತ ರನ್ನೂ ಕೂಡಿಕೊಂಡು ಅತ್ಯುತ್ಸವದಿಂದ ಹೊಸ ರಾಜಧಾನಿಯನ್ನು ಪ್ರವೇಶಮಾಡಿ, ದೇವತಾ ಪ್ರೀತ್ಯರ್ಥವಾಗಿ ಹೋಮ ಯಜ್ಞ ಯಾಗಾದಿ ಗಳನ್ನು ಮಾಡಿಸಿ, ಗುಡಿಗಳಲ್ಲಿ ಬೇರೆ ಬೇರೆ ದೇವತಾಮೂರ್ತಿಗಳ ಪ್ರತಿಷ್ಠಾಪನೆಯನ್ನು ಮಾಡಿಸಿ, ಸುಂದರವಾದ ಕಟ್ಟಡಗಳನ್ನೂ, ಮನೋಹರವಾದ ಸರೋವರಗಳನ್ನೂ ರಮ್ಯವಾದ ಉದ್ಯಾನಗಳನ್ನೂ ಅಂದವಾದ ಶಾಲೆಗಳನ್ನೂ ಮಾಡಿಸತೊಡಗಿದನು (೧೦೫೩).

---

* ಕಲ್ಯಾಣವು ಈಗ ನಿಜಾಮ ಸಂಸ್ಥಾನದಲ್ಲಿ ೧೭'', ೫೧' ಅಕ್ಷಾಂಶ ೨೨'' ರೇಖಾಂಶದ ಮೇಲಿದ್ದ ಒಂದು ಹಾಳು ಹಳ್ಳಿಯಾಗಿದೆ. ಅದರಲ್ಲಿ ರಾಜಧಾನಿಯ ಅವ ಶೇಷಗಳೇನೂ ಇರುವುದಿಲ್ಲ. ಕೆಲವರು ಇದು ಬಾದಾಮಿ ಚಾಳುಕ್ಯರ ಒಂದು ರಾಜಧಾನಿ ಯಾಗಿತ್ತೆಂದು ಬರೆಯುತ್ತಾರೆ. ಇದು ಹುರಳಿಲ್ಲದ ಮಾತೇ ಸರಿ.

ವೈದ್ಯಶಾಸ್ತ್ರದಲ್ಲಿ ಪ್ರತಿಯೊಂದು ಮದ್ದು ಯಾವದಾದರೊಂದು ವಿಕಾರಕ್ಕೆ ಪ್ರತಿಕೂಲವಾಗಿದ್ದರೆ ಮತ್ತೊಂದು ವಿಕಾರಕ್ಕೆ ಅನುಕೂಲ ವಾಗಿರುವಂತೆ, ಈ ಸಂಸಾರದಲ್ಲಿ ನಾವು ಮಾಡುವ ಕಾರ್ಯಗಳು ಹೆಚ್ಚು ಕಡಮೆ ಪ್ರಮಾಣಗಳುಳ್ಳ ಗುಣಾವಗುಣಗಳ ಸಮ್ಮಿಶ್ರಣಗಳಾಗಿರುತ್ತ ವಷ್ಟೇ. ಸೋಮೇಶ್ವರನು ತನ್ನ ಹೊಸ ರಾಜಧಾನಿಯನ್ನು ಅತ್ಯಾ ಸಂದದಿಂದ ಸಿಂಗರಿಸುತ್ತಿರುವಾಗ, ನರ್ಮದಾ ತಾಪಿ ನದಿಗಳ ಬಡಗ ಲಲ್ಲಿದ್ದ ಅರಸರ ಹೆದರಿಕೆಯು ಹೆಚ್ಚಿದಂತೆ, ತೆಂಕಲಲ್ಲಿದ್ದ ಚೋಳರ ಅಂಜಿಕೆಯು ತಗ್ಗಿತು. ಆದ್ದರಿಂದ ಈ ಕಾಲಕ್ಕೆ ಕಂಚಿಯ ಚೋಳರಸ ನಾದ ಕೋಪರಕೇಸರಿವರ್ಮ ರಾಜೇಂದ್ರದೇವನು ದೊಡ್ಡ ದಂಡನ್ನು ಕಟ್ಟಿಕೊಂಡು, ಕರ್ನಾಟಕ ಸಾರ್ವಭೌಮ ಸಾಮಂತರು ಹೊಸ ರಾಜ ಧಾನಿಯಾದ ಕಲ್ಯಾಣಕ್ಕೆ ಹೋದ ಸಂಧಿಯನ್ನು ಸಾಧಿಸಿ ಚಾಳುಕ್ಯ ಸಾಮ್ರಾಜ್ಯವನ್ನೊಳನುಗ್ಗಿ, ತನ್ನನ್ನು ತಡೆದ ಹಳ್ಳಿಗಳನ್ನು ಸುಡುತ್ತ ದಾರಿಯಲ್ಲಿದ್ದ ಊರುಗಳನ್ನು ಸುಲಿಯುತ್ತ ಮುಂದರಿಸಿದನು. ಅವನು ಮೈಸೂರ ಸಂಸ್ಥಾನ ಕಡೂರ ಜಿಲ್ಲೆಯನ್ನು ಸುಲಿಯಲಾರಂಭಿಸಲು, ಬನವಾಸಿ ಸಂತಲಿಗೆ ಪ್ರಾಂತಗಳ ಉಪಮಂಡಲೇಶ್ವರರು ಅವನನ್ನು ತಡೆದರು. ಎರಡೂ ದಂಡುಗಳ ನಡುವೆ ತುಂಗಾ ಹೊಳೆಯ ಮೇಲಿದ್ದ **ಕೊಪ್ಪ**ವೆಂಬ ಊರಿನ ಬಳಿಯಲ್ಲಿ ಒಂದು ಕಡುಗದನವೆಸಗಿತು. ಚಾಳುಕ್ಯರ ದಂಡು ಸಣ್ಣದಾದ್ದರಿಂದ ಸೋತು ಹಿಮ್ಮೆಟ್ಟಿತು. ಜಯ ಶಾಲಿಯಾದ ಚೋಳರಸನು ತಾನು ಸೋಮೇಶ್ವರನನ್ನೇ ಕೊಪ್ಪವ್ ಎಂಬಲ್ಲಿ ಸೋಲಿಸಿದೆನೆಂದು ತನ್ನದೊಂದು ಶಿಲಾಲೇಖದಲ್ಲಿ ಹೇಳಿ ಕೊಂಡಿದ್ದಾನೆ (೧೦೫೪).

ಚೋಳರಸನ ಈ ಹಾವಳಿಯ ಸುದ್ದಿಯು ಕಲ್ಯಾಣಕ್ಕೆ ಬಂದು ಮುಟ್ಟಿತು. ಅದನ್ನು ಕೇಳಿ ಸೋಮೇಶ್ವರನ ಆನಂದವು ಅಳಿಯಿತು ಮತ್ತು ಸಿಟ್ಟು ಉಕ್ಕೇರಿತು. ತನ್ನ ಪ್ರಜೆಗಳನ್ನು ಈ ಪರಿಯಾಗಿ ಪೀಡಿಸಿದ ಕೋಪರಕೇಸರಿವರ್ಮನ ತಲೆಬುರಡಿಯನ್ನು ಉರುಳಿಸಿದ ಹೊರತು ತಾನು ಕಲ್ಯಾಣಕ್ಕೆ ತಿರುಗಿ ಬರಲಿಕ್ಕಿಲ್ಲೆಂದು ಪಂಥತೊಟ್ಟು, ತನ್ನ ದಂಡನ್ನು ಸಜ್ಜುಗೊಳಿಸಿಕೊಂಡು, ಸೋಮೇಶ್ವರನು ತಡಮಾಡದೆ ಚೋಳರನ್ನು ಹುಡುಕುತ್ತ ಹೊರಟನು.

ಸೋಮೇಶ್ವರನು ದಡಪಡಿಸಿ ಬರುವಷ್ಟರಲ್ಲಿ ಕೊಪ್ಪದ ಕಾಳೆಗದಲ್ಲಿ ಗೆದ್ದ ಕೋಪರಕೇಸರಿವರ್ಮ ರಾಜೇಂದ್ರದೇವನು ಬನವಾಸಿ ಪ್ರಾಂತದ ಊರುಗಳನ್ನು ಭಯವಿಲ್ಲದೆ ಸುಲಿದು, ತುಂಗಭದ್ರಾ ಹೊಳೆಯ ದಂಡೆ ಗುಂಟ ಬಡಗಲಿಗೆ ಹೋಗಿ ವರದಾನದಿಯನ್ನು ದಾಟಿ, ಬೆಳ್ವೊಲವನ್ನು ಹೊಕ್ಕು ಅಲ್ಲಿದ್ದ ಜೈನ ಬಸದಿಗಳನ್ನು ಸುಟ್ಟು, ಆ ಪ್ರಾಂತದ ಊರು ಗಳನ್ನು ನಿರ್ಭೀತನಾಗಿ ಸೂರೆಗೊಳ್ಳುತ್ತಿದ್ದನು. ಅಣ್ಣಿಗೇರಿ ನಾಡಿನಲ್ಲಿ ಎರಡೂ ದಂಡುಗಳ ನಡುವೆ ಒಂದು ಭಯಂಕರವಾದ ಕಾಳೆಗವಾಯಿತು. ಗೆಲವಿನಿಂದ ಕೊಬ್ಬೇರಿದ ಚೋಳರು ಸುರಿತ ಕನ್ನಡಿಗರೊಡನೆ ಹುರುಪಿನಿಂದ ಕಾದಿದರು. ಎರಡೂ ದಂಡಿಸವರ ಅಬ್ಬರ ಎದೆಗಾರಿಕೆ ಆದಟತನ ಹುರುಪು ಜಾಣತನಗಳನ್ನು ನೋಡಿ ಬೆರಗಾದ ಜಯಲಕ್ಷ್ಮಿಯು ಯಾರಿಗೆ ಮಾಲೆಯನ್ನು ಹಾಕಬೇಕೆಂದು ಆಲೋಚಿಸುಸುತ್ತಿರುವಾಗ ಸೋಮೇಶ್ವರನ ಮತ್ತು ಅವನ ೨ನೆಯ ಮಗನಾದ ವಿಕ್ರಮಾದಿತ್ಯನ ಅತುಲಸಾಹಸವು ಅವಳ ಕಣ್ಣಿಗೆ ಬಿತ್ತು. ರಾಜೇಂದ್ರದೇವನು ತನ್ನ ದಂಡಿನಿಂದ ತುಸು ಅಗಲಿದ್ದನ್ನು ಕಂಡು ಸೋಮೇಶ್ವರ ವಿಕ್ರಮಾದಿತ್ಯರು ಕೆಲ ಶೂರ ಸರದಾರರರೊಡನೆ ಅವನಿದ್ದಲ್ಲಿಗೆ ಹೋಗಿ ಕಾವಲುಗಾರರನ್ನು ತುಂಡರಿಸಿ, ಅವನನ್ನು ಬರ್ಚಿಯಿಂದ ಇರಿದು ಖಡ್ಗದಿಂದ ಅವನ ತಲೆಯನ್ನು ಹಾರಿಸಿದರು. ತಮ್ಮ ಅರಸನು ಮಡಿದುದನ್ನು ಕಂಡು, ಭಯಭ್ರಾಂತರಾದ ಚೋಳರು ಕಾಲಿಗೆ ಬುದ್ಧಿಹೇಳಿದರು. ಜಯಶಾಲಿಯಾದ ಚಾಳುಕ್ಯ ಸಾರ್ವಭೌಮನು ಅವರ ಪಾಳೆಯವನ್ನು ಸುಲಿದು, ನೂರಾರು ಆನೆಗಳನ್ನೂ, ಸಾವಿರಾರು ಕುದುರೆಗಳನ್ನೂ, ಚೋಳರಸನು ಇಷ್ಟು ದಿವಸ ಸುಲಿದ ಎಲ್ಲ ಸಂಪತ್ತನ್ನೂ ಹಿಡಿದುಕೊಂಡು, ಚೋಳರ ದಂಡನ್ನು ಬೆನ್ನಟ್ಟಿದನು.

ಈ ದೊಡ್ಡ ಕಾಳೆಗವು ಯಾವ ಊರ ಹತ್ತಿರದಲ್ಲಿ ಆಯಿತೆಂಬುದು ಇನ್ನೂ ಗೊತ್ತಾಗಿಲ್ಲ. ಅದು ಅಣ್ಣಿಗೇರಿ ನಾಡಿನಲ್ಲಿ ಆದ್ದರಿಂದ ಹೊಸ ಶೋಧವಾಗುವವರೆಗೆ ಅದಕ್ಕೆ **ಅಣ್ಣಿಗೇರಿ ಕಾಳೆಗ**ವೆಂದು ನಾವು ಕರಣಮಾಡಿದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ. ಈ ಕಾಳೆಗದ ಕಾಲವನ್ನು ಈವರೆಗೆ ಯಾರೂ ನಿಶ್ಚಯವಾಗಿ ಗೊತ್ತುಮಾಡಿಲ್ಲ.

ಧಾರವಾಡ ಜಿಲ್ಲಾ ಸೂಡಿಯ ಒಂದು ಶಿಲಾಲೇಖದಲ್ಲಿ ಸೋಮೇಶ್ವರನು ಚೋಳರನ್ನು ಸೋಲಿಸಿ, ತೆಂಕಣ ದೇಶಗಳನ್ನು ಗೆದ್ದು ತಿರುಗಿ ಬರುವಾಗ ಸಿಂದವಾಡಿ ನಾಡಿನಲ್ಲಿದ್ದ ಪುಳಿಯಪ್ಪಯ್ಯನ ವೀಡು ಎಂಬಲ್ಲಿ ಪಾಳೆಯ ಹಾಕಿಕೊಂಡಿದ್ದಾಗ ಶಕ ೯೮೧ ನೆಯ ವಿಕ್ರಮ ಸಂವತ್ಸರ ಮಾಘ ಶುದ್ಧ ಸೋಮವಾರ ದಿವಸ (೨೦ ಜನವರಿ ೧೦೬೦) ಸೂಡಿಯ ನಗರೇಶ್ವರ ದೇವಸ್ಥಾನದ ಅರ್ಚಕರಾದ ನಾಗರೇಶ್ವರಪಂಡಿತ ಸೋಮೇಶ್ವರಪಂಡಿತ ಎಂಬ ಇಬ್ಬರು ಬ್ರಾಹ್ಮಣರಿಗೆ ಕಿಸುಕಾಡು ೭೦ರಲ್ಲಿದ್ದ ಸಿವನೂರೆಂಬ ಗ್ರಾಮವನ್ನು ಚಂದ್ರಗ್ರಹಣ ನಿಮಿತ್ತವಾಗಿ ದಾನಕೊಟ್ಟನೆಂತಲೂ ರಾಯಿಸ ಸಾಹೇಬರು ಹೇಳುವಂತೆ ಸಿವನೂರು ಸವಣೂರಲ್ಲೆಂತಲೂ ಅದು ಸೂಡಿ ಪಟ್ಟದಕಲ್ಲುಗಳ ನೆರೆಯಲ್ಲಿ ಇರಬೇಕೆಂತಲೂ, ಕಿಸುಕಾಡು ೭೦, ಕೆಳವಾಡಿ ೩೦೦, ಬಾಗಡಿಗೆ ೭೦, ನರೆಯಂಗಲ್ ೧೨, ರಾಯಚೂರು ಪ್ರಾಂತ ಇವುಗಳೊಳಗೆ ಯಾವದಾದರೊಂದರಲ್ಲಿ ಇರಬೇಕಾಗಿತ್ತೆಂತಲೂ, ಮೇಲೆ ಬರೆದ ಅಣ್ಣಿಗೇರಿ ಕಾಳೆಗವು ೧೦೬೦ ನೆಯ ಜನವರಿಗಿಂತ ಮೊದಲೇ ಆಗಿರಬೇಕೆಂತಲೂ ಡಾ॥ ಫ್ಲೀಟರು ಬರೆಯುತ್ತಾರೆ*. ಆದರೆ ಈ ಕಾಳೆಗವು ನಾಲ್ಕಯ್ದು ವರ್ಷ ಇದಕ್ಕೂ ಮೊದಲೇ ಆಯಿತೆಂದು ಬೆಳಗಾಮೆಯ ಒಂದು ಶಾಸನವು ಹೇಳುವುದರಿಂದ ಅದರ ಕೆಲವು ಸಾಲುಗಳನ್ನು ಕೆಳಗೆ ಕೊಡುತ್ತೇವೆ:—

೧೨. ....ಕ್ಷಣದಿಂ ಮಾಳವಮೇಳುಮೆಯ್ದೆ ವಿಳಯಕ್ಕೆಯ್ದಿತ್ತು ಸಂದಿರ್ದ ಕೊಂಕಣವೇಳುಂ ಮಲೆಯೇ

೧೩. ಳುಮಂಜಿ ಬೆಸಕೆಯ್ದತ್ತೀವದಾಂತಾಹವಾಂಗಣದೊಳು ಚೋಳಿಕನಮ್ಮ ಸತ್ತಸಖಿಳ ದ್ವೀಪಾವನೀಪಾಳಕಾಗ್ರಣಿಗಳು ಕಪ್ಪಮ ನಿತ್ತರೇ (ನ) ದಟನೋ ತ್ರೈಳೋ

೧೪. ಕ್ಯಮಲ್ಲಾಧಿಪಂ॥ ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತ ಶ್ರೀಮದ ನಾದಿ ಪಟ್ಟಣಂ ರಾಜಧಾನಿ ಬಳ್ಳಿಗ್ರಾಮೆಯ ಪಟ್ಟಣ ಮಧ್ಯದೊಳು ಶ್ರೀಮದು

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೪೧.

೧೫. ವಡ್ಡವ್ಯವಹಾರಿ ಹಾಲಿಕಬ್ಬೆಯ ಸೋವಿಸೆಟ್ಟಿ ಸಕವರ್ಷದ ೯೭೬ನೆಯ ಜಯ ಸಂವತ್ಸರದ ವೈಶಾಖ ಬಹುಳ ಅಕ್ಷಯ್ಯ ತ್ರಿತೀಯದ ಅಮವಾಸೆ ಆದಿವಾ

೧೬. ರ ನಿಮಿತ್ತಂ ಧರ್ಮ್ಮಚಿತ್ತರಾಗಿಲ್ಲಿಂಗಪ್ರತಿಷ್ಠೆಯಂಮಾಡಿ ಯಭಿನವಸೋಮೇಶ್ವರದೇವರೆಂದು ಪೆಸರನಿಟ್ಟಾ ದೇವರ ಸ್ನಾನನಿವೇದ್ಯ ಕ್ಕಂ ನಂದಾದೀವಿಗೆಗವಲ್ಲಿಯಾಚಾರ್ಯ್ಯ

೧೭. ರ ಗ್ರಾಸಕ್ಕವೆಂದು ಬಿಟ್ಟ ತಳವ್ರಿತ್ತಿ..............*.

ಈ ಶಿಲಾಲೇಖವು ೧೦೫೪ ನೆಯ ಇಸ್ವಿಯ ಎಪ್ರಿಲ ಅಥವಾ ಮೇ ತಿಂಗಳಲ್ಲಿ ಕೊರೆಯಿಸಲ್ಪಟ್ಟಿತಷ್ಟೇ. ಇದರಲ್ಲಿ ಚೋಳಿಕನು ಆಹವಾಂಗಣ ದಲ್ಲಿ ಅಳಿದು ಸತ್ತನೆಂದು ಸ್ಪಷ್ಟವಾಗಿ ಬರೆದಿರುವುದರಿಂದ ಅಣ್ಣಿಗೇರಿ ಕಾಳಗವು ಅದೇ ಇಸ್ವಿಯ ಫೆಬ್ರುವರಿ ಅಥವಾ ಮಾರ್ಚದಲ್ಲಿ ಆಯಿ ತೆಂತಲೂ, ರಾಜನಿಷ್ಠನಾದ ಸೋಮಸೆಟ್ಟಿಯು ಸೋಮೇಶ್ವರ ಸಾರ್ವ ಭೌಮನ ಸನ್ಮಾನಾರ್ಥವಾಗಿ ಅಭಿನವಸೋಮೇಶ್ವರದೇವರ ಪ್ರತಿಷ್ಠಾ ಪನೆಯನ್ನು ಮಾಡಿಸಿ, ಅವನ ದಿಗ್ವಿಜಯವನ್ನು ಶಾಸನದಲ್ಲಿ ಹೊಗಳಿರು ತ್ತಾನೆಂದೂ ಊಹಿಸಲಿಕ್ಕೆ ಏನೂ ಅಡ್ಡಿ ತೋರುವುದಿಲ್ಲ.

ಅಣ್ಣಿಗೇರಿಯ ಕಾಳಗದಲ್ಲಿ ಸೋತು ಓಡುತ್ತಿದ್ದ ಚೋಳರ ಪಡೆ ಯನ್ನು ಚಾಳುಕ್ಯರ ದಂಡು ಕಂಚಿಯ ವರೆಗೆ ಬೆನ್ನಟ್ಟಿತೆಂತಲೂ, ಸೋಮೇಶ್ವರನು ಕಂಚಿಯನ್ನು ಮುತ್ತಿ ಹಿಡಕೊಂಡು, ಅಲ್ಲಿಯ ಅರಸನನ್ನು ಓಡಿಸಿದನೆಂತಲೂ ಭಿಲ್ಹಣ ಕವಿಯು ತನ್ನ ವಿಕ್ರಮಾಂಕ ದೇವ ಚರಿತದಲ್ಲಿ ಬರೆಯುತ್ತಾನೆ. ಬಳಿಕ ಸೋಮೇಶ್ವರನು ತನ್ನ ವೀರ ಮಗನಾದ ವಿಕ್ರಮಾದಿತ್ಯನನ್ನು ಬನವಾಸಿ ಗಂಗವಾಡಿ ಪ್ರಾಂತಗಳ ಮಹಾಮಂಡಲೇಶ್ವರನಾಗಿ ನೇಮಿಸಿ, ಚೋಳರನ್ನು ದಂಡಿಸುವ ಕೆಲಸ ವನ್ನು ಅವನಿಗೆ ಒಪ್ಪಿಸಿ, ತಾನು ತನ್ನ ಹೊಸ ರಾಜಧಾನಿಗೆ ತಿರುಗಿ ಹೋಗಿ, ಅದನ್ನು ಸಿಂಗರಿಸುವುದರಲ್ಲಿ ಕಾಲಕಳೆದನೆಂದು ಊಹಿಸ ಬಹುದು. ಮುಂದೆ ತುಸು ಕಾಲದಲ್ಲೇ ಕಲ್ಯಾಣವು ಅತಿಸುಂದರ

* ಕರ್ನಾಟಕ ಶಾಸನ ಸಂಗ್ರಹ, ಸಂ. ೭, ಭಾ. ೧, ಕನ್ನಡ ಪುಟ ೨೧೮.

ಪಟ್ಟಣವಾಯಿತೆಂದು ತೋರುತ್ತದೆ. ಏಕೆಂದರೆ ವಿಜ್ಞಾನೇಶ್ವರಪಂಡಿತನು ಕಲ್ಯಾಣವನ್ನು ಕೆಳಗೆ ಬರೆದಂತೆ ತನ್ನ ಮಿತಾಕ್ಷರವೆಂಬ ಗ್ರಂಥದ ಅಂತ್ಯದಲ್ಲಿ ವರ್ಣಿಸಿರುತ್ತಾನೆ:—

"ಭೂಮಂಡಲದಲ್ಲಿ ಕಲ್ಯಾಣದಂತಹ ಪೊಳಲು ಹಿಂದೆ ಯಾವುದೂ ಆಗಿಲ್ಲ; ಈಗ ಯಾವುದೂ ಇಲ್ಲ; ಮುಂದೆ ಯಾವುದೂ ಆಗುವಂತಿಲ್ಲ; ಮತ್ತು ವಿಕ್ರಮನಂತಹ ನೆಲದೆರೆಯನನ್ನು ಯಾರೂ ಕಂಡಿಲ್ಲ ಮತ್ತು ಕೇಳಿಲ್ಲ. ಮತ್ತೇನು? ವಿಜ್ಞಾನೇಶ್ವರಪಂಡಿತನನ್ನು ಹೋಲುವವರು ಯಾರೂ ಇಲ್ಲ. ಕಲ್ಪಲತೆ(ಬಯಕೆಬಳ್ಳಿ)ಯಂತಿರುವ ಈ ತ್ರಯವು ಕಲ್ಪಾಂತ್ಯದ ವರೆಗೆ ಸ್ಥಿರವಾಗಿ ಉಳಿಯಲಿ"*.

ಅತ್ತ ವೀರ ವಿಕ್ರಮಾದಿತ್ಯನು ಚೋಳರಾಜ್ಯದ ಮತ್ತೊಂದು ಮುಖ್ಯ ಪಟ್ಟಣವಾದ ಗಂಗೈಕೊಂಡ ಚೋಳಪುರ(ಗಂಗಾಪುರಿ)ವನ್ನು ಹಿಡಿದುಕೊಂಡುದರಿಂದ ದಿಕ್ಕೆಟ್ಟ ಚೋಳರಸನು ಶರಣುಬಂದು ಒಡಂಬಡಿಕೆಯನ್ನು ಮಾಡಿಕೊಂಡನು. ಚೋಳರಸನು ಈ ಒಪ್ಪಂದದಿಂದ ಗಂಗವಾಡಿಗೆ ಹೊಂದಿದ ತನ್ನ ರಾಜ್ಯದ ಭಾಗವನ್ನು ಬಿಟ್ಟುಕೊಟ್ಟುದಲ್ಲದೆ, ವಾರ್ಷಿಕ ಪೊಗದಿಯನ್ನು ಕೊಡಲೊಡಂಬಟ್ಟನು. ಬಳಿಕ ವಿಕ್ರಮಾದಿತ್ಯನು ಅಲ್ಲಿಂದ ಹೊರಟು ಕೇರಳರಾಜ್ಯವನ್ನೊಳನುಗ್ಗಿದನು. ಅಲ್ಲಿಯ ಅರಸು ಕಾದಿ ಸತ್ತುದರಿಂದ ಅವನ ಮಗನು ಶರಣುಬಂದು ಕಪ್ಪವನ್ನು ಕೊಟ್ಟು, ಮಾಂಡಲಿಕನಾಗಿ ತನ್ನ ತಂದೆಯ ರಾಜ್ಯವನ್ನು ಆಳಲಿಕ್ಕೆ ಸಮ್ಮತಿಸಿದ್ದರಿಂದ ಜಯಶಾಲಿಯಾದ ವಿಕ್ರಮಾರ್ಕನು ಜಯಭೇರಿಯನ್ನು ಹೊಡಿಸುತ್ತ ಕಲ್ಯಾಣಕ್ಕೆ ಹೋಗಿ, ತಾನು ತಂದ ಕಪ್ಪಸುಲಿಗೆಯನ್ನು ತನ್ನ ತಂದೆಗೆ ಒಪ್ಪಿಸಿದನು (೧೦೬೦?). ತನ್ನ ಎಲ್ಲ ಶತ್ರುಗಳು ಶರಣಾಗತರಾದರೆಂದು ತಂದೆ ಮಕ್ಕಳು ಸಂತೋಷಪಡು

---

* ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣಕಲ್ಪಂ ಪುರಂ।
ನೋ ದೃಷ್ಟಃ ಶ್ರುತ ಏವ ವಾ ಕ್ಷಿತಿಪತಿಃ ಶ್ರೀ ವಿಕ್ರಮಾರ್ಕೋಪಮಃ ॥
ವಿಜ್ಞಾನೇಶ್ವರಪಂಡಿತೋ ನ ಭಜತೆ ಕಿಂಚಾನ್ಯದನ್ಯೋಪಮಃ।
ಆಕಲ್ಪಂ ಸ್ಥಿರಮಸ್ತು ಕಲ್ಪಲತಿಕಾಕಲ್ಪಂ ತದೇತತ್ತ್ರಯಂ ॥

ವಿಜ್ಞಾನೇಶ್ವರನ ಮಿತಾಕ್ಷರ.

ವಷ್ಟರಲ್ಲಿ ಧಾರಾದ ಅರಸನಾದ ಭೋಜನ ರಾಯಭಾರಿಯು ಬಂದು, ಗುರ್ಜರ ಅರಸನು ತನ್ನ ರಾಜ್ಯದ ಮೇಲೆ ದಂಡೆತ್ತಿಬಂದುದರಿಂದ ತನಗೆ ದಂಡಿನ ಸಾಹಾಯಮಾಡಬೇಕೆಂದು ಭೋಜರಾಜನು ಬೇಡಿಕೊಳ್ಳುತ್ತಾನೆಂದು ಅರಿಕೆಮಾಡಿದನು.

ವಿಕ್ರಮಾರ್ಕನ ಶೌರ್ಯ ಧೈರ್ಯ ಸಾಹಸ ಬುದ್ಧಿಚಾತುರ್ಯ ಮುಂತಾದ ಗುಣಗಳು ಈ ಸಮಯಕ್ಕೆ ಸೋಮೇಶ್ವರನಿಗೆ ಗೊತ್ತಾದ್ದರಿಂದ ಅವನು ತನ್ನ ಹಿರಿಮಗನನ್ನು ಬಿಟ್ಟು, ತನ್ನ ೨ನೆಯ ಮಗನಾದ ವಿಕ್ರಮಾದಿತ್ಯನನ್ನೇ ಯುವರಾಜನಾಗಿ ಮಾಡಬೇಕೆಂದು ಬಯಸಿದನೆಂತಲೂ, ವಿಕ್ರಮಾರ್ಕನು ಅದಕ್ಕೆ ಒಡಂಬಡಲಿಲ್ಲೆಂತಲೂ ಬಿಲ್ಹಣನು ತನ್ನ ವಿಕ್ರಮಾರ್ಕ ಚರಿತ್ರೆಯಲ್ಲಿ ಬರೆಯುತ್ತಾನೆ. ಅದು ಹೇಗೇ ಇರಲಿ. ಈ ಕಾಲಕ್ಕೆ ಸೋಮೇಶ್ವರನು ತನ್ನ ಚೊಚ್ಚಲು ಮಗನಾದ ಸೋಮೇಶ್ವರನನ್ನು ಯುವರಾಜನಾಗಿ ಮಾಡಿ, ಭೋಜನಿಗೆ ಸಾಹಾಯ ಮಾಡಲಿಕ್ಕೆ ವಿಕ್ರಮಾದಿತ್ಯನನ್ನು ಕಳುಹಿ, ತಾನು ತನ್ನ ರಾಜ್ಯದಲ್ಲಿ ಸುಖಸಂಚಾರಮಾಡಲಿಕ್ಕೆ ಹೊರಟನು (೧೦೬೧?).

ಭೋಜನ ರಾಯಭಾರಿಯನ್ನು ಸಂಗಡ ಕರೆಕೊಂಡು ವಿಕ್ರಮಾದಿತ್ಯನು ಮಾಳವೆಯ ದಾರಿಯನ್ನು ಹಿಡಿದನು. ಅವನು ಮಾಳವೆಗೆ ಹೋಗಿ ಮುಟ್ಟುವಷ್ಟರಲ್ಲಿ ಭೋಜನ ಶತ್ರುಗಳು ಭೋಜನ ಭದ್ರಕೋಟೆಯಾದ ಚಕ್ರಕೋಟವನ್ನು ಹಿಡಿದುಕೊಂಡಿದ್ದರಿಂದ ಅವನು ಆ ಕೋಟೆಯನ್ನು ಮುತ್ತಿ ತನ್ನ ಕಯ್ವಶಮಾಡಿಕೊಂಡು, ಶತ್ರುಗಳನ್ನು ಬೆನ್ನಟ್ಟಿ, ಸಿಕ್ಕಲ್ಲಿ ಅವರನ್ನು ಮುರಿಬಡಿದು, ಮಾಳವೆಯಿಂದ ಓಡಿಸಿಬಿಟ್ಟನು. ಕೃತಜ್ಞನಾದ ಭೋಜನು ಅವನಿಗೆ ಹೇರಳ ಕಪ್ಪನ್ನು ಕೊಟ್ಟುದಲ್ಲದೆ, ತನ್ನಲ್ಲಿದ್ದ ಅಲಭ್ಯ ವಸ್ತುಗಳನ್ನು ಕಾಣಿಕೆಯಾಗಿ ಅರ್ಪಿಸಿದನು. ಸಂತುಷ್ಟನಾದ ವಿಕ್ರಮಾದಿತ್ಯನು ಅಲ್ಲಿಂದ ತಿರುಗಿ, ವಿಜಯೋತ್ಸುಕತೆಯಿಂದ ಗೋದಾವರಿ ದಂಡೆಗುಂಟ ಹೊರಟು, ದಾರಿಯಲ್ಲಿದ್ದ ಸಣ್ಣ ಪುಟ್ಟ ಅರಸರಿಂದ ಕಪ್ಪುಗಾಣಿಕೆಯನ್ನು ತೆಗೆದುಕೊಂಡು, ಪೂರ್ವಚಾಳುಕ್ಯರ ರಾಜಧಾನಿಯಾದ ವೆಂಗಿಗೆ ಬಂದನು. ಅಲ್ಲಿಯ ಅರಸನು ಅನುಕೂಲನಾದ್ದರಿಂದ ಅವನೊಡನೆ ಸ್ನೇಹದ ಒಡಂಬಡಿಕೆಯನ್ನು ಮಾಡಿಕೊಂಡು,

ತೆಂಕಣ ಕರ್ನಾಟಕದಲ್ಲಿ ಸಂಚಾರಮಾಡುತ್ತಿದ್ದ ತನ್ನ ತಂದೆಯನ್ನು ಕಾಣಲಿಕ್ಕೆ ಹೊರಟನು. ಹಾದಿಯಲ್ಲಿ ಕೃಷ್ಣಾನದಿಯ ದಂಡೆಯ ಮೇಲೆ ಪಾಳೆಯವನ್ನು ಹಾಕಿಕೊಂಡಿದ್ದಾಗ, ಅವನ ತಂದೆಯಾದ ಸೋಮೇಶ್ವರನು ಕೆಟ್ಟ ಜ್ವರದಿಂದ ಕುರುವತ್ತಿಯಲ್ಲಿ ಸತ್ತನೆಂಬ ಸುದ್ದಿ ಬಂತು. ತಂದೆಯ ಮರಣವಾರ್ತೆಯನ್ನು ಕೇಳಿ, ಅವನಿಗೆ ಬಹಳ ದುಃಖವಾಯಿತು. ಆದ್ದರಿಂದ ಕೆಲದಿವಸ ಅಲ್ಲೇ ನಿಂತು, ತನ್ನ ಅಣ್ಣತಮ್ಮಂದಿರಿದ್ದ ಬಳ್ಳಿಗಾವೆಯ ಹಾದಿ ಹಿಡಿದನು (೧೦೬೮).

ಸೋಮೇಶ್ವರನು ತನ್ನ ಹಳೆ ನೆಲೆವೀಡಿನಲ್ಲಿದ್ದಾಗ ಅವನ ದೇಹದಲ್ಲಿ ಕೆಟ್ಟ ಜ್ವರ ಹುಟ್ಟಿದವು. ಸಾಮ್ರಾಜ್ಯದ ಎಲ್ಲ ಭಾಗಗಳ ವೈದ್ಯರು ಬಂದು ದೂರದೂರಿನ ಸ್ಥಳಗಳಿಂದ ಅಪರೂಪವಾದ ವನಸ್ಪತಿಗಳನ್ನು ತರಿಸಿ ಅವುಗಳ ಕಷಾಯಗಳನ್ನು ಮಾಡಿಸಿ, ಆ ಕಷಾಯದೊಳಗೆ ತಮ್ಮಲ್ಲಿದ್ದ ಅಮೌಲ್ಯವಾದ ಮಾತ್ರಾಭಸ್ಮಗಳನ್ನು ಹಾಕಿ ಉರಿಯನ್ನು ಕಡಮೆ ಮಾಡಲಿಕ್ಕೆ ವಿಶ್ವಪ್ರಯತ್ನಮಾಡಿದ್ದು ನಿಷ್ಫಲರಾದ್ದರಿಂದ, ಸೋಮೇಶ್ವರನು ತಾನು ಉಳಿಯುವುದಿಲ್ಲೆಂದು ಮನಗಂಡು, ತುಂಗಭದ್ರಾ ತೀರದಲ್ಲಿದ್ದ ಕುರುವತ್ತಿಗೆ ಹೋಗಿ, ಸ್ನಾನ ಸಂಕಲ್ಪಗಳನ್ನು ಮಾಡಿ, ಯೋಗ್ಯರಾದ ಬ್ರಾಹ್ಮಣರಿಗೆ ನಾನಾತರದ ದಾನಗಳನ್ನು ಕೊಟ್ಟು, ಹೊಳೆಯನ್ನು ಹೊಕ್ಕು ಕುತ್ತಿಗೆ ಮಟ್ಟ ನೀರಿನಲ್ಲಿ ನಿಂತು, ತನ್ನ ಉಪಾಸನಾದೇವತೆಯಾದ ಮಹೇಶ್ವರನನ್ನು ಅನನ್ಯಭಕ್ತಿಯಿಂದ ಭಜಿಸಿ, ಜಲಸಮಾಧಿಯನ್ನು ಹೊಂದಿದನು (೩೦ ಮಾರ್ಚ ೧೦೬೮)*. ಇವನು ಸದ್ಗುಣಿಯೂ ಸದಾಚಾರಿಯೂ ಎಷ್ಟೋ ಯಜ್ಞಗಳನ್ನು ಮಾಡಿದವನೂ ಪಂಡಿತರಿಗೆ ಉದಾರಾಶ್ರಯ ಕೊಡುವವನೂ ಆಗಿದ್ದನೆಂದು ಬಿಲ್ಹಣ ಕವಿಯು ವರ್ಣಿಸುತ್ತಾನೆ.

---

* ....ಗಗನ ನವಾಂಕ ಸಂಖ್ಯೆ ಸಕ ಕಾಳದೊಳಾಗಿರೆ ಕೀಳಕಾಬ್ದಕಂ ನೆಗಳ್ತದೀಯ ಚೈತ್ರ ಬಹುಳಾಷ್ಟಮಿಯೊಳ್ ರವಿವಾರದೊಳ್ ಜಸಂ ನಿಗೆ ಕುಱುವರ್ತಿಯೊಳ್ಳರಮಯೊಗದೆ ತುಂ....ದ್ರೆಯೊಳ್ಜಗದಧಿಪಂ ತ್ರಿವಿಷ್ಟಪನೇಱಿದನಾಹವಮಲ್ಲವಲ್ಲಭಂ ||

ಕರ್ನಾಟಕ ಶಾಸನ ಸಂಗ್ರಹ, ಸಂ. ೭, ಕನ್ನಡ ಪುಟ ೨೪೬.

ಸೋಮೇಶ್ವರನು ಬಹುಪತ್ನೀಕನಾಗಿದ್ದನು. ಇವನಿಗೆ ಅಯ್ದು ಮಂದಿ ರಾಣಿಯರಿದ್ದರು. ೧ನೆಯ ಹೆಂಡತಿಯು ಬಾಚಲದೇವಿ ಯಾಗಿದ್ದಳು. ಇವಳೇ ೧. ಸೋಮೇಶ್ವರ, ೨. ವಿಕ್ರಮಾದಿತ್ಯ, ೩. ಜಯ ಸಿಂಹ ಇವರ ತಾಯಿಯಾಗಿದ್ದಳೆಂದು ಡಾ|| ಫ್ಲೀಟರು ಬರೆಯುತ್ತಾರೆ. ಎರಡನೆಯ ಹೆಂಡತಿಯಾದ ಚಂದಲಕಬ್ಬೆ(ಚಂದ್ರಿಕಾದೇವಿ)ಗೂ, ೩ನೆಯ ಹೆಂಡತಿಯಾದ ಮೈಲಾಲದೇವಿಗೂ, ೪ನೆಯ ಹೆಂಡತಿಯಾದ ಹೊಯ್ಸಳ ದೇವಿಗೂ ಪಿರಿಯರಸಿ ಎಂಬ ಬಿರುದಿತ್ತು. ಅಯ್ದನೆಯ ಹೆಂಡತಿಯು ಕೇತಲದೇವಿಯಾಗಿದ್ದಳು. ಇವಳ ಮಗನಾದ ಕೀರ್ತಿವರ್ಮನು ಗೋವೈದ್ಯ ಎಂಬ ಗ್ರಂಥವನ್ನು ಬರೆದನು (೧೧೨೫). ಈ ಅಯ್ದು ಮಂದಿ ರಾಣಿಯರು ಯಾವ ಯಾವ ಮನೆತನದವರಾಗಿದ್ದರೆಂಬುದಾಗಲಿ, ಸೋಮೇಶ್ವರನ ೪ನೆಯ ಮಗನಾದ ವಿಷ್ಣುವರ್ಧನ ವಿಜಯಾದಿತ್ಯನು ಯಾವ ಹೆಂಡತಿಯ ಮಗನಾಗಿದ್ದನೆಂಬುದಾಗಲಿ ಇನ್ನೂ ನಿಶ್ಚಯವಾಗಿ ಗೊತ್ತಾಗಿಲ್ಲ. ಇವರೊಳಗೆ ಮೈಲಾಲದೇವಿ ಕೇತಲದೇವಿ ಹೊಯ್ಸಳ ದೇವಿಯರು ಮಂಡಲೇಶ್ವರಿಯರಾಗಿ ಕೆಲ ನಾಡನ್ನು ಆಳುತ್ತಿದ್ದರೆಂಬು ದೊಂದು ಮಹತ್ವದ ಸಂಗತಿಯಾಗಿರುತ್ತದೆ. ವಿಜಾಪುರ ಜಿಲ್ಲಾ ದೇವೂರ ಶಾಸನದಲ್ಲಿ "ಕಂಚಿಪುರವರೇಶ್ವರ ತ್ರೈಲೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾನಡಿ ಜಯಸಿಂಹದೇವ" ಎಂದು ಜಯಸಿಂಹನನ್ನು ವರ್ಣಿ ಸಿದ್ದರಿಂದ ಅವನ ತಾಯಿಯಾದ ಬಾಚಲದೇವಿಯು ಪಲ್ಲವ ಮನೆತನದವ ಳಾಗಿದ್ದಳೆಂದು ಡಾ|| ಫ್ಲೀಟರು ಊಹಿಸುತ್ತಾರೆ*.

ಕೆಳಗೆ ಬರೆದ ಸಾಮಂತ ಮಹಾಮಂಡಲೇಶ್ವರರು ೧ನೆಯ ಸೋಮೇಶ್ವರನ ಕಯ್ಕೆಳಗಿನವರಾಗಿ ಬೇರೆ ಬೇರೆ ಭಾಗಗಳಲ್ಲಿ ಆಳುತ್ತಿದ್ದ ರೆಂದು ಶಾಸನಗಳಿಂದ ತಿಳಿದು ಬರುತ್ತದೆ:—

೧. ಕದಂಬ ಮನೆತನದ ೨ನೆಯ ಮಯೂರವರ್ಮನು ಪಾನುಂಗಲ್ ೫೦೦ನ್ನು ಆಳುತ್ತಿದ್ದನು (೧೦೩೫–೧೦೪೫).

೨. ಸಿಂಗಣದೇವರಸನು ಕಿಸುಕಾಡು, ಬನವಾಸಿ, ಸಂತಳಿಗೆ ನಾಡುಗಳನ್ನು ಆಳುತ್ತಿದ್ದನು (೧೦೪೫).

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೪೦, ಟಿಪ್ಪಣಿ ೩.

೩. ಚಾವುಂಡರಾಯನು ಬನವಾಸಿ ೧೨,೦೦೦ವನ್ನು ಆಳುತ್ತಿದ್ದನು (೧೦೪೬–೧೦೬೩).

೪. ಸಿಲಾಹಾರ ಶಾಖೆಯ ಜೀಮೂತವಾಹನ ಮನೆತನದ ಕಲಿಯ ಮರಸನು ಬಾಸವೂರು ೧೪೦ನ್ನು ಆಳುತ್ತಿದ್ದನು (೧೦೪೬).

೫. ಹೊಯ್ಸಳ ಮನೆತನದ ವಿನಯಾದಿತ್ಯನು ಕೊಂಕಣ ಮತ್ತು ಘಡದವಯಲ್ ಪ್ರಾಂತಗಳ ನಡುವಿರುವ ಪ್ರದೇಶವನ್ನೂ, ತಲಕಾಡು ಸಾವಿಮಲೆ ಪ್ರಾಂತಗಳನ್ನೂ ಆಳುತ್ತಿದ್ದನು (೧೦೪೮).

೬. ರಟ್ಟ ಮನೆತನದ ೧ನೆಯ ಕಾರ್ತವೀರ್ಯ ಅಂಕ ಎಂಬವ ರಿಬ್ಬರು ಕುಂಡಿಪ್ರಾಂತವನ್ನು ತಮ್ಮ ರಾಜಧಾನಿಯಾದ ಸುಗಂಧವರ್ತಿ (ಸವದತ್ತಿ)ಯಲ್ಲಿದ್ದು ಆಳುತ್ತಿದ್ದರು (೧೦೪೯).

೭. ಗೋವೆ ಕದಂಬ ಮನೆತನದ ೧ನೆಯ ಜಯಕೇಶಿಯು ತನ್ನ ಆನುವಂಶಿಕ ಭಾಗವಾದ ಕೊಂಕಣವನ್ನು ಆಳುತ್ತಿದ್ದನು (೧೦೫೩).

೮. ಕಾರ್ತವೀರ್ಯ ಅಥವಾ ಅಹಿಹಯಕುಲದ ಮಾಹಿಷ್ಮತಿಯ ಒಡೆಯನೆಂಬ ಬಿರುದುಳ್ಳ ರೇವರಸನು ನಿಜಾಮು ಸಂಸ್ಥಾನ ಕೆಂಭಾವಿಯ ನೆರೆನಾಡನ್ನು ಆಳುತ್ತಿದ್ದನು (೧೦೫೫).

೯. ಹಾನುಗಲ್ ಕದಂಬ ಮನೆತನದ ಸೋಯಿಮರಸನು ಪಾನುಂಗಲ್ ೫೦೦ನ್ನು ಆಳುತ್ತಿದ್ದನು (೧೦೬೮).

೧೦. ಹಾನುಗಲ್ ಕದಂಬ ಮನೆತನದ ೨ನೆಯ ಕೀರ್ತಿವರ್ಮನು ಬನವಾಸಿ ೧೨,೦೦೦ನ್ನು ಆಳುತ್ತಿದ್ದನು (೧೦೬೮).

೧೧. ಶಿಲಾಹಾರ ಮನೆತನದ ಮಾರಸಿಂಹನು ಕಿಲಿಗಿಲ ದುರ್ಗದಲ್ಲಿದ್ದು ಕರಾಡ ಪ್ರಾಂತವನ್ನಾಳುತ್ತಿದ್ದನು (೧೦೫೯). ಇವನು ತನ್ನ ತಾಮ್ರಶಾಸನದಲ್ಲಿ ತನ್ನ ಅಧಿರಾಜನನ್ನು ಹೇಳಿಲ್ಲ.

೧೨. ಸೋಮೇಶ್ವರನ ಅಕ್ಕಿಯಾದ ಅಕ್ಕಾದೇವಿಯು ಗೋಕಾಗೆ, ಕಿಸುಕಾಡು, ತೊರೆಗೆರೆ, ಮಾಸವಾಡಿ ಪ್ರಾಂತಗಳನ್ನು ಆಳುತ್ತಿದ್ದಳು (೧೦೫೦).

೧೩. ಸೋಮೇಶ್ವರನ ರಾಣಿಯಾದ ಮೈಲಾಲದೇವಿಯು ಬನವಾಸಿ ೧೨,೦೦೦ನ್ನು ಆಳುತ್ತಿದ್ದಳು (೧೦೫೪).

೧೪. ರಾಣಿಯಾದ ಕೇತಲದೇವಿಯು ವಿಜಾಪುರ ಜಿಲ್ಲಾ ಪೊನ್ನವಾಡ (ಹೊನವಾಡ) ಅಗ್ರಹಾರವನ್ನು **ತ್ರಿಭೋಗ್ಯಾಂತರಸಿದ್ಧಿ** (ಉತ್ಪನ್ನದೊಳಗೆ ೩ ಭಾಗ ಮಾಡಿ ಒಂದು ಭಾಗ ದೇವರಿಗೂ, ೧ ಭಾಗ ಬ್ರಾಹ್ಮಣರಿಗೂ, ೧ ಭಾಗ ಅರಸನಿಗೂ ಕೊಡುವ ಪದ್ಧತಿ)ಯಿಂದ ಆಳುತ್ತಿದ್ದಳು (೧೦೫೪).

೧೫. ಸೋಮೇಶ್ವರನ ಹಿರಿಮಗನಾದ ೨ನೆಯ ಸೋಮೇಶ್ವರನು ಬೆಳ್ವೊಳ ಪುರಿಗಿರಿ ನಾಡಿನ ಮಹಾಮಂಡಲೇಶ್ವರನಾಗಿದ್ದನು (೧೦೫೩).

೧೬. ಸೋಮೇಶ್ವರನ ೨ನೆಯ ಮಗನಾದ ವಿಕ್ರಮಾದಿತ್ಯನು ಗಂಗವಾಡಿ ೯೬,೦೦೦ವನ್ನೂ, ಬನವಾಸಿ ೧೨,೦೦೦ವನ್ನೂ ಆಳುತ್ತಿದ್ದನು (೧೦೫೬). ಹಾನುಗಲ್ಲ ಕದಂಬ ಮನೆತನದ ಹರಿಕೇಸರಿ ಎಂಬವನು ಇವನ ಕಯ್ಕೆಳಗೆ ಬನವಾಸಿ ಪ್ರಾಂತವನ್ನು ಆಳುತ್ತಿದ್ದನು.

೧೭. ಸೋಮೇಶ್ವರನ ೩ನೆಯ ಮಗನಾದ ೩ನೆಯ ಜಯಸಿಂಹನು ವಿಜಾಪುರದ ಸುತ್ತಲಿದ್ದ ತರ್ದವಾಡಿ ಪ್ರದೇಶವನ್ನು ಆಳುತ್ತಿದ್ದನು (೧೦೬೪).

೧೮. ಸೋಮೇಶ್ವರನ ೪ನೆಯ ಮಗನಾದ ವಿಷ್ಣುವರ್ಧನ ವಿಜಯಾದಿತ್ಯನು ನೊಳಂಬವಾಡಿ ೩೨,೦೦೦ವನ್ನು ಆಳುತ್ತಿದ್ದನು (೧೦೬೪–೧೦೬೬).

೧೯. ಸೋಮೇಶ್ವರನ ೪ನೆಯ ರಾಣಿಯಾದ ಹೊಯ್ಸಳ ದೇವಿಯು ಕಲ್ಯಾಣದಲ್ಲಿ ಆಳುತ್ತಿದ್ದಳು (೧೦೫೩). ಈಕೆಯು ಹೊಯ್ಸಳ ವಿನಯಾದಿತ್ಯನ ಮಗಳೂ ಎರೆಯಂಗನ ತಂಗಿಯೂ ಆಗಿರಬಹುದು.

೨೦. ಕದಂಬ ಮನೆತನದ ಲಕ್ಷ್ಮರಸನು ಬನವಾಸಿ ೧೨,೦೦೦ ವನ್ನು ಆಳುತ್ತಿದ್ದನು (೧೦೬೭).

೨೧. ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿದೇವರು ಕೊಂಗುಳಿ ೫೦೦ನ್ನೂ, ಕದಂಬಳಿಗೆ ೧,೦೦೦ವನ್ನೂ, ಬಲ್ಲಕುಂದ

೩೦೦ನ್ನೂ, ಕಣಿಯಕಲ್ಮನ್ನೂರನ್ನೂ, ಕುಡಿಯೂರವಿ ೭೦ನ್ನೂ, ಕರಿವಿಡಿ ೩೦ನ್ನೂ ಆಳುತ್ತಿದ್ದನು (೧೦೪೭). ಇವನು ಅರಸುಮಗನಾದ ಜಯಸಿಂಹನೇ ಆಗಿರಬಹುದು.

೨೨. ಪಲ್ಲವ ಮನೆತನದ ನಾರಸಿಂಗದೇವನು ಮೇಲಿನ ಪ್ರಾಂತಗಳನ್ನೇ ಆಳುತ್ತಿದ್ದನು (೧೦೪೯). ಇವನ ತರುವಾಯ ಇವನ ಮಗನಾದ ಜೋರಯದೇವನು ಆಳಿದನು.

೨೩. ಮೂತೂರ ಸತ್ಯಾಶ್ರಯದೇವನು ಎಡೆನಾಡು ೭೦ನ್ನೂ ಬೇರೆ ಕೆಲ ಪ್ರಾಂತಗಳನ್ನೂ ಆಳುತ್ತಿದ್ದನು (೧೦೫೭).

೨೪. ಮಹಾಪ್ರಧಾನ ದಂಡನಾಯಕ ರೂಪಭಟ್ಟಯ್ಯನು ೧೮ ಅಗ್ರಹಾರಗಳನ್ನೂ ವಡ್ಡರಾವುಲನ್ನೂ ಆಳುತ್ತಿದ್ದನು (೧೦೬೫).



ಬಲ್ಲಿಗಾವೆಯ ಉಮಾಮಹೇಶ್ವರ ಮೂರ್ತಿಗಳು

೨೫. ದಂಡನಾಯಕ ಉದಯಾದಿತ್ಯನು ಬನವಾಸಿ ಸಂತಲಿಗೆ ಪ್ರಾಂತಗಳನ್ನು ಆಳುತ್ತಿದ್ದನು (೧೦೬೫).

೨೬. ತ್ರೈಲೋಕ್ಯಮಲ್ಲ ವೀರಶಾಂತರನು ಸಂತಲಿಗೆ ೧,೦೦೦ನ್ನು ಆಳುತ್ತಿದ್ದನು (೧೦೬೭).

೨೭. ತ್ರೈಲೋಕ್ಯಮಲ್ಲ ಭುಜಬಲ ಶಾಂತರನು ಸಂತಲಿಗೆ ನಾಡನ್ನು ಆಳುತ್ತಿದ್ದನು (೧೦೬೨).

೧ ನೆಯ ಸೋಮೇಶ್ವರನಿಗೆ ಬಹುಕಾಲ ಗಂಡುಮಕ್ಕಳಾಗದ್ದರಿಂದ ಅವನು ತನ್ನ ರಾಜ್ಯಭಾರವನ್ನು ಮಂತ್ರಿಗಳಿಗೊಪ್ಪಿಸಿ ತನ್ನ ಪಟ್ಟದ ರಾಣಿಯೊಡನೆ ಕೆಲಕಾಲ ಬಲ್ಲಿಗಾವೆಯ ಉಮಾಮಹೇಶ್ವರ ದೇವಸ್ಥಾನದಲ್ಲಿ ನಿಂತು, ದೇವತಾ ಸೇವಾ ಧ್ಯಾನವನ್ನು ಮನಃಪೂರ್ವಕವಾಗಿ ಮಾಡಿದ್ದರಿಂದ ಪರಮೇಶ್ವರನು ಸಂತುಷ್ಟನಾಗಿ "ನಿನಗೆ ೩ ಮಂದಿ ಗಂಡು ಮಕ್ಕಳಾಗುವರು; ನಡುವಿನವನು ನನ್ನ ಪ್ರಸಾದದಿಂದ ಹುಟ್ಟುವನಾದ್ದರಿಂದ ಅವನು ರಾಮನಂತೆ ಆಸಮುದ್ರಪೃಥ್ವಿಯನ್ನಾಳುವನೆಂದು ಆಕಾಶವಾಣಿಯನ್ನು ನುಡಿಸಿದನೆಂದು ಬಿಹ್ಲಣ ಕವಿಯು ಬರೆಯುತ್ತಾನೆ*. ಇದು ಕವಿಯ ಕಲ್ಪನೆಯೋ ನಿಜವಾದ ಸಂಗತಿಯೋ ದೇವರೇ ಬಲ್ಲ. ಸೋಮೇಶ್ವರನ ಮಕ್ಕಳು ಮೂರೇ ಮಂದಿ ಆಗಿದ್ದರೆ ವಿಷ್ಣುವರ್ಧನ ವಿಜಯಾದಿತ್ಯನು ಯಾರ ಮಗನಾಗಿದ್ದನೆಂಬ ಸಂಶಯ ಬರುತ್ತದೆ.

## ೨. ಎರಡನೆಯ ಸೋಮೇಶ್ವರ

(೧೦೬೮–೧೦೭೬)

೧ ನೆಯ ಸೋಮೇಶ್ವರನು ಸತ್ತ ೧೩ ನೆಯ ದಿವಸವೇ ಅವನ ಹಿರಿಮಗನಾದ ಸೋಮೇಶ್ವರನು ೨ ನೆಯ ಸೋಮೇಶ್ವರನೆಂಬ ಹೆಸರಿ

---

* ಸುತದ್ವಯಂ ತೇ ನಿಜಕರ್ಮ ಸಂಭವಂ ಮಮ ಪ್ರಸಾದಾತ್ತನಯಸ್ತು ಮಧ್ಯಮಃ।
ಪಯೋನಿಧೇಃ ಪಾರಗತಾಮಪಿ ಶ್ರಿಯಂ ಸ ದೋರ್ಬಲಾದ್ರಾಮ ಇವಾಹರಿಷ್ಯತಿ॥
—ವಿ. ಚ. ಸರ್ಗ ೨, ಶ್ಲೋಕ ೫೩.

ಸಿಂದ ಪಟ್ಟವೇರಿದನು (೧೧ ಎಪ್ರಿಲ ೧೦೬೮)*. ಇವನು ತನ್ನ ಪೂರ್ವ-ಜರ ಸಾಮಾನ್ಯ ಬಿರುದುಗಳನ್ನಲ್ಲದೆ **ಭುವನೈಕಮಲ್ಲ**ನೆಂಬ ವಿಶಿಷ್ಟ ಬಿರುದನ್ನು ಧರಿಸಿದನು. ಇವನು ತನ್ನ ತಂದೆಯು ಹೊಸ ರಾಜಧಾನಿಯಾದ ಕಲ್ಯಾಣದಲ್ಲಿ ಇದ್ದನೋ ಇಲ್ಲೋ ಎಂಬ ಬಗ್ಗೆ ಸಂಶಯು ಬರುತ್ತದೆ. ಏಕೆಂದರೆ, ಮೈಸೂರ ಸಂಸ್ಥಾನ ತುಮಕೂರ ಜಿಲ್ಲಾ ತೊರೆವಂಡದ ೧೦೬೯ ನೆಯ ಇಸ್ವಿಯ ಶಿಲಾಲೇಖದಲ್ಲಿಯೂ, ಅದೇ ಸಂಸ್ಥಾನ ಸಿಕಾರಪುರ ತಾಲೂಕಿನ ೧೨೮, ೧೨೯ ನಂಬರಿನ ೧೦೭೧, ೧೦೭೫ ಇಸ್ವಿಯ ಶಿಲಾಲೇಖಗಳಲ್ಲಿಯೂ ಧಾರವಾಡ ಜಿಲ್ಲಾ ಹಾನಗಲ್ಲ ತಾಲೂಕ ಸೀರಲ್ಗಿಯ ೧೦೭೪ ನೆಯ ಇಸ್ವಿಯ ಶಿಲಾಲೇಖದಲ್ಲಿಯೂ ಇವನು ಧಾರವಾಡ ಜಿಲ್ಲಾ ಬಂಕಾಪುರದಲ್ಲಿ ಇದ್ದನೆಂದು ಬರೆದಿರುತ್ತದೆ. ಆದ್ದರಿಂದ ೧೦೭೦, ೧೦೭೨, ೧೦೭೩, ೧೦೭೫ ಈ ನಾಲ್ಕು ವರ್ಷಗಳಲ್ಲಿ ಮಾತ್ರ ಇವನು ಕಲ್ಯಾಣದಲ್ಲಿ ಇದ್ದರೂ ಇದ್ದಿರಬಹುದು.

೨ ನೆಯ ಸೋಮೇಶ್ವರನು ಪಟ್ಟವೇರಿದಾಗ ಸಾಮ್ರಾಜ್ಯದಲ್ಲುಂಟಾದ ಅಸ್ವಸ್ಥತೆಯನ್ನು ಸಿಕಾರಪುರದ ೧೩೬ ನೆಯ ನಂಬರಿನ ಶಾಸನವು ಕೆಳಗೆ ಬರೆದಂತೆ ವರ್ಣಿಸುತ್ತದೆ:—

೧೧. ........‖ವೃತ್ತಂ‖ ನವ ರಾಜ್ಯಂ ವೀರಭೋಜ್ಯಂ ಪುಗಲಿ
ಪವಸರಂ ಸುತ್ತುವೆಂ ಗುತ್ತಿಯುಂ ಮುತ್ತುವೆನೆಂಬೀ
ಗರ್ಬದಿಂ ಚೋಳಿಕನಧಿಕಬಳಂ ಮುತ್ತಿಮಾಗುರ್ತ್ತಿಯುಂ

೧೨. ಪಣ್ಣುವುದಂ ಕೇಳ್ದತ್ತಿಸುತ್ತಿತ್ತಿದ ತುರಗಧಳನ್ನಾಗೆ
ನಯತ್ಯಾಗದ ಗ್ರಾಹಪದೊಳ್ಕಿಂಗೊಟ್ಟು ಸೋಮೇಶ್ವರ
ನೃಪನ ಬಳಕೊಳ್ಕೋಡಿದಂ ವೀರಚೋಳಂ‖ ಪೆಸರಂ ಕೇಟ್ಟಿದ್ದಿಕ್ಕಿ

---

* ೮. ..........................‖ ವೃತ್ತಂ ‖ . .
೯. ದಿತಪ್ರೋಮ ನವಾಂಕ ಸಕಕಾಳಂ ವರ್ತ್ತಿಸಲ್ಕೀಳಕಾಬ್ದದ ವೈಶಾಖದ ಸುದ್ಧ ಸಪ್ತಮಿಯೊಳಜ್ಯಜೋತಿಯೊಳ್ ಶುಕ್ರವಾರದೊಳತ್ಯಂತ ಕುಳೀರಲಗ್ನದೊಳಿಭಾಕ್ಷವಾ್ರತ ರತ್ನಾತಪಚ್ಛದ ಸಿಂಹಾಸನ ಪೂಜ್ಯ ರಾಜ್ಯಪದಮಂ ಸೋ....
೧೦. ಶ್ವರಂ ತಾಳ್ದಿದಂ ‖

ಕರ್ನಾಟಕ ಶಾಸನ ಸಂಗ್ರಹ, ಸಂ. ೭, ಭಾ. ೧, ಕನ್ನಡ ಪು. ೨೬೬.

ಬೆಳ್ಕುರ್ತುದು ಪರಧರಣೀ ಮಂಡಳಂ ಗಂಡುಗೆಟ್ಟಾಳ್ಪಿಸನಂ ಪೊಣ್ದತ್ತು ಶೌರ್ಯೋನ್ನತಿಗ

೧೩. ಗಿದ ಸುಹೃನ್ಮಂಡಳಂ ಮೆಲ್ಪನಾವರ್ಜಿಸಿದೊಂದಾಜ್ಞಾ ವಿಶೇಷಕ್ಕೆಳಸಿದುದು ಸುಹೃನ್ಮಂಡಳಂ ಸಂತಮಿಂತಾದೆಸಕಂ ಕೈಗಣ್ಮೆ ಸೋಮೇಶ್ವರ ನೃಪತಿ ಮಹೀಚಕ್ರಮಂ ಪಾಳಿಸುತ್ತಂ ॥ ಅಂತಃಕಂಟಕರಂ ಪಡಲ್ವಡಿಸಿ ದುರ್ಗಾಧೀಶರಂ ದುಷ್ಟ ಸಾ

೧೪. ಮಂತದ್ರೋಹರಸುದ್ಧತಾಟವಿಕರಂ ನಿರ್ಮೂಳನಂಗೆಯ್ದು ವಿಕ್ರಾಂತಾರಾತಿಗಳಂ ಕಳಲ್ಚಿ ಧರೆಯಂ ನಿಷ್ಕಂಟಕಂ ಮಾಡಿ ನಿಶ್ಚಿಂತಂ ಶ್ರೀ ಭುವನೈಕಮಲ್ಲ ಮಹಿಪಂ ರಾಜ್ಯಂ ಗೆಯ್ಯುತ್ತಿರ್ಪಿನಂ ॥

೨ ನೆಯ ಸೋಮೇಶ್ವರನ ಬಲವು ವೀರಚೋಳನನ್ನು ಓಡಿಸಿತೆಂತಲೂ ಪುಂಡ ಪಾಳೆಗಾರರನ್ನು ಅಡಗಿಸಿತೆಂತಲೂ ಸಾಮಂತ ದ್ರೋಹಿಗಳನ್ನು ನಿರ್ಮೂಲಮಾಡಿತೆಂತಲೂ ಈ ಅವತರಣದಲ್ಲಿ ಬರೆದಿರುತ್ತದಷ್ಟೇ. ದಿಗ್ವಿಜಯಮಾಡಿಕೊಂಡು ಬಂದ ವಿಕ್ರಮಾದಿತ್ಯನು ಈ ಕಾರ್ಯಗಳನ್ನು ಮಾಡಿದ್ದರೂ ಮಾಡಿರಬಹುದು. ಅವನು ಮಹಾಮಂಡಲೇಶ್ವರನಾದ್ದರಿಂದ ಅವನು ಮಾಡಿದ ಯುದ್ಧಕಾರ್ಯವನ್ನು ಸೋಮೇಶ್ವರನೇ ಮಾಡಿದನೆಂದು ಈ ಶಾಸನದಲ್ಲಿ ವರ್ಣಿಸಿದ್ದರೂ ವರ್ಣಿಸಿರಬಹುದು.

ದಿಗ್ವಿಜಯಮಾಡಿಕೊಂಡು ಬಂದ ಬಳಿಕ ವಿಕ್ರಮಾರ್ಕನು ತನ್ನ ಅಣ್ಣನೊಡನೆ ಸುಖದಿಂದ ಕೆಲಕಾಲ ಕಲ್ಯಾಣದಲ್ಲಿದ್ದನೆಂದು ಬಿಲ್ಹಣಕವಿಯು ತನ್ನ ವಿಕ್ರಮಾಂಕದೇವ ಚರಿತದಲ್ಲಿ ಬರೆಯುತ್ತಾನಷ್ಟೇ. ಆದರೆ ಮೇಲೆ ಬರೆದಂತೆ ಸೋಮೇಶ್ವರನು ಕಲ್ಯಾಣದಲ್ಲಿ ಪಟ್ಟವೇರಲಿಲ್ಲ, ಇಷ್ಟೇ ಅಲ್ಲ, ಮುಂದೆ ೨ ವರ್ಷ ಕಲ್ಯಾಣಕ್ಕೆ ಹೋದಂತೆ ಕಂಡು ಬರುವುದಿಲ್ಲ. ಇದಲ್ಲದೆ ಮೇಲೆ ಕೊಟ್ಟ ಅವತರಣದ ೧೪ ನೆಯ ಸಾಲಿನಲ್ಲಿ "ವಿಕ್ರಾಂತಾರಾತಿಗಳಂ ಕಳಲ್ಚಿ" ಎಂದು ಬರೆದುದರಿಂದ ಸೋಮೇಶ್ವ

ರನು ಸಾರ್ವಭೌಮನಾದ ಕೂಡಲೆ ತನ್ನ ತಮ್ಮಂದಿರೊಡನೆ ಹೊಟ್ಟೆಕಿಚ್ಚುಮಾಡಿ ಅವರನ್ನು ಮುರಿಯಲಿಕ್ಕೆ ಪ್ರಯತ್ನಿಸತೊಡಗಿದನೆಂದು ಧ್ವನಿತವಾಗುತ್ತದೆ. ಏಕೆಂದರೆ ಸೋಮೇಶ್ವರನು ತನ್ನ ತಂದೆಯು ಕೊಟ್ಟ ಬನವಾಸಿ ಗಂಗವಾಡಿ ಪ್ರಾಂತಗಳನ್ನು ವಿಕ್ರಮಾದಿತ್ಯನಿಂದ ಕಿತ್ತಿಕೊಂಡು, ಬನವಾಸಿ ಪ್ರಾಂತವನ್ನು ತನ್ನ ಸಂಬಿಗಸ್ತನಾದ ಲಕ್ಷ್ಮಣರಸನಿಗೆ ಕೊಟ್ಟು, ವಿಕ್ರಮನೊಳಂಬನಿಗೆ ನೊಳಂಬ ಸಿಂದವಾಡಿಗಳನ್ನು ಕೊಟ್ಟನೆಂದೂ, ಜಯಸಿಂಹನಿಗೆ ಅಲಂಪುರ ಆದಿಯಾದ ನಾಡನ್ನು ಕೊಟ್ಟನೆಂದೂ ಅದೇ ಶಾಸನದ ಮುಂದಿನ ಭಾಗದಲ್ಲಿ ಬರೆದಿದೆ*. ಈ ಅಲಂಪುರವು ಎಲ್ಲಿರುತ್ತದೆಂಬುದು ಇನ್ನೂ ಗೊತ್ತಾಗಿಲ್ಲ.

ಈ ಪ್ರಪಂಚದಲ್ಲಿ ಬಂಧುಪ್ರೀತಿಯಂತಹ ಒಟ್ಟುಗೂಡಿಸುವ ಸದ್ಗುಣವಿಲ್ಲ, ಮತ್ತು ಸ್ವಾರ್ಥಪರತ್ವದಂತಹ ಅಗಲಿಸುವ ದುರ್ಗುಣವಿಲ್ಲ. ತಂದೆ ಮಕ್ಕಳಾಗಲಿ ಅಣ್ಣ ತಮ್ಮಂದಿರಾಗಲಿ ಗುರು ಶಿಷ್ಯರಾಗಲಿ ಆಪ್ತೇಷ್ಟರಾಗಲಿ ನೆರೆಹೊರೆಯವರಾಗಲಿ ಅಕ್ಕತಂಗಿಯಂದಿರಾಗಲಿ ಬಂಧುಪ್ರೀತಿಯುಳ್ಳವರಾಗಿದ್ದರೆ ಮಾತ್ರ ಸಖ್ಯದಿಂದ ಒಟ್ಟುಗೂಡಿ ಸೌಖ್ಯದಿಂದ ಕಾಲಕಳೆಯುತ್ತಾರೆ. ಇವರೊಳಗೆ ಯಾವನಾದರೊಬ್ಬನಲ್ಲಿ ಅಥವಾ ಯಾವಳಾದರೊಬ್ಬಳಲ್ಲಿ ಸ್ವಾರ್ಥವು ಪ್ರಬಲವಾಯಿತೆಂದರೆ ತೀರಿತು. ಅವನು ಅಥವಾ ಅವಳು ಕೂಡಲೆ ಧನಪಿಶಾಚಿಯ ಆಳಾಗಿ ಬೇರೆಯವರೊಡನೆ ಕಡಿದಾಡಲಾರಂಭಿಸುವನು ಅಥವಾ ಆರಂಭಿಸುವಳು. ಕಾಮ ಕ್ರೋಧ ಮದ ಮೋಹ ಮತ್ಸರಗಳೆಂಬ ಅರಿಷಡ್ವರ್ಗವು ಸ್ವಾರ್ಥಪರತ್ವಕ್ಕೆ ಬೆಂಬಲವಾಗಿರುತ್ತವೆ. ಅಧ್ಯಾತ್ಮ ವಿಚಾರ ಅಥವಾ ಆತ್ಮಜ್ಞಾನ, ವಿವೇಕ, ನಿಸ್ಪೃಹತಾ, ವೈರಾಗ್ಯ, ಪರೋಪಕಾರ, ಪರೋತ್ಕರ್ಷಾಭಿಲಾಷೆ, ನಿರಹಂಕಾರ ಇವು ಬಂಧುಪ್ರೀತಿಗೆ ಅನುಕೂಲವಾಗಿರುತ್ತವೆ. ನೊಕ್ಕು ಹೊಟ್ಟೆಕಿಚ್ಚುಗಳು ಈ ಸ್ವಾರ್ಥದ ಗಂಡು ಹೆಣ್ಣು ಮಕ್ಕಳಾಗಿರುತ್ತವೆಂದು ಬರೆದರೆ ತಪ್ಪಾಗಲಿಕ್ಕಿಲ್ಲ. ಈ ಎರಡು ದುರ್ಗುಣ

---

* ಮಗೆ ಬನವಾಸಿನಾಡ್ರಿಕ್ಕಿ ವಿಭು ಲಕ್ಷ್ಮಣನಾಗೆ ನೊಳಂಬ ಸಿಂದವಾಡಿಗೆ ವಿಭುವಾಗೆ ವಿಕ್ರಮನೊಳಂಬನಳಂಪುರಮಾದಿಯಾದ ಬೂಮಿಗೆ ವಿಭು ಗಂಗಮಂಡಳಿಕನಾಗೆ.
ಕರ್ನಾಟಕ ಶಾಸನ ಸಂಗ್ರಹ, ಸಂ. ೭, ಭಾ. ೧, ಕನ್ನಡ ಪು. ೨೪೭.

ಗಳಿಂದ ಮನುಷ್ಯಪ್ರಾಣಿಗೆ ಆದಷ್ಟು ಕೇಡು ಮತ್ತಾವ ದುರ್ಗುಣ ಗಳಿಂದ ಆಗಿಲ್ಲೆಂದು ಬರೆದರೆ ಅತಿಶಯೋಕ್ತಿಯಾಗಲಾರದು.

೨ನೆಯ ಸೋಮೇಶ್ವರನ ಸ್ವಾರ್ಥವು ಆತ್ಮಜ್ಞಾನ ವೈರಾಗ್ಯ ವಿವೇಕಗಳಿಂದ ತಗ್ಗಿದ್ದಿಲ್ಲ. ಪಟ್ಟವೇರಿದ ಕೂಡಲೆ ಅವನಿಗೆ ಅಪರಿಮಿತ ವಾದ ಅಧಿಕಾರವು ಬಂತು. ಅದರಿಂದ ಅವನ ಅಹಂಕಾರವು ಹೆಚ್ಚಿತು. ತನ್ನ ತಮ್ಮನಾದ ವಿಕ್ರಮಾದಿತ್ಯನ ಧೈರ್ಯ ಶೌರ್ಯೌದಾರ್ಯ ಗುಣ ಗಳನ್ನು ನೋಡಿ ಅವನ ಹೊಟ್ಟೆಕಿಚ್ಚು ಬೆಳೆಯಿತು. ಆದ್ದರಿಂದ ಅವನು ವಿಕ್ರಮಾದಿತ್ಯ ಜಯಸಿಂಹರನ್ನು ತನ್ನಿಂದ ದೂರಾಗಿಡಲಿಕ್ಕೂ ಅವರ ಬಲ ವರ್ಚಸ್ಸನ್ನು ಕಡಮೆ ಮಾಡಲಿಕ್ಕೂ ಅವರ ನಂಬಿಗಸ್ತರನ್ನು ಒಡಕೊಳ್ಳ ಲಿಕ್ಕೂ ಒಳಗಿಂದೊಳಗೆ ವಿಶ್ವಪ್ರಯತ್ನ ಮಾಡತೊಡಗಿದನು. ಬಳಿಗಾವೆ ಬಂಕಾಪುರಗಳಲ್ಲಿದ್ದ ವಿಕ್ರಮಾರ್ಕನ ಹಿತಚಿಂತಕರು ಸೋಮೇಶ್ವರನ ದುರಾಲೋಚನೆಗಳನ್ನು ಆಗಿಂದಾಗ ಅವನಿಗೆ ತಿಳಿಸುತ್ತಿದ್ದರು.

ಮುತ್ತು ಒಡೆದರೆ ಹೋಯಿತು ಮಾತು ಕೊಟ್ಟರೆ ಹೋಯಿತು ಎಂಬ ಗಾದೆಯನ್ನು ವಾಚಕರು ಕೇಳಿರಬಹುದು. ಮುತ್ತು ಮಾತು ಗಳಂತೆ ಮನಸ್ಸಾದರೂ ಮುರಿದರೆ ತಿರುಗಿ ಹಚ್ಚಲಿಕ್ಕೆ ಬರುವುದಿಲ್ಲೆಂಬ ಅನುಭವಸಿದ್ಧವಾದ ಸಂಗತಿಯನ್ನು ಓದುವವರು ಮರೆಯಕೂಡದು. ಕುಟುಂಬದಲ್ಲಿಯಾಗಲಿ ಮನೆತನದಲ್ಲಿಯಾಗಲಿ ಸಮಾಜದಲ್ಲಿಯಾಗಲಿ ರಾಜ್ಯಭಾರದಲ್ಲಿಯಾಗಲಿ ವ್ಯವಹಾರದಲ್ಲಿಯಾಗಲಿ ವಿರೋಧವು ಹುಟ್ಟಿದ ಕೂಡಲೆ ಅದರ ಕಾರಣವನ್ನು ಶೋಧಿಸಿ ದೂರಮಾಡದಿದ್ದರೆ, ವಿರೋಧ ಗಳ ಸಂಖ್ಯೆಯು ಬೆಳೆದು ಅವು ಮನಸ್ಸನ್ನು ಮುರಿಯುತ್ತವೆ. ಮನು ಷ್ಯನ ಮನಸ್ಸು ಕಾಚಿನಂತಿರುವುದರಿಂದ ಮುರಿದ ಮನಸ್ಸನ್ನು ಹಚ್ಚು ವುದು ಅಸಾಧ್ಯವೇ ಸರಿ. ವಿಕ್ರಮಾರ್ಕನನ್ನು ಮುರಿಯುವ ಉದ್ದೇಶ ದಿಂದ ಸೋಮೇಶ್ವರನು ಒಂದೇ ಸವನೆ ಹಂಚಿಕೆಗಳನ್ನು ಹಾಕತೊಡ ಗಿದ್ದರಿಂದ ಬಂಧು ಪ್ರೀತಿಯು ಅಳಿಯಿತು, ದ್ವೇಷವು ಹೆಚ್ಚಿತು, ಮುಚ್ಚುಮರೆಯು ಹೋಯಿತು, ಬರುಬರುತ್ತ ಇಬ್ಬರೂ ಕಡುಹಗೆ ಗಳಾದರು.

೧೦೭೦, ೧೦೭೨, ೧೦೭೩, ೧೦೭೪ ಈ ಇಸ್ವಿಗಳಲ್ಲಿ ೨ನೆಯ ಸೋಮೇಶ್ವರನು ಹೊಸ ರಾಜಧಾನಿಯಾದ ಕಲ್ಯಾಣದಲ್ಲಿ ಇದ್ದಿರಬಹುದೆಂದು ಮೇಲೆ ಬರೆದಿರುತ್ತೇವಷ್ಟೇ. ಸೋಮೇಶ್ವರನು ಪಟ್ಟವೇರಿದ ವರ್ಷ ಅಂದರೆ ೧೦೬೮ರಲ್ಲಿ ವಿಕ್ರಮಾರ್ಕನಿಗೆ ನೊಳಂಬ ಸಿಂದವಾಡಿಗೆ ವರ್ಗವಾಯಿತು. ಮರುವರುಷ ಅವನು ಮಹಾಸಾಮಂತಾಧಿಪ ದಂಡನಾಯಕನಾಗಿದ್ದನೆಂದು ಧಾರವಾಡ ಜಿಲ್ಲಾ ಸೂಡಿಯ ಶಾಸನದಿಂದ ತಿಳಿದುಬರುತ್ತದೆ. ಮುಂದಿನ ಎರಡು ವರ್ಷಗಳು ಅಣ್ಣತಮ್ಮಂದಿರ ನಡುವಿದ್ದ ದುಸುಮುಸಿಯಲ್ಲೇ ಕಳೆದುಹೋದವು. ಬಳಿಕ ಆಪ್ತೇಷ್ಟರೂ ದೂರದೃಷ್ಟಿಯುಳ್ಳ ಮಂತ್ರಿಗಳೂ ಈ ಮನೆಜಗಳದಿಂದ ಸಾಮ್ರಾಜ್ಯಕ್ಕೆ ಹಾನಿ ತಟ್ಟುವುದೆಂದೆಣಿಸಿ, ಇಬ್ಬರನ್ನು ಒಟ್ಟುಗೂಡಿಸಲಿಕ್ಕೆ ಯತ್ನ ನಡಿಸಿದರು. ವಿಕ್ರಮಾದಿತ್ಯ ಜಯಸಿಂಹರು ಕಲ್ಯಾಣಕ್ಕೆ ಬಂದರು. ಮಾತುಕತೆಗಳು ನಡೆದವು. ಮೊದಲು ತನಗಿದ್ದ ಬನವಾಸಿ ಪ್ರಾಂತದ ಮಂಡಲೇಶ್ವರತ್ವವನ್ನು ತನಗೆ ಕೊಡಲಿಕ್ಕೇ ಬೇಕೆಂದು ವಿಕ್ರಮಾರ್ಕನು ಆಗ್ರಹ ಹಿಡಿದನು. ಬಂಕಾಪುರವು ತನ್ನ ೨ನೆಯ ರಾಜಧಾನಿಯಾದ್ದರಿಂದ ಅದರ ಸಮೀಪದಲ್ಲಿದ್ದ ಬನವಾಸಿ ಪ್ರಾಂತವನ್ನೊಂದನ್ನು ಬಿಟ್ಟು, ಉಳಿದ ಬೇಕಾದ ಪ್ರಾಂತವನ್ನು ಕೊಡುವೆನೆಂದು ಸೋಮೇಶ್ವರನು ಖಂಡಿತವಾಗಿ ಹೇಳಿದನು. ಈ ರದಬದಲೆಯು ಎಷ್ಟೋ ದಿವಸ ನಡೆದ ಬಳಿಕ, ಬನವಾಸಿಯನ್ನು ತನಗೆ ಕೊಡಬೇಕೆಂದು ವಿಕ್ರಮಾದಿತ್ಯನು ಹಟಹಿಡಿದುದರಿಂದ ಮಧ್ಯಸ್ಥಗಾರರು ಬಹುಪರಿಯಿಂದ ಹೇಳಿ ಬನವಾಸಿ ಪ್ರಾಂತವನ್ನು ಅವನಿಗೆ ಕೊಡಲಿಕ್ಕೆ ಸೋಮೇಶ್ವರನನ್ನು ಒಡಂಬಡಿಸಿದರು. ಅಣ್ಣತಮ್ಮಂದಿರ ಜಗಳವು ತೀರಿದಂತಾಯಿತು. ವಿಕ್ರಮಾದಿತ್ಯನು ಬನವಾಸಿ ಪ್ರಾಂತದ ಆಡಳಿತವನ್ನು ವಿಷ್ಣುವರ್ಧನ ವಿಜಯಾದಿತ್ಯನಿಗೂ ನೊಳಂಬವಾಡಿ ಸಿಂದವಾಡಿ ಪ್ರಾಂತಗಳ ಆಡಳಿತವನ್ನು ಜಯಸಿಂಹನಿಗೂ ಒಪ್ಪಿಸಿ, ತಾನು ಮೂರೂ ಪ್ರಾಂತಗಳ ಮಹಾಮಂಡಲೇಶ್ವರನಾಗಿ ಮೇಲ್ವಿಚಾರಣೆಯನ್ನು ಮಾಡತೊಡಗಿದನು (೧೦೭೩?). ಮರುವರುಷ ೨ನೆಯ ಸೋಮೇಶ್ವರನು ಬಂಕಾಪುರದಲ್ಲಿದ್ದಾಗ ವಿಕ್ರಮಾದಿತ್ಯ ವಿಜಯಾದಿತ್ಯರ ಮುಖಾಂತರವಾಗಿ

ಬಂದ ನೀರಲಿಗೆಯ ೩೦೦ ಮಹಾಜನರ ವಿನಂತಿಯನ್ನು ಸೋಮೇಶ್ವರನು ಮಾನ್ಯಮಾಡಿದನೆಂದು ಧಾರವಾಡ ಜಿಲ್ಲಾ ಹಾನುಗಲ್ಲ ತಾಲೂಕ ನೀರಲಿಗೆಯ ಶಕ ೯೯೬ನೆಯ ಆನಂದ ಸಂವತ್ಸರ ಆಶ್ವಯುಜಮಾಸ (ಸೆಪ್ಟಂಬರ, ಆಕ್ಟೋಬರ ೧೦೭೪)ದ ಶಾಸನದಿಂದ ತಿಳಿದುಬರುತ್ತದೆ.

ಮುಂದೆ ೨ನೆಯ ಸೋಮೇಶ್ವರನು ನಿರಂಕುಶನೂ ಅತಿಗರ್ವಿಯೂ ಮನಸ್ವಿಯೂ ಕಠೋರ ಹೃದಯನೂ ಆದ್ದರಿಂದ ಸಾಮ್ರಾಜ್ಯದಲ್ಲಿ ಅಸಂತೋಷವೂ ಅಣ್ಣತಮ್ಮಂದಿರ ನಡುವೆ ಮತ್ತೆ ಮನಸ್ತಾಪವೂ ಉಂಟಾದವು*. ಮಧ್ಯಸ್ಥಗಾರರ ಸಲಹೆಯಂತೆ ಅವನು ವಿಕ್ರಮಾದಿತ್ಯ ಜಯಸಿಂಹರನ್ನು ಕಲ್ಯಾಣಕ್ಕೆ ಕರೆಯಿಸಿದನು (೧೦೭೫?). ಮತ್ತೆ ಮಾತುಕತೆಗಳು ನಡೆದವು. ರದಬದಲೆಯು ನಡೆದಾಗ, ೨ನೆಯ ಸೋಮೇಶ್ವರನು ತನ್ನಿಬ್ಬರು ತಮ್ಮಂದಿರನ್ನು ಹಿಡಿದು ಕಾವಲಲ್ಲಿರಿಸಲಿಕ್ಕೆ ಸಂಚು ಮಾಡತೊಡಗಿದನು. ಈ ಸುದ್ದಿಯು ವಿಕ್ರಮಾದಿತ್ಯ ಜಯಸಿಂಹರಿಗೆ ತಿಳಿಯಲು, ಅವರು ಒಂದು ದಿನ ರಾತ್ರಿ ಯಾರಿಗೂ ತಿಳಿಯದಂತೆ ರಾಜಧಾನಿಯಿಂದ ಓಡಿಹೋದರು. ಮರುದಿವಸ ಚಿಂತಾಕ್ರಾಂತನಾದ ಸೋಮೇಶ್ವರನು ಅವರನ್ನು ಹಿಡಿಯಲಿಕ್ಕೆ ದಂಡು ಕಳುಹಿದನು. ಆ ದಂಡಿನ ದಳವಾಯಿಯು ವಿಕ್ರಮಾದಿತ್ಯನಿಗೆ ಅನುಕೂಲನಾದ್ದರಿಂದ ಅಲ್ಲಿ ಇಲ್ಲಿ ಹುಡುಕಿದಂತೆ ಮಾಡಿ, ತಿರುಗಿ ಬಂದು ಅವರು ಸಿಕ್ಕಲಿಲ್ಲೆಂದು ಅರಿಕೆಮಾಡಿದನು. ಬಯಕೆಗೆಟ್ಟ ಸೋಮೇಶ್ವರನ ಸಿಟ್ಟು ಭಗ್ಗೆಂದು ಎದ್ದಿತು. ತನ್ನ ತಮ್ಮಂದಿರು ಮುಂದೆ ಏನುಮಾಡುವರೋ ಎಂಬ ಹೆದರಿಕೆಯು ಅವನ ತಲೆಯೆಲ್ಲ ತುಂಬಿತು. ತನ್ನ ರಾಜ್ಯಾಧಿಕಾರವು ಎಲ್ಲಿ ಹೇಗೆ ಹೋಗುವುದೋ ಎಂಬ ಭೀತಿಯು ಅವನ ಬುದ್ಧಿಯನ್ನು ಮುಸಣಿಸಿತು. ಅವನಿಗೆ ವಂಶಪರಂಪರಾಗತ ವೃದ್ಧ ಮಂತ್ರಿಗಳು ಹೇಳುವ ಸರಿಯಾದ ಸಲಹೆಯು ಸೇರದಂತಾಯಿತು. ಕಂಸನಿಗೆ ಎತ್ತ ನೋಡಿದರೂ ಶ್ರೀಕೃಷ್ಣನೇ ಕಂಡಂತೆ ಸೋಮೇಶ್ವರ

---

* ಅಪಾಸ್ತಕುಂತಲೋಲ್ಲಾಸಾ ವೈರಾಗ್ಯಂ ದಧತೀ ಧರಾ।
ಜೀವತ್ಯೇವ ಧವೇ ತಸ್ಮಿನ್ವಿಧವೇವ ವ್ಯರಾಜತ ॥ ವಿ. ಚ. ಸ. ೪, ಶ್ಲೋ. ೧೦೧.

ಸಿಗೆ ವಿಕ್ರಮಾದಿತ್ಯನೇ ಕಾಣಲಾರಂಭಿಸಿದನು. ಕಳ್ಳನ ಜೀವ ಹುಳ್ಳು ಹುಳ್ಳಗೆ ಎಂಬ ಗಾದೆಯಂತೆ, ಎಲ್ಲ ಮಂತ್ರಿಗಳೂ ಎಲ್ಲ ದಂಡನಾಯಕರೂ ಎಲ್ಲ ಮಂಡಲೇಶ್ವರರೂ ಎಲ್ಲ ಸಾಮಂತರೂ ವಿಕ್ರಮಾರ್ಕನ ಪಕ್ಷದವ ರೆಂಬ ಸಂಶಯಪಿಶಾಚಿಯು ಸೋಮೇಶ್ವರನನ್ನು ಬಡಕೊಂಡಿತು. ತನ್ನ ಜನರಲ್ಲಿ ವಿಶ್ವಾಸವಿಲ್ಲದರಿಂದ ತನ್ನ ಮನೆತನದ ಹಗೆಗಳಾದ ಕೊಂಕಣದ ಒಡೆಯನ ಮತ್ತು ಕೇರಳ ಕಂಚಿಯ ಅರಸರ ನೆರವನ್ನು ಕೇಳಲಿಕ್ಕೆ ಅವನು ಗುಪ್ತವಾಗಿ ರಾಯಭಾರಿಗಳನ್ನು ಕಳುಹಿದನು (೧೦೭೫?).

ಅತ್ತ ಕಲ್ಯಾಣದಿಂದ ಓಡಿಹೋಗಿ ಬಲ್ಲಿಗಾವೆಯನ್ನು ಮುಟ್ಟಿದ ವಿಕ್ರಮಾದಿತ್ಯನಿಗೆ ಸೋಮೇಶ್ವರನ ಗುಪ್ತಾಲೋಚನೆಗಳೆಲ್ಲ ಗೊತ್ತಾದ್ದ ರಿಂದ ಅವನು ಸೋಮೇಶ್ವರನ ಭಾವೀ ಸಾಹಾಯಕರನ್ನು ಮುರಿಬಡಿ ಯುವುದಕ್ಕೋಸ್ಕರ ತನ್ನ ಸೇನೆಯನ್ನು ಸಜ್ಜುಗೊಳಿಸಿಕೊಂಡು ಕೊಂಕಣದ ಮೇಲೆ ದಂಡೆತ್ತಿಹೋದನು. ಅವನ ದಂಡನ್ನು ತಡೆಯುವ ಸಾಮರ್ಥ್ಯವಿಲ್ಲದ ಸಿಲಾಹಾರರು ಶರಣು ಬಂದು, ಅವನ ಮಂಡಲಿಕ ರಾಗಿ ಆಳಲಿಕ್ಕೆ ಒಡಂಬಟ್ಟರು. ಬಳಿಕ ವಿಕ್ರಮಾದಿತ್ಯನು ಗೋಪಕ ಪಟ್ಟಣ(ಗೋವೆ)ದ ಮೇಲೆ ದಂಡೆತ್ತಿಹೋಗಲು ಅಲ್ಲಿಯ, ಕದಂಬ ಅರಸ ನಾದ ಜಯಕೇಶಿಯು ವಿಕ್ರಮಾರ್ಕನನ್ನು ಎದುರಿಸುವುದು ತನ್ನಿಂ ದಾಗದ ಕೆಲಸವೆಂದೆಣಿಸಿ, ಶರಣು ಬಂದು ಅವನಿಗೆ ಯಥೇಷ್ಟವಾಗಿ ಕಪ್ಪುಗಾಣಿಕೆಯನ್ನು ಕೊಟ್ಟನೆಂದು ಬಿಲ್ಹಣ ಕವಿಯು ಬರೆಯುತ್ತಾನೆ. ಈ ಮೇರೆಗೆ ಸತ್ಕರಿಸಲ್ಪಟ್ಟ ವಿಕ್ರಮಾದಿತ್ಯನು ಗೋವೆಯಿಂದ ಹೊರಟು, ಕೇರಳನಾಡನ್ನೊಳನುಗ್ಗಿದನು. ಅಲ್ಲಿಯ ಅರಸನು ಸೊಕ್ಕುಮಾಡಿ ಎದುರಿಸಿ ಸೋತು ಶರಣುಬಂದುದರಿಂದ ಅವನನ್ನು ಕ್ಷಮಿಸಿ, ಕಪ್ಪು ಗಾಣಿಕೆಯನ್ನು ತೆಗೆದುಕೊಂಡು, ಅವನನ್ನೂ ಅಲೂಪನಾಡಿನ ಅರಸ ನನ್ನೂ ತನ್ನ ಮಂಡಲಿಕರಾಗಿ ಮಾಡಿಕೊಂಡು, ತನ್ನ ಮನೆತನದ ಹಗೆಯಾದ ಚೋಳರಸನ ಮೇಲೆ ದಂಡೆತ್ತಿಹೋದನು. ಅವನು ಚಾಳುಕ್ಯ ಚೋಳರಾಜ್ಯಗಳ ಮೇರೆಯಾದ ತುಂಗಭದ್ರಾ ಹೊಳೆಯನ್ನು ದಾಟಿ ಚೋಳರಾಜ್ಯವನ್ನು ಹೊಕ್ಕ ಕೂಡಲೆ ಆ ಕಾಲಕ್ಕೆ ಚೋಳರಾಜ್ಯದಲ್ಲಿ

ಒಳಜಗಳವು ನಡೆದುದರಿಂದ ಕಂಚಿಯ ಅರಸನಾದ ರಾಜಕೇಸರಿವರ್ಮ (೧ನೆಯ ವೀರರಾಜೇಂದ್ರನು) ಗಾಬರಿಯಾಗಿ ಒಪ್ಪಂದಮಾಡಿಕೊಳ್ಳ ಲಿಕ್ಕೆ ತನ್ನೊಬ್ಬ ರಾಯಭಾರಿಯನ್ನು ಕಳುಹಿದನು. ಕೆಲದಿನ ಮಾತು ಕತೆಗಳಾದ ಬಳಿಕ, ಕೆಳಗೆ ಬರೆದಂತೆ ಒಪ್ಪಂದದ ಶರ್ತುಗಳು ಗೊತ್ತಾ ದವು :—

೧. ವಿಕ್ರಮಾದಿತ್ಯನು ತುಂಗಭದ್ರಾ ನದಿಯನ್ನು ತಿರುಗಿ ದಾಟಿ, ಅದರ ಬಡಗಣ ದಂಡೆಯ ಮೇಲೆ ತನ್ನ ಪಾಳೆಯವನ್ನು ಹಾಕಿಕೊಂಡಿರ ಬೇಕು.

೨. ರಾಜಕೇಸರಿವರ್ಮನು ತನ್ನ ಮಗಳನ್ನು ವಿಕ್ರಮಾದಿತ್ಯನ ಪಾಳೆಯಕ್ಕೆ ಕರೆಕೊಂಡು ಹೋಗಿ ಅವನಿಗೆ ಅವಳನ್ನು ಮದುವೆಮಾಡಿ ಕೊಡಬೇಕು.

೩. ಪರಶತ್ರುಗಳ ಬಾಧೆಯಾದಾಗ ಒಬ್ಬರು ಮತ್ತೊಬ್ಬರಿಗೆ ದಂಡಿನ ಸಾಹಾಯ್ಯ ಮಾಡಬೇಕು.

ಈ ಒಪ್ಪಂದಕ್ಕೆ ತುಂಗಭದ್ರಾ ಒಪ್ಪಂದವೆಂದು ಹೇಳಬಹುದು. ಇದರ ೨ನೆಯ ಶರ್ತಿನಂತೆ ರಾಜಕೇಸರಿವರ್ಮನು ತನ್ನ ಮಗಳನ್ನು ಕರೆಕೊಂಡು ವಿಕ್ರಮಾದಿತ್ಯನ ಪಾಳೆಯಕ್ಕೆ ಬಂದನು. ಅವರಿಬ್ಬರು ಪಾಳೆಯಹಾಕಿಕೊಂಡಿದ್ದ ಅಡವಿಯೇ ಒಂದು ದೊಡ್ಡ ಪಟ್ಟಣವಾಯಿತು. ಅತ್ಯುತ್ಸವದಿಂದ ಮದುವೆಯ ಸಮಾರಂಭವು ಜರಗಿತು. ಅಳಿಯನ ಹತ್ತಿರ ನಾಲ್ಕಾರು ದಿವಸ ನಿಂತು ರಾಜಕೇಸರಿವರ್ಮನು ತನ್ನ ರಾಜ ಧಾನಿಯಾದ ಕಂಚಿಗೆ ತಿರುಗಿ ಹೋದನು.

ನರಭೋಗ ಶಿಲಾಭೋಗ ಎಂಬ ನಾಣ್ನುಡಿಯು ಓದುವವರಿಗೆ ಗೊತ್ತಿರಬಹುದು. ಉಚ್ಚಾವಸ್ಥೆಯಲ್ಲಿದ್ದ ಮನುಷ್ಯನು ಕಾಸೆಡೆಯುವ ನಾಗಬಹುದು. ಘನತೆಗೇರಿದ ಮನೆತನವು ಕೀಳಾವಸ್ಥೆಯನ್ನು ಹೊಂದ ಬಹುದು. ತಿಪ್ಪೆ ಹೋಗಿ ಉಪ್ಪರಿಗೆಯಾಗಬಹುದು ಮತ್ತು ಉಪ್ಪರಿಗೆ ಹೋಗಿ ತಿಪ್ಪೆಯಾಗಬಹುದು. ಗದ್ದಿಗೆಯ ಕಲ್ಲು ಮಸಣದ ಕಲ್ಲಾಗ ಬಹುದು. ಈ ವಿಪರ್ಯಾಸದಂತೆ ಚಾಳುಕ್ಯರ ಕಡುಹಗೆಗಳಾದ ಚೋಳರು ಸೋಮೇಶ್ವರ ವಿಕ್ರಮಾದಿತ್ಯರಿಗೆ ಈ ಕಾಲಕ್ಕೆ ಅತ್ಯವಶ್ಯವಾಗಿ

ಬೇಕಾದವರಾದರು. ಇಬ್ಬರೂ ಅವರ ಸಹಾಯ ದೊರಕಿಸಲಿಕ್ಕೆ ವಿಶ್ವಪ್ರಯತ್ನ ಮಾಡತೊಡಗಿದರು. ಸೋಮೇಶ್ವರನು ತನ್ನ ರಾಜ್ಯದ ಭಾಗವನ್ನು ಕೊಡಲಿಕ್ಕೆ ಸಿದ್ಧನಾದನು; ಮತ್ತು ವಿಕ್ರಮಾರ್ಕನು ಅವರೊಡನೆ ಶರೀರಸಂಬಂಧವನ್ನು ಬೆಳಿಸಿದನು. ಆದರೆ ಮನುಷ್ಯನು ಎಣಿಸುವುದೊಂದು ದೇವರು ಮಾಡುವುದು ಮತ್ತೊಂದು ಎಂಬ ಗಾದೆ ಯಂತೆ ವಿಕ್ರಮಾರ್ಕನು ಭಗ್ನಮನೋರಥನಾದನು. ಅದು ಹೇಗೆಂದರೆ—

ಅಣ್ಣಿಗೇರಿಯ ಕಾಳೆಗದಲ್ಲಿ ಕೋಪರಕೇಸರಿವರ್ಮ ರಾಜೇಂದ್ರ ದೇವನು ಸೋತು ಸತ್ತನೆಂದು ಹಿಂದೆ ಬರೆದಿರುತ್ತೇವಷ್ಟೇ*. ಇವನು ಸತ್ತುದರಿಂದ ಕಂಚಿ ಪಟ್ಟಕ್ಕೆ ಬಾಧ್ಯಸ್ಥರು ಇಲ್ಲದಾದರೆಂದು ಅಣ್ಣಿಗೇರಿಯ ಜೈನ ಗುಡಿಯಲ್ಲಿದ್ದ ಒಂದು ಶಿಲಾಲೇಖವು ಹೇಳುತ್ತದೆ. ರಾಜೇಂದ್ರದೇವನಿಗೆ ಗಂಡುಮಕ್ಕಳಿಲ್ಲುದರಿಂದ ಪಟ್ಟದ ಸಲುವಾಗಿ ಒಳ ಜಗಳ ನಡೆಯಿತು. ಕೆಲಪ್ರಮುಖ ಸರದಾರರ ನೆರವಿನಿಂದ ರಾಜಕೇಸರಿ ವರ್ಮನು ಚೋಳಪಟ್ಟವನ್ನು ದೊರಕಿಸಿದ್ದರಿಂದ ಅವನಿಗೆ ವಿಕ್ರಮಾದಿತ್ಯ ನಂತಹ ಶೂರನ ಸಾಹಾಯವು ಅವಶ್ಯವಾಗಿ ಬೇಕಾಗಿತ್ತು. ಆದಕಾರಣ ಅವನು ತನ್ನ ಮಗಳನ್ನು ವಿಕ್ರಮಾದಿತ್ಯನಿದ್ದಲ್ಲಿಗೆ ತಂದು ಮದುವೆಮಾಡಿ ಕೊಟ್ಟನು. ವೆಂಗಿಯ ಚಾಳುಕ್ಯ ಅರಸನಾದ ರಾಜಿಗನು (೨ನೆಯ ರಾಜೇಂದ್ರಚೋಳನು) ಈ ರಾಜಕೇಸರಿವರ್ಮನ ಎದುರಾಳಾಗಿದ್ದನು. ತಾನು ೧ನೆಯ ರಾಜೇಂದ್ರಚೋಳನ ಮಗಳ ಮಗನೆಂತಲೂ ತನ್ನ ಅಜ್ಜನು ತನಗೆ ಚೋಳಪಟ್ಟವನ್ನು ಕೊಟ್ಟನೆಂತಲೂ ವಾದಿಸಿ, ಅವನು ಪಟ್ಟದ ಸಲುವಾಗಿ ಕಾದಲಿಕ್ಕೆ ಸಿದ್ಧನಾಗಿ, ಕಂಚಿಯ ಎಷ್ಟೋ ಮಂದಿ ಮಂತ್ರಿಗಳನ್ನು ತನ್ನ ಕಡೆಗೆ ಒಡಕೊಂಡಿದ್ದನು. ರಾಜಕೇಸರಿವರ್ಮನು ತನ್ನ ಮಗಳನ್ನು ವಿಕ್ರಮಾದಿತ್ಯನಿಗೆ ಕೊಟ್ಟು ಚೋಳರಾಜ್ಯಕ್ಕೆ ಕುಂದು ತಂದನೆಂದು ಚೋಳ ಸರದಾರರ ತಿಳಿವಳಿಕೆಯಾದ್ದರಿಂದ ರಾಜಕೇಸರಿ ವರ್ಮನ ವಿರುದ್ಧವಾಗಿ ಒಳಸಂಚು ನಡೆದು, ಅವನು ಮದುವೆಮಾಡಿ ಕೊಟ್ಟು ತಿರುಗಿ ಬಂದ ಕೂಡಲೆ ಅವನ ಕೊಲೆಯಾಯಿತು. ಈ ಸುದ್ದಿ

* ಹಿಂದೆ ಪುಟ ೨೫೬.

ಬಂದ ಕೂಡಲೆ ವಿಕ್ರಮಾದಿತ್ಯನು ತಡಮಾಡದೆ ಕಂಚಿಗೆ ಹೋಗಿ ಅದನ್ನು ಹಿಡಿದುಕೊಂಡು, ಸಂಚುಗಾರರನ್ನು ದಂಡಿಸಿ, ಅವರ ಹೊಸ ರಾಜಧಾನಿಯಾದ ಗಾಂಗಕುಂಡಚೋಳಪುರವನ್ನು ಹಿಡಿದುಕೊಂಡು, ತನ್ನ ಹೆಂಡತಿಯ ಅಣ್ಣನಿಗೆ ಕಂಚಿಯ ಪಟ್ಟವನ್ನು ಕಟ್ಟಿ, ಅಲ್ಲಿ ಶಾಂತತೆ ಯಾದ ಬಳಿಕ ತಿರುಗಿ ತುಂಗಭದ್ರಾ ತೀರಕ್ಕೆ ಬಂದನು. ಮುಂದೆ ತುಸು ದಿವಸದಲ್ಲೇ ರಾಜಗನು ಕಂಚಿಯನ್ನು ಹಿಡಿದುಕೊಂಡು ವಿಕ್ರಮಾ ದಿತ್ಯನ ಬೀಗನನ್ನು ಕೊಲ್ಲಿಸಿ, ಎಲ್ಲ ಚೋಳರಾಜ್ಯಕ್ಕೆ ತಾನೇ ಒಡೆಯ ನೆಂದು ಸಾರಿ, ವಿಕ್ರಮಾದಿತ್ಯನ ಮೇಲೆ ದಂಡೆತ್ತಿಹೊರಟು, ಕೂಡಲೆ ದಂಡಿನೊಡನೆ ಬಂದು ವಿಕ್ರಮಾದಿತ್ಯನ ದಂಡಿನ ಹಿಂಭಾಗದ ಮೇಲೆ ಬೀಳಬೇಕೆಂದು ೨ನೆಯ ಸೋಮೇಶ್ವರನಿಗೆ ಹೇಳಿಕಳುಹಿದನು. ರೋಗಿ ಬಯಸಿದ್ದು ಹಾಲೋಗರ, ವೈದ್ಯ ಹೇಳಿದ್ದು ಹಾಲೋಗರ ಎಂಬ ಗಾದೆಯಂತೆ, ರಾಜಿಗನ ಬೇಡಿಕೆಯನ್ನು ಕೇಳಿ ಸೋಮೇಶ್ವರನಿಗೆ ಅತ್ಯಾನಂದವಾಯಿತು. ಅಡಕೊತ್ತಿನಲ್ಲಿ ಸಿಕ್ಕ ಅಡಕೆಯಂತೆ ಎರಡು ದಂಡುಗಳ ನಡುವೆ ಸಿಕ್ಕ ವಿಕ್ರಮಾದಿತ್ಯನು ನಿಶ್ಚಯವಾಗಿ ತುಂಡರಿಸಲ್ಪ ಡುವನೆಂದು ಅವನು ಅತಿಶಯವಾಗಿ ಹಿಗ್ಗಿದನು. ಅವನು ಸೋಮಾ ರಿಯೂ ಅಳ್ಳೆದೆಯವನೂ ಜಂಬದವನೂ ಆದ್ದರಿಂದ ತನ್ನ ಮನೋ ರಾಜ್ಯದ ಬೆಡಗಿನ ಬೆರಗಿನಲ್ಲಿ ಕೆಲ ದಿವಸಗಳನ್ನು ವ್ಯರ್ಥವಾಗಿ ರಾಜ ಧಾನಿಯಲ್ಲಿ ಕಳೆದುದರಿಂದ ಚೋಳರ ಬಲವನ್ನು ಅರೆವಾಸಿ ಕುಗ್ಗಿಸಲಿಕ್ಕೆ ವಿಕ್ರಮಾಂಕನಿಗೆ ಅನುಕೂಲವಾಯಿತು.

ರಾಜೇಂದ್ರಚೋಳನು ತುಂಗಭದ್ರೆಯ ಸಮೀಪಕ್ಕೆ ಬಂದನೆಂಬ ಸುದ್ದಿಯನ್ನು ಕೇಳಿದ ಕೂಡಲೆ ಚಪಲನೂ ಕಾರ್ಯದಕ್ಷನೂ ಸಾಹ ಸಿಯೂ ಶೂರನೂ ಆದ ವಿಕ್ರಮಾರ್ಕನು ಲಗುಬಗೆಯಿಂದ ಹೊಳೆಯನ್ನು ದಾಟಿ ಹೋಗಿ, ಚೋಳರ ಮೇಲೆ ಆಬ್ಬರದಿಂದ ಬಿದ್ದನು. ಚೋಳರು ಎಷ್ಟು ಹುರುಪಿನಿಂದ ಕಾದಿದರೂ ಕನ್ನಡಿಗರ ಗಂಡು ಹೊಡತಕ್ಕೆ ಈಡಾಗದೆ ಬೆನ್ನುತೋರಿಸತೊಡಗಿದರು. ಅಷ್ಟರಲ್ಲಿ ''ಘಾತವಾಯಿತು, ಬೇಗನೆ ಓಡಿರಿ. ಹರಹರ ಪರಮೇಶ್ವರಾ'' ಎಂದು ಒದರುತ್ತ ಒತ್ತರವಾಗಿ ಸೋಮೇಶ್ವರನ ದಂಡು ಹಿಂದಿನಿಂದ ಬರುವುದನ್ನು

ನೋಡಿ ರಾಜೇಂದ್ರಚೋಳನು "ಸೋಮೇಶ್ವರನ ಸಾಹಾಯ ಸೇನೆಯು ಬಂತು; ಹೆದರಬೇಡರಿ. ಹಿಂದಿರುಗಿ ಹಗೆಗಳನ್ನು ಹೊಡೆಯಿರಿ" ಎಂದು ಕೂಗಿ ತನ್ನ ದಂಡಾಳುಗಳನ್ನು ಹುರಿದುಂಬಿಸಿ, ಮತ್ತೆ ಕಾದಲಿಕ್ಕೆ ಅನುವಾದನು. ಜಾಣನೂ ಯುದ್ಧಚತುರನೂ ಆದ ವಿಕ್ರಮಾದಿತ್ಯನು ತನ್ನ ದಂಡನ್ನು ಇಬ್ಭಾಗಿಸಿ, ಕೆಲ ಶೂರ ದಳವಾಯಿಗಳನ್ನು ಚೋಳರೊಡನೆ ಕಾದಲಿಕ್ಕಿಟ್ಟು, ಉಳಿದ ದಂಡನ್ನು ತೆಗೆದುಕೊಂಡು ತಾನೇ ರಭಸದಿಂದ ಸೋಮೇಶ್ವರನ ದಂಡಿನ ಮೇಲೆ ಬಿದ್ದನು. ಈ ಕಾಲಕ್ಕೆ ನಡೆದ ತುಮುಲ ಯುದ್ಧವನ್ನು ಬಣ್ಣಿಸಲಳವಲ್ಲ. ಕತ್ತಿಗಳ ಕಡಿತವೂ ಬಾಣಗಳ ಸುರಿಮಳೆಯೂ ಬಿಲ್ಲುಗಳ ಝೇಂಕಾರವೂ ಜಾವಿಗೆ ಕಲ್ಲುಗಳ ಸುಂಯ್ಕಾರವೂ ಆನೆಗಳ ಚೀರಾಟವೂ ಕುದುರೆಗಳ ಹೇಷವೂ ಗಾಯಪಟ್ಟವರ ಗೋಳಾಟವೂ ವೀರರ ಅಬ್ಬರವೂ ಮರಣೋನ್ಮುಖರ ಹಾಹಾಕಾರವೂ ದಶದಿಕ್ಕುಗಳನ್ನು ತುಂಬಿಬಿಟ್ಟವು. ರಣಾಂಗಣದಲ್ಲಿ ನಾಲ್ಕಾರು ಮೈಲುಗಳ ವರೆಗೆ ಹೆಣದ ರಾಶಿಗಳು ಬಿದ್ದವು. ಧೀರನಾದ ವಿಕ್ರಮಾಂಕನು ಇತ್ತಿಂದತ್ತ ಅತ್ತಿಂದಿತ್ತ ದಂಡಿನವರನ್ನು ಹುರಿದುಂಬಿಸುತ್ತ ಹೇಡಿಗಳನ್ನು ಹಳಿಯುತ್ತ ಎದುರಾದವರನ್ನು ತುಂಡರಿಸುತ್ತ ರಣಾಂಗಣದಲ್ಲಿ ಅಶ್ವಾರೂಢನಾಗಿ ಓಡಾಡುತ್ತಿದ್ದನು*. ಹೇಡಿಯಾದ ಸೋಮೇಶ್ವರನು ಒಂದು ಎತ್ತರವಾದ ಆಸನದ ಮೇಲೆ ಕುಳಿತು, ತನ್ನ ತಮ್ಮನ ದಂಡಿನವರ ಹೊಡತಕ್ಕೆ ಹೆದರಿ ಓಡಿಹೋಗುವ ತನ್ನ ದಂಡಾಳುಗಳನ್ನು ನೋಡಿ ಎದೆಯೆದೆ ಬಡಕೊಳ್ಳುತ್ತಿದ್ದನು, ಮತ್ತು ರಾಜೇಂದ್ರಚೋಳನು ಗಜಾರೂಢನಾಗಿ ತನ್ನ ಸೈನ್ಯದವರನ್ನು ಹುರಿದುಂಬಿಸುತ್ತಿದ್ದನು. ಕೊನೆಗೆ ವೀರ ವಿಕ್ರಮಾಂಕನ ಶೌರ್ಯ ಧೈರ್ಯ ಸಾಹಸ ಚಾತುರ್ಯವು ಜಯ ಹೊಂದಿತು. ಚೋಳರು ಸೋತು ಓಡಿದರು. ಸೋಮೇಶ್ವರನ

---

* ಕ್ಷಣಮುದಚಲದುಚ್ಚಲತ್ಪತಾಕೇ ದ್ರವಿಡಬಲೇ ಕ್ಷಣಮಗ್ರಜಸ್ಯ ಸೈನ್ಯೇ।
ರಣಭುವಿ ಸ ಚಚಾರ ಯತ್ರ ಯತ್ರನ್ಯಪಿಬದರಾತಿಯಶಾಂಸಿ ತತ್ರ ತತ್ರ ॥

ವಿ. ಚ. ಸ. ೬, ಶ್ಲೋ. ೮೨

ದಂಡು ಕಾಲಿಗೆ ಬುದ್ಧಿ ಹೇಳಿತು; ಮತ್ತು ಸೋಮೇಶ್ವರನು ಸೆರೆ ಸಿಕ್ಕನು (೧೦೭೬)*.

ಈ ಕಾಳೆಗದಿಂದ ೨ನೆಯ ಸೋಮೇಶ್ವರನು ತನ್ನ ಸಾಮ್ರಾಜ್ಯಕ್ಕೆ ಎರವಾದ್ದರಿಂದ ಇದು ಮಹತ್ವದ ಕಾಳೆಗವೇ ಸರಿ. ಆದರೆ ನಮ್ಮ ದುರ್ದೈವದಿಂದ ಇದು ಯಾವ ಊರ ನೆರೆಯಲ್ಲಿ ಆಯಿತೆಂಬುದು ಗೊತ್ತಾಗುವುದಿಲ್ಲ. ಆದಕಾರಣ ಇದಕ್ಕೆ **ತುಂಗಭದ್ರೆ ತೆಂಕಣ ಕಾಳೆಗ** ವೆಂದು ನಾಮಕರಣಮಾಡಲಿಕ್ಕೆ ಅಡ್ಡಿಯಿಲ್ಲ. ಇದು ೧೦೭೬ ನೆಯ ಇಸ್ವಿಯ ಜನವರಿ ತಿಂಗಳಲ್ಲಿ ಆಗಿರಬಹುದು. ಸೆರೆಸಿಕ್ಕ ಬಳಿಕ ಸೋಮೇಶ್ವರನ ಹಾಡು ಏನಾಯಿತೆಂಬುದು ತಿಳಿಯುವುದಿಲ್ಲ. ಇವನ ಹೆಂಡಂದಿರು ಯಾರಾಗಿದ್ದರೆಂಬುದಾಗಲಿ ಇವನಿಗೆ ಎಷ್ಟು ಮಂದಿ ಮಕ್ಕಳಿದ್ದರೆಂಬುದಾಗಲಿ ಗೊತ್ತಾಗುವುದಿಲ್ಲ.

೨ನೆಯ ಸೋಮೇಶ್ವರನ ಆಳಿಕೆಯಲ್ಲಿ ಮಂಡಲೇಶ್ವರರು ಕೆಳಗೆ ಬರೆದಂತೆ ಸಾಮ್ರಾಜ್ಯದ ಬೇರೆ ಬೇರೆ ಭಾಗಗಳನ್ನು ಆಳುತ್ತಿದ್ದರು:—

೧. ಯಾದವ ಮನೆತನದ ಮಹಾಮಂಡಲೇಶ್ವರ ೨ನೆಯ ಸೆವುಣಚಂದ್ರನು ಸೆವುಣ ಪ್ರಾಂತವನ್ನು ಆಳುತ್ತಿದ್ದನು (೧೦೬೯).

೨. ಕದಂಬ ಮನೆತನದ ಮಹಾಮಂಡಲೇಶ್ವರ ಲಕ್ಷ್ಮರಸನು ಬೆಳ್ವೊಲ ೩೦೦ನ್ನೂ ಪುಲಿಗೆರೆ ೩೦೦ನ್ನೂ ಆಳುತ್ತಿದ್ದನು (೧೦೭೧). ೧ನೆಯ ಸೋಮೇಶ್ವರನ ಆಳಿಕೆಯಲ್ಲಿ ಚೋಳರು ಹಾಳುಮಾಡಿದ ಬಸದಿಗಳನ್ನು ಇವನು ದುರಸ್ತು ಮಾಡಿಸಿದನು.

೩. ಮಹಾಪ್ರಧಾನ ಹೆ(ಹಿ?)ರಿ ಸಂಧಿವಿಗ್ರಹಿ ಮನೆವೆರ್ಗಡೆ ದಂಡನಾಯಕ ಉದಯಾದಿತ್ಯನು ಬಂಕಾಪುರದಲ್ಲಿ ಕೆಲಸಮಾಡುತ್ತಿದ್ದನು (೧೦೭೧).

---

* ಕಿಮುಪರಮುಪರಿಪ್ರತಾಪ ಭಾಜಾಂ ವಿಹಿತಪದಃ ಸ ಬಭಂಜ ರಾಜಯುಗ್ಮಂ।
ದ್ರವಿಡಪತಿರಗಾತ್ಕ್ವಚಿತ್ಸಲಾಯ್ಯನ್ಯವಿಶತ ಬಂಧನಧಾಮ್ನಿ ಸೋಮದೇವಃ॥
ವಿ. ಚ. ಸ. ೬, ಶ್ಲೋ. ೯೦.

೪. ಮಹಾಪ್ರಧಾನ ಹೆ(ಹಿ?)ರಿ ಸಂಧಿವಿಗ್ರಹಿ ಸೇನಾಧಿಪತಿ ಕಡಿತವೆರ್ಗಡೆ ದಂಡನಾಯಕ ಬಲದೇವಯ್ಯನು ಸಾರ್ವಭೌಮನ ಹತ್ತಿರಿದ್ದು ಕೆಲಸಮಾಡುತ್ತಿದ್ದನು (೧೦೬೨).

೫. ಮಹಾಸಾಮಂತಾಧಿಪತಿ ದಂಡನಾಯಕ ನಾಕಿಮಯ್ಯನು ವಿಜಾಪುರದ ಬಡಗಲ ಪ್ರದೇಶವಾದ ತರ್ದವಾಡಿ ೧,೦೦೦ವನ್ನು ಆಳುತ್ತಿದ್ದನು (೧೦೭೪).

೬. ಗಂಗ ಮನೆತನದ ಗಂಗಪೆರ್ಮಾನಡಿ ಭುವನೈಕವೀರ ಉದಯಾದಿತ್ಯನು ಬನವಾಸಿ ೧೨,೦೦೦ವನ್ನೂ, ಸಂತಲಿಗೆ ೧,೦೦೦ವನ್ನೂ, ಮಂಡಳಿ ೧,೦೦೦ವನ್ನೂ, ೧೮ ಅಗ್ರಹಾರಗಳನ್ನೂ* ಆಳುತ್ತಿದ್ದನು (೧೦೭೫).

೭. ಜೀಮೂತವಾಹನ ಮನೆತನದ ಕಲಿಯಮ್ಮರಸನು ಉದಯಾದಿತ್ಯನ ಕಯ್ಕೆಳಗೆ ಬಾಸವೂರು ೧೪೦ನ್ನು ಆಳುತ್ತಿದ್ದನು (೧೦೭೫).

೮. ರಟ್ಟ ಮನೆತನದ ಮಹಾಮಂಡಲೇಶ್ವರ ೨ನೆಯ ಕಾರ್ತವೀರ್ಯನು ಸೌದತ್ತಿಯಲ್ಲಿ ಕುಂಡಿ ೩,೦೦೦ವನ್ನು ಆಳುತ್ತಿದ್ದನು (೧೦೭೫).

೯, ೧೦. ಮಹಾಸಾಮಂತಾಧಿಪತಿ ದಂಡನಾಯಕ ಮಹಾಪ್ರಧಾನ ಹೆ(ಹಿ?)ರಿ ಸಂಧಿವಿಗ್ರಹಿ ಮನೆವೆರ್ಗಡೆ ಸೋಮೇಶ್ವರಭಟ್ಟನೂ ಮಹಾಸಾಮಂತಾಧಿಪತಿ ದಂಡನಾಯಕ ಕೇಶವಾದಿತ್ಯದೇವನೂ ಸಾರ್ವಭೌಮನ ಹತ್ತಿರಿದ್ದರು (೧೦೭೫).

೧೧. ಎರಡನೆಯ ಸೋಮೇಶ್ವರನ ತಮ್ಮನಾದ ೩ನೆಯ ಜಯಸಿಂಹನು ನೊಳಂಬವಾಡಿ ಪ್ರಾಂತದ ಮಹಾಮಂಡಲೇಶ್ವರನಾಗಿದ್ದನು (೧೦೭೨).

---

* ಈ ಅಗ್ರಹಾರಗಳು ಎಲ್ಲೆಲ್ಲಿದ್ದವೆಂಬುದು ಗೊತ್ತಾಗುವುದಿಲ್ಲ. ವಿಜಾಪುರ ಜಿಲ್ಲಾ ಪಟ್ಟದಕಲ್ಲು ಮತ್ತು ಹೊನ್ನವಾಡ, ಬೆಳಗಾವಿ ಜಿಲ್ಲಾ ಹೂಲಿ, ಧಾರವಾಡ ಜಿಲ್ಲಾ ನರಗುಂದ ಮತ್ತು ಡಂಬಳ, ಮೈಸೂರ ಸಂಸ್ಥಾನ ತಾಳಗುಂದ ಈ ಊರುಗಳಲ್ಲಿ ಅಗ್ರಹಾರಗಳಿದ್ದವೆಂದು ತೋರುತ್ತದೆ.

೧೨. ಸಿಂದ ಮನೆತನದ ಮಹಾಮಂಡಲೇಶ್ವರ ಸಿಂಗಣನು ಕಿಸುಕಾಡು ೭೦ನ್ನು ಆಳುತ್ತಿದ್ದನು (೧೦೭೬).

೧೩. ಎರಡನೆಯ ಸೋಮೇಶ್ವರನ ತಮ್ಮನಾದ ವಿಕ್ರಮಾದಿತ್ಯನು ಬನವಾಸಿ ೧೨,೦೦೦ದ ಮಹಾಮಂಡಲೇಶ್ವರನಾಗಿದ್ದನು (೧೦೭೪).

೧೪. ಎರಡನೆಯ ಸೋಮೇಶ್ವರನ ೩ನೆಯ ತಮ್ಮನಾದ ವಿಷ್ಣುವರ್ಧನ ವಿಜಯಾದಿತ್ಯನು ೧೦೬೪, ೧೦೬೬ರಲ್ಲಿ ನೊಳಂಬವಾಡಿ ೩,೨೦೦ದ ಮಹಾಮಂಡಲೇಶ್ವರನಾಗಿದ್ದನು. ಇವನ ಆ ಕಾಲದ ರಾಜಧಾನಿಯು ಕಪಿಲಿ ಅಥವಾ ಬಳ್ಳಾರಿ ಜಿಲ್ಲಾ ಹೊಸಪೇಟೆ ತಾಲೂಕು ಕಂಪಿಲಿಯಾಗಿತ್ತು. ಇವನಿಗೆ ಆಹವಮಲ್ಲನ ಅಂಕಕಾರ, ಸಾಹಸ ಮಲ್ಲ, ಸಮಸ್ತ ಲೋಕಾಶ್ರಯ, ವೆಂಗಿ ಮಂಡಲೇಶ್ವರ, ಚಾಳುಕ್ಯ



ವಿಕ್ರಮಾದಿತ್ಯನ ಚಿತ್ರ

ಮಾಣಿಕ್ಯ ಎಂಬ ಬಿರುದುಗಳಿದ್ದವೆಂದು ಜಟಿಂಗ ರಾಮೇಶ್ವರ ಗುಡ್ಡದ ಮತ್ತು ದಾವಣಗೆರೆಯ ಶಿಲಾಲೇಖಗಳಿಂದ ಕಂಡುಬರುತ್ತದೆ. ಇವನ ತಾಯಿಯು ವೆಂಗಿಯ ಪೂರ್ವ ಚಾಳುಕ್ಯ ಮನೆತನದ ಅರಸುಮಗಳಾದ್ದರಿಂದ ಇವನಿಗೆ ವೆಂಗಿ ಮಂಡಲೇಶ್ವರನೆಂಬ ಬಿರುದು ಬಂದಿರಬಹುದೆಂದು ಡಾ॥ ಫ್ಲೀಟರು ಊಹಿಸುತ್ತಾರೆ*. ೧೦೭೪ರಲ್ಲಿ ಇವನು ವಿಕ್ರಮಾದಿತ್ಯನ ಕಯ್ಕೆಳಗಿನವನಾಗಿ ಬನವಾಸಿ ಪ್ರಾಂತವನ್ನು ಆಳುತ್ತಿದ್ದನೆಂದು ಧಾರವಾಡ ಜಿಲ್ಲಾ ಹಾನಗಲ್ಲ ತಾಲೂಕು ಸೀರಲಿಗೆಯ ಶಿಲಾಲೇಖದಿಂದ ಗೊತ್ತಾಗುತ್ತದೆ. ವಿದ್ಯಾಪತಿ ಬಿಲ್ಹಣ ಕವಿಯು ತನ್ನ ವಿಕ್ರಮಾಂಕದೇವ ಚರಿತದಲ್ಲಿ ಇವನ ಹೆಸರನ್ನೇ ಎತ್ತಿಲ್ಲಾದ್ದರಿಂದ ೨ನೆಯ ಸೋಮೇಶ್ವರ ವಿಕ್ರಮಾದಿತ್ಯರ ಜಗಳವು ಆರಂಭವಾಗುವುದಕ್ಕಿಂತ ಮೊದಲೇ ಇವನು ಸತ್ತಿದ್ದನೆಂದು ಊಹಿಸಬಹುದು.

## ೮. ಆರನೆಯ ವಿಕ್ರಮಾದಿತ್ಯ

(೧೦೭೬–೧೧೨೬)

ತುಂಗಭದ್ರೆ ತೆಂಕಣ ಕಾಳಗದಲ್ಲಿ ಅಪೂರ್ವವಾದ ಗೆಲವು ದೊರೆತ ಬಳಿಕ ವೀರ ವಿಕ್ರಮನು ಜಯಭೇರಿಯನ್ನು ಹೊಡಿಸುತ್ತ ತನ್ನ ತಂದೆಯ ಹೊಸ ರಾಜಧಾನಿಯಾದ ಕಲ್ಯಾಣದ ದಾರಿಯನ್ನು ಹಿಡಿದನು. ಕಲ್ಯಾಣದ ಅಧಿಕಾರಿಗಳು ಅವನಿಗೆ ಅನುಕೂಲರಾದ್ದರಿಂದ ಅವನು ಉತ್ಸವದಿಂದ ರಾಜಧಾನಿಯನ್ನು ಪ್ರವೇಶಿಸಿ, ಪಟ್ಟಾಭಿಷೇಕಕ್ಕೆ ಅಡರಾಸದೆ, ಮುಖ್ಯ ಮುಖ್ಯರಾದ ಸಾಮಂತ ಮಂಡಲೇಶ್ವರರನ್ನು ಕರೆಯಿಸಿ, ಅವರೆಲ್ಲರ ಅನುಮತಿಯಿಂದ ಪಟ್ಟಾಭಿಷೇಕ ಮಹೋತ್ಸವವನ್ನು ಅತಿವಿಜೃಂಭಣೆಯಿಂದ ಮಾಡಿಸಿಕೊಂಡನು (ಶಕ ೯೯೯ನೆಯ ನಳ ಸಂವತ್ಸರ ಚೈತ್ರ ಶುದ್ಧ ೧, ೯ ಮಾರ್ಚ ೧೦೭೬)†. ಇವನು ತನ್ನ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪುಟ ೪೫೪, ಅಡಿಟಿಪ್ಪಣಿ ೫.

† ಅಥ ಸುರಪಥವಲ್ಗದ್ದಿವ್ಯ ಭೇರೀ ನಿನಾದಂ।
ಪ್ರಶಮಿತ ಪರಿತಾಪಂ ಭರ್ತೃಲಾಭಾತ್ಪೃಥಿವ್ಯಾಃ ॥
ಅಲಭತ ಚಿರಚಿತ್ತಾಚಾಂತ ಚಾಲುಕ್ಯಲಕ್ಷ್ಮೀ।
ಕ್ಲಮಮುಪಮಭಿಷೇಕಂ ವಿಕ್ರಮಾದಿತ್ಯದೇವಃ ॥ ವಿ. ಚ. ಸ. ೬, ಶ್ಲೋ. ೯೮.

ಮನೆತನದ ಸಾಮಾನ್ಯ ಬಿರುದುಗಳನ್ನಲ್ಲದೆ, ತ್ರಿಭುವನಮಲ್ಲನೆಂಬ ವಿಶಿಷ್ಟ ಬಿರುದನ್ನು ಧರಿಸಿದನು.

ತುಂಗಭದ್ರೆ ತೆಂಕಣ ಕಾಳೆಗದಲ್ಲಿ ತಾನು ಎರಡು ದೊಡ್ಡ ದಂಡುಗಳನ್ನು ಸೋಲಿಸಿದ್ದರಿಂದ ತನ್ನಲ್ಲಿ ಅಮಾನುಷ ಶಕ್ತಿಯು ಇರುತ್ತದೆಂಬ ತಿಳಿವಳಿಕೆಯು ವಿಕ್ರಮಾರ್ಕನಲ್ಲಿ ಅಂಕುರಿಸಿತು. ಅವನ ಸ್ವಾಭಿಮಾನವು ಹೆಚ್ಚಿತು. ತಾನು ಈಶ್ವರ ಪ್ರಸಾದದಿಂದ ಹುಟ್ಟಿದವನಾದಕಾರಣ ನಂದ ಶಾಲಿವಾಹನರಂತೆ ಶಕಪುರುಷನಾಗಲಿಕ್ಕೆ ತಾನು ತಕ್ಕವನೆಂಬ ಭಾವನೆಯು ಅವನಲ್ಲಿ ಹುಟ್ಟಿದ್ದರಿಂದ ಅವನು ತನ್ನ ಪಟ್ಟಾಭಿಷೇಕದ ದಿವಸದಿಂದ ತನ್ನ ಶಕವನ್ನು ಆರಂಭಿಸಬೇಕೆಂದು ತನ್ನ ಸಾಮ್ರಾಜ್ಯದ ಎಲ್ಲ ಭಾಗಗಳಿಗೆ ಕಟ್ಟಪ್ಪಣೆಯನ್ನು ಕಳುಹಿದನು. ಈ **ವಿಕ್ರಮ ವರ್ಷ**ದ ಆರಂಭವು ವಿಕ್ರಮಾಂಕನ ಆಳಿಕೆಯ ಮೊದಲನೆಯ ಮಹತ್ವದ ಸಂಗತಿಯಾಗಿದ್ದರೂ **ತ್ರಿಭುವನಮಲ್ಲದೇವ ವಿದ್ಯಾಪತಿ ಕಾಶ್ಮೀರಭಟ್ಟ ಬಿಲ್ಹಣನು** ತನ್ನ ವಿಕ್ರಮಾಂಕದೇವ ಚರಿತದಲ್ಲಿ ಅದನ್ನು ಏಕೆ ವರ್ಣಿಸಲಿಲ್ಲೆಂಬುದು ಗೊತ್ತಾಗುವುದಿಲ್ಲ. ಈ ಶಕವು ಮುಂದೆ ಸುಮಾರು ೧೦೦ ವರ್ಷಗಳ ವರೆಗೆ ರೂಢಿಯಲ್ಲಿತ್ತೆಂಬುದಕ್ಕೆ ಆ ಕಾಲದ ನೂರಾರು ಶಾಸನಗಳು ಸಾಕ್ಷಿಯಾಗಿರುತ್ತವೆ. ವಿಕ್ರಮಾಂಕದೇವನ ಇಷ್ಟು ದೊಡ್ಡ ವರ್ಣನೆಯಲ್ಲಿ ಬಿಲ್ಹಣ ಕವಿಯು ವಿಕ್ರಮ ಶಕಾರಂಭವನ್ನು ಬಿಟ್ಟದು ಸೋಜಿಗದ ಸಂಗತಿಯೇ ಸರಿ.

ತಾನು ಸಾರ್ವಭೌಮನಾಗಿ ತನ್ನ ಶಕವನ್ನು ಆರಂಭಿಸಿದ ಬಳಿಕ ವಿಕ್ರಮಾದಿತ್ಯನು ತನ್ನ ತಮ್ಮನಾದ ಜಯಸಿಂಹನಿಗೆ ಯುವರಾಜ ಪಟ್ಟಗಟ್ಟಿ, ಅವನನ್ನು ಬನವಾಸಿಯ ಮಹಾಮಂಡಲೇಶ್ವರನಾಗಿ ಮಾಡಿದನು. ಅಷ್ಟರಲ್ಲಿ ಸಿಲಾಹಾರ ಮನೆತನದ ಅರಸು ಮಗಳಾದ ಚಂದಲದೇವಿ (ಚಂದ್ರಲೇಖೆ)ಯು ಅತಿರೂಪವತಿಯಾಗಿರುತ್ತಾಳೆಂತಲೂ ಆಕೆಯ ಮನಸ್ಸಿನಲ್ಲಿ ವಿಕ್ರಮಾರ್ಕನನ್ನು ಮದುವೆಮಾಡಿಕೊಳ್ಳುವುದಿರುತ್ತದೆಂತಲೂ ಆ ಉದ್ದೇಶದಿಂದ ಆಕೆಯು ಸದ್ಯದಲ್ಲಿ ಸ್ವಯಂವರವನ್ನು ಮಾಡುವವಳಿದ್ದಾಳೆಂತಲೂ ಚಾರರು ಸುದ್ದಿಯನ್ನು ತಂದರು. ಕೂಡಲೆ ವಿಕ್ರಮಾದಿತ್ಯನು ಆ ಸ್ವಯಂವರಕ್ಕೆ ಹೋದನು. ಚಂಧಲದೇವಿಯು

ಅಯೋಧ್ಯಾ, ಚೇದಿ, ಕಾನ್ಯಕುಬ್ಜ, ಕಲಿಂಜರ, ಗೋಪಾಚಲ, ಮಾಳವ, ಗುರ್ಜರ, ಪಾಂಡ್ಯ, ಚೋಳ ಈ ಅರಸರನ್ನು ಬಿಟ್ಟು ವಿಕ್ರಮಾದಿತ್ಯನ ಕೊರಳೊಳಗೆ ಮಾಲೆಯನ್ನು ಹಾಕಿದಳು (೧೦೭೭)*. ತನಗೆ ಮೆಚ್ಚಿದ ಚಂದಲದೇವಿಯನ್ನು ಯಥಾವಿಧಿಯಾಗಿ ಮದುವೆಮಾಡಿಕೊಂಡು ಸಂತುಷ್ಟನಾದ ವಿಕ್ರಮಾದಿತ್ಯನು ತನ್ನ ರಾಜಧಾನಿಗೆ ತಿರುಗಿಬಂದನು. ಈ ಚಂದಲದೇವಿಗೆ ಶಾಸನಗಳಲ್ಲಿ 'ಪಿರಿಯರಸಿ', 'ಅಗ್ರ ಮಹಾಮಹಿಷಿ' ಎಂಬ ಬಿರುದುಗಳಿರುತ್ತವೆ. ಇವಳಿಂದ ಹುಟ್ಟಿದ **ಜಯಕರ್ಣನು** ೧೧೦೨ರಿಂದ ೧೧೨೧ರ ವರೆಗೆ ಕುಂಡಿ ಮುಂತಾದ ಮಧ್ಯಭಾಗಗಳ ಮಹಾಮಂಡಲೇಶ್ವರನಾಗಿ ತಂದೆ ಇರುವಾಗಲೇ ಸತ್ತಿರಬಹುದೆಂದು ಡಾ॥ ಫ್ಲೀಟರು ಬರೆಯುತ್ತಾರೆ†.

ಬಿಲ್ಹಣಭಟ್ಟನೆಂಬೊಬ್ಬ ಕಾಶ್ಮೀರದೇಶದ ಘನಪಂಡಿತನು ವಿಕ್ರಮಾದಿತ್ಯನ ಆಶ್ರಯದಲ್ಲಿದ್ದು ವಿಕ್ರಮಾಂಕದೇವ ಚರಿತವೆಂಬ ಒಂದು ಸುರಸ ಕಾವ್ಯವನ್ನು ಬರೆದಿರುತ್ತಾನಷ್ಟೇ. ಈ ಕವಿಯು ಸುಮಾರು ೧೦೬೩ರಲ್ಲಿ ತನ್ನ ಜನ್ಮಭೂಮಿಯನ್ನು ಬಿಟ್ಟು, ದಹಾಲ ಅಥವಾ ಚೇದಿಯ ಅರಸನಾದ ಕರ್ಣನ ಆಶ್ರಯದಲ್ಲಿ ಕೆಲಕಾಲ ನಿಂತು, ಅವನು ರಾಜ್ಯಭ್ರಷ್ಟನಾದ ಬಳಿಕ ರಾಮೇಶ್ವರದ ವರೆಗೆ ತೀರ್ಥಾಟನವನ್ನು ಮಾಡಿ, ಕಲ್ಯಾಣಕ್ಕೆ ಬಂದು (೧೦೭೭) ವಿಕ್ರಮಾರ್ಕನ ಆಶ್ರಯವನ್ನು ಪಡೆದನೆಂತಲೂ ವಿಕ್ರಮಾಂಕನು ಅವನಿಗೆ **ವಿದ್ಯಾಪತಿ** ಎಂಬ ಬಿರುದನ್ನೂ ಒಂದು ನೀಲಛತ್ರವನ್ನೂ ಕೊಟ್ಟಿದ್ದನೆಂತಲೂ ವಿಕ್ರಮಾದಿತ್ಯನು ದಂಡಿನೊಡನೆ ಕರ್ನಾಟಕದಲ್ಲಿ ಸಂಚಾರಮಾಡುವಾಗ ಅವನ ಆನೆ ನೀಲಛತ್ರಗಳು ಸಾರ್ವಭೌಮನ ಆನೆ ಛತ್ರಗಳ ಮುಂದೆ ಕಂಗೊಳಿಸುತ್ತಿದ್ದವೆಂತಲೂ, ಅವನು ವಿಕ್ರಮಾಂಕ ಚರಿತವನ್ನು ಸುಮಾರು ೧೦೮೫ರಲ್ಲಿ ಬರೆದಿರಬಹುದೆಂತಲೂ ೧೧ನೆಯ ಶತಮಾನದ

---

* ಲಜ್ಜಾನಿರಾಸೆ ನಿಭಮಾತ್ರಕೇಣ ವಾಕ್ಯೇನ ತೇನ ಪ್ರತಿಹಾರರಕ್ಷ್ಯಾಃ।
ಪತಿಂವರಾ ಸಂವರಣಸ್ರಜಂ ತಾಂ ಶ್ರೀವಿಕ್ರಮಾಂಕಸ್ಯ ಚಕಾರ ಕಂಠೇ ॥

ಸ. ೯, ಶ್ಲೋ. ೧೪೭.

† ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೫೫.

ಕೊನೆಯುವರೆಗೆ ಕಲ್ಯಾಣದಲ್ಲಿ ಆಸ್ಥಾನ ಕವಿಯಾಗಿರಬಹುದೆಂತಲೂ ಡಾ॥ ಬುಲ್ಹರರು ಅಭಿಪ್ರಾಯಪಡುತ್ತಾರೆ*.

ಹೊಸ ರಾಣಿಯಾದ ಚಂದಲದೇವಿಯೊಡನೆ ಜಲಕ್ರೀಡೆ ಮುಂತಾದ ವಿನೋದಗಳಲ್ಲಿ ವಿಕ್ರಮಾದಿತ್ಯನು ಅತ್ಯಾನಂದದಿಂದ ೧೦೭೭ನೆಯ ಇಸ್ವಿಯ ಬೇಸಿಗೆ ಮಳೆಗಾಲಗಳನ್ನು ಕಳೆಯುತ್ತಿರುವಾಗ, ಚಾರರು ಬಂದು ಉದ್ದಕ್ಕೆ ಪೊಡಮಡಿದು ಎದ್ದು ಕಯ್ಜೋಡಿಸಿಕೊಂಡು ಕೆಳಗೆ ಮೋರೆಮಾಡಿ ಬಿನ್ನವಿಸಿದ್ದೇನಂದರೆ—"ಮಹಾರಾಜಾಧಿರಾಜ ತಮ್ಮ ಅಪ್ಪಣೆಯಂತೆ ನಾವು ಸೋಗು ಹಾಕಿಕೊಂಡು, ಬನವಾಸಿ ಸಂತಲಿಗೆ ನಾಡುಗಳನ್ನೆಲ್ಲ ಸಂಚರಿಸಿದೆವು. ನಮಗೆ ತಿಳಿದ ಸಂಗತಿಗಳನ್ನೆಲ್ಲ ಅರುಹಲಿಕ್ಕೆ ನಮಗೆ ಹೆದರಿಕೆ ಬರುತ್ತದೆ. ನಮಗೆ ಗೊತ್ತಾದುದನ್ನು ಹೇಳಲಿಕ್ಕೆ ಮಹಾರಾಜರು ಅಭಯವಚನವನ್ನು ದಯವಿಟ್ಟು ದಯಪಾಲಿಸಿದರೆ, ನಾವು ಕಂಡುದನ್ನೂ ಕೇಳಿದುದನ್ನೂ ಮರೆಮಾಡದೆ ಅರಿಕೆಮಾಡುವೆವು" ಎಂದು ಹೇಳಿ, ಮತ್ತೆ ಸಾಷ್ಟಾಂಗವಾಗಿ ಎರಗಿದರು. ವಿಕ್ರಮಾರ್ಕನು ತುಸು ಆಲೋಚಿಸಿ—"ಏಳಿರಿ, ಅಂಜಬೇಡರಿ. ಇದ್ದುದನ್ನು ಮಾಜದೆ ಯಥಾರ್ಥವಾಗಿ ಹೇಳಿರಿ. ಸತ್ಯಾಶ್ರಯವೆಂಬುದೇ ನನ್ನ ಮನೆತನದ ಬಿರುದಾಗಿದೆ. ದಿಟವನ್ನು ಹೇಳುವುದೇ ನಿಮ್ಮ ಕರ್ತವ್ಯವು. ನನ್ನಿಯನ್ನಾಡುವವರು ನನ್ನವರೆಂದೆಣಿಸುವುದೇ ನನ್ನ ರಾಜಧರ್ಮವು. ಸತ್ಯಕ್ಕೆ ಸಾವಿಲ್ಲ. ಸತ್ಯವಂತರನ್ನು ಸನ್ಮಾನಿಸುವುದೇ ನನ್ನ ಪವಿತ್ರ ಕರ್ತವ್ಯ. ಏಳಿರಿ, ಮಾಜದೆ ಹೇಳಿರಿ. ಭಯಪಡಬೇಡರಿ" ಎಂದು ಅಭಯವಚನವನ್ನು ಕೊಟ್ಟ ಕೂಡಲೆ ಬೇಹಿನವರ ಮುಖ್ಯಸ್ಥನು ಎದ್ದು, ಕಯ್ಮುಗಿದುಕೊಂಡು—"ಜೀಯಾ,

* ಕಾಶ್ಮೀರೇಭ್ಯೋ ವಿನಿರ್ಯಾಂತಂ ರಾಜ್ಯೇ ಕಲಶಭೂಪತೇಃ।
ವಿದ್ಯಾಪತಿಂ ಯಂ ಕರ್ಣಾಟಶ್ಚಕ್ರೇ ಪರ್ಮಾಡಿ ಭೂಪತಿಃ ॥ ೯೩೭ ॥
ಪ್ರಸರ್ಪತಃ ಕರಟಭಿಃ ಕರ್ಣಾಟಕಟಕಾಂತರಂ।
ರಾಜ್ಞೋಗ್ರೇ ದದೃಶೇ ತುಂಗಂ ಯಸ್ಯೈವಾತಪವಾರಣಂ ॥ ೯೩೭ ॥
ತ್ಯಾಗಿನಂ ಹರ್ಷದೇವಂ ಸ ಶ್ರುತ್ವಾ ಸುಕವಿ ಬಾಂಧವಂ।
ಬಿಹ್ಲಣೋ ವಂಚನಾಂ ಮೇನೇ ವಿಭೂತಿಂ ತಾವತೀಮಪಿ ॥ ೯೩೮ ॥

ರಾಜತರಂಗಿಣಿ ೭; ವಿ. ಚ. ಉಪೋದ್ಘಾತ ಪು. ೨೧, ೨೨.

ನಯವಿಟ್ಟು ಚಿತ್ತೈಸಿರಿ, ನಾನು ಹೇಳುವ ಸುದ್ದಿಯಲ್ಲಿ ಒಂದು ಅಕ್ಷರವಾದರೂ ಹೆಚ್ಚುಕಡಮೆಯಾಗಿರುವುದಿಲ್ಲ. ಬನವಾಸಿ ಸಂತಲಿಗೆ ನಾಡುಗಳಲ್ಲಿದ್ದ ದೊಡ್ಡವರು ಸಣ್ಣವರು, ಹಿರಿಯರು ಕಿರಿಯರು, ಬಡವರು ದೈವುಳ್ಳವರು, ಆಶ್ರಿತರು ವಿರೋಧಿಗಳು, ಹುಡುಗರು ಹೆಂಗಸರು, ವೈದಿಕರು ಗೃಹಸ್ಥರು, ಅಧಿಕಾರಿಗಳು ವರ್ತಕರು, ಕೂಲಿಯವರು ಒಕ್ಕಲಿಗರು—ಎಲ್ಲರು ತಮ್ಮ ತಮ್ಮನಾದ ಜಯಸಿಂಹ ಮಹಾರಾಜರು ಅನ್ಯಾಯದಿಂದಲೂ ಜುಲುಮೆಯಿಂದಲೂ ತಮ್ಮಲ್ಲಿದ್ದ ಹಣವನ್ನು ಹರಕೊಳ್ಳುತ್ತಾರೆಂದು ಎಡೆಬಿಡದೆ ದೂರುತ್ತಾರೆ. ಹೀಗೆ ಜನರನ್ನು ಪೀಡಿಸಿ ತೆಗೆದುಕೊಂಡ ಹಣವನ್ನು ಅವರು ಹೊಸ ದಂಡನ್ನು ಕಟ್ಟಲಿಕ್ಕೂ ಹೊಸ ಆನೆಗಳನ್ನು ಕೊಳ್ಳಲಿಕ್ಕೂ ವೆಚ್ಚಮಾಡುತ್ತಾರಂತೆ. ಗುಡ್ಡಗಳಲ್ಲಿದ್ದ ಕಾಡುಜನರು ಅವರ ವಶವರ್ತಿಗಳಾಗಿರುತ್ತಾರೆ. ದ್ರವಿಡ ಅರಸನ ಸಾಹಾಯವನ್ನು ದೊರೆಕಿಸಲಿಕ್ಕೆ ವಿಶ್ವಪ್ರಯತ್ನವು ನಡೆದಿರುತ್ತದೆ. ತಮ್ಮ ದಂಡಿನವರನ್ನು ಒಡೆದುಕೊಳ್ಳಲಿಕ್ಕೆ ಹಲವು ತರದ ಹಂಚಿಕೆಗಳು ಮಾಡಲ್ಪಡುತ್ತವೆ*. ಈ ಎಲ್ಲ ಪ್ರಯತ್ನದ, ಈ ಎಲ್ಲ ಜೋಡಣೆಯ, ಈ ಎಲ್ಲ ಸಿದ್ಧತೆಯ, ಈ ಎಲ್ಲ ಖಟಾಟೋಪದ ಮುಖ್ಯವಾದ ಉದ್ದೇಶವು ತಮ್ಮ ರಾಜಧಾನಿಯಾದ ಕಲ್ಯಾಣದ ಮೇಲೆ ದಂಡೆತ್ತಿಬರುವುದೇ ಇರುತ್ತದೆಂದು ಜನರು ಗುಜಗುಡುತ್ತಾರೆ. ನನಗೆ ತಿಳಿದುದನ್ನು ಮುಚ್ಚುಮರೆಮಾಡದೆ, ಇದ್ದುದನ್ನು ಇದ್ದಹಾಗೆ ಮಹಾಪ್ರಭುಗಳಿಗೆ ಅರಿಕೆಮಾಡಿಕೊಂಡಿರುತ್ತೇನೆ. ತಮ್ಮ ದಿವ್ಯಚಿತ್ತಕ್ಕೆ ಯೋಗ್ಯವಾಗಿ ಕಂಡುದನ್ನು ಮಾಡಬಹುದು'' ಎಂದು ಹೇಳಿ ಸುಮ್ಮನಾದನು.

ಚಾರರು ಹೇಳಿದ್ದನ್ನೆಲ್ಲ ಕೇಳಿ ವಿಕ್ರಮಾರ್ಕನಿಗೆ ಸಖೇದಾಶ್ಚರ್ಯವಾಯಿತು. ಅಣ್ಣನೊಡನೆ ಕಾದಬೇಕಾದ ಬಗ್ಗೆ ಆದ ಪಶ್ಚಾತ್ತಾಪವು ಕಡಮೆಯಾಗುವಷ್ಟರಲ್ಲಿ ತಮ್ಮನೊಡನೆ ಕಾದುವ ಪ್ರಸಂಗವು ಬಂದುದ

---

* ದ್ರಾವಿಡಂ ಸ ನೃಪತಿಂ ಸಾಹಾಯತಾಂ ಪ್ರಾಪಯತ್ಯವಿರತೈರುಪಾಯನೈಃ।
ಕರ್ತುಮಿಚ್ಛತಿ ಸ್ವಕೈರುಪಕ್ರಮೈರ್ಭೇದಜರ್ಜರಮಿದಂ ಭವದ್ಬಲಮ್ ॥
ಸಂ. ೧೪, ಶ್ಲೋ. ೧೨.

ರಿಂದ ಹುಣ್ಣಿನಮೇಲೆ ಬರೆಕೊಟ್ಟಂತೆ ಅವನಿಗೆ ದುಃಖವಾಯಿತು. ಅವನು ಮನಸ್ಸಿನಲ್ಲಿ ಬಹಳ ನೊಂದುಕೊಂಡನು. ತಮ್ಮನನ್ನು ಹಾದಿಗೆ ತರಲಿಕ್ಕೆ ಏನು ಉಪಾಯಮಾಡಬೇಕೆಂದು ಆಲೋಚಿಸಿದನು. ರಾಜ ಶಬ್ದದ ಹೊರತು ಎಲ್ಲ ಅಧಿಕಾರವೂ ಸಂಪತ್ತೂ ಇದ್ದುದರಿಂದ ಜಯಸಿಂಹನ ತಲೆಯಲ್ಲಿ ಈ ತರದ ದುಷ್ಟ ವಿಚಾರವು ಏಕೆ ಹುಟ್ಟಿತೆಂಬುದು ಅವನಿಗೆ ತಿಳಿಯದ ಹಾಗಾಯಿತು*. ಅವನು ತನ್ನ ಆಪ್ತ ಮಂತ್ರಿಗಳಿಗೆ ಈ ದುಷ್ಟವಾರ್ತೆಯನ್ನು ತಿಳಿಸಿ ಅವರೊಡನೆ ಆಲೋಚಿಸಿದನು. ಕೊನೆಗೆ ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂಬ ನಾಣ್ನುಡಿಯಂತೆ, ತನ್ನೊಬ್ಬ ನಂಬಿಗಸ್ತನಾದ ಮಂತ್ರಿಯನ್ನು ಅವನಿಗೆ ಬುದ್ಧಿ ಹೇಳಲಿಕ್ಕೆ ಕಳುಹಿದನು. ಅವನು ಬನವಾಸಿಗೆ ಹೋಗಿ, ಜಯಸಿಂಹನಿಗೆ ಪರಿಪರಿಯಿಂದ ತಿಳಿಹೇಳಿದನು. ಅಹಂಕಾರ ಸ್ವಾರ್ಥಾಸೂಯಾ ಸಮಾವಿಷ್ಟರಾದವರು ರೀತಿಗೆ ಒಗ್ಗುವುದಿಲ್ಲ ಮತ್ತು ನೀತಿಗೆ ಬಗ್ಗುವುದಿಲ್ಲ. ಅವರು ದಂಡಸಾಧ್ಯರೇ ಹೊರತು ಸಾಮಸಾಧ್ಯರಲ್ಲ. ಆದ್ದರಿಂದ ಆ ಮಂತ್ರಿಯು ಮಾಡಿದ ಪ್ರಯತ್ನವೆಲ್ಲ ಹೊಳೆಯಲ್ಲಿ ಹೋಮಮಾಡಿದಂತೆ ವ್ಯರ್ಥವಾದ್ದರಿಂದ† ಅವನು ತಿರುಗಿ ಬಂದು ನಡೆದ ಎಲ್ಲ ಸಂಗತಿಯನ್ನು ವಿಕ್ರಮಾದಿತ್ಯನಿಗೆ ಅರುಹಿದನು. ಆಗ ಅವನು ಬಹಳವಾಗಿ ಹಳಹಳಿಸಿ ನಿರುಪಾಯನಾಗಿ ಯುದ್ಧದ ಸಿದ್ಧತೆಯನ್ನು ಮಾಡತೊಡಗಿದನು (೧೦೭೯?).

ತನ್ನ ಉದ್ದೇಶವು ವಿಕ್ರಮಾದಿತ್ಯನಿಗೆ ತಿಳಿದುದರಿಂದ ಅವನಿಗೆ ಜೋಡಣೆ ಮಾಡಲಿಕ್ಕೂ ಮಂಡಲೇಶ್ವರರ ದಂಡುಗಳನ್ನು ತರಿಸಿಕೊಳ್ಳಲಿಕ್ಕೂ ಹೆಚ್ಚು ಅವಕಾಶವನ್ನು ಕೊಡಬಾರದೆಂಬ ಉದ್ದೇಶದಿಂದ

---

* ಸಾರ್ಪಿತಾನಿ ಕತಿ ಮಂಡಲಾನಿ ತೇ ದಂತಿನೋ ಮದಮುಖಾಸ್ತ್ವಾಧಿಕಾಃ ।
ರಾಜಶಬ್ದಮುಪಹಾಯ ಕಾ ತವ ನ್ಯೂನತಾ ಭಜಸಿ ದುರ್ನಯಂ ಯತಃ ॥
ಸಂ. ೧೪, ಶ್ಲೋ. ೨೧.

† ಪ್ರಾಹಿಣೋತ್ಕತಿ ನ ಕ್ರಮಾಂ ತತ್ಸಮೀಪಮನಿಶಂ ವಿಶಾಂಪತಿಃ ।
ಏಕಮಪ್ಯನಯವಾಯ್ವುಲಂಘಿತೋ ನಾಗ್ರಹೀಷ್ಟ ಕುಲಕಂಟಕಸ್ತು ಸಃ ॥
ಸಂ. ೧೪, ಶ್ಲೋ. ೪೯.

ಮುಂದೆ ತುಸು ದಿವಸಗಳಲ್ಲೇ ಜಯಸಿಂಹನು ಅವಸರದಿಂದ ದಂಡೆತ್ತಿ ಹೊರಟನು. ಹಾದಿಯಲ್ಲಿ ಪಟ್ಟಣಗಳನ್ನು ಸುಲಿಯುತ್ತ ಊರುಗಳನ್ನು ಸುಡುತ್ತ ಅವನು ಕೃಷ್ಣಾವೇಣಿಯ ದಂಡೆಯ ವರೆಗೆ ಬಂದನು. ಅದೇ ಹೊಳೆಯ ದಂಡೆಯ ಮೇಲೆ ವಿಕ್ರಮಾರ್ಕನ ದಂಡು ಪಾಳೆಯ ಹಾಕಿಕೊಂಡು ನಿಂತಿತ್ತು. ವಿಕ್ರಮಾರ್ಕನು ಮತ್ತೆ ತನ್ನ ತಮ್ಮನನ್ನು ಹಾದಿಗೆ ತರಲಿಕ್ಕೆ ರಾಯಭಾರಿಗಳನ್ನು ಕಳುಹಿದನು. ದುರ್ಬುದ್ಧಿಯಾದ ಜಯಸಿಂಹನು ಹೊರಗೆ ಒಡಂಬಡಿಕೆಯ ಮಾತುಗಳನ್ನು ನಡಿಸಿ, ವಿಕ್ರಮಾರ್ಕನ ದಳವಾಯಿಗಳನ್ನು ಒಬ್ಬರಹಿಂದೊಬ್ಬರನ್ನು ತನ್ನ ಕಡೆಗೆ ಒಡೆದುಕೊಳ್ಳಲಾರಂಭಿಸಿದನು. ಈ ಫಿತೂರಿಯ ಸುದ್ದಿಯು ತಿಳಿದ ಕೂಡಲೆ ವೀರ ವಿಕ್ರಮಾದಿತ್ಯನು ಸಿಟ್ಟಿಗೆದ್ದು, ಬಣ ಒಡಂಬಡಿಕೆಯ ಮಾತಿನಲ್ಲಿ ಕಾಲಹರಣ ಮಾಡುವುದು ಸರಿಯಲ್ಲೆಂದು ಮನಗಂಡು, ಜಯಸಿಂಹನ ದಂಡಿನ ಮೇಲೆ ಬಿದ್ದನು. ಘೋರವಾದ ಯುದ್ಧವು ನಡೆಯಿತು. ಎರಡೂ ದಂಡಿನವರು ಹುರುಪಿನಿಂದ ಕಾದಿದರು. ಜಯಸಿಂಹನ ನೂರಾರು ಮದ್ದಾನೆಗಳು ರಭಸದಿಂದ ಬಂದು ವಿಕ್ರಮಾದಿತ್ಯನ ದಂಡಿನ ಮೇಲೆ ಬೀಳಲು, ಅವನ ದಂಡಿನ ಎಡಭಾಗವು ಹೆದರಿ ಚೆಲ್ಲಾಪಿಲ್ಲಿಯಾಯಿತು. ಕೂಡಲೆ ಎದೆಗಾರನಾದ ವಿಕ್ರಮಾದಿತ್ಯನು ತನ್ನ ಶೂರ ಸ್ವಾರರೊಡನೆ ಅಲ್ಲಿಗೆ ಬಂದು, ಬರ್ಚಿಗಳ ತಿವಿತದಿಂದಲೂ ಕತ್ತಿಗಳ ಕಡತದಿಂದಲೂ ಬಾಣಗಳ ಹೊಡತದಿಂದಲೂ ಕಲ್ಲುಗಳ ಜಡಿತದಿಂದಲೂ ಆ ಆನೆಗಳನ್ನು ಹಿಂದಕ್ಕಟ್ಟಲು, ಅವು ಜಯಸಿಂಹನ ದಂಡನ್ನು ಹೊಕ್ಕು ಅವನ ದಂಡನ್ನು ದಿಕ್ಕುಪಾಲಾಗಿ ಓಡಿಸಿಬಿಟ್ಟವು. ಈ ಅದ್ಭುತವನ್ನು ನೋಡಿ ಓಡಿಹೋದ ವಿಕ್ರಮಾದಿತ್ಯನ ದಂಡಿನವರು ತಿರುಗಿ ಬಂದು ದಿಕ್ಕೆಟ್ಟು ಓಡುತ್ತಿದ್ದ ಜಯಸಿಂಹನ ದಂಡಿನವರನ್ನು ಬೆನ್ನಟ್ಟಿದರು. ಜಯಸಿಂಹನ ಆನೆಯು ಅವನನ್ನು ಕೆಡವಿ ಓಡಿಹೋದುದರಿಂದ ಅವನು ಪಾದಚಾರಿಯಾಗಿ ಓಡಿಹೋಗುತ್ತಿದ್ದನು. ವಿಕ್ರಮಾರ್ಕನ ಒಬ್ಬ ಶೂರ ದಳವಾಯಿಯು ಅವನ ಬೆನ್ನುಹತ್ತಿ ಹೋಗಿ ಅವನನ್ನು ಕಾಡಿನಲ್ಲಿ ಹಿಡಿದು, ವಿಕ್ರಮಾರ್ಕನ ಮುಂದೆ ತಂದು ನಿಂದರಿಸಿದನು. ಆಗ ಅವನು ಜಯಸಿಂಹನನ್ನು ನೋಡಿ ಕನಿಕರಬಟ್ಟು ಅವನನ್ನು

ಸಮಾಧಾನಬಡಿಸಿದನೆಂದು ಬಿಹ್ಲಣ ಕವಿಯು ಬರೆಯುತ್ತಾನೆ*. ಈ ಕಾಳೆಗವನ್ನು ಕೃಷ್ಣಾವೇಣೀ ಕಾಳೆಗವೆಂದು ಕರೆಯಬಹುದು.

ಈ ಕಾಳೆಗವು ಯಾವ ಊರಿನ ಹತ್ತಿರ ಆಯಿತೆಂಬುದು ಗೊತ್ತಾಗದ್ದರಿಂದ ಇದಕ್ಕೆ ಕೃಷ್ಣಾವೇಣೀ ಕಾಳೆಗವೆಂಬ ಹೆಸರನ್ನಿಟ್ಟೆವು. ಆದರೆ ಇದು ಯಾವ ವರ್ಷ ಆಯಿತೆಂಬ ಬಗ್ಗೆ ಭಿನ್ನಾಭಿಪ್ರಾಯಗಳಿರುತ್ತವೆ. ಬಿಲ್ಹಣನ ಬರಹದಂತೆ ಈ ಕಾಳೆಗವು ೧೦೭೭ರಲ್ಲಿ ಆಯಿತೆಂತಲೂ ಕದಂಬ ತೈಲಪನು ಜಯಸಿಂಹನ ಬದಲು ಅದೇ ವರುಷ ಬನವಾಸಿಯ ಮಂಡಲೇಶ್ವರನಾದನೆಂತಲೂ ಡಾ|| ಬುಹ್ಲರರು ತಮ್ಮ ವಿಕ್ರಮಾಂಕದೇವ-ಚರಿತದ ಇಂಗ್ಲಿಷ ಉಪೋದ್ಘಾತದ ೪೩ ನೆಯ ಪುಟದ ೧ನೆಯ ಅಡಿಟಪ್ಪಣಿಯಲ್ಲಿ ಬರೆಯುತ್ತಾರೆ. ಆದರೆ ಜಯಸಿಂಹನು ೧೦೮೧-೮೨ ನೆಯ ಇಸ್ವಿಯವರೆಗೆ ಬನವಾಸಿ, ಸಂತಲಿಗೆ, ಬೆಳ್ವೊಲ, ಪುಲಿಗೆರೆ, ಬಾಸವಳ್ಳಿ ಈ ಭಾಗಗಳ ಮಹಾಮಂಡಲೇಶ್ವರನಾಗಿದ್ದನೆಂತಲೂ ೧೦೭೭, ೧೦೭೯, ೧೦೮೦, ೧೦೮೧ ಈ ಇಸ್ವಿಯ ಮೈಸೂರು ಸಂಸ್ಥಾನ ಅನಂತಪುರ, ಧಾರವಾಡ ಜಿಲ್ಲಾ ಹೂಲಿ ಬಾಳಂಬೀಡು, ಗಳಗನಾಥ ಈ ಊರುಗಳ ಶಿಲಾಲೇಖಗಳಲ್ಲಿ ಜಯಸಿಂಹನು "ಅಂತು ಯುವರಾಜಪದವಿಯೊಳ್ ಸುಖಸಂಕಥಾವಿನೋದದಿಂ ರಾಜ್ಯಂಗೆಯುತ್ತಮಿರೆ" ಎಂದು ವರ್ಣಿಸಿರುವುದರಿಂದ ಅವನು ೧೦೮೧ರ ವರೆಗೆ ಯುವರಾಜಪದದಿಂದ ಭ್ರಷ್ಟನಾಗಲಿಲ್ಲೆಂತಲೂ ಡಾ|| ಫ್ಲೀಟರು ಬರೆಯುತ್ತಾರೆ†. ಇದಲ್ಲದೆ ೧೦೮೦ ನೆಯ ಇಸ್ವಿಯ ಸಿಕಾರಪುರದ ೨೯೭ ನೆಯ ಶಿಲಾಲೇಖದಲ್ಲಿ "ಜಯಸಿಂಹನು ಯುವರಾಜ ರಾಜಪರಮೇಶ್ವರನೂ", "ಅಣ್ಣನ ಅಂಕಕಾರನೂ" ಆಗಿದ್ದ

---

* ಸಂಪ್ರಾಪ್ತಂ ಕುಲಕಂಟಕಂ ತಮಟವೀ ಮಧ್ಯಾದ ಬಂಧ್ಯೈ ರ್ಭಟೈಃ|
ಕಾರುಣ್ಯಾದ್ಧುತಬಾಷ್ಪಗದ್ಗದವಚಃ ಸಂಭಾಷ್ಯ ಸಂತೋಷ್ಯ ಚ ||
ಚಾಲುಕ್ಯಾನ್ವಯಶೇಖರೋಥ ಶಿಖರಪ್ರೇಂಖೋಲಮುಕ್ತಾಫಲ|
ಪ್ರಾಲಂಬದ್ಯುತಿಪುಂಜದರ್ಶಿತಯಶೋ ಗುಚ್ಛಾಮಗಚ್ಛತ್ಪುರೀಮ್ ||
ಸಂ. ೧೫, ಶ್ಲೋ. ೮೭.

† ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೪೯ ಮತ್ತು ಅಡಿಟಿಪ್ಪಣಿ ೯, ೧೦.

ಸೆಂದು ಬರೆದಿದೆ. ಆದಕಾರಣ ಕೃಷ್ಣಾವೇಣೀ ಕಾಳೆಗವು ೧೦೭೭ರಲ್ಲಿ ಆಗದೆ ೧೦೮೧ರಲ್ಲಿ ಆಯಿತೆಂದು ಬರೆಯಲಿಕ್ಕೆ ಅಡ್ಡಿತೋರುವುದಿಲ್ಲ.

ಮುಂದೆ ೨-೩ ವರುಷ ವಿಕ್ರಮಾದಿತ್ಯನು ಸುಖಸಂಕಥಾವಿನೋದ ದಲ್ಲಿ ಕಾಲಕಳೆದನೆಂದು ತೋರುತ್ತದೆ. ಏಕೆಂದರೆ, ಈ ಕಾಲದಲ್ಲಿ ದ್ರೋಹಿ ಗಳ ಬಂಡಾಯವಾಗಲಿ ಹಗೆಗಳ ಕಾಟವಾಗಲಿ ಇದ್ದಿದ್ದಿಲ್ಲ. ಸಾಮ್ರಾಜ್ಯ ದಲ್ಲೆಲ್ಲ ಶಾಂತತೆಯು ಪೂರ್ಣವಾಗಿ ಹಬ್ಬಿತ್ತು. ಈ ಮೇರೆಗೆ ಆನಂದ ದಿಂದ ಪ್ರಜಾಪಾಲನವನ್ನು ಮಾಡುತ್ತಿರುವಾಗ ಚೋಳರಾಜ್ಯವನ್ನು ಆಕ್ರಮಿಸಿದ ವೆಂಗಿಯ ಪೂರ್ವಚಾಳುಕ್ಯ ಅರಸನು ದೊಡ್ಡ ದಂಡನ್ನು ಕಟ್ಟಿಕೊಂಡು ಬಲಿಷ್ಠನಾಗಿ, ತನ್ನ ಬಲಗರ್ವದಿಂದ ಕರ್ನಾಟಕ ಸಾಮ್ರಾ ಜ್ಯದ ಮೇಲೆ ದಂಡೆತ್ತಿ ಬರುವ ಎಣಿಕೆಯಲ್ಲಿದ್ದಾನೆಂಬ ಸುದ್ದಿಯು ಬಂತು. ವಿಕ್ರಮಾದಿತ್ಯನು ಸೋಮಾರಿಯೂ ಮದಾಂಧನೂ ವಿಷಯ ಲಂಪಟನೂ ಆಗದೆ ಜಾಗರೂಕನೂ ಕರ್ತವ್ಯದಕ್ಷನೂ ಮೈಯ್ಯೆಲ್ಲಾ ಕಣ್ಣುಳ್ಳವನೂ ಆದ್ದರಿಂದ ತನ್ನ ದಂಡನ್ನು ಕೂಡಲೆ ಜೊತೆಗೊಳಿಸಿ, ಚೋಳರ ರಾಜಧಾನಿಯಾದ ಕಂಚಿಯ ಮೇಲೆ ದಂಡೆತ್ತಿ ಹೊರಟನು (೧೦೮೪?). ಈ ವಿಜಯಯಾತ್ರೆಯ ವಿವರಣೆಯು ವಿಕ್ರಮಾಂಕಚರಿತೆ ಯಲ್ಲಾಗಲಿ ಶಾಸನಗಳಲ್ಲಾಗಲಿ ಇನ್ನೂ ಸಿಕ್ಕಿಲ್ಲ. ಆದರೂ ಅವನು ಒಂದೆರಡು ಕಾಳೆಗಗಳಲ್ಲಿ ತನಗೆ ಎದುರಾದ ಚೋಳ ದಂಡನ್ನು ಸೋಲಿಸಿ, ದಾರಿಯಲ್ಲಿದ್ದ ಊರುಗಳನ್ನು ವಶಮಾಡಿಕೊಂಡು, ಕಂಚಿಯ ವರೆಗೆ ಹೋಗಿ ಅದನ್ನು ಮುತ್ತಿ, ಅಲ್ಲಿಯ ಅರಸನು ದಿಕ್ಕೆಟ್ಟು ಓಡಿ ಹೋದುದರಿಂದ ಆ ಪ್ರಸಿದ್ಧ ನಗರವನ್ನು ಹಿಡಕೊಂಡು ಅಲ್ಲಿ ಕೆಲ ದಿವಸ ನಿಂತು, ವಿವಿಧ ವಿನೋದಗಳಲ್ಲಿ ಕಾಲಕಳೆದನೆಂದು ಬಿಲ್ಹಣ ಕವಿಯು ಬರೆಯುತ್ತಾನೆ*.

---

* ಅಥ ಶಿಥಿಲಿತಚಾಪಶ್ಚೋಲಲಕ್ಷ್ಮೀಂ ಗೃಹೀತ್ವಾ।
ಕೃತವಿವಿಧವಿನೋದಸ್ತತ್ರ ಕಾಂಚೀನಗರ್ಯಾಂ॥
ನಿಜನಗರಮುಗಚ್ಛತ್ಸಾಂದ್ರಮಾತಂಗಸೇನಾ।
ಭರಭರಿತದಿಗಂತಃ ಕುಂತಲಕ್ಷ್ಮಾಭುಜಂಗಃ॥

ವಿ. ಚ. ಸ. ೧೭, ಶ್ಲೋ. ೭೮.

ವೀರ ವಿಕ್ರಮಾದಿತ್ಯನು ಕೆಲಕಾಲ ಕಂಚಿಯಲ್ಲಿ ವಿನೋದವಾಡಿ, ತನ್ನ ರಾಜಧಾನಿಗೆ ತಿರುಗಿ ಹೋದನೆಂದು ವಿಕ್ರಮಾಂಕದೇವ ಚರಿತವು ಹೇಳುತ್ತದಷ್ಟೇ. ಈ ಮಾತು ಅಕ್ಷರಶಃ ನಿಜವಾಗಿದ್ದರೆ, ದ್ರಾಕ್ಷಾರಾಮ ಮುಂತಾದ ಎಷ್ಟೋ ತೆಲಗು ಊರುಗಳಲ್ಲಿ ವಿಕ್ರಮಾದಿತ್ಯನ ಶಿಲಾಲೇಖ ಗಳು ಏಕೆ ದೊರೆಯುತ್ತವೆಂಬ ಪ್ರಶ್ನವು* ಇಲ್ಲಿ ಉದ್ಭವಿಸುತ್ತದೆ. ಆದ್ದರಿಂದ ಈ ಎರಡೂ ಮಾತುಗಳನ್ನು ಒಟ್ಟುಗೂಡಿಸುವುದು ಅವಶ್ಯ ವಾಗಿರುತ್ತದೆ. ವಿಕ್ರಮಾರ್ಕನು ಕಂಚಿಯನ್ನು ಕಯ್ವಶಮಾಡಿಕೊಂಡು ಅಲ್ಲಿಯ ಪಟ್ಟದ ಮೇಲೆ ತನ್ನ ಹೆಂಡತಿಯ ಆಪ್ತನೊಬ್ಬನನ್ನು ಕೂಡ್ರಿಸಿ, ಕೆಲಕಾಲ ಅಲ್ಲಿದ್ದು ವಿಶ್ರಾಂತಿ ತೆಗೆದುಕೊಂಡು, ಬಳಿಕ ತನ್ನ ಹಗೆಯಾದ ಪೂರ್ವ ಚಾಳುಕ್ಯ ಅರಸನನ್ನು ಬೆನ್ನಟ್ಟಿ ವೆಂಗಿಯ ವರೆಗೆ ಹೋಗಿ, ತಾನು ಗೆದ್ದ ವೆಂಗಿನಾಡಿಗೆ ಒಬ್ಬ ಮಂಡಲೇಶ್ವರನನ್ನು ನೇಮಿಸಿ ತನ್ನ ರಾಜಧಾನಿಗೆ ಮರಳಿ ಹೋದನು (೧೦೮೭?) ಎಂದು ಊಹಿಸಿ ದರೆ, ಮೇಲೆ ಹೇಳಿದ ವಿರೋಧಾಭಾಸವು ಇಲ್ಲದಂತಾಗುವುದೆಂದು ನನ್ನ ಅಲ್ಪಮತಿಗೆ ತೋರುತ್ತದೆ.

ಈಗ ವಿಕ್ರಮಾದಿತ್ಯನು ನಿಶ್ಶತ್ರುವೂ ನಿಶ್ಚಿಂತನೂ ಆದನು. ಆದಕಾರಣ ಅವನು ತನ್ನ ಸಾಮ್ರಾಜ್ಯದಲ್ಲಿ ಅಂದರೆ ಈಗಿನ ವಿಜಾಪುರ ಜಿಲ್ಲಾ ಹುನಗುಂದ ತಾಲೂಕಿನಲ್ಲಿ, ವಿಷ್ಣು ಕಮಲಾವಿಲಾಸಿಯ ಒಂದು ಸುಂದರವಾದ ಗುಡಿಯನ್ನೂ, ಅದರ ಮುಂದೆ ಒಂದು ದೊಡ್ಡ ಸರೋವರ ವನ್ನೂ, ಅದರ ಸುತ್ತಲೂ ವಿಕ್ರಮಪುರವೆಂಬ ಅಂದವಾದ ಪಟ್ಟಣವನ್ನೂ ಕಟ್ಟಿಸಿದನೆಂದು ಬಿಹ್ಲಣ ಕವಿಯು ತನ್ನ ವಿಕ್ರಮಾಂಕದೇವ ಚರಿತದ ೧೭ನೆಯ ಸರ್ಗದ ೧೫,೨೨,೨೯ ನೆಯ ಶ್ಲೋಕಗಳಲ್ಲಿ ಬರೆಯುತ್ತಾನೆ. ಅಕ್ಕಾದೇವಿಯ ಅರಸಿಬೀದಿಯೇ ಈ ವಿಕ್ರಮಪುರವಾಗಿತ್ತೆಂದು ಡಾ॥ ಫ್ಲೀಟರು ಅಭಿಪ್ರಾಯಪಡುತ್ತಾರೆ†.

ವಿಕ್ರಮಾದಿತ್ಯನ ಜನ್ಮಕಾಲವು ನಿಶ್ಚಯವಾಗಿ ಗೊತ್ತಾಗುವುದಿಲ್ಲ. ಅವನು ಅಣ್ಣಿಗೇರಿ ಕಾಳಗದಲ್ಲಿ ತನ್ನ ತಂದೆಗೆ ನೆರವಾದನೆಂತಲೂ, ಆ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೫೩, ಟಿ. ೧.

† ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೫೦, ಅಡಿಟಿಪ್ಪಣಿ ೫.

ಕಾಳೆಗವು ೧೦೫೫ರಲ್ಲಿ ಆಯಿತೆಂತಲೂ ಹಿಂದೆ ಬರೆದಿರುತ್ತೇವಷ್ಟೇ. ಆಗ ಅವನು ಕನಿಷ್ಟಪಕ್ಷಕ್ಕೆ ೨೦ ವರುಷದವನಾಗಿರಬೇಕಾದ್ದರಿಂದ ಅವನು ಸುಮಾರು ೧೦೩೫ರಲ್ಲಿ ಹುಟ್ಟಿರಬಹುದು. ಆದ್ದರಿಂದ ಈಗ ಅವನು ಸುಮಾರು ೫೨ ವರ್ಷದವನಾಗಿದ್ದನು. ಅವನು ಮುದಕನಾಗಿದ್ದರೂ ಅವನ ಯುದ್ಧ ತೃಷ್ಣೆಯೂ, ವಿಜಯಾಭಿಲಾಷೆಯೂ ತಗ್ಗಿದ್ದಿಲ್ಲ. ಅವನ ಮನಸ್ಸಿನಲ್ಲಿ ಈ ಕಾಲಕ್ಕೆ ನರ್ಮದಾನದಿಯ ಉತ್ತರಪ್ರದೇಶವನ್ನು ಗೆಲ್ಲಬೇಕೆಂಬ ಲವಲವಿಕೆಯು ಹುಟ್ಟಿತು. ಇದರ ಕಾರಣವು ಏನಾಯಿತೆಂಬುದು ನಿಶ್ಚಯವಾಗಿ ತಿಳಿಯುವುದಿಲ್ಲ. ಇವನ ಪೂರ್ವಜನಾದ ೨ನೆಯ ಪುಲಿಕೇಸಿಯು ನರ್ಮದಾನದಿಯ ವರೆಗೆ ತನ್ನ ಸಾಮ್ರಾಜ್ಯವನ್ನು ಬೆಳಿಸಿದ್ದನಷ್ಟೇ. ಅವನಿಗಿಂತ ತನ್ನ ರಾಜ್ಯವು ಹೆಚ್ಚು ದೊಡ್ಡದಾಗಬೇಕೆಂಬ ಮಹತ್ವಾಕಾಂಕ್ಷೆಯು ಅವನಲ್ಲಿ ಹುಟ್ಟಿದ್ದರೂ ಹುಟ್ಟಿರಬಹುದು. ಅಥವಾ ಅವನ ಆಸ್ಥಾನಕವಿಯಾದ ಬಿಹ್ಲಣನು ಈ ದಿಗ್ವಿಜಯಕ್ಕೆ ಅವನನ್ನು ಪ್ರೋತ್ಸಾಹಿಸಿರಬಹುದು. ಏಕೆಂದರೆ, ಇದೇ ಸುಮಾರಕ್ಕೆ ತ್ರಿಭುವನ ಮಲ್ಲದೇವ ವಿದ್ಯಾಪತಿ ಕಾಶ್ಮೀರಭಟ್ಟ ಶ್ರೀ ಬಿಹ್ಲಣನು ವೈರಾಗ್ಯ ಪ್ರೇರಿತನಾಗಿ ತನ್ನ ತಾಯ್ನಾಡಾದ ಕಾಶ್ಮೀರಕ್ಕೆ ತಿರುಗಿ ಹೋಗಿರಬಹುದೆಂದು ಡಾ॥ ಬುಹ್ಲರರು ಊಹಿಸುತ್ತಾರೆ*. ಬಿಹ್ಲಣ ಕವಿಯು ವಿಕ್ರಮಾದಿತ್ಯನ ದಂಡಿನೊಡನೆ ನರ್ಮದಾನದಿಯನ್ನು ದಾಟಿ, ಮುಂದೆ ತನ್ನ ಆಶ್ರಯದಾತನನ್ನು ಬೀಳ್ಕೊಂಡು, ತಾನೊಬ್ಬನೇ ತನ್ನ ಜನ್ಮಭೂಮಿಯಾದ ಕಾಶ್ಮೀರಕ್ಕೆ ಹೋಗಿರಬಹುದು.

ವಿಕ್ರಮಾರ್ಕನು ೧೦೮೮ರಿಂದ ೧೦೯೮ರ ವರೆಗೆ ನರ್ಮದಾನದಿಯ ಆಚೆಯ ದಂಡೆಯ ಮೇಲೆ ದಿಗ್ವಿಜಯಮಾಡುವುದರಲ್ಲಿ ತೊಡಗಿದ್ದನೆಂದು ಧಾರವಾಡ ಜಿಲ್ಲಾ ಎಳವತ್ತಿಯ ಮತ್ತು ನಿಜಾಮ ಸಂಸ್ಥಾನ ಸಿಂಬರ್ಗಿಯ ಶಿಲಾಲೇಖಗಳಲ್ಲಿ ಬರೆದಿರುತ್ತದೆ†. ಆದರೆ, ಈ ವಿಜಯ ದಂಡಯಾತ್ರೆಯ ವಿವರವನ್ನು ತಿಳಿಸುವ ಶಾಸನಗಳಾವವು ಇನ್ನು ನಮಗೆ ಸಿಕ್ಕಿಲ್ಲ. ಆದ್ದರಿಂದ ವೀರ ವಿಕ್ರಮಾದಿತ್ಯನು ನರ್ಮದಾನದಿಯ ಬಡಗಣ

* ವಿ. ಚ. ಇಂಗ್ಲಿಷ ಉಪೋದ್ಘಾತ, ಪು. ೨೨–೨೩.

† ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೫೨, ಅಡಿಟಿಪ್ಪಣಿ ೨–೩.

ಪ್ರದೇಶದಲ್ಲಿ ಹತ್ತು ಹನ್ನೆರಡು ವರ್ಷವಿದ್ದು ಏನುಮಾಡಿದನೆಂಬುದನ್ನು ಬರೆಯಲಿಕ್ಕೆ ನಮಗೆ ಸಾಧನ ಸಾಮುಗ್ರಿಗಳೇ ಇಲ್ಲ. ಯಾವ ಅರಸರು ಶರಣುಬಂದರೆಂಬುದಾಗಲಿ, ಯಾರು ಅವನೊಡನೆ ಕಾದಿದರೆಂಬುದಾಗಲಿ, ಯಾವ ನಾಡುಗಳನ್ನು ಅವನು ಗೆದ್ದನೆಂಬುದಾಗಲಿ ಗೊತ್ತಾಗುವುದಿಲ್ಲ. ಉತ್ತರದ ಶಾಸನಪಂಡಿತರು ಈ ವಿಷಯಕ್ಕೆ ಸಂಬಂಧಿಸಿದ ಶಾಸನಗಳನ್ನು ಹುಡುಕಿ ತೆಗೆದ ದಿವಸವೇ ಸುದಿವಸವೆಂದು ಹೇಳಬಹುದು.

ವಿಕ್ರಮಾದಿತ್ಯನ ನರ್ಮದಾನದಿಯ ಉತ್ತರದಿಗ್ವಿಜಯವು ಎಂದು ಆರಂಭಿಸಿತು ಮತ್ತು ಎಂದು ಮುಗಿಯಿತೆಂಬುದು ಗೊತ್ತಾಗುವುದಿಲ್ಲಾದ ಕಾರಣ ಅದು ೧೦೮೮ರಲ್ಲಿ ಸುರುವಾಗಿ ೧೧೦೦ರಲ್ಲಿ ತೀರಿತೆಂದು ಕಲ್ಪಿಸಿದರೂ ಮುಂದೆ ೧೬ ವರ್ಷ ಅವನು ಏನುಮಾಡಿದನೆಂಬುದಾಗಲಿ ಆ ಕಾಲದ ಅವನ ಆಳಿಕೆಯಲ್ಲಿ ಏನೇನು ಸಂಭವಿಸಿತೆಂಬುದಾಗಲಿ ಗೊತ್ತಾಗುವುದಿಲ್ಲ. ಈ ಕಾಲದಲ್ಲಿ ಯಾವ ಬಂಡಾಯವಾಗಲಿ ಯಾವ ಹಗೆಗಳ ದಾಳಿಯಾಗಲಿ ಯಾವ ದಂಡಯಾತ್ರೆಯಾಗಲಿ ಆಗದೆ ಸಾಮ್ರಾಜ್ಯದಲ್ಲಿ ಶಾಂತತೆಯು ಹಬ್ಬಿತ್ತೆಂದು ಬರೆದರೆ ಬಹುಶಃ ತಪ್ಪಾಗಲಿಕ್ಕಿಲ್ಲ. ಆದರೆ, ಈ ಅವಧಿಯಲ್ಲಿ ಹಳೆಬೀಡಿನ (ದ್ವಾರಸಮುದ್ರದ) ಮಹಾಮಂಡಲೇಶ್ವರನಾದ ಹೊಯ್ಸಳ ವಿಷ್ಣುವರ್ಧನನು ಏನಾದರೊಂದು ನೆವನಮಾಡಿ, ನೆರೆಹೊರೆಯ ಮಂಡಲೇಶ್ವರರಿಂದ ಅವರವರ ಪ್ರಾಂತಗಳನ್ನು ಕಿತ್ತಿಕೊಂಡು ತನ್ನ ರಾಜ್ಯವನ್ನು ಪೆದ್ದೊರೆ(ಕೃಷ್ಣಾಹೊಳೆ)ಯ ವರೆಗೆ ಬೆಳಿಸಿದನೆಂದು ಶಾಸನಗಳಿಂದ ಕಂಡುಬರುತ್ತದೆ.

ತನ್ನ ಪ್ರೀತಿಯ ತಮ್ಮನಾದ ಜಯಸಿಂಹನನ್ನು ಸೋಲಿಸಿ ಸೆರೆಯಲ್ಲಿಟ್ಟ ವೀರಶಿಖಾಮಣಿಯಾದ ವಿಕ್ರಮಾದಿತ್ಯನು ಈ ಪುಂಡನಾದ ಬಿಟ್ಟಿಗ(ವಿಷ್ಣುವರ್ಧನ)ನ್ನು ಏಕೆ ದಂಡಿಸಲಿಲ್ಲ? ಅವನಿಗೆ ಗಂಗವಾಡಿ, ನೊಣಂಬವಾಡಿ, ಬನವಾಸಿ, ಬೆಳ್ವೊಳ ಮುಂತಾದ ತನ್ನ ಸಾಮ್ರಾಜ್ಯದ ಭಾಗಗಳನ್ನು ಏಕೆ ಹಿಡಿದುಕೊಳ್ಳಗೊಟ್ಟನು? ಅವನಿಗೆ ಕೃಷ್ಣಾನದಿಯ ವರೆಗೆ ಏನು ಕಾರಣ ದಂಡೆತ್ತಿ ಬರಗೊಟ್ಟನು? ಎಂಬ ಪ್ರಶ್ನೆಗಳು ಇಲ್ಲಿ ಉದ್ಭವಿಸುತ್ತವೆ. ಇವುಗಳನ್ನು ಕುರಿತು ಡಾ॥ ಫ್ಲೀಟರು ಕೆಳಗೆ ಕೊಟ್ಟಂತೆ ಬರೆಯುತ್ತಾರೆ:—

"ವಿಷ್ಣುವರ್ಧನನು ತನ್ನ ಎಲ್ಲ ಶಾಸನಗಳಲ್ಲಿ ತಾನು ಮಹಾಮಂಡಲೇಶ್ವರನಾಗಿದ್ದೇನೆಂದು ಕೊರೆಯಿಸಿದ್ದಾನೆ ಹೊರತು ತಾನು ಸ್ವತಂತ್ರನಾದ ಅರಸನೆಂದು ಬರೆಯಿಸಿಲ್ಲ. ೧೧೩೭ ನೆಯ ಇಸ್ವಿಯ ಮೈಸೂರು ಸಂಸ್ಥಾನ ಸಿಂದಿಗೆರೆಯ ಶಿಲಾಲೇಖದಲ್ಲಿ 'ಚಾಲುಕ್ಯಮಣಿ, ಮಂಡಲಿಕ ಚೂಡಾಮಣಿ' ಎಂದು ಅವನನ್ನು ಕರೆದಿರುತ್ತಾರೆ. ಎಲ್ಲ ಶಾಸನಗಳಲ್ಲಿ 'ತತ್ಪಾದಪದ್ಮೋಪಜೀವಿ' ಎಂಬ ಅಧೀನತಾ ಸೂಚಕವಾದ ಮಾತು ಇದ್ದೇ ಇರುತ್ತದೆ. ವಿಕ್ರಮಾದಿತ್ಯನ ಮಹಾಮಂಡಲೇಶ್ವರರೊಳಗೆ ಕೊಂಕಣ ಕರಾಡ ಪ್ರಾಂತಗಳ ಶಿಲಾಹಾರರೂ, ಸೌದತ್ತಿಯ ರಟ್ಟರೂ, ಹಾನುಗಲ್ಲ ಗೋವೆಗಳ ಕದಂಬರೂ, ಎಲ್ಬುರ್ಗೆಯ ಸಿಂದರೂ, ಗುತ್ತಲದ ಗುತ್ತರೂ, ದ್ವಾರಸಮುದ್ರದ ಹೊಯ್ಸಳರೂ ಪ್ರಮುಖರಾದ್ದರಿಂದ ಇವರಿಗೆ ಹೆಚ್ಚು ಸ್ವಾತಂತ್ರ್ಯವಿತ್ತೆಂದು ಎಣಿಸಿದರೂ ಹೊಯ್ಸಳ ವಿಷ್ಣುವರ್ಧನನು ಉಳಿದವರಿಗಿಂತ ಹೆಚ್ಚು ಅಧಿಕಾರವನ್ನು ನಡಿಸುತ್ತಿದ್ದನೆಂದು ಅವನ ಕೃತಿಗಳಿಂದ ಸ್ಪಷ್ಟವಾಗಿ ಕಂಡಬರುತ್ತದೆ. ಇದಲ್ಲದೆ ಅವನು ತಾನು ಮಹಾಮಂಡಲೇಶ್ವರನೂ ಪಾದಪದ್ಮೋಪಜೀವಿಯೂ ಎಂದು ಕೊರೆಯಿಸಿದ ಕೆಲವು ಶಾಸನಗಳಲ್ಲಿ ಸ್ವತಂತ್ರರಾದ ಅರಸರಿಗೆ ತಕ್ಕವುಗಳಾದ 'ರಾಜ್ಯಂ ಗೆಯ್ಯುತ್ತ' 'ಪೃಥ್ವೀರಾಜ್ಯಂ ಗೆಯ್ಯುತ್ತ' 'ವಿಜಯ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾಚಂದ್ರಾರ್ಕತಾರಂ ಬರಂ ಸಲುತ್ತಮಿರೆ' ಎಂಬ ವಾಕ್ಯಗಳನ್ನು ಕೊರೆಯಿಸಿರುತ್ತಾನೆ*."

ಈ ಬರಹವು ಮೇಲೆ ಕೊಟ್ಟ ಪ್ರಶ್ನೆಗಳ ಸಮರ್ಪಕವಾದ ಉತ್ತರವನ್ನು ಕೊಡದೆ, ಅವುಗಳನ್ನು ಸಮರ್ಥಿಸುತ್ತದೆಂದು ಹೇಳಬಹುದು. ವಿಕ್ರಮಾದಿತ್ಯನ ಕಾಲದ ನೂರಾರು ಶಾಸನಗಳು ದೊರೆತಿದ್ದರೂ ಅವುಗಳಲ್ಲಿ ಈ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೊಡಲಿಕ್ಕೆ ಸಾಕಷ್ಟು ಶಾಬ್ದಪ್ರಮಾಣಗಳು ದೊರೆಯುವುದಿಲ್ಲ. ಆದ್ದರಿಂದ ಊಹೆಯಿಂದಲೇ ಈ ಪ್ರಶ್ನೆಗಳ ಉತ್ತರವನ್ನು ಕೊಡಲಿಕ್ಕೆ ನನ್ನ ಶಕ್ತ್ಯನುಸಾರವಾಗಿ ಕೆಳಗೆ ಬರೆದಂತೆ ಪ್ರಯತ್ನಿಸುವೆನು :—

* ಮುಂ ಇ. ಗ್ಯಾ., ಸಂ. ೧, ಭಾ. ೨, ಪು. ೪೯೮, ಅಡಿಟಿಪ್ಪಣಿ ಸಹಿತ.

೧. ಹೊಯ್ಸಳದೇವಿಯು ವಿಕ್ರಮಾದಿತ್ಯನ ತಂದೆಯಾದ ೧ ನೆಯ ಸೋಮೇಶ್ವರನ ಪಿರಿಯರಸಿಯಾಗಿದ್ದಳೆಂದು ಹಿಂದೆ ಬರೆದಿರುತ್ತೇವಷ್ಟೇ*. ಈಕೆಯು ಬಿಟ್ಟಿಗನ ಅಕ್ಕನಾಗಿದ್ದರೆ, ವಿಕ್ರಮಾದಿತ್ಯನು ಅವನ ಸೋದರಳಿಯನಾಗುವನು. ಆದ್ದರಿಂದ ಬಿಟ್ಟಿಗನು ರಾಜಾಜ್ಞೆಯನ್ನು ಲಕ್ಷ್ಯಪೂರ್ವಕವಾಗಿ ಪಾಲಿಸುತ್ತಿದ್ದಿಲ್ಲೆಂತಲೂ ಸಾರ್ವಭೌಮನು ಸಿಟ್ಟಾದಾಗ ತನ್ನ ತಪ್ಪನ್ನು ಒಪ್ಪಿಕೊಂಡು ಕ್ಷಮಾಬೇಡುತ್ತಿದ್ದನೆಂತಲೂ ಊಹಿಸಬಹುದು.

೨. ವಿಕ್ರಮಾದಿತ್ಯನ ಅಪ್ಪಣೆಯಂತೆ ಬಿಟ್ಟಿಗನು ಲಾಟಪ್ರಾಂತವನ್ನು ಗೆದ್ದಿರಬಹುದೆಂತಲೂ, ಮಾಳವೆಯಲ್ಲಿದ್ದ ಚಕ್ರಗೊಟ್ಟವನ್ನು ಹಿಡಿದುಕೊಂಡಿರಬಹುದೆಂತಲೂ ಡಾ|| ಫ್ಲೀಟರು ಅಭಿಪ್ರಾಯಪಡುತ್ತಾರಷ್ಟೇ†. ವಿಷ್ಣುವರ್ಧನನು ವಿಕ್ರಮಾದಿತ್ಯನ ಸಂಗಡ ನರ್ಮದಾನದಿಯ ಉತ್ತರ ಪ್ರದೇಶಕ್ಕೆ ಹೋದಾಗ ತನ್ನ ಧೈರ್ಯ ಶೌರ್ಯ ಸಾಹಸಗಳಿಂದ ವಿಕ್ರಮಾದಿತ್ಯನನ್ನು ಮೆಚ್ಚಿಸಿ ಅವನ ವಿಶೇಷ ಪ್ರೀತಿಗೆ ಪಾತ್ರನಾಗಿದ್ದರೂ ಆಗಿರಬಹುದು.

೩. ವಿಕ್ರಮಾದಿತ್ಯನು ಚೋಳರಸನಿಂದ ಗಂಗವಾಡಿಯನ್ನು ಕಿತ್ತಿಕೊಂಡು ಅಲ್ಲಿದ್ದ ಚೋಳಮಂಡಲಿಕರನ್ನು ತನ್ನ ಸಾಮಂತರಾಗಿ ಮಾಡಿಕೊಂಡಿದ್ದನಷ್ಟೇ. ಈ ಚೋಳರು ಶಿವೋಪಾಸಕರಾದ್ದರಿಂದ ಜೈನಮತವನ್ನು ವಿರೋಧಿಸುತ್ತಿದ್ದರು. ಬಿಟ್ಟಿಗನ ಆಪ್ತಮಂತ್ರಿಯಾದ **ಗಂಗರಾಜನು** ಶೂರನೂ ಸಾಹಸಿಯೂ ಸ್ವಾಮಿಭಕ್ತನೂ ಜೈನಮತದ ಕಟ್ಟಭಿಮಾನಿಯೂ ಆದ್ದರಿಂದ ಅವನು ಚೋಳರೊಡನೆ ಕಾಲುಕೆದರಿ ಜಗಳತೆಗೆದು ಅವರನ್ನು ಸೋಲಿಸಿ ಓಡಿಸಿ, ಗಂಗವಾಡಿಯ ರಾಜಧಾನಿಯಾದ ತಳಕಾಡನ್ನು ಹಿಡಿದುಕೊಂಡು, ಗಂಗವಾಡಿಯನ್ನು ಬಿಟ್ಟಿಗನ ಆಳಿಕೆಗೆ ಒಳಪಡಿಸಿದನು. ಈ ಯುದ್ಧವನ್ನು ವಿಕ್ರಮಾದಿತ್ಯನ ಅನುಮತಿಯಿಂದ ಕಯ್ಕೊಂಡಿದ್ದರೂ ಕಯ್ಕೊಂಡಿರಬಹುದು. ಇದೇ ಮೇರೆಗೆ

---

* ಹಿಂದೆ ಪು. ೨೬೨.

† ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೯೭.

(ಪಾಂಡ್ಯರಿಂದ) ನೊಳಂಬವಾಡಿಯನ್ನೂ ಬೆಳ್ವೊಳವನ್ನೂ ಹಿಡಿದು ಕೊಂಡು ತನ್ನ ನಾಡಿಗೆ ಅವುಗಳನ್ನು ಜೋಡಿಸಿದನೆಂದು ತೋರುತ್ತದೆ.

೪. ಬಿಟ್ಟಿಗನು ಸಿವಾಜಿಯಂತೆ ಪುಂಡನೂ ತಂತ್ರಗಾರನೂ ಮುತ್ಸದ್ದಿಯೂ ಆಗಿದ್ದನೆಂದು ಕಂಡುಬರುತ್ತದೆ. ಸಿವಾಜಿಯು ತಾನು ಆದಿಲ್ಶಹನ ರಾಜನಿಷ್ಠನಾದ ವಂಶಪರಂಪರಾಗತ ಸೇವಕನೆಂದು ಸಾರಿ, ತನ್ನ ನೆರೆಹೊರೆಯ ಸುಬೇದಾರರ ನಾಡುಗಳನ್ನು ಕಿತ್ತಿಕೊಂಡಂತೆ, ಬಿಟ್ಟಿಗನು ತನ್ನ ನೆರೆಹೊರೆಯ ಮಂಡಲೇಶ್ವರರ ಪ್ರಾಂತಗಳನ್ನು ಕಸಕೊಂಡು ತನ್ನ ನಾಡನ್ನು ಬೆಳಿಸಿಕೊಂಡನೆಂದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ*.

ಇವೆಲ್ಲ ಕಾರಣಗಳು ನಿಜವಾದವೆಂದು ಎಣಿಸಿದರೂ ಮತ್ತೊಂದು ಸಂಶಯವು ಇಲ್ಲಿ ತಲೆದೋರುತ್ತದೆ. ಅದಾವದೆಂದರೆ—೧೧೧೬ರಲ್ಲಿ ವಿಕ್ರಮಾದಿತ್ಯನ ದಂಡೂ ಅವನ ದಂಡನಾಯಕರೂ ಮೈಸೂರ ಸಂಸ್ಥಾನ ಹಾಸನದ ಹತ್ತಿರಿದ್ದ **ಕಣ್ಣೆಗಾಲ** ಎಂಬಲ್ಲಿ ಪಾಳೆಯವನ್ನು ಹಾಕಿಕೊಂಡಿದ್ದಾಗ ಬಿಟ್ಟಿಗನ ಪುಂಡ ದಳವಾಯಿಯಾದ ಗಂಗರಾಜನು ಒಂದು ರಾತ್ರಿ ಆ ದಂಡಿನಮೇಲೆ ಬಿದ್ದು, ಹಾಹಾಕಾರವನ್ನು ಎಬ್ಬಿಸ ಲಿಲ್ಲವೇ? ಇಂತಹ ಮಹಾಪರಾಧವನ್ನು ಸಾರ್ವಭೌಮರು ಎಂದಾದರೂ ಕ್ಷಮಿಸುವುದುಂಟೇ?

ಈ ಸಂಶಯವನ್ನು ದೂರಮಾಡಲಿಕ್ಕೆ ನಮಗೆ ಶಾಬ್ದಪ್ರಮಾಣವು ಇನ್ನೂ ಸಿಕ್ಕಿಲ್ಲಾದ್ದರಿಂದ ಅನುಮಾನದಿಂದಲೇ ಈ ಸಂದೇಹದ ಪರಿಹಾರ ವನ್ನು ಮಾಡಬೇಕಾಗಿದೆ. ಬಿಟ್ಟಿಗನ ಮತ್ತು ಅವನ ದಳವಾಯಿಯ ಪುಂಡಾಟಿಗೆ ಹಾವಳಿಗಳಿಗೆ ಬೇಸತ್ತ ವಿಕ್ರಮಾದಿತ್ಯನು ಮುಪ್ಪಿನ ಮುದುಕ ನಾದ್ದರಿಂದ ಅವುಗಳನ್ನು ಅಡಗಿಸಲಿಕ್ಕೆ ತಾನೇ ದಂಡಿನೊಡನೆ ಹೊರಡದೆ, ತನ್ನ ನಂಬಿಗಸ್ತರಾದ ದಳವಾಯಿಗಳನ್ನು ಕಳುಹಿದನೆಂತಲೂ, ಅವರು ಕಣ್ಣೆಗಾಲಿನಲ್ಲಿ ಪಾಳೆಯ ಹಾಕಿಕೊಂಡಿದ್ದಾಗ ಪುಂಡನಾದ ಗಂಗ ರಾಜನು ಇರಳಿನಲ್ಲಿ ಆ ಪಾಳೆಯದ ಮೇಲೆ ಬಿದ್ದು ಅದನ್ನು ಮುರಿದ

* ಛತ್ರಪತಿ ಸಿವಾಜಿ ಮಹಾರಾಜ, ಪ್ರಕರಣ ೩.

ನೆಂತಲೂ ಬಳಿಕ ಸಿಂದಮನೆತನದ ಶೂರ ದಳವಾಯಿಯಾದ ೨ನೆಯ **ಅಚುಗಿಯು** ಹೊಯ್ಸಳರನ್ನು ಸೋಲಿಸಿ ಓಡಿಸಿ, ಜೆನ್ನಟ್ಟಿ, ಕದಂಬ ಲಕ್ಷ್ಮನನ್ನು ಗೆದ್ದು ಗೋವೆಯನ್ನು ಹಿಡಿದುಕೊಂಡು, ಪಾಂಡ್ಯರನ್ನು ದಿಕ್ಕುಪಾಲಾಗಿ ಓಡಿಸಿ, ಮಲಪರನ್ನು ಚದರಿಸಿ, ಕೊಂಕಣವನ್ನು ಕಯ್ವಶಮಾಡಿಕೊಂಡು, ಗೋವೆ ಉಪ್ಪಿನಕಟ್ಟೆಗಳನ್ನು ಸುಟ್ಟು, ತನ್ನ ನಾಡನ್ನೊಳನುಗ್ಗಿದ ಒಬ್ಬ ಭೋಜನೆಂಬವನನ್ನು ಸೋಲಿಸಿ ಸೆರೆಹಿಡಿದು ಮುಂದೆ ಬಿಡುಗಡೆಮಾಡಿದನೆಂದು ಊಹಿಸಬಹುದು. ಗೋವೆಯ ಕದಂಬರೂ, ನೊಳಂಬವಾಡಿಯ ಪಾಂಡ್ಯರೂ, ಕರ್ಹಾಡದ ಶಿಲಾಹಾರರೂ ಹೊಯ್ಸಳರೊಡನೆ ಒಳಸಂಚುಮಾಡಿದ್ದರೋ ಅಥವಾ ತಮ್ಮಷ್ಟಕ್ಕೆ ತಾವೇ ಬಂಡಾಯ ಹೂಡಿದ್ದರೋ ಎಂಬುದು ಗೊತ್ತಾಗುವುದಿಲ್ಲ ವೆಂತಲೂ ವಿಕ್ರಮಾದಿತ್ಯನ ತರುವಾಯ ಅವನ ಮಗನಾದ ಸೋಮೇಶ್ವರನು ಏನೂ ಅಡ್ಡಿಯಿಲ್ಲದೆ ಪಟ್ಟವೇರಿದ್ದರಿಂದ ಈ ಹೊಯ್ಸಳ ಮುಂತಾದವರ ಬಂಡಾಯದಿಂದ ಸಾಮ್ರಾಜ್ಯಕ್ಕೆ ಹೆಚ್ಚಿನ ಹಾನಿ ಯಾವುದು ತಟ್ಟಲಿಲ್ಲೆಂತಲೂ ಡಾ॥ ಫ್ಲೀಟರು ಅಭಿಪ್ರಾಯಪಡುತ್ತಾರೆ*.

ಕಲ್ಯಾಣದ ಚಾಳುಕ್ಯ ಮನೆತನದ ಸಾರ್ವಭೌಮರೊಳಗೆ ೬ನೆಯ ವಿಕ್ರಮಾದಿತ್ಯನು ಶ್ರೇಷ್ಠನಾಗಿದ್ದನೆಂದು ಬರೆದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಅವನು ಮಹಾವೀರನೂ ಶೂರನೂ ಯುದ್ಧಕಲಾನಿಪುಣನೂ ಉದಾರನೂ ವಿದ್ಯಾಪಕ್ಷಪಾತಿಯೂ ಪ್ರಜಾಪಾಲನದಕ್ಷನೂ ನೀತಿವಿಶಾರದನೂ ರಾಜತಂತ್ರಚತುರನೂ ಆಗಿದ್ದನು. ಅವನ ಆಳಿಕೆಯಲ್ಲಿ ಸಾಮ್ರಾಜ್ಯದೊಳಗೆ ಬಹುಕಾಲ ಶಾಂತತೆಯು ಹಬ್ಬಿತ್ತು. ಪ್ರಜೆಗಳು ಸುರಕ್ಷಿತರೂ ಸುಖಿಗಳೂ ಆಗಿದ್ದರು. ಕಳ್ಳರ ಹೆದರಿಕೆಯೇ ಇಲ್ಲದುದರಿಂದ ರಾತ್ರಿಯಲ್ಲಿ ಅವರು ತಂತಮ್ಮ ಮನೆಗಳ ಕದಗಳನ್ನು ತೆರೆದಿಟ್ಟುಕೊಂಡು ಮಲಗುತ್ತಿದ್ದರು†. ವಿಕ್ರಮಾರ್ಕನು ಪ್ರತಿಪರ್ವದಲ್ಲಿ

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೫೩.

† ಜನ್ಯೈರವಜ್ಞಾತಕಪಾಟಮುದ್ರೈಃ ಕ್ಷಪಾಸುರಕ್ಷಾವಿಮುಖೈರಸುಪ್ಯತ।
ಕರಾ ವಿಶಂತಿ ಸ್ಮ ಗವಾಕ್ಷವರ್ತ್ಮಸು ಕ್ಷಪಾಪತೇಶ್ಛಿದ್ರಪಥೈರ್ನ ತಸ್ಕರಾ॥

ವಿ. ಚ. ಸ. ೧೭, ಶ್ಲೋ. ೬.

೧೬ ಮಹಾದಾನಗಳನ್ನು ಕೊಡುತ್ತಿದ್ದನು. ಅವನ ಔದಾರ್ಯದ ಕೀರ್ತಿಯು ಭರತಖಂಡದಲ್ಲೆಲ್ಲ ಹಬ್ಬಿತ್ತು. ಅವನು ಪ್ರಜರನ್ನು ಮಕ್ಕಳಂತೆ ಸಲಹುತ್ತಿದ್ದುದರಿಂದ ಅವರ ಸಂರಕ್ಷಣೆಗೋಸ್ಕರ ಮಾಡಿದ ಧನ ವ್ಯಯವು ದಾನವೆನಿಸಲಾರದೆಂದು ಒಬ್ಬ ಕವಿಯು ಹೇಳುತ್ತಾನೆ*. ಅವನು ವಿದ್ವಾಂಸರಿಗೆ ಉದಾರಾಶ್ರಯವನ್ನು ಕೊಡುತ್ತಿದ್ದನೆಂಬುದಕ್ಕೆ ಕಾಶ್ಮೀರದೇಶದಿಂದ ಬಂದು ಅವನ ಆಸ್ಥಾನ ಕವಿಯಾಗಿದ್ದ ಕಾಶ್ಮೀರ ಭಟ್ಟ ಶ್ರೀ ಬಿಹ್ಲಣನೇ ಸಾಕ್ಷಿಯಾಗಿರುತ್ತಾನೆ. ಅವನ ಹೊರತು ಮತ್ತೊಬ್ಬ ಘನಪಂಡಿತನು ಅವನ ಆಶ್ರಯದಲ್ಲಿದ್ದನು. ಮಿತಾಕ್ಷರವೆಂಬ ಪ್ರಸಿದ್ಧ ಧರ್ಮಶಾಸ್ತ್ರ ಗ್ರಂಥದ ಕರ್ತೃವಾದ ವಿಜ್ಞಾನೇಶ್ವರ ಪಂಡಿತನೇ ಈ ಹೆಸರುವಾಸಿಯಾದ ವಿದ್ವಾಂಸನಾಗಿದ್ದನು.

ಕರ್ನಾಟಕದ ಚಾಳುಕ್ಯ ಸಾರ್ವಭೌಮರೊಳಗೆ ೬ನೆಯ ವಿಕ್ರಮಾದಿತ್ಯನಷ್ಟು ವರ್ಷ ಬಾಳಿದ ಚಕ್ರವರ್ತಿಗಳು ಮತ್ತಾರು ಆಗಲಿಲ್ಲೆಂದು ನಿಸ್ಸಂದೇಹವಾಗಿ ಹೇಳಬಹುದು. ಇವನು ಸುಮಾರು ೫೦ ವರ್ಷ ಸುಖದಿಂದ ರಾಜ್ಯವಾಳಿ ತನ್ನ ೯೧ ನೆಯ ವರ್ಷ ಮರಣ ಹೊಂದಿದನು (೧೧೨೬). ಇವನಿಗೆ ೬ ಅಥವಾ ೭ ಮಂದಿ ಹೆಂಡಂದಿರಿದ್ದರು:— ೧. ಸಾವಳದೇವಿಯು ದರಿಕಾಡು ನಾಡಿನ ಒಡೆಯನೂ ಮಂಗಳವಾಡದ ಮಹಾಮಂಡಲೇಶ್ವರನೂ ಸೂರ್ಯವಂಶದವನೂ ಆದ ಜೋಗಮರಸು ಅವನ ಹೆಂಡತಿ ತಾರಾದೇವಿ ಇವರಿಬ್ಬರ ಮಗಳಾಗಿದ್ದಳು. ೧೦೭೭ರ ಸುಮಾರಕ್ಕೆ ವಿಕ್ರಮಾದಿತ್ಯನು ಅಂಗಭೋಗವಾಗಿ (ಸ್ವಂತ ಖರ್ಚಿಗಾಗಿ) ನರೆಯಂಗಲ್ಲಿನ ಅಗ್ರಹಾರವನ್ನು ಇವಳಿಗೆ ಕೊಟ್ಟಿದ್ದನು. ೨. ಲಕ್ಷ್ಮೀದೇವಿಗೆ ಪಿರಿಯರಸಿ ಎಂಬ ಬಿರುದಿತ್ತು. ಇವಳು ೧೦೮೮ರಲ್ಲಿ ಕಲ್ಯಾಣವನ್ನೂ, ೧೦೯೫ರಲ್ಲಿ ೧೮ ಅಗ್ರಹಾರಗಳನ್ನೂ, ಧರ್ಮಪುರವನ್ನೂ, ೧೧೦೯–೧೧೧೦ರಲ್ಲಿ ನಿಟ್ಟಸಿಂಗಿ ಎಂಬ ಹಳ್ಳಿಯನ್ನೂ ಆಳುತ್ತಿದ್ದಳು.

---

* ಕೀರ್ತಿಸ್ತ್ರೀ ದಯಿತಾ ತದೀಯ ಜಠರೇ ಲೋಕತ್ರಯಂ ವರ್ತತೇ ತಸ್ಮಾತ್ತ್ವಂ ಜಗತ ಪಿತಾ ಪಿತೃಧನಂ ಯೇಽರ್ಥಿನಾಂ ತ್ವದ್ಧನಂ |
ವೀರಶ್ರೀವರ ವಿಕ್ರಮಾರ್ಕ ಭವತಸ್ತ್ಯಾಗಂ ನ ಮನ್ಯಾಮಹೇ ಕಸ್ತ್ಯಾಗಃ ಸ್ವಕುಟುಂಬ ಪೋಷಣವಿಧಾವರ್ಥವ್ಯಯಂ ಕುರ್ವತಃ || ಸುಭಾಷಿತ.

ಧಾರವಾಡ ಜಿಲ್ಲಾ ಸೂಡಿ, ಡಂಬಳ, ನಿಡಸಿಂಗಿ, ಎಲ್ಲೂರುಗಳ ಶಿಲಾಲೇಖಗಳಿಂದ ಇವಳು ವಿಕ್ರಮಾರ್ಕನು ಸತ್ತಾಗ ಜೀವಂತವಾಗಿದ್ದಳೆಂದು ತೋರುತ್ತದೆ. ೩. ಜಕ್ಕಲದೇವಿಯು ಕದಂಬ ಮನೆತನದ ಟಿಕ್ಕನೆಂಬವನ ಮಗಳಾಗಿದ್ದಳು. ಇವಳು ೧೦೯೩ರಲ್ಲಿ ಇಂಗುಣಿಗೆ ಎಂಬ ಹಳ್ಳಿಯನ್ನು ತ್ರಿಭೋಗಾಭ್ಯಂತರ ಸಿದ್ಧಿಯಿಂದ ಆಳುತ್ತಿದ್ದಳು. ೪. ಮಲ್ಲೆಯಮದೇವಿಯು ೧೦೯೪ರಲ್ಲಿ ಕಿರಿಯಕೆರೆಯೂರಿನ (ಚಿಕ್ಕೆರೂರಿನ) ಅಗ್ರಹಾರಕ್ಕೆ ಸೇರಿದ ಊರುಗಳನ್ನು ಆಳುತ್ತಿದ್ದಳು. ೫. ಚಂದಲದೇವಿ(ಚಂದ್ರಲೇಖೆ)ಯು ಕರಾಡದ ಶಿಲಾಹಾರ ಮನೆತನದ ಮಾರಸಿಂಹನೆಂಬವನ ಅರಸುಮಗಳಾಗಿದ್ದಳು. ಇವಳ ರೂಪಕ್ಕೆ ಮರುಳಾದ ಕಾಶ್ಮೀರದ ಹರ್ಷರಾಜನು ಇವಳ ಗಂಡನಾದ ಪರಮರ್ಡ್ಡಿ (ವಿಕ್ರಮಾದಿತ್ಯ)ಯನ್ನು ಕೊಂದು, ಇವಳನ್ನು ಒಯ್ಯಬೇಕೆಂಬ ಆಲೋಚನೆಯನ್ನು ಮಾಡಿದನೆಂದು ರಾಜತರಂಗಿಣಿ ಎಂಬ ಗ್ರಂಥದಲ್ಲಿ ಬರೆದಿದೆ. ಇವಳಿಗೆ ಜಯಕರ್ಣನೆಂಬ ಒಬ್ಬ ಮಗನಿದ್ದನೆಂದು ಮೇಲೆ ಬರೆದಿದ್ದೇವೆ. ಇವಳು ೧೧೦೨ರಲ್ಲಿ ನಿಜಾಮ ಸಂಸ್ಥಾನ ರುದ್ದವಾಡಿಯ ಕೇಶವದೇವನಿಗೆ ಕೆಲಭೂಮಿಯನ್ನು ದಾನಕೊಟ್ಟಳು. ೬. ಮಾಳಲದೇವಿ(ಮಾಲಿಕೆ)ಯು ಶಾನಬೋವ (ಶಾನಭೋಗ) ರಾಯಣ ಅವನ ಹೆಂಡತಿ ಓಲಜಕಬ್ಬೆ ಇವರಿಬ್ಬರ ಮಗಳಾಗಿದ್ದಳೆಂದು ಹಾನಗಲ್ಲ ತಾಲೂಕ ಎಳವತ್ತಿಯ ೧೧೧೩ನೆಯ ಇಸ್ವಿಯ ಶಿಲಾಲೇಖದಿಂದ ತಿಳಿಯುತ್ತದೆ. ೭. ಎಂಗಲದೇವಿಯ ಹೆಸರು ನಿಜಾಮ ಸಂಸ್ಥಾನ ಬೆಳಂಬಿಗಿಯ ಹನುಮಂತದೇವರ ಗುಡಿಯಲ್ಲಿದ್ದ ಶಿಲಾಲೇಖದಲ್ಲಿ ಬಂದಿರುತ್ತದೆ. ಈ ಶಾಸನವು ಕರ್ನಾಟಕದೇಶಶಾಸನಗಳೆಂಬ ಗ್ರಂಥದ ೧ನೆಯ ಸಂಪುಟದಲ್ಲಿ ಅಚ್ಚಾಗಿದ್ದರೂ ಇವಳು ವಿಕ್ರಮಾದಿತ್ಯನ ರಾಣಿಯಾಗಿದ್ದಳೋ ಇಲ್ಲೋ ಎಂಬ ಬಗ್ಗೆ ಸಂಶಯ ಬರುತ್ತದೆಂದು ಡಾ॥ ಫ್ಲೀಟರು ಬರೆಯುತ್ತಾರೆ*.

ವಿಕ್ರಮಾರ್ಕನಿಗೆ ಇಬ್ಬರು ಗಂಡುಮಕ್ಕಳೂ ಒಬ್ಬ ಹೆಣ್ಣು ಮಗಳೂ ಇದ್ದರು. ಚಂದಲದೇವಿಯ ಮಗನಾದ ಜಯಕರ್ಣನು

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೪೮, ಅಡಿಟಿಪ್ಪಣಿ ೨.

ತಂದೆ ಇರುವಾಗಲೇ ಸತ್ತನೆಂದು ಮೇಲೆ ಬರೆದಿರುತ್ತೇವೆ. ಮತ್ತೊಬ್ಬ ಮಗನಾದ ಸೋಮೇಶ್ವರನು ಯಾವ ರಾಣಿಯ ಹೊಟ್ಟೆಯಲ್ಲಿ ಹುಟ್ಟಿದನೆಂಬುದು ಇನ್ನೂ ಗೊತ್ತಾಗಿಲ್ಲ. ವಿಕ್ರಮಾರ್ಕನ ಮಗಳಾದ ಮೈಲಾಲ ಮಹಾದೇವಿಯು ಯಾವ ರಾಣಿಯ ಮಗಳಾಗಿದ್ದಳೆಂಬುದಾದರೂ ಈವರೆಗೆ ತಿಳಿದಿಲ್ಲ. ಇವಳನ್ನು ಕದಂಬ ಮನೆತನದ ಮಹಾಮಂಡಲೇಶ್ವರನಾದ ೨ನೆಯ ಜಯಕೇಶಿಗೆ ಕೊಟ್ಟಿತ್ತು. ಇವರಿಗೆ— ೧. ಶಿವಚಿತ್ತಪೆರ್ಮಾಡಿ, ೨. ವಿಜಯಾದಿತ್ಯ (ವಿಷ್ಣುಚಿತ್ತ ವಾಣಿಭೂಷಣ) ಎಂಬ ೨ ಗಂಡುಮಕ್ಕಳಿದ್ದರು. ಇವರಿಬ್ಬರ ಶಿಲಾಲೇಖಗಳು ಧಾರವಾಡದ ಹತ್ತಿರಿದ್ದ ನರೇಂದ್ರದಲ್ಲಿ ಇರುವುದರಿಂದ ಅವುಗಳ ತಾತ್ಪರ್ಯವನ್ನು ಕೆಳಗೆ ಕೊಡುತ್ತೇವೆ. ಆ ಕಾಲದಲ್ಲಿ ನರೇಂದ್ರಕ್ಕೆ **ಕುಂದೂರು** ಎಂಬ ಹೆಸರಿತ್ತು. ಮುಂದೆ ನರೇಂದ್ರ ಎಂಬ ಹೆಸರು ಎಂದು ಏಕೆ ಬಂತೆಂಬುದು ಗೊತ್ತಾಗುವುದಿಲ್ಲ.

೧. ನರೇಂದ್ರದ ಭಾಗವಾದ ಕುಂಭಾಪುರದ ಮಲ್ಲಿಕಾರ್ಜುನ ಗುಡಿಯ ಶಿಲಾಲೇಖವು. ಇದು ಶಕ ೧೦೪೭ ಅಂದರೆ ಇಸ್ವಿ ೧೧೨೫ರ ಶಾಸನವಿರುತ್ತದೆ. ಇದರಲ್ಲಿ ೬ನೆಯ ವಿಕ್ರಮಾದಿತ್ಯನ ದಂಡನಾಯಕನೂ ಅವನ ಮಗಳಾದ ಮೈಲಾಲದೇವಿಯ ಮನೆವೆರ್ಗಡೆಯೂ ಆದ ಸಿಂಗರಸನು ಅಥವಾ ಸಿಂಗಣನು ತನ್ನ ತಂದೆಯ ಸ್ಮರಣಾರ್ಥವಾಗಿ ಕುಂದೂರಿನ ತೆಂಕಲಿಗೆ ಲಕ್ಷ್ಮಣೇಶ್ವರವೆಂಬ ದೇವರ ಗುಡಿಯನ್ನು ಕಟ್ಟಿಸಿದನೆಂತಲೂ, ಆ ದೇವಸ್ಥಾನಕ್ಕೆ ೨ನೆಯ ಜಯಕೇಶಿಯೂ ಅವನ ಪಿರಿಯರಸಿಯಾದ ಮೈಲಾಲದೇವಿಯೂ ಸಿಂಗಣನೂ ಅವನ ಹೆಂಡತಿಯೂ ಭೂದಾನಗಳನ್ನು ಕೊಟ್ಟರೆಂತಲೂ ಬರೆದಿದೆ.

೨. ಕುಂದೂರಿನ (ನರೇಂದ್ರದ) ಅರಕೆರೆ ಶಂಕರಲಿಂಗನ ಹಿಂಡಿಕೆಯ ಮೇಲಿನ ಪಾಳಿಗೆಯಲ್ಲಿ ಇದ್ದ ಶಿಲಾಲೇಖ. ಈ ಕಲ್ಲಿನ ಮೇಲಿನ ಭಾಗವು ಕಡಿದುಹೋಗಿದೆ. ಇದರಲ್ಲಿ ಅರಕೆರೆ ಶಂಕರನಿಗೆ ಹಲವು ಜನರು ೧೧೨೩ರಿಂದ ೧೧೨೬ರ ವರೆಗೆ ಕೊಟ್ಟ ದಾನಗಳ ಉಲ್ಲೇಖವಿರುತ್ತದೆ. ಇದರಲ್ಲಿ ಜಯಕೇಶಿಯ ಪಿರಿಯರಸಿಯಾದ ಮೈಲಾಲ ಮಹಾದೇವಿಯರು "ಕುಂದೂರೊಳಿರ್ದು" ಕೊಂಕಣ

೯೦೦ನ್ನೂ, ಉಣಕಲ್ಲುಚಬ್ಬಿಯೆರಡು ೩೦ನ್ನೂ, ಕೊಂತಕುಳಿ ೩೦ನ್ನೂ, ಹಾನುಂಗಲ್ಲ ೫೦೦ನ್ನೂ, ಉತ್ಸುಗ್ರಾಮೆ ಕಾಡ(ರ)ವಳ್ಳಿಯೆರಡು ೩೦ನ್ನೂ, ಪೊಳಲಗುಂಡೆ ೩೦ನ್ನೂ, ವೇಳುಗ್ರಾಮೆಯ ೭೦ನ್ನೂ, ಹಯ್ವೆಯ ೫೦೦ನ್ನೂ, ಕವಡಿದ್ವೀಪ ಸವಲಕ್ಷವನ್ನೂ "ದುಷ್ಟನಿಗ್ರಹ ವಿಶಿಷ್ಟ ಪ್ರತಿಪಾಲನೆಯಿಂದ ಉತ್ತರೋತ್ತರಾಭಿವೃದ್ಧಿ ಪ್ರವರ್ಧಮಾನ ಮಾಚಂದ್ರಾರ್ಕತಾರಂ ಸುಖಸಂಕಥಾ ವಿನೋದದಿಂ ರಾಜ್ಯಂಗೆಯುತ್ತಮಿರೆ" ಎಂತಲೂ, ಸಾಮಂತಾಧಿಪತಿಯೂ ಮಹಾಪ್ರಚಂಡ ದಂಡನಾಯಕನೂ ವಿಬುಧವರದಾಯಕನೂ ಬಂಧುಚಿಂತಾಮಣಿಯೂ ವಿವೇಕ ಚೂಡಾಮಣಿಯೂ ಅಂತಃಪುರಾಧ್ಯಕ್ಷನೂ ಪಸಾಯ್ತನೂ ಶ್ರೀಮನ್ಮೈಲಾ ಮಹಾದೇವಿಯರ ಮನೆವೆರ್ಗಡೆಯೂ ಆದ ಲಕ್ಕರಸನು (ಲಕ್ಷ್ಮರಸನು) ಮೈಲಾಲ ಮಹಾದೇವಿಯನ್ನು ಎತ್ತಿ ಆಡಿಸಿದ್ದರಿಂದ ಅವಳ ಅತಿಪ್ರೀತಿಯ ಆಳಾಗಿದ್ದನು*. ಶಕ ೧೦೪೫ನೆಯ ಶೋಭಕೃತ ಸಂವತ್ಸರ ಆಷಾಢ ಬಹುಳ ೫ ದಕ್ಷಿಣಾಯನ ಸಂಕ್ರಾಂತಿಯ ನಿಮಿತ್ತವಾಗಿ, ಜಯಕೇಶಿಯು ಕುಂದೂರು ೫೦೦ಕ್ಕೆ ಸೇರಿದ ಮರೆವಾಡಾದ ೯ ಮತ್ತರ ವಿಸ್ತಾರವಾದ ಒಂದು ಎರೆಹೊಲವನ್ನೂ ಮುಂದೆ ವಿಶ್ವಾವಸು ಸಂವತ್ಸರ ಆಶ್ವಯುಜ ೩೦ರ ದಿವಸ ಅದೇ ನಾಡಿಗೆ ಸೇರಿದ ಹಲಗುಂಡಿಯ ೧೦ ಮತ್ತರ ವಿಸ್ತಾರವಾದ ಮತ್ತೊಂದು ಎರೆಹೊಲವನ್ನೂ ಕುಂದೂರಿನ ಮೂಲಸ್ಥಾನ ದೇವರಗುಡಿಯ ಪಡುವಲಿಗಿದ್ದ ೩೫ ಮೊಳ ಅಗಲ ಮತ್ತು ೭೫ ಮೊಳ ಉದ್ದವಾದ ತರಿಭೂಮಿಯನ್ನೂ ಅರಕೆರೆ ಶಂಕರನಿಗೆ ದಾನ ಕೊಟ್ಟನೆಂತಲೂ ಅದೇ ದೇವರ ಸೇವಕನಾದ ಪ್ರಯಾಗೆ ಭಟ್ಟನೆಂಬವನು ಒಂದು ಸಣ್ಣ ಹೂದೋಟವನ್ನು ದಾನ ಕೊಟ್ಟನೆಂತಲೂ ಶಾನಬೋವ ನಾಗವರ್ಮಯ್ಯನೆಂಬವನು ಅರಕೆರೆಯಲ್ಲಿದ್ದ ಒಂದು ದೊಡ್ಡ ತೋಟವನ್ನು ದಾನ ಕೊಟ್ಟನೆಂತಲೂ ದಂಡನಾಯಕ ಸಿಂಗರಸನ ಹೆಂಡತಿಯಾದ ಮೈಲಾಲ ದೇವಿಯಕ್ಕನು ಒಂದು ಹೊಲವನ್ನು ೧೩ ಗದ್ಯಾಣಕ್ಕೆ ಕೊಂಡು

---

* ಇಲ್ಲಿ ೫ ಸಾಲುಗಳು ಸವೆದುಹೋದುದರಿಂದ ಲಕ್ಷ್ಮರಸನು ಯಾವ ಭೂದಾನವನ್ನು ಕೊಟ್ಟನೆಂಬುದು ಗೊತ್ತಾಗುವುದಿಲ್ಲ.

ಅದನ್ನು ಶಂಕರನಿಗೆ ದಾನ ಕೊಟ್ಟಳೆಂತಲೂ ಮತ್ತೊಮ್ಮೆ ವಿಶ್ವಾವಸು ಸಂವತ್ಸರ ಮಾಘ ಶುದ್ಧ ೧೫ ದಿವಸ ಚಂದ್ರಗ್ರಹಣವಿದ್ದುದರಿಂದ ಜಯಕೇಶಿಯು ಅರಕೆರೆ ಶಂಕರನ ಗುಡಿಗೆ ಹೋಗಿ ದೇವರ ಎಲ್ಲ ಆಸ್ತಿಯ ವ್ಯವಸ್ಥೆಯನ್ನು ಪ್ರಯಾಗೆ ಭಟ್ಟಯ್ಯನಿಗೆ ಧಾರಾಪೂರ್ವಕವಾಗಿ ಒಪ್ಪಿಸಿದನೆಂತಲೂ ಅದೇ ದಿವಸ ಅವನ ಪಿರಿಯರಸಿಯಾದ ಮೈಲಾಲ ಮಹಾದೇವಿಯು ಕುಂದೂರು ೫೦೦ಕ್ಕೆ ಸೇರಿದ ಧಾರವಾಡದ ಮೂಡಲಲ್ಲಿದ್ದ ೧೦ ಮತ್ತರ ಹರವಾದ ಒಂದು ಹೊಲವನ್ನು ಅರಕೆರೆ ಶಂಕರನಿಗೆ ದಾನ ಕೊಟ್ಟಳೆಂತಲೂ, ೨ನೆಯ ಜಯಕೇಶಿಯು ಗೋವಿಪಯ್ಯನಾಯಕ ಎಂಬ ಹೆಸರುಳ್ಳ ೩ ಮಂದಿ ದೊಡ್ಡ ರಾಜಾಧಿಕಾರಿಗಳು ಮಹಾದೇವಣ್ಣನೆಂಬ ಮತ್ತೊಬ್ಬ ರಾಜಾಧಿಕಾರಿಯು ಹೀಗೆ ೪ ಮಂದಿ ಈ ಶಂಕರನ ಆಸ್ತಿಯನ್ನು ಸೂರ್ಯಚಂದ್ರರಿರುವ ವರೆಗೆ ಕಾಪಾಡಬೇಕೆಂತಲೂ ಈ ಶಿಲಾಲೇಖದಲ್ಲಿ ಬರೆದಿದೆ.

ನರೇಂದ್ರವು ನನ್ನ ಹುಟ್ಟೂರಾದ್ದರಿಂದ ಇದರ ವಿಷಯವಾಗಿ ನಾನು ೪೦ ವರ್ಷ ಶೋಧ ಮಾಡುತ್ತಲಿದ್ದೇನು. ಮೇಲೆ ಕೊಟ್ಟ ಶಾಸನಗಳ ಹೊರತು ಬೇರೆ ಯಾವ ಶಾಸನಗಳಲ್ಲಿಯೂ ಈ ಊರ ಹೆಸರು ಬಂದಿಲ್ಲ. ಈ ಶಾಸನಗಳಿಂದ ಹೊರಡುವ ಅನುಮಾನಗಳನ್ನು ಕೆಳಗೆ ಕೊಡುತ್ತೇನೆ :—

೧. ಹಲಸಿಗೆ ಪ್ರಾಂತದ ಭಾಗವಾದ ಕುಂದೂರು ೫೦೦ನ್ನು ೬ನೆಯ ವಿಕ್ರಮಾದಿತ್ಯನು ತನ್ನ ಮಗಳಿಗೆ ಬಳವಳಿಯಾಗಿ ಕೊಟ್ಟಿರಬಹುದೆಂದು ತೋರುತ್ತದೆ.

೨. ಜಯಕೇಶಿಯು ಅರಕೆರೆಯ ಶ್ರೀ ಶಂಕರನ ಆಸ್ತಿಯ ಮುಖ್ಯ ಪಂಚನಾದ್ದರಿಂದಲೂ ಜಯಕೇಶಿ ಮೈಲಾಲಮಹಾದೇವಿಯರು ಕುಂದೂರಿನಲ್ಲಿದ್ದು ಆಳುತ್ತಿದ್ದರೆಂದು ಬರೆದಿರುವುದರಿಂದಲೂ ಕುಂದೂರು ಅವರ ನೆಲೆವೀಡು ಅಥವಾ ರಾಜಧಾನಿಯಾಗಿರಬಹುದು.

೩. ಮುಂದೆ ಚಾಳುಕ್ಯ ಕಳಚುರ್ಯರ ನಡುವೆ ಸಾಮ್ರಾಜ್ಯದ ನಲುವಾಗಿ ಜಗಳ ನಡೆದಾಗ ಜಯಕೇಶಿಯಾಗಲಿ ಅವನ ಮಗನಾಗಲಿ

ಸ್ವತಂತ್ರನಾಗಿ 'ನರೇಂದ್ರ' ಎಂಬ ಬಿರುದನ್ನು ಧರಿಸಿ, ಕುಂದೂರಿಗೆ ನರೇಂದ್ರುವೆಂದು ನಾಮಕರಣವನ್ನು ಮಾಡಿರಬಹುದು (೧೧೮೦?).

೪. ಮೊದಲು ಅರಕೆರೆ ಎಂಬ ಊರೂ ಒಂದು ಕೆರೆಯೂ ಕುಂದೂರಿನ ಭಾಗವಾಗಿದ್ದಂತೆ ಶಾಸನಗಳಿಂದ ಕಂಡುಬರುತ್ತದೆ. ಈಗ ಒಂದು ದೊಡ್ಡ ಕೆರೆ ಮಾತ್ರ ಉಳಿದಿದೆ. ಅದಕ್ಕೆ ಹಿರಿಕೆರೆ ಎನ್ನುತ್ತಾರೆ.

೫. ಶಂಕರಲಿಂಗನ ಸುತ್ತಲಿನ ಪ್ರದೇಶಕ್ಕೆ ಸಂಕಲಾಪುರವನ್ನು ತ್ತಾರೆ. ಶಂಕರಪುರದ ಅಪಭ್ರಂಶವೇ ಸಂಕಲಾಪುರವಾಗಿರಬಹುದು. ಈಗ ಸಂಕಲಾಪುರದಲ್ಲಿ ೪–೬ ಮನೆಗಳು ಮಾತ್ರ ಇವೆ.

೬. ಈ ಸಂಕಲಾಪುರಕ್ಕೆ ಹೊಂದಿ ದೇವಗೇರಿ ಎಂಬ ಒಂದು ಓಣಿ ಇರುತ್ತದೆ. ಇದು ಮೊದಲು ಅರಕೆರೆಯ ಶಂಕರನ ಗುಡಿಯ ಆಳುಗಳಿರುವ ಸ್ಥಳವಾಗಿರಬಹುದು.

೭. ನರೇಂದ್ರದ ತೆಂಕಲಿಗೆ ಒಂದು ಮಲ್ಲಿಕಾರ್ಜುನ ದೇವರ ಗುಡಿಯೂ ಒಂದು ಶಿಲಾಲೇಖವೂ ಇರುತ್ತವಷ್ಟೇ. ಲಕ್ಕರಸನು ಸ್ಥಾಪಿಸಿದ ಲಕ್ಷ್ಮೇಶ್ವರನಿಗೆ ಈಗ ಮಲ್ಲಿಕಾರ್ಜುನ ಎಂಬ ಹೆಸರು ಬಂದಿರಬಹುದು.

೮. ನರೇಂದ್ರುದ ಹತ್ತಿರ ಲಕಮಾಪುರವೆಂಬ ಹಳ್ಳಿಯಿರುತ್ತದಷ್ಟೇ. ಲಕ್ಷ್ಮಣಪುರ ಅಥವಾ ಲಕ್ಷ್ಮಪುರವೇ ಈಗ ಲಕಮಾಪುರವಾಗಿರುತ್ತದೆ*.

೯. ಅರಕೆರೆಯ ಶಂಕರನ ಗುಡಿಯ ಬಡಗಲಿಗೆ ಗೋವನಕೊಪ್ಪ ಎಂಬ ಬೇಚರಾಖವಾದ ಹಳ್ಳಿಯ ಹೊಲಗಳಿರುತ್ತವಷ್ಟೇ. ಶ್ರೀ ಶಂಕರನ ಆಸ್ತಿಯ ವ್ಯವಸ್ಥಾಪಕ ಪಂಚರೊಳಗೆ ಒಂದೇ ಹೆಸರಿನ ೩ ಮಂದಿ ಪಂಚರಾದ ಗೋವಿಪಯ್ಯ ನಾಯಕರೊಳಗೆ ಒಬ್ಬನು ಸ್ಥಾಪಿಸಿದ

* ಈ ಲಕ್ಷ್ಮರಸನು ೧೦೭೧ರಲ್ಲಿ ಬೆಳ್ವೊಲ ಪುಲಿಗೆರೆಗಳ ಮಹಾಮಂಡಲೇಶ್ವರನಾಗಿದ್ದಾಗ ಪುಲಿಗೆರೆಯಲ್ಲಿ ಲಕ್ಷ್ಮೇಶ್ವರನ ಗುಡಿಯನ್ನು ಕಟ್ಟಿಸಿದ್ದರಿಂದ ಮುಂದೆ ಅದಕ್ಕೆ ಲಕ್ಷ್ಮೇಶ್ವರವೆಂಬ ಹೆಸರು ಬಿದ್ದಿರಬಹುದು.

ಊರೇ ಈ ಗೋವನಕೊಪ್ಪವಾಗಿರುತ್ತದೆ. ಈ ಊರು ಹಾಳಾದ್ದರಿಂದ ಸರಕಾರದ ಲೆಕ್ಕದಲ್ಲಿ ಹೊಲಗಳು ಮಾತ್ರ ಆ ಹೆಸರಿನಿಂದ ಕರೆಯಲ್ಪಡುತ್ತವೆ.

ಇನ್ನು ೬ನೆಯ ವಿಕ್ರಮಾದಿತ್ಯನ ತಾತ್ಪೂರ್ತಿಕ ರಾಜಧಾನಿಗಳನ್ನೂ ಅವನ ಕಯ್ಕೆಳಗಿದ್ದ ಮಂಡಲೇಶ್ವರ ಸಾಮಂತಾಧಿಪತಿಗಳ ಹೆಸರುಗಳನ್ನೂ ಅವರು ಆಳುತ್ತಿದ್ದ ಪ್ರಾಂತಗಳನ್ನೂ ಕಾಲವನ್ನೂ ಕೊಟ್ಟು ಈ ವರ್ಣನೆಯನ್ನು ಮುಗಿಸುವೆವು.

ವಿಕ್ರಮಾದಿತ್ಯನ ಮುಖ್ಯ ರಾಜಧಾನಿಯು ಕಲ್ಯಾಣ ಪಟ್ಟಣವಾಗಿತ್ತು. ಆದರೂ ಅವನು ಯಾವಾಗಲೂ ಕಲ್ಯಾಣದಲ್ಲಿರದೆ ತನ್ನ ಸಾಮ್ರಾಜ್ಯದ ಬೇರೆ ಬೇರೆ ಊರುಗಳಲ್ಲಿದ್ದು ರಾಜ್ಯಭಾರವನ್ನು ಮಾಡುತ್ತಿದ್ದನಾದ್ದರಿಂದ ಎಷ್ಟೋ ಊರುಗಳು ಅಲ್ಪ ಕಾಲಿಕ ರಾಜಧಾನಿಗಳಾದವು. ಅವಾವವೆಂದರೆ:—೧. ಬನವಾಸಿ, ೨. ಬಳಗಾವೆ, ೩. ವಿಜಾಪುರ ಜಿಲ್ಲೆಯ ಈಶಾನ್ಯದ ತುದಿಗಿದ್ದ ನಡವಿಯಪ್ಪಯಣವೀಡು (೧೦೭೭), ೪. ನಿಜಾಮ ಸಂಸ್ಥಾನದಲ್ಲಿದ್ದ ಎಟಗಿರಿ (ಯಾತಗಿರಿ)(೧೦೭೮), ೫. ವಿಜಯಪುರ (ವಿಜಾಪುರ) (೧೦೯೧), ೬. ಮನ್ನೆಯಕೆರೆ (೧೧೨೫), ೭. ವಿಕ್ರಮಪುರ (ಅರಸಿಬೀದಿ).

೧. ಹಾನಗಲ್ಲ ಕದಂಬ ಮನೆತನದ ಮಹಾಮಂಡಲೇಶ್ವರನಾದ ೨ನೆಯ ಕೀರ್ತಿವರ್ಮನು ಬನವಾಸಿ ೧೨,೦೦೦ನ್ನು ಆಳುತ್ತಿದ್ದನು (೧೦೭೬, ೭೭, ೭೮).

೨. ಮಹಾಸೇನಾಪತಿಯಾದ ಬರ್ಮದೇವನು ಬನವಾಸಿ ಸಂತಲಿಗೆ ಪ್ರಾಂತಗಳನ್ನೂ, ೧೮ ಅಗ್ರಹಾರಗಳನ್ನೂ ಆಳುತ್ತಿದ್ದನು (೧೦೭೮).

೩. ಸಿಂದ ಮನೆತನದ ಮಹಾಮಂಡಲೇಶ್ವರನಾದ ಮುಂಜನು ವಿಜಾಪುರ ಜಿಲ್ಲಾ ತಿಡಗುಂಡಿಯ ನೆರೆಯ ಪ್ರದೇಶವನ್ನು ಆಳುತ್ತಿದ್ದನು (೧೦೮೨).

೪. ಮಾಹಿಷ್ಮತಿಯ ಒಡೆಯನೆಂಬ ಬಿರುದುಳ್ಳ ಮಹಾಸಾಮಂತನಾದ ಸತ್ಯದೇವನು ಹೈದರಾಬಾದ ಸಂಸ್ಥಾನ ಗೊಬ್ಬೂರಿನ ನೆರೆಯ ಪ್ರದೇಶವನ್ನು ಆಳುತ್ತಿದ್ದನು (೧೦೮೪).

೫. ಜೀಮೂತವಾಹನ ಮನೆತನದ ಮಹಾಸಾಮಂತನಾದ ಕಲಿಯಮ್ಮರಸನು ಬಾಸನೂರ ೧೪೦ನ್ನು ಆಳುತ್ತಿದ್ದನು (೧೦೮೫).

೬. ದೊಡ್ಡ ರಾಷ್ಟ್ರಕೂಟ ಮನೆತನದ ಮಹಾಸಾಮಂತನಾದ ಧಾಡಿಭಂಡಕನು ಮಧ್ಯಪ್ರಾಂತದೊಳಗೆ ನಾಗಪುರದ ಹತ್ತಿರಿದ್ದ ಸೀತಾಬಲ್ಡಿಯ ನೆರೆಯ ಪ್ರದೇಶವನ್ನು ಆಳುತ್ತಿದ್ದನು (೧೦೮೭).

೭. ರಟ್ಟ ಮನೆತನದ ಮಹಾಮಂಡಲೇಶ್ವರನಾದ ೨ನೆಯ ಕನ್ನಕೈರನು ಸೌದತ್ತಿಯಲ್ಲಿ ಆಳುತ್ತಿದ್ದನು (೧೦೮೮).

೮. ಹಾನಗಲ್ಲ ಕದಂಬ ಮನೆತನದ ಮಹಾಮಂಡಲೇಶ್ವರನಾದ ೨ನೆಯ ಶಾಂತಿವರ್ಮನು ಬನವಾಸಿ ೧೨,೦೦೦ವನ್ನೂ ಪಾನುಂಗಲ್ ೫೦೦ನ್ನೂ ಆಳುತ್ತಿದ್ದನು (೧೦೮೯).

೯. ಪೆರ್ಗಡೆ ಚೆಂಗದೇವಯ್ಯನು ಬನವಾಸಿ ೧೨,೦೦೦ದ ವಡ್ಡಾರವುಳ ಮುಂತಾದ ತೆರಿಗೆಗಳ ಅಧಿಕಾರಿಯಾಗಿದ್ದನು (೧೦೮೯).

೧೦. ಶಿಲಾಹಾರ ಮನೆತನದ ಮಹಾಮಂಡಲೇಶ್ವರಾಧಿಪತಿಯಾದ ಅನಂತದೇವನು ಕೊಂಕಣವನ್ನು ಆಳುತ್ತಿದ್ದನು (೧೦೯೫).

೧೧. ರಟ್ಟ ಮನೆತನದ ಮಹಾಮಂಡಲೇಶ್ವರನಾದ ೨ನೆಯ ಕಾರ್ತವೀರ್ಯನು ಸೌದತ್ತಿಯಲ್ಲಿ ಆಳುತ್ತಿದ್ದನು (೧೦೯೬).

೧೨. ಮಹಾಪ್ರಧಾನ ದಂಡನಾಯಕನಾದ ಭಿವಣಯ್ಯನು ಅಂತಃಪುರಾಧ್ಯಕ್ಷನೂ, **ಹೆರಿಲಾಳ ಕನ್ನಡ ಸಂಧಿವಿಗ್ರಹಿಯೂ*** ಮನೆವೆರ್ಗಡೆಯೂ ಆದ್ದರಿಂದ ಅವನ ತರ್ಫೆನಿಂದ ಪದ್ಮನಾಭಯ್ಯನೆಂಬವನು ಬನವಾಸಿ ೧೨,೦೦೦ವನ್ನು ಆಳುತ್ತಿದ್ದನು (೧೦೯೮).

೧೩. ಗೋವೆಯ ಕದಂಬ ಮನೆತನದ ಮಹಾಮಂಡಲೇಶ್ವರನಾದ ಗೂವಲ ಅಥವಾ ಗೂಹಲ್ಲನು ಗೋವೆಯಲ್ಲಿದ್ದು ಪಲಸಿಗೆ ೧೨,೦೦೦ವನ್ನು ಆಳುತ್ತಿದ್ದನು (೧೦೯೯).

---

* ಹೆರಿ ಶಬ್ದದ ಅರ್ಥವು ಗೊತ್ತಾಗುವುದಿಲ್ಲ. ಇದು ಬಹುಶಃ ಹಿರಿ ಶಬ್ದದ ತಪ್ಪು ರೂಪವಾಗಿರಬಹುದು. ಲಾಳವು ಲಾಟದ ಅಪಭ್ರಂಶವು. ಲಾಳ = ಲಾಟ ಪ್ರಾಂತ. ಸಂಧಿ ವಿಗ್ರಹಿ = ಒಪ್ಪಂದ ಜಗಳಗಳ ಮಂತ್ರಿ.

೧೪. ಮಹಾಪ್ರಧಾನ ಮತ್ತು ದಂಡನಾಯಕನಾದ ಪದ್ಮನಾಭಯ್ಯನು ಬನವಾಸಿ ೧೨,೦೦೦ವನ್ನು ಆಳುತ್ತಿದ್ದನು (೧೦೯೯).

೧೫. ಮಹಾಪ್ರಧಾನ ಬಾಣಸವೆಗ್ಗಡೆ ದಂಡನಾಯಕನಾದ ಅನಂತಪಾಲಯ್ಯನು ೧೧೦೧ರಲ್ಲಿ ಬೆಳ್ವೊಲ ೩೦೦ನ್ನೂ, ಪುಲಿಗೆರೆ ೩೦೦ನ್ನೂ ಆಳುತ್ತಿದ್ದನು; ೧೧೦೩, ೧೧೦೮ರಲ್ಲಿ ಬೆಳ್ವೊಲ, ಪುಲಿಗೆರೆ, ಬನವಾಸಿ ಪ್ರಾಂತಗಳನ್ನು ಆಳುತ್ತಿದ್ದುದಲ್ಲದೆ, ವಡ್ಡರಾವುಳ **ಪೆಜ್ಜುಂಕ** ಎಂಬ ತೆರಿಗೆಗಳ ಅಧಿಕಾರಿಯಾಗಿದ್ದನು; ೧೧೦೩, ೧೧೦೪ರಲ್ಲಿ ಇವನೇ ಇಡಿ ೭॥ ಲಕ್ಷ ರಾಜ್ಯದ **ಪನ್ನಾಯ** ತೆರಿಗೆಯ ಮೇಲಧಿಕಾರಿಯಾಗಿದ್ದನು.

೧೬. ಮಹಾಪ್ರಧಾನ ಭಿವಣಯ್ಯನು ಪಲಸಿಗೆ ೧೨,೦೦೦ವನ್ನು ಆಳುತ್ತಿದ್ದುದಲ್ಲದೆ, ಏಳೂವರೆ ಲಕ್ಷ ರಾಜ್ಯದ ಪನ್ನಾಯ ತೆರಿಗೆಯ ಮುಖ್ಯಾಧಿಕಾರಿಯಾಗಿದ್ದನು (೧೧೦೩).

೧೭. ದಂಡನಾಯಕ ಗೋವಿಂದರಸನು ಅನಂತಪಾಲನ ಕಯ್ಕೆಳಗಿನವನಾಗಿ ೧೧೦೩ರಲ್ಲಿ ಮೇಲ್ಪಟ್ಟಿಯ ವಡರಾವುಳ ಎರಡು ಬಿಲ್ಕೊಡೆ ಪೆರ್ಜುಂಕ ಈ ತೆರಿಗೆಗಳ ಮೇಲ್ವಿಚಾರಣೆಯನ್ನು ಮಾಡುತ್ತಿದ್ದನು. ಮುಂದೆ ಇವನು ಮಹಾದಂಡನಾಯಕ ಮಹಾಸಾಮಂತಾಧಿಪತಿಯಾಗಿ ೧೧೧೪–೧೧೧೮ರ ವರೆಗೆ ಬನವಾಸಿ ೧೨,೦೦೦ವನ್ನು ಆಳುತ್ತಿದ್ದನು.

೧೮. ಹೊಯ್ಸಳ ಮನೆತನದ ಮಹಾಮಂಡಲೇಶ್ವರನಾದ ೧ನೆಯ ಬಲ್ಲಾಳನು ದ್ವಾರಸಮುದ್ರದ ಪ್ರಾಂತವನ್ನು ಆಳುತ್ತಿದ್ದನು (೧೧೦೩).

೧೯. ಹಾನಗಲ್ಲ ಕದಂಬ ಮನೆತನದ ಮಹಾಮಂಡಲೇಶ್ವರನಾದ ೨ನೆಯ ತೈಲಪನು ೧೧೦೪ರಲ್ಲಿ ಮತ್ತು ೧೧೦೮ರಲ್ಲಿ ಪಾನುಂಗಲ್ಲ ೫೦೦ನ್ನು ಆಳುತ್ತಿದ್ದನು; ಮುಂದೆ ೧೧೦೯ರಲ್ಲಿ ಪಾನುಂಗಲ್ಲ, ಬನವಾಸಿ ಪ್ರಾಂತಗಳನ್ನು ಆಳುತ್ತಿದ್ದನು; ಬಳಿಕ ೧೧೨೪ರಿಂದ ೧೧೨೬ರ ವರೆಗೆ ಅವೇ ಎರಡು ಪ್ರಾಂತಗಳನ್ನು ಆಳುತ್ತಿದ್ದನು.

೨೦. ಅಹಿಹಯ (ಅಥವಾ ಕಾರ್ತವೀರ್ಯ) ವಂಶದ ಮಾಹಿಷ್ಮತಿಯ ಒಡೆಯನಾದ ಯಾನೆಮರಸನು ನಿಜಾಮು ಸಂಸ್ಥಾನ ಕಮ್ಮರವಾಡಿಯ ನೆರೆಯ ಪ್ರಾಂತವನ್ನು ಆಳುತ್ತಿದ್ದನು (೧೧೦೫).

೨೧. ಮಹಾಸಾಮಂತಾಧಿಪತಿ ಮಹಾಪ್ರಧಾನ **ಭಾಣಸ ವೆಗ್ಗಡೆ ಅಚ್ಚು ಪನ್ನಾಯದ** ಅಧಿಷ್ಠಾಯಕನಾದ ಬಮ್ಮರಸನು ನೊಳಂಬವಾಡಿ ೩೨,೦೦೦ದ ಪನ್ನಾಯ ತೆರಿಗೆಯ ಮೇಲ್ವಿಚಾರಕನಾಗಿದ್ದನು (೧೧೦೯).

೨೨. ಶಿಲಾಹಾರ ಮನೆತನದ ಕರಾಡ ಶಾಖೆಯ ಮಹಾಮಂಡಲೇಶ್ವರನಾದ ಗಂಡರಾದಿತ್ಯನು ವಂಶಪರಂಪರಾಗತವಾದ ತನ್ನ ನಾಡನ್ನು ಆಳುತ್ತಿದ್ದನು (೧೧೧೦–೧೧೯).

೨೩. ಪಾಂಡ್ಯ ಮನೆತನದ ಗೋಕರ್ಣದ ಒಡೆಯನೆಂಬ ಬಿರುದುಳ್ಳ ಮಹಾಮಂಡಲೇಶ್ವರನಾದ ತ್ರಿಭುವನಮಲ್ಲ ಕಾಮದೇವನು ಕೊಂಕಣ ರಾಷ್ಟ್ರವನ್ನು ಆಳುತ್ತಿದ್ದನು (೧೧೧೨).

೨೪. ಮಹಾಮಂಡಲೇಶ್ವರನೂ, ಕನ್ನಡ ಸಂಧಿವಿಗ್ರಹಿಯೂ ಆದ ಶ್ರೀಪತಿಯರಸನು ಬೆಳ್ವೊಲ ೩೦೦ನ್ನೂ, ಪುಲಿಗೆರೆ ೩೦೦ನ್ನೂ ಆಳುತ್ತಿದ್ದನು (೧೧೧೩).

೨೫. ಪಶ್ಚಿಮ ಗಂಗ ಮನೆತನದ ಮಹಾಮಂಡಲೇಶ್ವರನಾದ ಉದಯಾದಿತ್ಯ ಗಂಗ ಪೆರ್ಮಾಡಿಯು ಬನವಾಸಿ ೧೨,೦೦೦ವನ್ನೂ, ಸಂತಳಿಗೆ ೧,೦೦೦ವನ್ನೂ ಆಳುತ್ತಿದ್ದನು (೧೧೧೩).

೨೬. ಗುತ್ತ ಮನೆತನದ ಮಲ್ಲ ಅಥವಾ ಮಲ್ಲಿದೇವನೆಂಬವನು ಗುತ್ತಲನಾಡನ್ನು ಆಳುತ್ತಿದ್ದನು (೧೧೧೫).

೨೭. ಮಹಾಪ್ರಧಾನ ನಾಗವರ್ಮಯ್ಯನು ಬೆಳ್ವೊಲ ೩೦೦ನ್ನೂ, ಪುಲಿಗೆರೆ ೩೦೦ನ್ನೂ, ಬನವಾಸಿ ೧೨,೦೦೦ವನ್ನೂ ಆಳುತ್ತಿದ್ದನು (೧೧೧೫–೧೧೧೮).

೨೮. ಹೊಯ್ಸಳ ಮಹಾಮಂಡಲೇಶ್ವರನಾದ ವಿಷ್ಣುವರ್ಧನನು ಗಂಗವಾಡಿ ೯೬,೦೦೦ವನ್ನು ಆಳುತ್ತಿದ್ದನು (೧೧೧೭).

೨೯. ಜೀಮೂತವಾಹನ ಮನೆತನದ ಮಹಾಮಂಡಲೇಶ್ವರನಾದ ಪೆರ್ಮಾಡಿಯು ಬಾಸವೂರ ೧೪೦ನ್ನು ಆಳುತ್ತಿದ್ದನು (೧೧೨೨).

೩೦. ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ ೩೨,೦೦೦ವನ್ನು ಆಳುತ್ತಿದ್ದನು (೧೧೨೨).

೩೧. ಸಿಂದಮನೆತನದ ಆಚ ಅಥವಾ ಆಚುಗಿಯು ಕಿಸುಕಾಡು ೭೦ನ್ನು ಆಳುತ್ತಿದ್ದನು (೧೧೨೩).

೩೨. ಗೋವೆಯ ಕದಂಬ ಮನೆತನದ ಮಹಾಮಂಡಲೇಶ್ವರನಾದ ೨ನೆಯ ಜಯಕೇಶಿಯು ಕೊಂಕಣ ೯೦೦ನ್ನೂ, ಪಲಸಿಗೆ ೧೨,೦೦೦ವನ್ನೂ, ಹಯ್ವೆ ೫೦೦ನ್ನೂ, ಕವಡಿದ್ವೀಪ ಒಂದೂಕಾಲ ಲಕ್ಷವನ್ನೂ ಆಳುತ್ತಿದ್ದನು (೧೧೨೬).

೩೩. ಕಾಕತಿಯ ಮನೆತನದ ಮಹಾಮಂಡಲೇಶ್ವರನಾದ ಬೆಟ್ಟರಾಜನು ಆಂಧ್ರದೇಶದ ಸಬ್ಬಿ ೧,೦೦೦ವನ್ನು ಆಳುತ್ತಿದ್ದನು.

---

# ೫ನೆಯ ಅಧ್ಯಾಯ

## **ಕಲ್ಯಾಣದ ಚಾಳುಕ್ಯರ ಇಳಿಗಾಲವೂ ಅಳಿಗಾಲವೂ**

### **೯. ಮೂರನೆಯ ಸೋಮೇಶ್ವರ**

(೧೧೨೬–೧೧೩೮)

ಆರನೆಯ ವಿಕ್ರಮಾದಿತ್ಯನ ತರುವಾಯ ಅವನ ಮಗನಾದ ಸೋಮೇಶ್ವರನು ೩ನೆಯ ಸೋಮೇಶ್ವರನೆಂಬ ಹೆಸರಿನಿಂದ ಕಲ್ಯಾಣದ ಪಟ್ಟವನ್ನೇರಿದನು (೧೧೨೬). ಇವನು ತನ್ನ ಪೂರ್ವಜರ ಸಾಮ್ರಾಜ್ಯ ಬಿರುದುಗಳ ಹೊರತು **ಭೂಲೋಕಮಲ್ಲ**ನೆಂಬ ವಿಶಿಷ್ಟ ಬಿರುದನ್ನು ಧರಿಸಿದನು. ಇವನು ಓದಾಳಿಯಾದ್ದರಿಂದ ಜನರು ವಾಡಿಕೆಯಾಗಿ ಇವನಿಗೆ **ಸರ್ವಜ್ಞ ಚಕ್ರವರ್ತಿ** ಎಂದು ಕರೆಯುತ್ತಿದ್ದರು. ಇವನು ಶಕ ೧೦೪೯ನೆಯ ಪರಾಭವ ಸಂವತ್ಸರದಲ್ಲಿ ಅಂದರೆ ೧೧೨೬ರ ಕೊನೆ

ಯಲ್ಲಿ ಸಾರ್ವಭೌಮನಾದನೆಂದು ಹೇಳಬಹುದು. ಆದರೆ ಇವನು ಪಟ್ಟವೇರಿದ ತಿಥಿ ಮಾಸಗಳು ಇನ್ನೂ ಗೊತ್ತಾಗಿಲ್ಲ. ವಿಜಾಪುರ ಜಿಲ್ಲಾ ಇಂಗಳೇಶ್ವರದಲ್ಲಿದ್ದ ನಾರಾಯಣದೇವರ ಗುಡಿಯ ಶಕ ೧೦೫೧ ನೆಯ ಕೀಲಕ ಸಂವತ್ಸರ ಕಾರ್ತಿಕ ಮಾಸದ ಶಿಲಾಲೇಖದಲ್ಲಿ ಆ ವರ್ಷವು ಇವನ ಆಳಿಕೆಯ ೩ ನೆಯ ವರ್ಷವಾಗಿತ್ತೆಂದು ಬರೆದಿದೆ*.

೬ ನೆಯ ವಿಕ್ರಮಾದಿತ್ಯನು ವಿದ್ಯಾಪಕ್ಷಪಾತಿಯಾಗಿದ್ದನೆಂತಲೂ ಕಾಶ್ಮೀರಭಟ್ಟ ಬಿಹ್ಲಣ, ವಿಜ್ಞಾನೇಶ್ವರ ಪಂಡಿತ ಮುಂತಾದ ಘನ ವಿದ್ವಾಂಸರು ಅವನ ಆಸ್ಥಾನವನ್ನು ಅಲಂಕರಿಸುತ್ತಿದ್ದರೆಂತಲೂ ಹಿಂದೆ ಬರೆದಿರುತ್ತೇವಷ್ಟೇ. ಇಂತಹ ಘನಪಂಡಿತರು ಸೋಮೇಶ್ವರನ ಗುರುಗಳಾದ್ದರಿಂದ ಅವನಿಗೆ ಜ್ಞಾನಾರ್ಜನೆಯ ಕಡೆಗೆ ವಿಶೇಷವಾಗಿ ಲಕ್ಷ್ಯ ಹತ್ತಿತು. ಆದ್ದರಿಂದ ಅವನು ಶಾಸ್ತ್ರಾವಲೋಕನದಲ್ಲಿಯೂ ಸಂಶಯ ಬಂದ ವಿಷಯಗಳ ವಿಷಯವಾಗಿ ಪಂಡಿತರೊಡನೆ ಚರ್ಚೆಮಾಡುವುದರಲ್ಲಿಯೂ ತನ್ನ ಕಾಲವನ್ನು ಹೆಚ್ಚಾಗಿ ಕಳೆಯಲಾರಂಭಿಸಿದನೆಂದರೆ ಅತಿಶಯೋಕ್ತಿಯಾಗಲಾರದು. ಅವನು ಪಟ್ಟವೇರಿದ ಬಳಿಕ **ಮಾನಸೋಲ್ಲಾಸ** ಅಥವಾ **ಅಭಿಲಷಿತಾರ್ಥಚಿಂತಾಮಣಿ** ಎಂಬದೊಂದು ದೊಡ್ಡ ಸಂಸ್ಕೃತ ಗ್ರಂಥವನ್ನು ಬರೆದನು. ಅದರ ವಿಷಯವಾಗಿ ಡಾ॥ ಭಾಂಡಾರಕರರು ಬರೆಯುವದೇನಂದರೆ :—

"ಈ ಗ್ರಂಥದಲ್ಲಿ ನಾನಾತರದ ವಿಷಯಗಳ ವಿವೇಚನವಿರುತ್ತದೆ. ಇದರಲ್ಲಿ ೫ ಭಾಗಗಳಿರುತ್ತವೆ. ೧ ನೆಯ ಭಾಗದಲ್ಲಿ ರಾಜ್ಯ ಸಂಪಾದನೆಯ ಕಾರಣಗಳೂ, ೨ ನೆಯ ಭಾಗದಲ್ಲಿ ರಾಜ್ಯವನ್ನು ದೊರಕಿಸಿದ ಬಳಿಕ ಅದನ್ನು ಹೇಗೆ ಇಟ್ಟುಕೊಳ್ಳಬೇಕೆಂಬುದೂ, ೩ ನೆಯ ಭಾಗದಲ್ಲಿ ರಾಜ್ಯಭಾರವನ್ನು ನೆಲೆಗೊಳಿಸಿದ ಬಳಿಕ ಅರಸರು ಯಾವ ತರದ ಸುಖೋಪಭೋಗಗಳನ್ನು ತೆಗೆದುಕೊಳ್ಳಬೇಕೆಂಬುದೂ, ೪ ನೆಯ ಭಾಗದಲ್ಲಿ ಯಾವ ತರದ ವಿನೋದಗಳಿಂದ ಮನಸ್ಸಿಗೆ ಆನಂದವಾಗುತ್ತದೆಂಬುದೂ, ೫ ನೆಯ ಭಾಗದಲ್ಲಿ ಆಟಪಾಟಗಳೂ ವಿವರಿಸಲ್ಪಟ್ಟಿವೆ. ಪ್ರತಿಯೊಂದು ಭಾಗದಲ್ಲಿ ಇಪ್ಪಿಪ್ಪತ್ತು ಪ್ರಕರಣಗಳಿರುತ್ತವೆ. ೧ ನೆಯ ಭಾಗದಲ್ಲಿ ಅಸತ್ಯ,

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೫೫, ಅಡಿಟಿಪ್ಪಣಿ ೫.

ತ್ಯಾಗ, ಅಹಿಂಸೆ, ಬ್ರಹ್ಮಚರ್ಯ, ಔದಾರ್ಯ, ಆರ್ಜವ, ದೇವತಾಭಕ್ತಿ, ಗೆಳೆಯರ, ಸಂಗಡಿಗರ, ಬಡವರ ಮತ್ತು ದಿಕ್ಕಿಲ್ಲದವರ ಸಂರಕ್ಷಣೆ, ಸೌಜನ್ಯ ಮುಂತಾದ ಸದ್ಗುಣಗಳು ವಿವರಿಸಲ್ಪಟ್ಟಿವೆ. ೨ನೆಯ ಭಾಗದಲ್ಲಿ ರಾಜ್ಯಭಾರದ ಸಪ್ತಾಂಗಗಳ (ಅಂದರೆ ೧. ಉತ್ಕೃಷ್ಟನಾದ ಅರಸು, ೨. ಪುರೋಹಿತಜ್ಯೋತಿಷರನ್ನೊಳಗೊಂಡ ಮಂತ್ರಿಮಂಡಲ, ೩. ಮಿತ್ರರಾದ ಪರರಾಜರು, ೪. ಭಾಂಡಾರ, ೫. ಕೋಟೆಗಳು, ೬. ರಾಷ್ಟ್ರ, ೭. ದಂಡು)* ವರ್ಣನೆಯಿರುತ್ತದೆ. ೩ನೆಯ ಭಾಗದಲ್ಲಿ ರಾಜರ ಸುಖೋಪಭೋಗಗಳ ವರ್ಣನೆಯುಂಟು. ರಮ್ಯವಾದ ಅರಮನೆಯ ವಾಸವು, ಸುವಾಸಿಕ ತೈಲಾಭ್ಯಂಗವು, ಮಂಗಲಸ್ನಾನವು, ಬೆಲೆಯುಳ್ಳ ವಸ್ತ್ರಾಭರಣಗಳ ಧಾರಣವು ಇವೇ ಮುಂತಾದವು ಅರಸರ ಸುಖೋಪಭೋಗಗಳು. ೪ನೆಯ ಭಾಗದಲ್ಲಿ ಗುರಿಹೊಡೆಯುವುದು, ಕುದುರೆ ಸವಾರಿ, ಆನೆಗಳ ಶಿಕ್ಷಣ, ಹುಂಜುಗಳನ್ನು ಕಾದಿಸುವುದು, ನಾಯಿಗಳನ್ನು ಸಾಕುವುದು, ಕವನ, ವಾದ್ಯಗಳನ್ನು ಬಾರಿಸುವುದು, ಕುಣಿತ, ದಂಡಾಳುಗಳಿಗೆ ಕವಾಯತವನ್ನು ಕಲಿಸುವುದು ಮುಂತಾದವುಗಳ ವರ್ಣನೆಯುಂಟು. ೫ನೆಯ ಭಾಗದಲ್ಲಿ ಹೊಲ, ತೋಟ, ಉಸಬಿನ ದಿನ್ನೆ ಮರಡಿಗಳಲ್ಲಿ ಆಡುವುದು, ಬೇರೆ ಆಟಪಾಟಗಳು, ಹೆಂಗಸರ ಒಡನಾಟವು ಮುಂತಾದುವುಗಳು ವಿವರಿಸಲ್ಪಟ್ಟಿವೆ. ಮುಖ್ಯವಾಗಿ ಈ ಗ್ರಂಥದಲ್ಲಿ ರಾಜನೀತಿ, ಜ್ಯೋತಿಷ, ಫಲಜ್ಯೋತಿಷ, ತರ್ಕ, ಅಲಂಕಾರ, ಕಾವ್ಯ, ವಾದ್ಯ, ಗಾಯನ, ಚಿತ್ರಕಲೆ, ಶಿಲ್ಪ, ವೈದ್ಯಕಿ, ಆನೆ ಕುದುರೆ ನಾಯಿಗಳ ಶಿಕ್ಷಣ ಮುಂತಾದ ಎಲ್ಲ ವಿಷಯಗಳ ವಿವರಣೆಯಿರುತ್ತದೆ. ಈ ಗ್ರಂಥವು ೧೧೩೦ರಲ್ಲಿ ಮುಗಿಯಿತೆಂದು ಬರೆದಿದೆ.''

ಈ ಗ್ರಂಥವು ಆಗುವುದಕ್ಕಿಂತ ಮೊದಲು ಪಂಚಾಂಗಮಾಡುವವರು ತಂತಮ್ಮ ಮನಸ್ಸಿಗೆ ಬಂದ ತಿಥಿಯಿಂದ ಪಂಚಾಂಗವನ್ನು ಆರಂಭಿಸುತ್ತಿದ್ದರೆಂದು ತೋರುತ್ತದೆ. ಆದಕಾರಣ ಇಂತಹ ತಿಥಿಯಿಂದಲೇ ಅದನ್ನು ಆರಂಭಿಸಿದರೆ ಸರಿಯಾಗುವುದೆಂದು ಈ ಮಾನಸೋಲ್ಲಾಸ ಗ್ರಂಥದಲ್ಲಿ ಬರೆದಿದೆ. ಆ ತಿಥಿಯು ಯಾವದೆಂದರೆ:—ಅಗಸ್ತ್ಯನು ಸಮುದ್ರವನ್ನು

* ಸ್ವಾಮ್ಯಮಾತ್ಯಸುಹೃತ್ಕೋಶ ರಾಷ್ಟ್ರದುರ್ಗಬಲಾನಿಚ। ಇತ್ಯಮರಃ ॥

ಪಾನಮಾಡಿದಂತೆ ಶಾಸ್ತ್ರಸರ್ವಸಾರವನ್ನು ಕುಡಿದಂತಹ ಹಗೆಗಳನ್ನು ಪಾದಾಕ್ರಾಂತಮಾಡಿದಂತಹ ಮತ್ತು ಚಾಳುಕ್ಯ ವಂಶಕ್ಕೆ ಭೂಷಣ ನಾದಂತಹ ಸೋಮಭೂಪಾಲನು ಆಳುತ್ತಿದ್ದಾಗ ಶಕ ೧೦೫೧ ನೆಯ ಸೌಮ್ಯ ಸಂವತ್ಸರ ಚೈತ್ರ ಶುದ್ಧ ೧ ಶುಕ್ರವಾರವು. ಆ ದಿವಸವೇ ಪಂಚಾಂಗವನ್ನು ಆರಂಭಿಸಿದರೆ ಎಲ್ಲ ಗ್ರಹಗಳ ಸ್ಥಾನಗಳು ನಿಶ್ಚಿತವಾಗಿ ಗೊತ್ತಾಗುವವೆಂದು ಈ ಗ್ರಂಥದಲ್ಲಿ ಬರೆದಿದೆ*.

೩ ನೆಯ ಸೋಮೇಶ್ವರನ ಆಳಿಕೆಯಲ್ಲಿ ಸಾಮ್ರಾಜ್ಯದೊಳಗೆ ಶಾಂತತೆಯು ಹಬ್ಬಿತ್ತೆಂದು ತೋರುತ್ತದೆ. ಏಕೆಂದರೆ, ಅವನು ಯಾವ ಯುದ್ಧವನ್ನಾಗಲಿ ದಂಡಯಾತ್ರೆಯನ್ನಾಗಲಿ ಮಾಡಿದಂತೆ ಕಂಡು ಬರುವುದಿಲ್ಲ. ರಾಯಲ ಏಸಿಯಾಟಿಕ ಸಂಸ್ಥೆಯ ಮಾಸಪತ್ರಿಕೆಯ ೧೧ ನೆಯ ಸಂಪುಟದ ೨೫೯, ೨೬೮ ನೆಯ ಪುಟಗಳಲ್ಲಿ ಸೋಮೇಶ್ವರನು ಆಂಧ್ರ, ದ್ರವಿಳ, ಮಗಧ, ನೇಪಾಳ ದೇಶಗಳ ಅರಸರ ತಲೆಯ ಮೇಲೆ ತನ್ನ ಕಾಲನ್ನಿಟ್ಟನೆಂದು ಬರೆದಿದೆ. ಆದರೆ ಈ ಮಾತಿಗೆ ಆಧಾರಗಳಿದ್ದಂತೆ ತೋರುವುದಿಲ್ಲ. ಮೈಸೂರು ಸಂಸ್ಥಾನ ಸಿವಮೊಗ್ಗ ಜಿಲ್ಲಾ ಸಿಕಾರ ಪುರ ತಾಲೂಕಿನ ೧೦೦ ನೆಯ ನಂಬರಿನ ಶಿಲಾಲೇಖದಲ್ಲಿ "ಧರೆಯಂ ಪೊತ್ತಿರ್ದು ಭಾರಾವ್ಯಪಗಮ ವಿವಶಂ ಭೋಗಮಂ ಕಾಣನೆಂದುಂ ನಿರುತಂ ಭೋಗೀಶನೆಂದುಂ ತಳಿರ್ದುದು ಧರೆಯಂ ಪೊತ್ತು ಬೆಂಕೂರ್ಮ ರಾಜಂಗಿರದಿನ್ನಾ ಪ್ರಾಣಿಗಳ್ವಿಶ್ರಮಿಸುಗೆ ಸುಖದಿಂದೆಂಬವೋಲ್ವಿಶ್ವವಿಶ್ವಂ ಭರೆಯಂ ದೋರ್ದಂಡದೊಳ್ತಾಳ್ದಿದನತುಳಬಳಂ ಸೋಮ ಚಾಳುಕ್ಯ ಭೂಪಂ" ಎಂತಲೂ, "ಎನಿಸಿದ ಚಾಳುಕ್ಯ ಚಕ್ರವರ್ತಿ ಸೋಮೇಶ್ವರೋರ್ವ್ವೀಶ್ವರಂ ಭೂಲೋಕಮಲ್ಲಂ ದಿಗ್ವಿಜಯಂ ಗೆಯ್ಯಲೆಂದು ದಕ್ಷಿಣಾಭಿ ಮುಖನಾಗಿ ಬಂದು ಹುಲ್ಲಣಿಯ ತೀರ್ಥದೊಳ್ಬೀಡಂ ಬಿಟ್ಟು, ಸುಖ

---

* ಏಕಪಂಚಾಶದಧಿಕೇ ಶರದಾಂಗತೇ ।
ಶಕಸ್ಯ ಸೋಮಭೂಪಾಲೇ ಸತಿ ಚಾಲುಕ್ಯಮಂಡನೇ ॥
ಸಮುದ್ರರಸನಾಮುರ್ವಿಂ ಶಾಸತೇ ಕ್ಷತವಿದ್ವಿಷೇ ।
ಸರ್ವ ಶಾಸ್ತ್ರಾರ್ಥ ಸರ್ವಸ್ವ ಪಾಥೇಯೋದಧಿಕಲಶೋದ್ಭವೇ ॥
ಸೌಮ್ಯ ಸಂವತ್ಸರೇ ಚೈತ್ರಮಾಸಾದೌ ಶುಕ್ರವಾಸರೇ ।
ಪರಿಶೋಧಿತ ಸಿದ್ಧಾಂತಲಬ್ಧಾಃ ಸ್ಯುರ್ಧ್ರುವನಾ ಇಮೇ ॥ ಮಾನಸೋಲ್ಲಾಸ.

ಸಂಕಥಾವಿನೋದದಿಂ ಧರ್ಮಪ್ರಸಂಗಮಂ ಮಾಡುತ್ತಮಿರ್ಪುದವಸರಂ ಬಡೆದು,'' ಬನವಾಸಿಯ ಮಹಾಮಂಡಲೇಶ್ವರನಾದ ಕದಂಬ ತೈಲನು ಬಲ್ಲಿಗಾವೆಯ ಕೇದಾರೇಶ್ವರನ ಅದ್ಭುತ ಮಾಹಾತ್ಮೆಯನ್ನೂ, ದಕ್ಷಿಣ ಕೇದಾರಿ ಮಠದ ಮುಖ್ಯಸ್ಥನಾದ ವಿದ್ಯಾಭರಣನೆಂಬವನ ಘನಪಾಂಡಿತ್ಯ ವನ್ನೂ ತಪೋಬಲವನ್ನೂ ವರ್ಣಿಸಲು, ಸುಪ್ರೀತನಾದ ಸೋಮೇಶ್ವರನು ಕೇದಾರೇಶ್ವರನಿಗೆ ಕೆಲ ಭೂಮಿಯನ್ನು ಸ್ಥಳವೃತ್ತಿಯಾಗಿ ದಾನಕೊಟ್ಟು ದಲ್ಲದೆ, ಆ ನಾಡಿನ ಎಲೆ ಅಡಕೆ ಕಾಳುಗಳ ಮೇಲಿನ ವಡ್ಡರಾವುಳ ಹೆಜ್ಜುಂಕಗಳನ್ನು ದೇವಸ್ಥಾನಕ್ಕೆ ಬಿಟ್ಟುಕೊಟ್ಟನೆಂತಲೂ ಬರೆದಿರುತ್ತದೆ. ಈ ದಿಗ್ವಿಜಯವು ಸುಖ ಸಂಚಾರವಾಗಿರಬಹುದು, ಅಥವಾ ಹೊಯ್ಸಳ ಬಿಟ್ಟಿಗನ ಪುಂಡಾಟಿಗೆಯನ್ನು ನಿಲ್ಲಿಸಲಿಕ್ಕೆ ಮಾಡಿದ್ದಾಗಿದ್ದರೂ ಆಗಿರ ಬಹುದು.



ಬಲ್ಲಿಗಾವೆಯ ಕೇದಾರೇಶ್ವರನ ಗುಡಿಯ ಮಹಾದ್ವಾರ

೬ನೆಯ ವಿಕ್ರಮಾದಿತ್ಯನು ಸತ್ತ ಸುದ್ದಿಯು ಬಂದ ಕೂಡಲೆ ಪುಂಡನಾದ ಹೊಯ್ಸಳ ಬಿಟ್ಟಿಗನು ೨ನೆಯ ಕದಂಬ ತೈಲಪನೊಡನೆ ಕಾಲುಕೆದರಿ ಜಗಳ ತೆಗೆದು, ಹಾನುಗಲ್ಲಿನಮೇಲೆ ದಂಡೆತ್ತಿ ಹೋದನೆಂತಲೂ, ಆ ಸುದ್ದಿಯನ್ನರಿತ ಸೋಮೇಶ್ವರನು ತೆಂಕಲಿಗೆ ದಂಡೆತ್ತಿ ಬಂದು ಪಾನುಗಲ್ಲಿನ ಮುತ್ತಿಗೆಯನ್ನೆಬ್ಬಿಸಬೇಕೆಂದು ಬಿಟ್ಟಿಗನಿಗೆ ಆಜ್ಞಾಪಿಸಿದನೆಂತಲೂ, ಧೂರ್ತನಾದ ಬಿಟ್ಟಿಗನು ಚಕ್ರವರ್ತಿಯ ಆಜ್ಞೆಯನ್ನು ತಲೆಯಲ್ಲಾಂತು ಮುತ್ತಿಗೆಯನ್ನೆಬ್ಬಿಸಿ (೧೧೨೯) ದನೆಂತಲೂ, ಸೋಮೇಶ್ವರನು ಕಲ್ಯಾಣಕ್ಕೆ ತಿರುಗಿ ಹೋದ ಬಳಿಕ ನಿರ್ಭೀತನಾದ ಬಿಟ್ಟಿಗನು ಶಕ ೧೦೫೮ನೆಯ ರಾಕ್ಷಸ ಸಂವತ್ಸರ(೧೧೩೫)ದಲ್ಲಿ ಒಮ್ಮೆ, ೧೧೩೮ರಲ್ಲಿ ಮತ್ತೊಮ್ಮೆ ಪಾನುಗಲ್ಲನ್ನು ಮುತ್ತಿ ಹಿಡಿದುಕೊಂಡನೆಂತಲೂ ನನ್ನ ಅಲ್ಪಮತಿಗೆ ತೋರುತ್ತದೆ*. ಹೊಸ ಶೋಧವಾಗುವವರೆಗೆ ಈ ಊಹೆಯು ವಾದಗ್ರಸ್ತ ವಿಷಯವಾಗಿರುತ್ತದೆಂಬುದನ್ನು ಮರೆಯ ಕೂಡದು.

ವಿಕ್ರಮಾದಿತ್ಯನಂತೆ ಸೋಮೇಶ್ವರನು ತನ್ನ ಸಾಮ್ರಾಜ್ಯದ ಬೇರೆ ಬೇರೆ ಊರುಗಳಲ್ಲಿ ನಿಂತು ರಾಜ್ಯಭಾರವನ್ನು ಮಾಡಲಿಲ್ಲ. ಅವನ ರಾಜಧಾನಿಯು ಕಲ್ಯಾಣವೇ ಆಗಿತ್ತು. ಇವನಿಗೆ ಇಬ್ಬರು ಗಂಡುಮಕ್ಕಳಿದ್ದರು. ೧. ಪೆರ್ಮ ಅಥವಾ ಹೆಮ್ಮಾಡಿ, ೨. ತೈಲಪ. ಇವನ ರಾಣಿಯು ಯಾರಾಗಿದ್ದಳೆಂಬುದು ಇನ್ನೂ ಗೊತ್ತಾಗಿಲ್ಲ. ೩ನೆಯ ಸೋಮೇಶ್ವರನು ಚಂದ್ರಮನಿಗಿಂತ ಶ್ರೇಷ್ಠನಾಗಿದ್ದನೆಂದು ವರ್ಣಿಸುವ ಒಂದು ಶಾಸನಪದ್ಯವನ್ನು ಕೆಳಗೆ ಕೊಡುತ್ತೇವೆ:—

ಸ್ವಕಳಾಳೀ ದಾನದಿಂದಂ ವಿಬುಧತತಿಗತಿಪ್ರೀತಿಯಂ ಮಾಳ್ಪೊಡಂ ಶೀ॥
ತಕರಂ ಶ್ರೀಕಂಠಭೂಷಾಮಣಿ ಕುವಳಯಸಂತರ್ಪಣಾಧಾಯಿಯೆಂದಿಂ॥

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೫೬೨.

ಆಳಿಂ ಮುನ್ನಿಱಿವಂ ಪಿರಿ। ದಾಳಂ ತವೆ ಕೊಂದು ಹಾನುಗಲ್ಲಾಹವದೊಳ್ ॥
ಕಾಳಗವುಂಡನ ತಮ್ಮಂ। ಲೀಳೆಯ ಸುರಲೋಕಕೆಯ್ದಿದಂ ಕಲಿರಾಯಂ ॥

ಶಾಸದ ಪದ್ಯಮಂಜರಿ, ಪು. ೭೯.

ತು ಕರಂ ಸಂಸ್ತುತ್ಯನಾಗಿರ್ಪೊಡಮೆಸೆವ ವಿನಿದೋೇಷನೊಳ್ ನಿಷ್ಕಳಂಕ।
ಪ್ರಕರ ಪ್ರಖ್ಯಾತನೊಳ್ ತಾಂ ಸಮನೆನಿಪನೆ ಪೇಳ್ ಸೋಮನೋಳ್
ವ್ಯೋಮಸೋಮಂ ॥ ೩೭ ॥*

೩ ನೆಯ ಸೋಮೇಶ್ವರನ ಆಳಿಕೆಯಲ್ಲಿ ಕೆಳಗೆ ಬರೆದ ಮಹಾಮಂಡಲೇಶ್ವರರೂ, ಸಾಮಂತರೂ ಆಯಾ ಪ್ರಾಂತಗಳನ್ನು ಆಳುತ್ತಿದ್ದರು :—

೧. ಕಳಚುರ್ಯ ಮನೆತನದ ಮಹಾಮಂಡಲೇಶ್ವರನಾದ ಪೆರ್ಮಾಡಿಯು ತರ್ದವಾಡಿ ಪ್ರಾಂತವನ್ನು ಆಳುತ್ತಿದ್ದನು (೧೧೨೮).

೨. ಗೋವೆಯ ಕದಂಬ ಮನೆತನದ ೨ನೆಯ ಜಯಕೇಶಿಯು ಕೊಂಕಣ ೯೦೦ನ್ನೂ, ಪಲಸಿಗೆ ೧೨,೦೦೦ವನ್ನೂ ಆಳುತ್ತಿದ್ದನು (೧೧೨೮).

೩. ಹಾನುಗಲ್ಲ ಕದಂಬ ಮನೆತನದ ಮಹಾಮಂಡಲೇಶ್ವರನಾದ ೨ನೆಯ ತೈಲಪನು ಬನವಾಸಿ ೧೨,೦೦೦ವನ್ನೂ, ಪಾನುಂಗಲ್ ೫೦೦ನ್ನೂ ಆಳುತ್ತಿದ್ದನು (೧೧೨೯—೩೦).

೪. ಮಹಾಮಂಡಲೇಶ್ವರನಾದ ಮಾರಸಿಂಹನೆಂಬವನು ಬೆಳಗಾವಿ ಜಿಲ್ಲಾ ಮುಗುಟಖಾನ ಹುಬ್ಬಳ್ಳಿಯ ಸೆರೆಯ ಪ್ರದೇಶವನ್ನು ಆಳುತ್ತಿದ್ದನು (೧೧೩೧).

೫. ಕದಂಬ ೨ನೆಯ ತೈಲಪನ ಮಗನಾದ ಮಹಾಮಂಡಲೇಶ್ವರ ೩ನೆಯ ಮಯೂರವರ್ಮನೆಂಬವನು ಬನವಾಸಿ ೧೨,೦೦೦ವನ್ನೂ, ಪಾನುಂಗಲ್ ೫೦೦ನ್ನೂ, ಸಂತಳಿಗೆ ೧೦೦೦ವನ್ನೂ ಆಳುತ್ತಿದ್ದನು (೧೧೩೧—೩೨).

೬. ಕದಂಬ ೨ನೆಯ ತೈಲಪನ ೨ನೆಯ ಮಗನಾದ ಮಹಾಮಂಡಲೇಶ್ವರ ೧ನೆಯ ಮಲ್ಲಿಕಾರ್ಜುನನು ಬನವಾಸಿ ೧೨,೦೦೦ವನ್ನೂ, ಪಾನುಂಗಲ್ ೫೦೦ನ್ನೂ ಆಳುತ್ತಿದ್ದನು (೧೧೩೨—೩೮).

---

* ರಾ. ನರಸಿಂಹಾಚಾರ್ಯರ ಶಾಸನ ಪದ್ಯಮಂಜರಿ, ಪು. ೬೫—೬೬.

೭. ಕರಾಡದ ಶಿಲಾಹಾರ ಮನೆತನದ ಮಹಾಮಂಡಲೇಶ್ವರನಾದ ಗಂಡರಾದಿತ್ಯನು ತನ್ನ ವಂಶಪರಂಪರಾಗತ ಕರಾಡ ಪ್ರಾಂತವನ್ನು ಆಳುತ್ತಿದ್ದನು (೧೧೩೫—೩೭).

೮. ಹೊಯ್ಸಳ ಮಹಾಮಂಡಲೇಶ್ವರನಾದ ವಿಷ್ಣುವರ್ಧನನು ಗಂಗವಾಡಿ, ನೊಳಂಬವಾಡಿ, ಬನವಾಸಿ ಪ್ರಾಂತಗಳನ್ನು ಆಳುತ್ತಿದ್ದನು (೧೧೩೭).

೯. ದಂಡನಾಯಕ ಮಹಾದೇವನು ಬೆಳ್ವೊಲ ೩೦೦ನ್ನೂ, ಪುಲಿಗೆರೆ ೩೦೦ನ್ನೂ ಆಳುತ್ತಿದ್ದನು (೧೧೩೮—೩೯).

೧೦. ವೀರಪಾಂಡ್ಯದೇವನೆಂಬವನು ಉಚ್ಚಂಗಿದುರ್ಗವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ನೊಳಂಬವಾಡಿ ೩೨,೦೦೦ವನ್ನು ಆಳುತ್ತಿದ್ದನು (೧೧೩೮—೩೯).

## ೧೦. ಹೆಮ್ಮಾಡಿದೇವ ಅಥವಾ ಪೆರ್ಮನೃಪ ಅಥವಾ ಪೆರ್ಮ ಜಗದೇಕಮಲ್ಲ

(೧೧೩೮–೧೧೪೯)

೩ನೆಯ ಸೋಮೇಶ್ವರನು ಸತ್ತ ಬಳಿಕ ಅವನ ಹಿರಿಮಗನಾದ ಹೆಮ್ಮಾಡಿದೇವನು ಅಥವಾ **ಪೆರ್ಮ**ನೃಪನು ೨ನೆಯ ಜಗದೇಕಮಲ್ಲ ನೆಂಬ ಹೆಸರಿನಿಂದ ಪಟ್ಟವೇರಿದನು (೧೧೩೮). ಡಾ॥ ಭಾಂಡಾರಕರರು ಇವನನ್ನು ಜಗದೇಕಮಲ್ಲನೆಂತಲೂ, ಡಾ॥ ಫ್ಲೀಟರು ಪೆರ್ಮ ಜಗದೇಕ ಮಲ್ಲನೆಂತಲೂ ಕರೆದಿರುತ್ತಾರೆ. ಆದರೆ ಮೈಸೂರು ಸಂಸ್ಥಾನ ಹರಿ ಹರದ ಒಂದು ಶಿಲಾಲೇಖದಲ್ಲಿ ಇವನನ್ನು 'ಪೆರ್ಮನೃಪ'ನೆಂದು ಕರೆ ದಿರುವುದರಿಂದ ಇವನ ಮೂಲ ಹೆಸರು ಪೆರ್ಮ ಆಗಿತ್ತೆಂದು ಬರೆಯು ಲಿಕ್ಕೆ ಅಡ್ಡಿ ಏನು ಕಂಡುಬರುವುದಿಲ್ಲ. ಈ ಮಾತಿಗೆ ಸಂಬಂಧಿಸಿದ ಆ ಶಾಸನದ ಕೆಲವು ಸಾಲುಗಳನ್ನು ಕೆಳಗೆ ಕೊಡುತ್ತೇವೆ:—

ಭೂಲೋಕಮಲ್ಲವಲ್ಲಭನೀಲೋಕಮನಾಳ್ದನೆಸೆಯೆ ಸರ್ವಜ್ಞ
ಮಹೀಪಾಲನೆಸರಿತರಭೂಪಮರ್ಲೋಕಮನಾಳ್ದರಾದಡಂ
ಪೆಸರ್ವಡೆಯರ್ ॥

ತತ್ಪುತ್ರುಸುದ್ಧತಾರಿ ಕುಭೃತ್ಪವಿದಂಪಾಯು ಮಾಸ ಭುಜದಂಡ ಸಮುದ್ಯತ್ಪಟುತರ ಪ್ರತಾಪಂ ಸತ್ಪಾಲಕನಾಳ್ದನುರ್ವಿಯಂ ಪೆರ್ಮನೃಪ ||

ಜಗದೊಳುದಾತ್ತತಾದಿ ಗುಣಗೌರವದಿಂ ಜಗದೇಕಮಲ್ಲನೊಳ್ ಸಗರ ಭಗೀರಥಾದಿಗಳ ಪೋಲ್ವಿಗೆ ವರ್ಪನೊಳನ್ಯಚಕ್ರವರ್ತಿಗಳನ ದೆಂತು ಪೋಲಿಪುದೊ ಪೇಳೆಸಲಪ್ರತಿಮ ಪ್ರತಾಪಸತ್ಯಗಣಿತ ಶೌರ್ಯನ ಪ್ರತಿಮಪ್ರತಾಪನತ್ಯಗಣಿತ ಶೌರ್ಯನ ಪ್ರತಿರಥಂ ಪ್ರತಿಪಾಳಿಸುವಂ ಧರಿತ್ರಿಯು ||

ಮೇಲೆ ಕೊಟ್ಟ ಅವತರಣದಲ್ಲಿ 'ಪೆರ್ಮನೃಪ (೦) ಆಳ್ದನುರ್ವಿಯಂ' ಎಂದು ಬರೆದು 'ಜಗದೇಕಮಲ್ಲನೊಳನ್ಯ ಚಕ್ರವರ್ತಿಗಳನದೆಂತು ಪೋಲಿ ಪುದೊ' ಎಂದು ಕೇಳಿ, 'ಅಪ್ರತಿಮ ಪ್ರತಾಪಂ ಪಾಳಿಸುವಂ ಧರಿತ್ರಿಯು' ಎಂದು ಬರೆದಿರುವುದರಿಂದ ಇವನ ಹೆಸರು **ಪೆರ್ಮ**ನಾಗಿತ್ತೆಂತಲೂ ಜಗದೇಕಮಲ್ಲನೆಂಬುದು ಇವನ ಬಿರುದಾಗಿತ್ತೆಂತಲೂ ಸ್ಪಷ್ಟವಾಗಿ ಬರೆ ದಿರುತ್ತದೆ. ಇದಲ್ಲದೆ ಮೈಸೂರು ಸಂಸ್ಥಾನ ಕಡೂರು ತಾಲೂಕಿನ ೭೬ನೆಯ ಶಾಸನದಲ್ಲಿ "ಶ್ರೀಮತ್ತ್ರಿಭುವನಮಲ್ಲ ಹೆಮ್ಮಾಡಿದೇವರ ವಿಜಯರಾಜ್ಯಂ......" ಎಂದು ಬರೆದಿದೆ. ಹೀಗಿದ್ದು ಡಾ|| ಫ್ಲೀಟರು ಇವನ ಹೆಸರಿನ ವಿಷಯವಾಗಿ ಏಕೆ ಸಂಶಯಗೊಳ್ಳುತ್ತಾರೆಂಬುದು ಗೊತ್ತಾಗುವುದಿಲ್ಲ. ಅವರು ಹೇಳುವುದೇನಂದರೆ, ೬ನೆಯ ವಿಕ್ರಮಾದಿತ್ಯನಿ ಗಿದ್ದಂತೆ ಪೆರ್ಮವು ಜಗದೇಕಮಲ್ಲನ ಎರಡನೆಯ ಹೆಸರಾಗಿರಬಹುದು. ಅದು ಅವನ ಅಂಕಿತನಾಮವಲ್ಲ. ಸಂಶಯ ಬಂದಾಗ ಪ್ರತಾಪ ಚಕ್ರವರ್ತಿ ಎಂಬ ಬಿರುದಿನಿಂದ ಅವನನ್ನು ಗುರುತಿಸಬಹುದು*. ವಿಕ್ರಮಾದಿತ್ಯನ ಹೆಸರಿನ ಹಿಂದೆ ಪೆರ್ಮಡಿ ಅಂದರೆ ದೊಡ್ಡ ಎಂಬ ವಿಶೇಷಣವನ್ನು ಹಚ್ಚುತ್ತಿದ್ದರು. ಆದರೆ ಪೆರ್ಮ ಎಂಬುದು ಹೆಸರಿನ

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೫೬, ಅಡಿಟಿಪ್ಪಣಿ ೧. ಸಿಂದ ಮನೆತನದ ಮಹಾಮಂಡಲೇಶ್ವರನಾದ ೧ನೆಯ ಪೆರ್ಮಾಡಿಯ ಹೆಸರು ಪೆರ್ಮ ಅಥವಾ ಪೆಮ್ಮ ಎಂದಿತ್ತು.

ಹಿಂದೆ ಇರದೇ ಸ್ವತಂತ್ರವಾಗಿ ಉಪಯೋಗಿಸಲ್ಪಟ್ಟುದರಿಂದಲೂ ಅದು ವಿಶೇಷಣವಾಗಿರದೆ ನಾಮಪದವಾದ್ದರಿಂದಲೂ ಪೆರ್ಮ್ಡಿಯು ಜಗದೇಕ ಮಲ್ಲನ ಅಂಕಿತನಾಮವಾಗಿತ್ತೆಂದು ನನ್ನ ಅಲ್ಪಮತಿಗೆ ತೋರುತ್ತದೆ. ಈ ಪೆರ್ಮ್ಡಿನೃಪನು ತನ್ನ ಪೂರ್ವಜರ ಸಾಮಾನ್ಯ ಬಿರುದುಗಳನ್ನಲ್ಲದೆ ಎರಡನೆಯ ಜಗದೇಕಮಲ್ಲ, ಪ್ರತಾಪ ಚಕ್ರವರ್ತಿ ಎಂಬ ವಿಶಿಷ್ಟ ಬಿರುದುಗಳನ್ನು ಧರಿಸಿದನು.

ಈ ಪೆರ್ಮ್ಡಿನೃಪನ ಆಳಿಕೆಗೆ ಸಂಬಂಧಿಸಿದ ಸುಮಾರು ೫೦ ಶಾಸನ ಗಳು ಈವರೆಗೆ ದೊರೆದಿರುತ್ತವೆ. ಅವುಗಳಿಂದ ಇವನು ಯಾವ ದಂಡ ಯಾತ್ರೆಯನ್ನಾಗಲಿ ಸುಖಸಂಚಾರವನ್ನಾಗಲಿ ಕಯ್ಕೊಳ್ಳದೆ ತನ್ನ ಪಿತ್ರಾ ರ್ಜಿತ ರಾಜಧಾನಿಯಾದ ಕಲ್ಯಾಣದಲ್ಲಿದ್ದು ಸುಖೋಪಭೋಗದಲ್ಲಿ ಕಾಲಕಳೆದನೆಂದು ತೋರುತ್ತದೆ. ಸಿವಾಜಿಯ ಮೊಮ್ಮಗನಾದ ಶಹಾಜಿ ಯಂತೆ ಇವನಾದರೂ ರಾಜ್ಯಭಾರದಲ್ಲಿ ಮನಸ್ಸು ಹಾಕದೆ ವಿಷಯಾ ಸಕ್ತನಾಗಿದ್ದರೂ ಆಗಿರಬಹುದು. ಲುಯಿರಾಯಸರು ಇವನು ಚೋಳ ದಳವಾಯಿಗಳನ್ನೂ ಗುರ್ಜರ ಅರಸರನ್ನೂ ಕೊಂದು ಅವರ ದಂಡನ್ನೂ ಸಂಪತ್ತನ್ನೂ ಹಿಡಿದುಕೊಂಡನೆಂದು ಬರೆಯುತ್ತಾರೆ*. ಆದರೆ ಹೊಸ ಆಧಾರಗಳು ದೊರೆಯುವವರೆಗೆ ಈ ಮಾತನ್ನು ನಂಬಲಿಕ್ಕೆ ನನ್ನ ಮನಸ್ಸು ಒಡಂಬಡುವುದಿಲ್ಲ.

ಈ ಪೆರ್ಮ್ಡಿನೃಪನ ರಾಣಿಯು ಯಾರಾಗಿದ್ದರೆಂಬುದಾಗಲಿ ಇವ ನಿಗೆ ಮಕ್ಕಳು ಆಗಿದ್ದರೊ ಇಲ್ಲೊ ಎಂಬುದಾಗಲಿ ತಿಳಿಯುವುದಿಲ್ಲ. ಇವನ ಆಳಿಕೆಯಲ್ಲಿ ಹೊಯ್ಸಳ ಬಿಟ್ಟಿಗನ ಪುಂಡಾಟಿಗೆಯು ಯಥಾ ಪ್ರಕಾರವಾಗಿ ತಡೆಯಿಲ್ಲದೆ ನಡೆದಿತ್ತು. ಮೇಲರಸರು ದುರ್ಬಲರಾದಾಗ ಮಂಡಲಿಕರ ಚಲ್ಲಾಟವೇ ಸರಿ. ಕೆಲವರು ತಂತಮ್ಮ ಮಂಡಳಗಳನ್ನು ಬೆಳಿಸಿಕೊಳ್ಳಲಿಕ್ಕೆ ಯತ್ನಿಸುತ್ತಿದ್ದರು; ಕೆಲವರು ಸ್ವತಂತ್ರರಾಗಲಿಕ್ಕೆ ಹವಣಿಸುತ್ತಿದ್ದರು; ಮತ್ತೆ ಕೆಲವರು ಸಾರ್ವಭೌಮತ್ವವನ್ನು ಹಿಡಿದು ಕೊಳ್ಳಲಿಕ್ಕೆ ಹೆಣಗುತ್ತಿದ್ದರು. ಈ ಕಡೆಯ ವರ್ಗದ ಮಂಡಲಿಕರೊಳಗೆ

* ಶಾಸನಗಳಿಂದ ತಿಳಿದುಬರುವ ಮೈಸೂರು ಕೊಡಗು ಪ್ರಾಂತಗಳು, ಪು. ೭೭.

ಕಲಚುರ್ಯ ಮನೆತನದ **ಬಿಜ್ಜಣನೇ** ಪ್ರಮುಖನಾಗಿದ್ದನು. ಇವನು ಚಾಳುಕ್ಯರ ಮುಖ್ಯ ಸೇನಾಪತಿಯಾಗಿ ಹೊಯ್ಸಳರ ವಶದಲ್ಲಿದ್ದ ನೊಳಂಬವಾಡಿಯನ್ನೂ ಚೋಳರ ವಶದಲ್ಲಿದ್ದ ಗಂಗವಾಡಿಯ ಭಾಗವನ್ನೂ ಹಿಡಿದುಕೊಂಡನೆಂದು ೧೧೪೩ನೆಯ ಇಸ್ವಿಯ ದಾವಣಗೆರೆಯ ೮೫ನೆಯ ಶಾಸನದಿಂದ ಊಹಿಸಬಹುದು. ಇವನು ನೊಳಂಬವಾಡಿಯ ಮಹಾಮಂಡಲೇಶ್ವರನಾಗಿ ರಾಜಧಾನಿಯಲ್ಲಿದ್ದು ಸಾಮ್ರಾಜ್ಯ ಸೂತ್ರವನ್ನು ಕಯ್ಕೊಂಡಿದ್ದನೆಂದು ತೋರುತ್ತದೆ.

ಪೆರ್ಮನೃಪನ ಅಥವಾ ೨ನೆಯ ಜಗದೇಕಮಲ್ಲನ ಆಳಿಕೆಯಲ್ಲಿ ಕೆಳಗೆ ಬರೆದ ಮಹಾಮಂಡಲೇಶ್ವರರು ಆಯಾ ಪ್ರಾಂತಗಳನ್ನು ಆಳುತ್ತಿದ್ದರು :—

೧. ಮಹಾದೇವ ಪಾಲದೇವ ಎಂಬವರಿಬ್ಬರು ದಂಡನಾಯಕರಾಗಿದ್ದರು (೧೧೩೯).

೨. ಯಾದವ ಮನೆತನದ ಮಹಾಸಾಮಂತನಾದ ಸೆವುಣದೇವನು ತನ್ನ ಪಿತ್ರಾರ್ಜಿತ ಸಂಸ್ಥಾನವಾದ ಸೆವುಣದೇಶವನ್ನು ಆಳುತ್ತಿದ್ದನು (೧೧೪೨).

೩. ಪಟ್ಟಮಹಾದೇವಿಯರ ಅನುಜನಾದ ಕಪ್ಪದೇವರಸನು ನಿಜಾಮ ಸಂಸ್ಥಾನ ಹಿರಿಮುದ್ದನೂರು ಪ್ರಾಂತದಲ್ಲಿ ಮಹಾಮಂಡಲೇಶ್ವರನಾಗಿದ್ದನು (೧೧೪೨).

೪. ಅಹಿಹಯ ಮನೆತನದ ಮಹಾಮಂಡಲೇಶ್ವರನಾದ ರೇವರಸನು ನಿಜಾಮ ಸಂಸ್ಥಾನ ಏವೂರ ಪ್ರಾಂತವನ್ನು ಆಳುತ್ತಿದ್ದನು.

೫. ಮಹಾಪ್ರಧಾನನೂ ಸೇನಾಧಿಪತಿಯೂ ಕನ್ನಡ ಸಂಧಿವಿಗ್ರಹಿಯೂ ಹಿರಿಯ ದಂಡನಾಯಕನೂ ಆದ ಬಮ್ಮಣಯ್ಯ ಅಥವಾ ಬರ್ಮದೇವರಸನು ಬನವಾಸಿ ೧೨,೦೦೦ವನ್ನು ಆಳುತ್ತಿದ್ದನು (೧,೧೪೪). ಮರುವರುಷ ಅವನೇ ಹೆರಿಲಾಟ ಕರ್ನಾಟ ಸಂಧಿವಿಗ್ರಹಿಯೂ ಮಹಾಸಾಮಂತಾಧಿಪತಿಯೂ ಮನೆವೆರ್ಗಡೆಯೂ ಆಗಿ ತರ್ದವಾಡಿ ೧,೦೦೦

ವನ್ನೂ, ಬೆಳ್ವೊಲ ಹುಲಿಗೆರೆ ೬೦೦ನ್ನೂ, ಹಾನುಂಗಲ್ ೫೦೦ನ್ನೂ, ಹಲಸಿಗೆ ೧೨,೦೦೦ವನ್ನೂ ಆಳುತ್ತಿದ್ದನು (೧೧೪೫).

ಇವನು ಸುಮಾರು ೧೧೮೦ರಲ್ಲಿ ಸತ್ತನೆಂದು ಕಡೂರಿನ ೧೪೬ ನೆಯ ಶಾಸನದಲ್ಲಿ ಬರೆದಿದೆ.

೬. ಸೌದತ್ತಿ ರಟ್ಟಮನೆತನದ ಮಹಾಮಂಡಲೇಶ್ವರನಾದ ೩ ನೆಯ ಕಾರ್ತವೀರ್ಯನು ಕುಂಡಿ ೩,೦೦೦ವನ್ನು ಆಳುತ್ತಿದ್ದನು (೧೧೪೫).

೭. ಕರಾಡದ ಶಿಲಾಹಾರ ಮನೆತನದ ಮಹಾಮಂಡಲೇಶ್ವರನಾದ ವಿಜಯಾದಿತ್ಯನು ತನ್ನ ಪಿತ್ರಾರ್ಜಿತ ಪ್ರಾಂತವನ್ನು ಆಳುತ್ತಿದ್ದನು (೧೧೪೫).

೮. ಸಿಂದ ಮನೆತನದ ಮಹಾಮಂಡಲೇಶ್ವರನಾದ ಜಗದೇಕಮಲ್ಲ ಪೆರ್ಮಾಡಿಯು ಕಿಸುಕಾಡ ೭೦ನ್ನೂ, ಬಾಗಡಿಗೆ ೭೦ನ್ನೂ, ಕೆಳವಾಡಿ ೩೦೦ನ್ನೂ, ನರೆಯಂಗಲ್ ೧೨ನ್ನೂ ಆಳುತ್ತಿದ್ದನು (೧೧೪೪).

೯. ಕದಂಬ ಮನೆತನದ ಮಹಾಪ್ರಧಾನನೂ ಹೆರಿಲಾಟ ಸಂಧಿವಿಗ್ರಹಿಯೂ ಸೇನಾಧಿಪತಿಯೂ ದಂಡನಾಯಕನೂ ಆದ ಕೇಶಿರಾಜ ಅಥವಾ ಕೇಶಿಮಯ್ಯನು ಬೆಳ್ವೊಳ ೩೦೦ನ್ನೂ, ಪಲಸಿಗೆ ೧೨,೦೦೦ ವನ್ನೂ, ಪಾನುಂಗಲ್ ೫೦೦ನ್ನೂ ಆಳುತ್ತಿದ್ದನು (೧೧೪೭).

೧೦. ಹಾನುಗಲ್ ಕದಂಬ ಮನೆತನದ ಮಹಾಮಂಡಲೇಶ್ವರನಾದ ತೈಲಪ ಅಥವಾ ತೈಲಮನು ತನ್ನ ಪಿತ್ರಾರ್ಜಿತ ಪ್ರಾಂತವನ್ನು ಆಳುತ್ತಿದ್ದನು (೧೧೪೮).

೧೧. ದಂಡನಾಯಕನಾದ ಸೋವಿದೇವನು ಹಾನುಗಲ್ ೫೦೦ನ್ನು ಆಳುತ್ತಿದ್ದನು (೧೧೪೯).

೧೨. ಮಹಾಮಂಡಲೇಶ್ವರನಾದ ವೀರಪಾಂಡ್ಯದೇವನು ನೊಳಂಬವಾಡಿ ೩೨,೦೦೦ವನ್ನು ಕಳಚುರಿ ಬಿಜ್ಜಳನ ಕಯ್ಕೆಳಗಿನವನಾಗಿ ಆಳುತ್ತಿದ್ದನು (೧೧೪೯). ಆದ್ದರಿಂದ ಬಿಜ್ಜಳನು ಸಾರ್ವಭೌಮನ

ಹತ್ತಿರ ದೊಡ್ಡ ಅಧಿಕಾರಿಯಾಗಿದ್ದನೆಂದು ಧಾರಾಳವಾಗಿ ಊಹಿಸಬಹುದು.

೧೩. ಮೈಸೂರು ಸಂಸ್ಥಾನ ಸಿವಮೊಗ್ಗಿ ಜಿಲ್ಲಾ ಪಟ್ಟಿ ಪೊಂಬುಚ್ಚಪುರ (ಹೊಂಬುಚ ಅಥವಾ ಹುಂಚ)ದ ಶಾಂತರ ಮನೆತನದ ಮಹಾಮಂಡಲೇಶ್ವರನಾದ ತ್ರಿಭುವನಮಲ್ಲ ಜಗದ್ದೇವನು ಸೇತುವಿನ ಬೀಡು ಎಂಬ ಪ್ರಾಂತವನ್ನು ಆಳುತ್ತಿದ್ದನು (೧೧೪೯). ಈ ಸೇತುವಿನ ಬೀಡು ಎಲ್ಲಿತ್ತೆಂಬುದು ಇನ್ನೂ ಗೊತ್ತಾಗಿಲ್ಲ. ಈ ಜಗದ್ದೇವನು ಗೋವೆಯ ಕದಂಬ ಮನೆತನದ ೨ನೆಯ ಜಯಕೇಶಿಯ ಅಬಚಿಯ ಮಗನಾಗಿದ್ದನೆಂದು ಡಾ॥ ಫ್ಲೀಟರು ಬರೆಯುತ್ತಾರೆ*.

೧೪. ಪುಂಡನೂ ಹೆಬ್ಬಯಕೆಯುವನೂ ಬಂಡುಗಾರನೂ ಆದ ಹೊಯ್ಸಳ ವಿಷ್ಣುವರ್ಧನನು ತಾನು ಚಾಳುಕ್ಯ ಸಾರ್ವಭೌಮನ ಮಹಾಮಂಡಲೇಶ್ವರನೆಂದು ಸಾರಿಹೇಳುತ್ತ, ನೆರೆಹೊರೆಯ ಮಂಡಲೇಶ್ವರರೊಡನೆ ಕಾಲುಕೆದರಿ ಜಗಳತೆಗೆದು ಅವರ ನಾಡನ್ನೊಳನುಗ್ಗಿ, ಅವರವರ ಮಂಡಲಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಳ್ಳತೊಡಗಿದ್ದನು. ಸಿಂದ ಮನೆತನದ ೧ನೆಯ ಪೆರ್ಮಾಡಿ ಎಂಬ ಕಲಿಯು ಕುಲಶೇಖರಾಂಕನೆಂಬವನನ್ನು ಸೋಲಿಸಿ, ಚಟ್ಟನನ್ನು ಮುತ್ತಿ, ಬಂಡುಗಾರನಾದ ಹೊಯ್ಸಳ ಬಿಟ್ಟಿಗನನ್ನು ಎಡೆಬಿಡದೆ ಸೋಲಿಸಿ, ಬೆನ್ನಟ್ಟಿ, ದ್ವಾರಸಮುದ್ರವನ್ನು ಮುತ್ತಿ, ಬೇಲುಪುರವನ್ನು ಕಯ್ವಶಮಾಡಿಕೊಂಡು, ಅವನ ಅರಸುತನವನ್ನು ಕಿತ್ತುಕೊಂಡು ಅವನನ್ನು ಮಾಹಡಿ ಕಣಿವೆಗೆ ಅಟ್ಟಿದನೆಂದು ರಾಯಲ್ ಏಸಿಯಾಟಿಕ್ ಸಂಸ್ಥೆಯ ಮುಂಬಯಿ ಶಾಖೆಯ ಮಾಸಪತ್ರಿಕೆಯ ೧೧ನೆಯ ಸಂಪುಟ, ಪುಟ ೨೪೪ ಮತ್ತು ೨೭೦ರಲ್ಲಿ ಬರೆದಿದೆ†.

ಈ ಆಳಿಕೆಯಲ್ಲಿ ಕಳಚುರಿ ಬಿಜ್ಜಳನು ಮುಖ್ಯ ಪ್ರಧಾನನೂ ದಂಡನಾಯಕನೂ ಆದ್ದರಿಂದ ಸಾರ್ವಭೌಮನನ್ನು ವಂಚಿಸಿ, ಅವನ

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಅಡಿಟಿಪ್ಪಣಿ ೨, ಪುಟ ೪೫೨.

† ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೫೦.

ಸಾಮ್ರಾಜ್ಯವನ್ನು ಮೋಸದಿಂದ ಸೆಳೆದುಕೊಳ್ಳುವ ದುರಾಲೋಚನೆಯನ್ನು ಮಾಡತೊಡಗಿದನು.

## ೧೧. ಮೂರನೆಯ ಅಥವಾ ನೂರ್ಮಡಿ ತೈಲ

(೧೧೫೦—೧೧೬೨)

ಪೆರ್ಮನೃಪನ ತರುವಾಯ ಅವನ ತಮ್ಮನಾದ ತೈಲನು ನೂರ್ಮಡಿ ತೈಲನೆಂಬ ಹೆಸರಿನಿಂದ ಪಟ್ಟವೇರಿದನು (೧೧೫೦). ಪೆರ್ಮ ಅಥವ ಹೆಮ್ಮಾಡಿದೇವನಿಗೆ ಗಂಡುಮಕ್ಕಳು ಇದ್ದರೊ ಇಲ್ಲೊ ಅಥವಾ ಅವರು ಚಿಕ್ಕವರಿದ್ದರೊ ಹೇಗೆಂಬುದು ಗೊತ್ತಾಗುವುದಿಲ್ಲ. ತನ್ನ ಮನೆತನದ ಸಾಮಾನ್ಯ ಬಿರುದುಗಳನ್ನಲ್ಲದೆ ತ್ರೈಲೋಕ್ಯಮಲ್ಲನೆಂಬ ವಿಶಿಷ್ಟ ಬಿರುದನ್ನು ಈ ತೈಲನು ಧರಿಸಿದನು.

ಹೆಮ್ಮಾಡಿದೇವನ ಆಳಿಕೆಯಲ್ಲಿ ಕಳಚುರಿ ಬಿಜ್ಜಣನು ಮುಖ್ಯ ಪ್ರಧಾನನೂ ಹಿರಿಯ ದಂಡನಾಯಕನೂ ಆಗಿ ಚಾಳುಕ್ಯ ಸಾಮ್ರಾಜ್ಯವನ್ನು ಸೆಳೆದುಕೊಳ್ಳುವ ದುರಾಲೋಚನೆಯನ್ನು ಗುಪ್ತವಾಗಿ ಮಾಡುತ್ತಿದ್ದನೆಂದು ಮೇಲೆ ಬರೆದಿರುತ್ತೇವಷ್ಟೇ. ತೈಲಪನು ಪಟ್ಟವೇರಿದ ಬಳಿಕ ಅವನು ಸಾರ್ವಭೌಮನನ್ನು ಮೂಲೆಗೊತ್ತಿ ಅವನನ್ನು ಲೆಕ್ಕಿಸದೆ ರಾಜ್ಯಭಾರವನ್ನು ಮಾಡತೊಡಗಿದನು. ಇದು ಸ್ವಾಭಿಮಾನವುಳ್ಳ ತೈಲಪನಿಗೆ ಸೇರಲಿಲ್ಲ. ಸಾರ್ವಭೌಮ ಪ್ರಧಾನರ ನಡುವೆ ಮನಸ್ತಾಪವು ದಿನದಿನಕ್ಕೆ ಹೆಚ್ಚುತ್ತ ನಡೆಯಿತು. ಉಳಿದ ಪ್ರಧಾನ ದಂಡನಾಯಕರ ಮಧ್ಯಸ್ತಿಕೆಯಿಂದ ಬಿಜ್ಜಣನು ತನ್ನ ಹಿಂದಿನ ತಪ್ಪನ್ನು ಕ್ಷಮಿಸಬೇಕೆಂದು ಬಿನ್ನವಿಸಿ ಮುಂದೆ ವಿಧೇಯನಾಗಿ ನಡೆದುಕೊಳ್ಳುವೆನೆಂದು ಬೇಡಿಕೊಂಡನು. ಹಾಗೂ ಹೀಗೂ ಸಾರ್ವಭೌಮ ಮಂತ್ರಿಗಳ ನಡುವೆ ರಾಜಿಯು ಶಾಸ್ತ್ರವಾಯಿತು. ಇಬ್ಬರು ತಂತಮ್ಮ ಹಿತವನ್ನು ಸಾಧಿಸಿಕೊಳ್ಳಲಿಕ್ಕೆ ತಕ್ಕ ಉಪಾಯಗಳನ್ನು ಹುಡುಕತೊಡಗಿದರು. ದಂಡನಾಯಕ ಮಹಾಮಂಡಲೇಶ್ವರರನ್ನು ತಂತಮ್ಮ ಕಡೆಗೆ ಎಳೆದುಕೊಳ್ಳಲಿಕ್ಕೆ ಇಬ್ಬರೂ ವಿಶ್ವಪ್ರಯತ್ನಮಾಡಲಾರಂಭಿಸಿದರು. ತಾನು ದಂಡಯಾತ್ರೆಯನ್ನು ಕಯ್ಕೊಂಡ ಹೊರತು ದಂಡು ತನ್ನಲ್ಲಿ ಅನುರಕ್ತವಾಗಲಾರ

ದೆಂಬ ತಿಳಿವಳಿಕೆಯು ತೈಲಪನಲ್ಲಿ ಹುಟ್ಟಿತು. ಆದ್ದರಿಂದ ಅವನು ಯಾರ ಮೇಲೆ ದಂಡೆತ್ತಿಹೋಗಬೇಕೆಂಬ ಆಲೋಚನೆಯನ್ನು ಮಾಡ ತೊಡಗಿದನು. ಅಷ್ಟರಲ್ಲಿ ರೋಗಿ ಬಯಸಿದ್ದು ಹಾಲೋಗರ ಮತ್ತು ವೈದ್ಯ ಹೇಳಿದ್ದು ಹಾಲೋಗರ ಎಂಬ ಗಾದೆಯಂತೆ ದಂಡಯಾತ್ರೆಯನ್ನು ಮಾಡಲಿಕ್ಕೆ ಒಂದು ಸುಸಂಧಿಯು ದೊರೆಯಿತು. ಓರಂಗಲ್ಲ ಪ್ರಾಂತದ ಕಾಕತೀಯ ಮನೆತನದ ಮಹಾಮಂಡಲೇಶ್ವರನಾದ **ಪ್ರೋಲ**ನೆಂಬು ವನು ಸ್ವತಂತ್ರನಾಗಲೆಳಸಿ, ನೆರೆಹೊರೆಯ ಊರುಗಳನ್ನು ತನ್ನ ಮಂಡ ಲಕ್ಕೆ ಸೇರಿಸಿಕೊಳ್ಳತೊಡಗಿದ್ದಾನೆಂಬ ಸುದ್ದಿಯು ಬಂತು. ಕೂಡಲೆ ತೈಲಪನು ತನ್ನ ದಂಡನ್ನು ಸಿದ್ಧಮಾಡಿಕೊಂಡು, ಪ್ರೋಲನ ಮುಖ್ಯ ಪಟ್ಟಣವಾದ ಅನಮಕೊಂಡದ ಮೇಲೆ ದಂಡೆತ್ತಿಹೋದನು. ಚಾಳುಕ್ಯ ದಂಡನ್ನು ಎದುರಿಸಿ ಕಾದುವಷ್ಟು ಸಾಮರ್ಥ್ಯವು ಪ್ರೋಲನ ಲ್ಲಿದ್ದಿಲ್ಲ. ಆದ್ದರಿಂದ ಅವನು ರಾಜಿಯ ಸಂಧಾನವನ್ನು ನಡಿಸಿ, ಕೆಲ ಚಾಳುಕ್ಯ ದಳವಾಯಿಗಳನ್ನು ಒಡಕೊಂಡು ಅವರ ನೆರವಿನಿಂದ ತೈಲಪ ನನ್ನು ಸೆರೆಹಿಡಿದನು. ಈ ದಂಡಯಾತ್ರೆಯಲ್ಲಿ ಬಿಜ್ಜಳನು ಇದ್ದನೊ ಇಲ್ಲೊ ಎಂಬುದಾಗಲಿ ಈ ಮೋಸದ ಕೃತ್ಯದಲ್ಲಿ ಅವನ ಅಂಗವು ಎಷ್ಟಿ ತ್ತೆಂಬುದಾಗಲಿ ತಿಳಿದುಕೊಳ್ಳಲಿಕ್ಕೆ ನಮಗೆ ಮಾರ್ಗವೇ ಇಲ್ಲ. ಆದರೆ ಬಿಜ್ಜಳನು ಈ ದಂಡಯಾತ್ರೆಯಲ್ಲಿ ಇದ್ದನೆಂತಲೂ ಅವನ ನೆರವಿನಿಂದ ಪ್ರೋಲನು ತೈಲಪನನ್ನು ಸೆರೆಹಿಡಿದನೆಂತಲೂ ಬಳಿಕ ಬಿಜ್ಜಳನು ಅವನನ್ನು ಬಂಧಮುಕ್ತಮಾಡಲಿಕ್ಕೆ ಪ್ರಯತ್ನಮಾಡಿದಂತೆ ನಟಿಸಿ, ತನ್ನ ಪ್ರಯತ್ನವು ವ್ಯರ್ಥವಾದ್ದರಿಂದ ತನಗೆ ಅನುಕೂಲರಾದ ದಳವಾಯಿ ಗಳೊಡನೆ ಕಲ್ಯಾಣಕ್ಕೆ ತಿರುಗಿ ಬಂದು, ಚಾಳುಕ್ಯ ಸಾಮ್ರಾಜ್ಯ ಸೂತ್ರ ಗಳನ್ನು ಕಯ್ಕೊಂಡನೆಂತಲೂ ಊಹಿಸಿದರೆ ಬಹುಶಃ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ (೧೧೫೫ ?).

ಅತ್ತ ತೈಲಪನ ಪಕ್ಷದ ದಳವಾಯಿಗಳು ಬಿಜ್ಜಳನಂತೆ ಕಲ್ಯಾಣದ ದಾರಿಯನ್ನು ಹಿಡಿಯದೆ ಅಲ್ಲೇ ನಿಂತು, ತೈಲಪನ ಬಿಡುಗಡೆಯ ವಿಷಯ ವಾಗಿ ನಾನಾತರದ ಪ್ರಯತ್ನಗಳನ್ನು ಮಾಡತೊಡಗಿದರು. ಅವರು ಚಕ್ರವರ್ತಿಯನ್ನು ಮೋಸದಿಂದ ಸೆರೆಹಿಡಿಯುವುದು ತೀರ ಅಧರ್ಮದ

ಕೆಲಸವೆಂದು ಪರಿಪರಿಯಾಗಿ ತಿಳಿಹೇಳಿದರು. ಸಾರ್ವಭೌಮನನ್ನು ಸೆರೆಯಲ್ಲಿಡುವ ರಾಜದ್ರೋಹದ ಮಹಾಪಾತಕಕ್ಕೆ ಗುರಿಯಾಗಬೇಡೆಂದು ಪ್ರೋಲನನ್ನು ಅಂಗಲಾಚಿ ಬೇಡಿಕೊಂಡರು. ಸದ್ಯದಲ್ಲಿ ದೊಡ್ಡ ದೊಡ್ಡ ಮಂಡಲೇಶ್ವರರು ದಂಡೆತ್ತಿ ಬಂದು ಅವನನ್ನು ಮುರಿಬಡಿದು ಅವನ ರಾಜ್ಯವನ್ನು ಉಧ್ವಸ್ತಮಾಡಿ, ಅವನ ತಂದೆಯಾದ ಬೇಟನನ್ನು ಸೆರೆಹಿಡಿದಂತೆ ಅವನನ್ನು ಸೆರೆಹಿಡಿಯುವರೆಂದು ಹೆದರಿಕೆ ಹಾಕಿದರು. ಬಿಡುಗಡೆಯಾದ ಬಳಿಕ ತೈಲಪ ಚಕ್ರವರ್ತಿಯು ಅವನಿಗೆ ಕೆಲ ಹೊಸ ನಾಡನ್ನು ಕೊಟ್ಟು ಸ್ವತಂತ್ರನಾದ ಅರಸನೆಂದು ಒಡಂಬಟ್ಟು ಅವನೊಡನೆ ಶರೀರ ಸಂಬಂಧವನ್ನು ಮಾಡುವನೆಂದು ವಾಗ್ದಾನ ಕೊಟ್ಟರು. ಹೇರಳ ಹಣವನ್ನೂ ಕೆಲ ರಾಜಚಿಹ್ನಗಳನ್ನೂ ಕೊಡಿಸುವೆವೆಂದು ಆಶೆ ತೋರಿಸಿದರು. ಅವನ ಮುಖ್ಯ ಮುಖ್ಯ ಮಂತ್ರಿ ದಂಡನಾಯಕರಿಗೆ ಹಲವು ತರದ ಆಶೆಗಳನ್ನು ತೋರಿಸಿ, ಅಮೌಲ್ಯವಾದ ಪಾರಿತೋಷಕಗಳನ್ನಿತ್ತು ಅವರನ್ನು ತಮ್ಮ ಕಡೆಗೆ ಮಾಡಿಕೊಂಡರು. ಈ ಮೇರೆಗೆ ತೈಲಪನ ಪಕ್ಷದವರು ಮಾಡಿದ ಸಾಮ ದಾನ ದಂಡ ಭೇದಗಳೆಂಬ ಚತುರೋಪಾಯಗಳು ಸಫಲವಾದವು. ಪ್ರೋಲನ ಮನಸ್ಸಿನಲ್ಲಿ ತೈಲಪನ ಬಿಡುಗಡೆಯನ್ನು ಮಾಡಬೇಕೆಂಬ ವಿಚಾರವು ಬಂತು. ತಾನು ಮಾಡಿದ ಮೋಸದ ಬಗ್ಗೆ ಅವನಲ್ಲಿ ಪಶ್ಚಾತ್ತಾಪ ಹುಟ್ಟಿತು. ರಾಜದ್ರೋಹಿಯಾದ ಬಿಜ್ಜಣನ ಗೆಳೆತನಕ್ಕಿಂತ ಚಾಳುಕ್ಯ ಸಾರ್ವಭೌಮನಾದ ತೈಲಪನ ಸ್ನೇಹವು ಹೆಚ್ಚು ಶ್ರೇಯಸ್ಕರವಾದ್ದೆಂದು ಅವನ ಮನವರಿಕೆಯಾಯಿತು. ಅವನ ಅಂತಃಕರಣವು ಕರಗಿತು. ಆದ್ದರಿಂದ ಅವನು ತೈಲಪನನ್ನು ಬಂಧಮುಕ್ತ ಮಾಡಿ, ಅವನ ಕ್ಷಮೆಯನ್ನು ಬೇಡಿಕೊಂಡು, ಅವನಿಗೆ ಬೆಲೆಯುಳ್ಳ ವಸ್ತ್ರಾಲಂಕಾರಗಳನ್ನೂ ಕಪ್ಪುಗಾಣಿಕೆಯನ್ನೂ ಒಪ್ಪಿಸಿದನು (೧೧೫೫?). ಪ್ರೋಲನ ಮಗನಾದ ರುದ್ರದೇವನು ತನ್ನದೊಂದು ಶಿಲಾಲೇಖದಲ್ಲಿ ತನ್ನ ತಂದೆಯು ತೈಲಪನನ್ನು ಸ್ವಾಮಿಭಕ್ತಿಯಿಂದ ಬಂಧಮುಕ್ತಮಾಡಿದನೆಂದು ಹೇಳಿಕೊಂಡಿರುತ್ತಾನೆ*.

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೨೨, ಅಡಿಟಿಪ್ಪಣಿ ೬ ಮತ್ತು ಪುಟ ೪೬೬.

ಚಾಳುಕ್ಯರ ಮುಖ್ಯ ಪ್ರಧಾನನೂ ಮುಖ್ಯ ದಂಡನಾಯಕನೂ ಆದ ಕಳಚುರಿ ಬಿಜ್ಜಣನು ಆವಾವ ಕುಯುಕ್ತಿಗಳನ್ನು ಮಾಡಿ, ಹೇಗೆ ಹೇಗೆ ಮತ್ತು ಎಂದೆಂದು ಚಾಳುಕ್ಯ ಮಹಾಮಂಡಲೇಶ್ವರರನ್ನು ತನ್ನ ಕಡೆಗೆ ಒಡಕೊಂಡು, ಚಾಳುಕ್ಯ ಸಾಮ್ರಾಜ್ಯವನ್ನು ಅಪಹರಿಸಿದನೆಂಬುದನ್ನು ತಿಳಿದುಕೊಳ್ಳಲಿಕ್ಕೆ ಬೇಕಾದಷ್ಟು ಆಧಾರಗಳು ನಮಗೆ ಇನ್ನೂ ದೊರೆತಿಲ್ಲ. ಕೊಲ್ಹಾಪುರ ಪ್ರಾಂತದ ಮಹಾಮಂಡಲೇಶ್ವರನಾದ ವಿಜಯಾರ್ಕನೂ, ಕಾಕತೀಯ ಮನೆತನದ ಪ್ರೋಲರಾಜನೂ ತೈಲಪನ ವಿರುದ್ಧವಾಗಿ ಬಿಜ್ಜಣನನ್ನು ಕೂಡಿದರೆಂದು ಡಾ॥ ಭಾಂಡಾರಕರರು ಬರೆಯುತ್ತಾರೆ*. ಈ ವಿಷಯವನ್ನು ಕುರಿತು ಡಾ॥ ಫ್ಲೀಟರು ಬರೆಯುವುದೇನಂದರೆ:—

ಮೈಸೂರು ಸಂಸ್ಥಾನ ಹರಿಹರದ ಸುಮಾರು ೧೧೫೦ರ ಶಾಸನದಲ್ಲಿ ಕಸಪಯ್ಯನಾಯಕನೆಂಬವನು ಬನವಾಸಿ ೧೨,೦೦೦ವನ್ನು ಕಳಚುರಿ ಬಿಜ್ಜಣನ ಕಯ್ಕೆಳಗಿನವನಾಗಿ ಆಳುತ್ತಿದ್ದನೆಂದು ಬರೆದಿದೆ. ವಿಜಾಪುರದ ೧೧೫೧ರ ಶಿಲಾಲೇಖದಲ್ಲಿ ಬಿಜ್ಜಣನು ೩ನೆಯ ತೈಲನ ಸಾಮಂತನಾಗಿದ್ದನೆಂದು ಹೇಳಿ ಅವನ ಕಯ್ಕೆಳಗೆ ಮಹಾಪ್ರಧಾನನೂ ಸೇನಾಧಿಪತಿಯೂ ದಂಡನಾಯಕನೂ ಆದ ಮೈಲಾರಯ್ಯನು ವಿಜಾಪುರದ ನೆರೆಯಲ್ಲಿದ್ದ ತರ್ದವಾಡಿ ಪ್ರಾಂತವನ್ನು ಆಳುತ್ತಿದ್ದನೆಂದು ಬರೆದಿದೆ. ಮಹಾಸಾಮಂತಾಧಿಪತಿಯೂ, ಸೇನಾಧಿಪತಿಯೂ, ದಂಡನಾಯಕನೂ ಆದ ಮಹಾದೇವನೆಂಬವನು ತೈಲಪನ ಕಯ್ಕೆಳಗಿನವನಾಗಿ ಬನವಾಸಿ ೧೨,೦೦೦ವನ್ನೂ, ಪುಲಿಗೆರೆ ೩೦೦ನ್ನೂ ಆಳುತ್ತಿದ್ದನೆಂದು ಧಾರವಾಡ ಜಿಲ್ಲಾ ಕೋಡ ತಾಲೂಕ ಪುರ (?) ಎಂಬ ಸ್ಥಳದ ೧೧೫೨ನೆಯ ಇಸ್ವಿಯ ಶಿಲಾಲೇಖದಲ್ಲಿ ಬರೆದಿದ್ದು, ಮುಂದೆ ೧೧೫೫ರಲ್ಲಿ ಇದೇ ಮಹಾದೇವನು ಬಿಜ್ಜಣನ ದಂಡನಾಯಕನಾಗಿ ಬನವಾಸಿ ಪ್ರಾಂತವನ್ನು ಆಳುತ್ತಿದ್ದನೆಂತಲೂ, ಬಿಜ್ಜಣನು ಎಲ್ಲ ಪ್ರಾಂತಗಳನ್ನು ಆಳುತ್ತಿದ್ದನೆಂತಲೂ ಮೈಸೂರು ಸಂಸ್ಥಾನ ಬಳಗಾಂವೆಯ ಶಿಲಾಲೇಖದಲ್ಲಿ ಬರೆದಿದೆ. ....೧೧೫೬ರಲ್ಲಿ ರಾವಳೆಯ ನಾಯಕನೆಂಬವನು ಬಿಜ್ಜಣನ ಮಹಾ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೨೨.

ಪ್ರಧಾನನೂ, ಮಹಾಮಂಡಲೇಶ್ವರನೂ ಆಗಿದ್ದನೆಂದು ನಿಜಾಮ ಸಂಸ್ಥಾನ ಕುಕನೂರಿನ ಶಿಲಾಲೇಖದಲ್ಲಿ ಬರೆದಿದೆ. ಸಿಂದ ಮನೆತನದ ಮಹಾಮಂಡಲೇಶ್ವರನಾದ ೨ ನೆಯ ಚಾವುಂಡನು ಕಿಸುಕಾಡ ೭೦ನ್ನೂ, ಬಾಗಡಗೆ ೭೦ನ್ನೂ, ಕೆಳವಾಡಿ ೩೦೦ನ್ನೂ ೩ ನೆಯ ತೈಲನ ಕಯ್ಕೆಳಗಿನವನಾಗಿ ಆಳುತ್ತಿದ್ದನೆಂದು ಪಟ್ಟದಕಲ್ಲಿನ ೧೧೬೩ ನೆಯ ಇಸ್ವಿಯ ಶಿಲಾಲೇಖದಲ್ಲಿ ಹೇಳಿದೆ. ಇದೇ ಕಾಲದಲ್ಲಿ ಗೋವೆಯ ಕದಂಬ ಮನೆತನದ ಮಹಾಮಂಡಲೇಶ್ವರರಾದ ಪೆರ್ಮಾಡಿ, ವಿಜಯಾದಿತ್ಯ ಎಂಬವರು ಪಲಸಿಗೆ ೧೨,೦೦೦ವನ್ನೂ, ಕೊಂಕಣ ೯೦೦ನ್ನೂ, ವೇಳುಗ್ರಾಮ ೭೦ನ್ನೂ ಆಳುತ್ತಿದ್ದರು; ಮತ್ತು ರಟ್ಟ ಮಹಾಮಂಡಲೇಶ್ವರನಾದ ೩ ನೆಯ ಕಾರ್ತವೀರ್ಯನು ಕುಂಡಿ ೩,೦೦೦ವನ್ನೂ, ಶಿಲಾಹಾರ ಮಹಾಮಂಡಲೇಶ್ವರನಾದ ವಿಜಯಾದಿತ್ಯನು ತನ್ನ ಪಿತ್ರಾರ್ಜಿತ ಪ್ರಾಂತವಾದ ಕರ್ಹಾಡವನ್ನೂ ಆಳುತ್ತಿದ್ದರು. ಆದರೆ ಇವರು (ಈ ಮುವ್ವರು) ೩ ನೆಯ ತೈಲನು ತಮ್ಮ ಸಾರ್ವಭೌಮನಾಗಿದ್ದನೆಂದು ಎಣಿಸುತ್ತಿದ್ದರೋ ಇಲ್ಲೋ ಎಂಬುದನ್ನು ನಿರ್ಣಯಿಸಲಿಕ್ಕೆ ನಮಗೆ ಇನ್ನೂ ಆಧಾರವೇನೂ ಸಿಕ್ಕಿಲ್ಲ. ವಿಜಾಪುರದ ೧೧೫೧ ನೆಯ ಇಸ್ವಿಯ ಶಿಲಾಲೇಖನದಲ್ಲಿಯೂ, ನಿಜಾಮ ಸಂಸ್ಥಾನ ಕೆಂಭಾವಿಯ ೧೧೫೭ ನೆಯ ಇಸ್ವಿಯ ಶಿಲಾಲೇಖದಲ್ಲಿಯೂ ತೈಲಪನ ರಾಜಧಾನಿಯು ಕಲ್ಯಾಣವಾಗಿತ್ತೆಂದು ಬರೆದಿದೆ. ಆದರೆ ನಿಜಾಮ ಸಂಸ್ಥಾನ ಹರಸೂರಿನ ಶಕ ೧೦೮೩ ನೆಯ ವಿಷು ಸಂವತ್ಸರ ವೈಶಾಖ ಬಹುಳ ೩೦ ಸೋಮವಾರ(ಸೂರ್ಯಗ್ರಹಣ)ದ ಅಂದರೆ ೧೬೬೧ ನೆಯ ಇಸ್ವಿ ಎಪ್ರಿಲ ೨೭ರ ಶಿಲಾಲೇಖದಲ್ಲಿ ವಿಷು ಸಂವತ್ಸರವು ತೈಲಪನ ಆಳಿಕೆಯ ೧೨ ನೆಯ ವರ್ಷವಾಗಿತ್ತೆಂತಲೂ, ಆಗ ಅವನ ರಾಜಧಾನಿಯು ಜಯಂತಿಪುರ (ಬನವಾಸಿ) ಆಗಿತ್ತೆಂತಲೂ ಬರೆದಿದೆ. ಇದೇ ತೈಲನಿಗೆ ಸಂಬಂಧಿಸಿದ ಕಡೆಯ ಲೇಖವು. ಆದರೆ ಇದರಲ್ಲಿ ಅವನು ಸಾರ್ವಭೌಮನಾಗಿದ್ದನೆಂಬುದಕ್ಕೆ ಸ್ಪಷ್ಟವಾದ ಉಲ್ಲೇಖವಿಲ್ಲ. ಈ ಅರ್ಥವುಳ್ಳ ಕಡೆಯ ಬರಹವು ಮೈಸೂರು ಸಂಸ್ಥಾನ ಬಳಗಾವಿಯದೇ ಸರಿ. ಆ ಶಿಲಾಲೇಖವು ೨೬ ದಶಂಬರ ೧೧೫೫ರಲ್ಲಿ ಕೊರೆಯಿಸಲ್ಪಟ್ಟಿತು. ಧಾರವಾಡ ಜಿಲ್ಲಾ ಹುಲ್ಲೂರಿನ ೨೨ ಅಕ್ಟೋಬರ ೧೧೫೬ ನೆಯ ಇಸ್ವಿಯ

ಶಿಲಾಲೇಖದಲ್ಲಿಯೂ, ಧಾರವಾಡ ಜಿಲ್ಲಾ ಹಾವೇರಿಯ ೨೪ ದಶಂಬರ ೧೧೫೭ ನೆಯ ಇಸ್ವಿಯ ಶಿಲಾಲೇಖದಲ್ಲಿಯೂ ಸಾರ್ವಭೌಮತ್ವದ ಬಿರುದುಗಳುಳ್ಳ ೩ನೆಯ ತೈಲನ ಹೆಸರು ಕಂಡುಬರುತ್ತಿದ್ದರೂ ಹುಲ್ಲೂರಿನ ಲೇಖದ ಆರಂಭದ ಭಾಗವು ಒಡೆದುಹೋದುದರಿಂದಲೂ, ಹಾವೇರಿಯ ಬರಹದಲ್ಲಿ ತೈಲನ ಹೆಸರಿನ ಜತೆಯಲ್ಲಿ ಬಿಜ್ಜಣನ ಹೆಸರು ಇರುವುದರಿಂದಲೂ ೧೧೫೬—೧೧೫೭ ಈ ಎರಡು ವರ್ಷಗಳಲ್ಲಿ ತೈಲನ ಸಾರ್ವಭೌಮತ್ವವು ಎಷ್ಟು ಮಟ್ಟಿಗೆ ಮುಕ್ಕಾಗಿತ್ತೆಂಬುದನ್ನು ನಿಶ್ಚಯವಾಗಿ ಹೇಳಲಿಕ್ಕೆ ಬರುವುದಿಲ್ಲ. ಆದ್ದರಿಂದ ೨೬ ದಶಂಬರ ೧೧೫೫ನೆಯ ಇಸ್ವಿಯ ಬಳಗಾವಿಯ ಶಾಸನವೇ ೩ ನೆಯ ತೈಲನ ಸಂಪೂರ್ಣ ಸಾರ್ವಭೌಮತ್ವದ ಕೊನೆಯ ಲೇಖವಾಗಿತ್ತು. ೩ ನೆಯ ತೈಲನು ೧೯ ಜನವರಿ ೧೧೬೩ಕ್ಕಿಂತ ಮೊದಲೇ ಸತ್ತನೆಂಬುದು ನಿಶ್ಚಯವಾದ ಸಂಗತಿಯೇ ಸರಿ. ಏಕೆಂದರೆ ಕಾಕತೀಯ ಮನೆತನದ ಅರಸನೂ, ಪ್ರೋಲನ ಮಗನೂ ಆದ ರುದ್ರದೇವನು ತನ್ನ ರಾಜಧಾನಿಯಾದ ಅನಮಕೊಂಡದ ೧೯ ಜನವರಿ ೧೧೬೩ ನೆಯ ಇಸ್ವಿಯ ಶಿಲಾಲೇಖದಲ್ಲಿ ತೈಲಪನು ಸತ್ತನೆಂದು ಸ್ಪಷ್ಟವಾಗಿ ಬರೆಯಿಸಿದ್ದಾನೆ. ಇದಲ್ಲದೆ ಈ ಸುಮಾರಕ್ಕೆ ಕಳಚುರಿ ಬಿಜ್ಜಣನ ಸಾಮ್ರಾಜ್ಯಾಪಹಾರದ ಎಲ್ಲ ಕುತಂತ್ರಗಳು ಸಫಲವಾದ್ದರಿಂದ ಅವನು ಚಾಳುಕ್ಯ ಚಕ್ರವರ್ತಿಯ ಎಲ್ಲ ಸಾರ್ವಭೌಮತ್ವದ ಬಿರುದುಗಳನ್ನು ೧೧೬೨ರಲ್ಲಿ ಅಂದರೆ ತೈಲಪನ ಮರಣ ಸಮಯಕ್ಕೆ ಧರಿಸ ತೊಡಗಿದನು.

ಕಳಚುರಿ ಬಿಜ್ಜಣನು ತೈಲಪನ ಅಣ್ಣನಾದ ಹೆಮ್ಮಾಡಿದೇವ (ಜಗದೇಕಮಲ್ಲ)ನ ಮುಖ್ಯ ಪ್ರಧಾನ ದಂಡನಾಯಕನಾಗಿದ್ದಾಗಲೇ ಸಾಮ್ರಾಜ್ಯಾಪಹಾರದ ದ್ರೋಹದ ವಿಚಾರಗಳನ್ನು ಗುಪ್ತವಾಗಿ ನಡಿಸಿದ್ದನೆಂದು ಹಿಂದೆ ಬರೆದಿರುತ್ತೇವಷ್ಟೇ. ಮುಂದೆ ತೈಲಪನು ಕಾಕತೀಯ ಪ್ರೋಲನ ಸೆರೆಯಾಳಾದಾಗ ಚಾಳುಕ್ಯ ಮಂಡಲೇಶ್ವರರನ್ನು ಬಹಿರಂಗವಾಗಿ ತನ್ನ ಕಡೆಗೆ ಎಳೆದುಕೊಳ್ಳಲಿಕ್ಕೆ ಅವನಿಗೆ ಉತ್ತಮ ಸಂಧಿಯು ದೊರೆಯಿತು. ಆದ್ದರಿಂದ ಮೈಸೂರು ಸಂಸ್ಥಾನ ಸಿಕಾರಪುರದ ೧೦೪ ನಂಬರಿನ ೧೧೫೬ ನೆಯ ಇಸ್ವಿಯ ಶಾಸನದಲ್ಲಿ ತ್ರೈಲೋಕ್ಯ

ಮಲ್ಲನ ಆಳಿಕೆಯ ೬ನೆಯ ವರ್ಷ ಯುವ ಸಂವತ್ಸರದಲ್ಲಿ ಮಹಾ ಮಂಡಲೇಶ್ವರ ಭುಜಬಲಚಕ್ರವರ್ತಿ ತ್ರಿಭುವನೈಕಮಲ್ಲ ಬಿಜ್ಜಣ ದೇವರಸನ ಕಯ್ಕೆಳಗಿನವರಾದ ಕಸಪಯ್ಯನಾಯಕ ಬಮ್ಮರಸರ ಸಾಹಾಯಕರಾದ ೫ ಮಂದಿ ಕರಣಮರು ಬಿಜ್ಜಳದೇವನ ಪಂಚೇಂದ್ರಿಯ ಗಳಂತಿದ್ದರೆಂದೂ, ಬಿಜ್ಜಳನೇ ವಡ್ಡರಾವುಳ, ಹೆಜ್ಜುಂಕ, ಬಿಳ್ಕೊಡೆ ಸುಂಕ ಗಳನ್ನು ದಕ್ಷಿಣ ಕೇದಾರೇಶ್ವರನಿಗೆ ಬಿಟ್ಟುಕೊಟ್ಟನೆಂತಲೂ ವರ್ಣಿಸಿದೆ. ಶಿಕಾರಪುರದ ೧೮೫, ೧೯೦, ೧೨೩ ನೆಯ ೧೧೫೮-೫೯ ನೆಯ ಇಸ್ವಿಯ ಶಾಸನಗಳಲ್ಲಿ ತೈಲಪನ ಹೆಸರು ಮಾತ್ರ ಬರೆದಿದ್ದು, ಅವನು ಆಳು ತ್ತಿದ್ದನೆಂದು ಬರೆದಿಲ್ಲ. ಶಿಕಾರಪುರ ೧೬೨ ನೆಯ ನಂಬರಿನ ೧೧೫೮ ನೆಯ ಇಸ್ವಿಯ ಶಾಸನದಲ್ಲಿ ಬಿಜ್ಜಳನ ಆಳಿಕೆಯ ೩ ನೆಯ ವರ್ಷವೆಂದು ಬರೆದಿದೆ. ಶಿಕಾರಪುರ ೫೬, ೭೮, ೧೩೯, ೧೪೬, ೧೬೧, ೨೪೨ ನೆಯ ೧೧೬೦-೬೩ ನೆಯ ಇಸ್ವಿಯ ಶಾಸನಗಳಲ್ಲಿ ತೈಲಪನ ಹೆಸರೇ ಇಲ್ಲ. ಆದರೆ ಶಿಕಾರಪುರ ೧೦೮ ನೆಯ ನಂಬರಿನ ೧೧೬೪ ನೆಯ ಇಸ್ವಿಯ ಶಾಸನದಲ್ಲಿ ತ್ರೈಲೋಕ್ಯಮಲ್ಲ ತೈಲಪನ ಮಹಾಮಂಡಲೇಶ್ವರನಾದ ಬಿಜ್ಜಣನ ಕಯ್ಕೆಳಗಿನವನಾದ ಮಹಾದೇವ ದಂಡನಾಯಕನು ಕೋಡಿಯ ಮಠ ದಲ್ಲಿ ಒಂದು ಲಿಂಗವನ್ನು ಪ್ರತಿಷ್ಠಾಪಿಸಿದನೆಂದು ಬರೆದಿದೆ. ಆದಕಾರಣ ಕಳಚುರಿ ಬಿಜ್ಜಣನು ೧೧೫೮ರಲ್ಲೇ ಸ್ವತಂತ್ರ ಸಾರ್ವಭೌಮನಾದ ನೆಂತಲೂ, ಚಾಳುಕ್ಯ ಮನೆತನದ ಅಭಿಮಾನವುಳ್ಳ ದಂಡನಾಯಕರು ಮಾತ್ರ ತಂತಮ್ಮ ಶಿಲಾಲೇಖಗಳಲ್ಲಿ ಚಾಳುಕ್ಯ ಚಕ್ರವರ್ತಿಗಳ ಹೆಸರು ಗಳನ್ನು ತೈಲಪನ ವರೆಗೆ ಕೊರೆಯಿಸಿ, ಬಿಜ್ಜಣನು ಮಹಾಮಂಡಲೇಶ್ವರ ನಾಗಿದ್ದನೆಂದು ಬರೆಯಿಸಿದರೆಂತಲೂ ಊಹಿಸಿದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ.

೩ ನೆಯ ತೈಲನು ಅಥವಾ ನೂರ್ಮಡಿ ತೈಲಪನು ಹೇಡಿಯಾ ಗಿರದೆ ಶೂರನಾಗಿದ್ದನೆಂಬುದಕ್ಕೆ ಸಂದೇಹವಿಲ್ಲ. ಏಕೆಂದರೆ, ಅವನು ಯುದ್ಧಾಪೇಕ್ಷಿಯೂ ಆನೆಗಳನ್ನು ಏರುವುದರಲ್ಲಿ ಕುಶಲನೂ ಆಗಿದ್ದ ನೆಂದು ಅವನನ್ನು ಸೆರೆಹಿಡಿದ ಪ್ರೋಲನ ಮಗನಾದ ರುದ್ರದೇವನು ತನ್ನ ಅನಮಕೊಂಡದ ಶಿಲಾಲೇಖದಲ್ಲಿ ಅವನನ್ನು ಹೊಗಳಿರುತ್ತಾನೆ.

ಅವನ ಆಳಿಕೆಯು ಬಹುಕಾಲವು ದ್ರೋಹಿಯಾದ ಬಿಜ್ಜಳನೊಡನೆ ನಡೆದ ಗುದ್ದಿಯಾಟದಲ್ಲಿಯೇ ಕಳೆದುಹೋಗಿರಬಹುದು. ಅವನು ಸತ್ತ ವರ್ಷವು ೧೧೬೨ ಆದರೂ, ಅವನು ಎಲ್ಲಿ ಹೇಗೆ ಸತ್ತನೆಂಬುದು ಗೊತ್ತಾಗುವುದಿಲ್ಲ. ಬಿಜ್ಜಣನು ಅವನನ್ನು ೧೧೫೭ರ ವರೆಗೆ ಬಿಕ್ಕಟ್ಟಿನ ಕಾವಲಲ್ಲಿರಿಸಿದನೆಂತಲೂ ಆ ವರ್ಷ ಅವನು ಕಲ್ಯಾಣದಿಂದ ಓಡಿ ಹೋಗಿ ಧಾರವಾಡ ಜಿಲ್ಲಾ ಅಣ್ಣಿಗೇರಿಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ನಿಂತನೆಂತಲೂ, ಶಕ ೧೦೮೪ರಲ್ಲಿ ಬಿಜ್ಜಣನು ಅಣ್ಣಿಗೇರಿಯ ಮೇಲೆ ದಂಡೆತ್ತಿ ಹೋಗಲು, ಅವನು ಬನವಾಸಿಗೆ ಓಡಿಹೋದನೆಂತಲೂ, ಆ ವರ್ಷ ಅಂದರೆ ೧೧೬೨ರಲ್ಲಿ ಬಿಜ್ಜಣನು ಚಕ್ರವರ್ತಿಯ ಎಲ್ಲ ಬಿರುದುಗಳನ್ನು ಧರಿಸಿದನೆಂತಲೂ, ತೈಲಪನು ಶಕ ೧೦೮೮ ನೆಯ ಪಾರ್ಥಿವ ಸಂವತ್ಸರದ ವರೆಗೆ ೧೫ ವರ್ಷ ಹಾಗೂ ಹೀಗೂ ಆಳಿದನೆಂತಲೂ ಡಾ|| ಭಾಂಡಾರಕರರು ಬರೆಯುತ್ತಾರೆ*. ಡಾ|| ಫ್ಲೀಟರು ಈ ಮಾತಿಗೆ ಒಡಂಬಡುವುದಿಲ್ಲ. ಆದ್ದರಿಂದ ಇದು ವಾದಗ್ರಸ್ತ ವಿಷಯವೆಂದೆಣಿಸಿ ತೈಲಪನಿಗೆ ಸೋಮೇಶ್ವರನೆಂಬ ಒಬ್ಬ ಮಗನಿದ್ದನೆಂಬ ಸಂಗತಿಯನ್ನು ಬರೆದು ಅವನ ಚರಿತ್ರವನ್ನು ಮುಗಿಸುತ್ತೇವೆ.

## ೧೨. ನಾಲ್ಕನೆಯ ವೀರಸೋಮೇಶ್ವರ

(೧೧೬೩–೧೧೮೯)

೩ನೆಯ ತೈಲನು ಅಥವಾ ನೂರ್ಮಡಿ ತೈಲಪನು ಸತ್ತ ತರುವಾಯ ಅವನ ಮಗನಾದ ಸೋಮೇಶ್ವರನು ಕಲ್ಯಾಣದ ಪಟ್ಟವನ್ನೇರಲಿಲ್ಲ. ಏಕೆಂದರೆ, ಎಲ್ಲ ಚಾಳುಕ್ಯ ಸಾಮ್ರಾಜ್ಯವು ಆ ಕಾಲಕ್ಕೆ ಕಳಚುರಿ ಬಿಜ್ಜಳನ ವಶವಾಗಿತ್ತು. ಸೋಮೇಶ್ವರನು ನ್ಯಾಯದಿಂದ ಸಾರ್ವಭೌಮನಾಗಿದ್ದರೂ ಬಿಜ್ಜಳನು ಕೃತಿಯಿಂದ ಸಾಮ್ರಾಜ್ಯಾಧಿಕಾರಿಯಾಗಿದ್ದನು. ಆದ್ದರಿಂದ ಸೋಮೇಶ್ವರನು ನಿರುಪಾಯನಾಗಿ ತನ್ನ ಪಿತ್ರಾರ್ಜಿತ ರಾಜ್ಯವನ್ನು ಹೇಗೆ ತಿರುಗಿ ದೊರಕಿಸಬೇಕೆಂಬ ಆಲೋಚನೆಯನ್ನು ಮಾಡುತ್ತ ಯಾವದೋ ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದನು.

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೨೨–೨೨೩.

ಅತ್ತ ರಾಜದ್ರೋಹಿಯಾದ ಬಿಜ್ಜಣನು ತನ್ನ ಒಡೆಯನ ದಂಡಿನ ಸಾಹಾಯದಿಂದ ತನ್ನ ಯಜಮಾನನ ಸಾಮ್ರಾಜ್ಯವನ್ನಪಹರಿಸಿ ತ್ರಿಭುವನಮಲ್ಲ, ಭುಜಬಲ ಚಕ್ರವರ್ತಿ ಮುಂತಾದ ಚಾಳುಕ್ಯ ಬಿರುದುಗಳನ್ನು ಧರಿಸಿ, ಸೋಮೇಶ್ವರನಿಗೆ ಅನುಕೂಲರಾದ ಸಣ್ಣ ದೊಡ್ಡ ಸಾಮಂತರನ್ನು ಮುರಿಯಲಿಕ್ಕೆ ವಿಶ್ವಪ್ರಯತ್ನಮಾಡತೊಡಗಿದನು. ಶಿಕಾರಪುರದ ೫೬, ೭೮, ೧೬೧ ಈ ನಂಬರಿನ ಶಿಲಾಲೇಖಗಳಲ್ಲಿ ಸೂಚಿಸಿದ ಮುತ್ತಿಗೆ ದಾಳಿಗಳು ಈ ಪ್ರಯತ್ನದ ಕುರುಹುಗಳಾಗಿದ್ದವೆಂದರೆ ತಪ್ಪಾಗಲಿಕ್ಕಿಲ್ಲೆಂದು ತೋರುತ್ತದೆ. ಇದಲ್ಲದೆ ಸಿಂದ ಮನೆತನದ ಮಹಾಮಂಡಲೇಶ್ವರನಾದ ೨ನೆಯ ಚಾವುಂಡನು ತನ್ನ ಶಕ ೧೦೮೪ ನೆಯ ಸುಭಾನು ಸಂವತ್ಸರ ಜ್ಯೇಷ್ಠಮಾಸ(ಮೇ, ಜೂನ ೧೧೬೩)ದ ಪಟ್ಟದ ಕಲ್ಲಿನ ಶಿಲಾಲೇಖದಲ್ಲಿ ತಾನು ೩ ನೆಯ ತೈಲನ ಸಾಮಂತನೆಂದು ಹೇಳಿಕೊಂಡುದರಿಂದಲೂ, ಪಾಂಡ್ಯ ಮನೆತನದ ವಿಜಯಪಾಂಡ್ಯದೇವನು ತನ್ನ ಶಕ ೧೦೮೮ ನೆಯ ಪಾರ್ಥಿವ ಸಂವತ್ಸರ(೨೫ ದಶಂಬರ ೧೧೬೫)ದ ದಾವಣಗೆರೆ ಶಿಲಾಲೇಖದಲ್ಲಿ ಆ ಸಂವತ್ಸರವು ೩ ನೆಯ ತೈಲನ ಆಳಿಕೆಯ ೧೫ ನೆಯ ವರ್ಷವಾಗಿತ್ತೆಂದು ಬರೆಯಿಸಿದುದರಿಂದಲೂ, ಸಿಂದಮನೆತನದ ಅರಸರಾದ ಬಿಜ್ಜಲದೇವ ವಿಕ್ರಮದೇವರು ತಮ್ಮ ಶಕ ೧೦೯೨ನೆಯ ವಿರೋಧಿ ಸಂವತ್ಸರ(೧೧೬೯–೧೧೭೦)ದ ಶಿಲಾಲೇಖದಲ್ಲಿ ಆ ಸಂವತ್ಸರವು ಚಾಳುಕ್ಯ ವಿಕ್ರಮ ಶಕದ ೯೪ ನೆಯ ವರ್ಷವಾಗಿತ್ತೆಂದು ಉಲ್ಲೇಖಿಸಿರುವುದರಿಂದಲೂ, ಸಿಂದ ಪಾಂಡ್ಯ ಮನೆತನದ ಮಂಡಲೇಶ್ವರರು ಕಳಚುರಿ ಬಿಜ್ಜಣನನ್ನು ವಿರೋಧಿಸಿ ಸೋಮೇಶ್ವರನ ಬೆನ್ನುಕಟ್ಟಿದ್ದರೆಂದು ಊಹಿಸಲಿಕ್ಕೆ ಅಡ್ಡಿ ತೋರುವುದಿಲ್ಲ.

೧೧೫೬ರಲ್ಲಿ ಚಾಳುಕ್ಯ ಸಾಮ್ರಾಜ್ಯವನ್ನು ಅಪಹರಿಸಿದ ಕಳಚುರಿ ಬಿಜ್ಜಣನು ಮುಂದೆ ೧೧೬೨ರಲ್ಲಿ ಸಾರ್ವಭೌಮನಾದನಷ್ಟೇ. ಮೋಸದಿಂದ ದೊರಕಿಸಿದ ಈ ಸಾರ್ವಭೌಮತ್ವವನ್ನು ಅವನು ಬಹಳ ವರ್ಷ ಅನುಭೋಗಿಸಲಿಲ್ಲ. ಅವನ ಆಳಿಕೆಯಲ್ಲಿ ಅವನ ಬೀಗನೂ ಮಂತ್ರಿಯೂ ಆದ ಬಸವೇಶ್ವರನ ಪ್ರಯತ್ನದಿಂದ ಲಿಂಗಾಯತ ಮತವು ಪ್ರಬಲವಾಯಿತು. ೫ ವರ್ಷ ರಾಜ್ಯವಾಳಿ ಬಿಜ್ಜಣನು ರಾಜ್ಯಭಾರವನ್ನು ತನ್ನ

ಹಿರಿಮಗನಾದ ಸೋಮೇಶ್ವರನಿಗೆ ಒಪ್ಪಿಸಿದನು (೧೧೬೭). ಜೈನನಾದ ಬಿಜ್ಜಣನು ಯಾವುದೋ ಕಾರಣದಿಂದ ಧರ್ಮಿಷ್ಟರಾದ ಇಬ್ಬರು ಲಿಂಗಾಯತರ ಕಣ್ಣು ಕಿತ್ತಿಸಿ ಕೊಲ್ಲಿಸಿದನು. ಸಿಟ್ಟಿಗೆದ್ದ ಲಿಂಗಾಯತರು ಬಿಜ್ಜಣನನ್ನು ಕೊಂದರು. ಈ ಕೊಲೆಯ ಸೂಡನ್ನು ತೀರಿಸಿಕೊಳ್ಳುವುದಕ್ಕೋಸ್ಕರ ಬಿಜ್ಜಣನ ಹಿರಿಮಗನಾದ ರಾಯಮುರಾರಿ ಸೋವಿದೇವನು ದಂಡಿನೊಡನೆ ಬಸವನನ್ನು ಬೆನ್ನಟ್ಟಿ ಅವನಿದ್ದ ಉತ್ತರ ಕನ್ನಡ ಜಿಲ್ಲಾ ಉಳವಿಯನ್ನು ಮುತ್ತಿದನು. ಬಸವನು ಮುಂದುಗಾಣದೆ ಒಂದು ಬಾವಿಯಲ್ಲಿ ಬಿದ್ದು ಪ್ರಾಣಕೊಟ್ಟನೆಂದು ಜೈನರೂ, ಬಸವೇಶ್ವರನು ಸಂಗಮೇಶ್ವರನ ಲಿಂಗದಲ್ಲಿ ಐಕ್ಯನಾದನೆಂದು ಲಿಂಗಾಯತರೂ ಬರೆಯುತ್ತಾರೆ.

ಬಿಜ್ಜಣ ಬಸವರ ಬಡಿದಾಟವೂ, ಲಿಂಗಾಯತ ಮತದ ಪ್ರಾಬಲ್ಯವೂ, ಬಿಜ್ಜಣನ ಕೊಲೆಯೂ ರಾಜಧಾನಿಯಾದ ಕಲ್ಯಾಣದಲ್ಲಿ ಅರಾಜಕತ್ವವನ್ನೂ, ರಾಜ್ಯದಲ್ಲಿ ಅನಾಯಕತ್ವವನ್ನೂ ಉಂಟುಮಾಡಿದ್ದರಿಂದ ಚಾಳುಕ್ಯ ಸೋಮೇಶ್ವರನಿಗೆ ತನ್ನ ಪಿತ್ರಾರ್ಜಿತ ರಾಜ್ಯವನ್ನು ಮರಳಿ ದೊರಕಿಸಲಿಕ್ಕೆ ಉತ್ತಮ ಸಂಧಿಯು ದೊರೆಯಿತು. ಮಾಡಿದ್ದುಣ್ಣೋ ಮಾರಾಯ ಎಂಬ ಗಾದೆಯಂತೆ ರಾಜದ್ರೋಹದಿಂದ ದೊರಕಿಸಿದ ಕಳಚುರಿಯರ ರಾಜ್ಯವು ರಾಜದ್ರೋಹದಿಂದಲೇ ಅವರ ಕಯ್ಬಿಟ್ಟಿತೆಂದು ಧಾರಾಳವಾಗಿ ಹೇಳಬಹುದು. ಚಾಳುಕ್ಯ ದಂಡನ್ನು ಚಾಳುಕ್ಯ ಸಾರ್ವಭೌಮನ ವಿರುದ್ಧವಾಗಿ ಉಪಯೋಗಿಸಿ, ಚಾಳುಕ್ಯ ಸಾಮ್ರಾಜ್ಯವನ್ನು ಕಳಚುರಿ ಬಿಜ್ಜಣನು ಕಸಕೊಂಡಿದ್ದನಷ್ಟೇ. ಬಿಜ್ಜಣನ ಮಕ್ಕಳು ರಾಜ್ಯವಾಳುವಾಗ ಕಳಚುರಿ ದಂಡನ್ನು ಕಳಚುರಿ ಸಾರ್ವಭೌಮರ ವಿರುದ್ಧವಾಗಿ ಉಪಯೋಗಿಸಿ ಅವರಿಂದ ರಾಜ್ಯವನ್ನು ಕಿತ್ತಿಕೊಂಡು, ಚಾಳುಕ್ಯ ಸೋಮೇಶ್ವರನಿಗೆ ಪಟ್ಟಗಟ್ಟಲಿಕ್ಕೆ ಸಮರ್ಥನಾದ ಒಬ್ಬ ಕಳಚುರಿ ದಳವಾಯಿಯು ಈ ಕಾಲದಲ್ಲಿ ಉದಯಕ್ಕೆ ಬಂದನು. ಅದು ಹೇಗಂದರೆ :—

೬ನೆಯ ವಿಕ್ರಮಾದಿತ್ಯನ ಆಳಿಕೆಯಲ್ಲಿ ಮಹಾಸಾಮಂತಾಧಿಪತಿ ಮಹಾಪ್ರಧಾನ ಬಾಣಸವೆಗ್ಗಡೆ ದಂಡನಾಯಕ ಅಚ್ಚುಪನ್ನಾಯದ ಅಧಿನಾಯಕನಾದ ಬಮ್ಮರಸನು ನೊಳಂಬವಾಡಿ ೩೨,೦೦೦ ದ

ಪನ್ನಾಯ ಸುಂಕದ ಮೇಲ್ವಿಚಾರಕನಾಗಿದ್ದನೆಂದು ಹಿಂದೆ ಬರೆದಿರು ತ್ತೇವಷ್ಟೇ*. ಇವನ ಮಗನಾದ ಕಾವಣ ಅಥವಾ ಕಾವು ಎಂಬ ವನು ಕಳಚುರಿ ಬಿಜ್ಜಣನ ಮುಖ್ಯ ಸೇನಾಪತಿಯಾಗಿದ್ದನು. ಕಾಳವ್ವೆ ಎಂಬವಳು ಈ ಕಾವಣನ ಹೆಂಡತಿಯಾಗಿದ್ದಳೆಂತಲೂ, ಮುಂದೆ ೪ನೆಯ ಸೋಮೇಶ್ವರನ ದಂಡನಾಯಕನೆಂದು ಹೆಸರುವಾಸಿಯಾದ **ಬಮ್ಮ** ಅಥವಾ **ಬಮ್ಮಯ್ಯ**ನೆಂಬವನು ಇವರಿಬ್ಬರಿಂದ ಹುಟ್ಟಿದನೆಂತಲೂ ಅಣ್ಣಿ ಗೇರಿಯ ಮತ್ತು ಡಂಬಳದ ಶಿಲಾಲೇಖಗಳು ಹೇಳುತ್ತವೆ. ಈ ಬಮ್ಮ ಅಥವಾ ಬಮ್ಮರಸನು ಏನೋ ಕಾರಣದಿಂದ ತನ್ನ ತಂದೆಯು ದಂಡಿಸವ ರನ್ನು ಒಡಕೊಂಡು ಚಾಳುಕ್ಯ ಸೋಮೇಶ್ವರನ ಬೆನ್ನುಕಟ್ಟಿ, ಕಳಚುರಿ ಯರ ರಾಜ್ಯವನ್ನು ಕಿತ್ತಿಕೊಂಡು, **ಚಾಳುಕ್ಯ ರಾಜ್ಯ ಪ್ರತಿಷ್ಠಾಪಕ** ನೆಂಬ ಬಹು ಗೌರವದ ಬಿರುದನ್ನು ದೊರಕಿಸಿದನೆಂದು ಧಾರವಾಡ ಜಿಲ್ಲಾ ಅಬ್ಲೂರಿನ ಶಿಲಾಲೇಖವು ಹೇಳುತ್ತದೆ.

ಈ ದಂಡನಾಯಕ ಬಮ್ಮದೇವ ಅಥವಾ ಬಮ್ಮರಸನು ಏನು ಕಾರಣ ತನ್ನ ತಂದೆಯನ್ನು ವಿರೋಧಿಸಿದನೆಂಬುದಾಗಲಿ, ಇವನ ಕಯ್ಕೆ ಳಗೆ ಕಳಚುರಿಯರ ಎಷ್ಟು ದಂಡು ಇತ್ತೆಂಬುದಾಗಲಿ, ಇವನು ಏನು ಕಾರಣ ಚಾಳುಕ್ಯ ಸೋಮೇಶ್ವರನ ಪಕ್ಷ ಹಿಡಿದು "ಕಳಚುರಿಯರ ಸಾವಿನ ಬೇಗೆ" ಆಗಿದ್ದನೆಂಬುದಾಗಲಿ ಸ್ಪಷ್ಟವಾಗಿ ತಿಳಿಯುವುದಿಲ್ಲ. ಈ ವಿಷಯಕ್ಕೆ ಸಂಬಂಧಿಸಿದ ಶಿಲಾಲೇಖಗಳಲ್ಲಿ ಏಕವಾಕ್ಯತೆಯಾದರೂ ಕಂಡುಬರುವುದಿಲ್ಲ. ಗದಗಿನಲ್ಲಿದ್ದ ೧೧೯೨ನೆಯ ಇಸ್ವಿಯ ಹೊಯ್ಸಳರ ಒಂದು ಶಿಲಾಲೇಖದಲ್ಲಿ ಬ್ರಹ್ಮನು ತನ್ನ ತಂದೆಯನ್ನು ತಿರಸ್ಕರಿಸಿ ಕಳಚುರಿಯರ ರಾಜ್ಯಾಧಿಕಾರವನ್ನು ಕಿತ್ತಿಕೊಂಡನೆಂದು ಬರೆದಿದೆ. ಹರಿಹರದ ಒಂದು ಶಾಸನದಲ್ಲಿ ಕಾವಣನು ಕಳಚುರಿ ರಾಜ್ಯ ಸಮುದ್ಧರಣ ನಾಗಿದ್ದನೆಂತಲೂ, ಕಳಚುರಿ ಸಂಕಮನ ದಂಡನಾಯಕನಾಗಿದ್ದನೆಂತಲೂ ಬರೆದಿದೆ. ೧೧೭೯ನೆಯ ಇಸ್ವಿಯ ಬಳಗಾವೆಯ ಶಿಲಾಲೇಖದಲ್ಲಿ ಕಾವಣನು ಕಳಚುರಿ ಸಂಕಮನ ಸಮಸ್ತ ಸೇನಾಗ್ರೇಸರನಾಗಿದ್ದನೆಂದು ಬರೆದಿದೆ. ಆದರೆ ನಿಜಾಮ ಸಂಸ್ಥಾನ ಚಿಕ್ಕಮುದ್ದನೂರಿನ ೧೧೭೫ನೆಯ

* ಹಿಂದೆ ಪುಟ ೩೦೬.

ಇಸ್ವಿಯ ಶಿಲಾಲೇಖದಲ್ಲಿ ಬ್ರಹ್ಮನು ಕಳಚುರಿ ಅರಸನಾದ ಸೋವಿದೇವನ ಮಹಾಪ್ರಧಾನನೂ, ಸೇನಾಧಿಪತಿಯೂ, ದಂಡನಾಯಕನೂ ಆಗಿದ್ದನೆಂದು ಬರೆದಿದೆ. ಮುಂದೆ ಸೋವಿದೇವನ ತರುವಾಯ ಅವನ ತಮ್ಮಂದಿರಾದ ಸಂಕಮ ಆಹವಮಲ್ಲರ ಆಳಿಕೆಯಲ್ಲಿ ಬ್ರಹ್ಮನು ಅವರ ಸೇನಾಧಿಪತಿಯಾಗಿದ್ದು ಏನೋ ಕಾರಣದಿಂದ ತನ್ನ ಒಡೆಯರ ಮೇಲೆ ತಿರುಗಿಬಿದ್ದನೆಂದು ಡಾ|| ಫ್ಲೀಟರು ಊಹಿಸುತ್ತಾರೆ *.

೪ನೆಯ ಸೋಮೇಶ್ವರನ ಕಾಲದ ಎಲ್ಲ ಶಾಸನಗಳು ಇನ್ನೂ ಪ್ರಸಿದ್ಧವಾಗಿಲ್ಲ. ಆದ್ದರಿಂದ ಈಗ ಹೊರಬಿದ್ದ ಶಾಸನಗಳ ಆಧಾರದಿಂದಲೇ ಅವನ ನೆಲೆವೀಡನ್ನೂ ಅವನ ಆಳಿಕೆಯ ಕಾಲವನ್ನೂ ನಿರ್ಣಯಿಸಬೇಕಾಗಿದೆ. ಅಣ್ಣಿಗೇರಿಯ ಪುರದಪ್ಪ(ವೀರಭದ್ರ)ನ ಗುಡಿಯಲ್ಲಿದ್ದ ಕ್ರೋಧಿ ಸಂವತ್ಸರ(೧೧೮೪)ದ ಶಿಲಾಲೇಖದಲ್ಲಿ ಸೋಮೇಶ್ವರನ ರಾಜಧಾನಿಯು ಅಣ್ಣಿಗೇರಿಯು ಆಗಿತ್ತೆಂದು ಬರೆದಿದೆ. ಮುಂದಿನ ವರ್ಷದ ಅಂದರೆ ವಿಶ್ವಾವಸು ಸಂವತ್ಸರ(೧೧೮೫)ದ ನಿಜಾಮು ಸಂಸ್ಥಾನ ಹೊಡಲದ ಶಿಲಾಲೇಖದಲ್ಲಿ ಅವನ ರಾಜಧಾನಿಯು ಕಲ್ಯಾಣವಾಗಿತ್ತೆಂದು ಬರೆದಿದೆ. ಅವನ ಆಳಿಕೆಯ ವರ್ಷಗಳನ್ನು ಕುರಿತು ಅಣ್ಣಿಗೇರಿ, ಹೂಲಿ, ಲಕ್ಕುಂಡಿ, ಬಾದಾವಿ ಮುಂತಾದ ಶಿಲಾಲೇಖಗಳಲ್ಲಿ ಒಂದಕ್ಕೊಂದು ವಿರುದ್ಧವಾದ ಬರಹಗಳಿರುತ್ತವೆ. ಅವುಗಳ ವಿಷಯವಾಗಿ ಊಹಾಪೋಹ ಮಾಡಿ ಶಕ ೧೧೦೫ನೆಯ ಶುಭಕೃತ್ ಸಂವತ್ಸರದ ಅಂತ್ಯಭಾಗದಲ್ಲಿ ಅಂದರೆ ೧೧೮೩ ನೆಯ ಇಸ್ವಿಯ ಆರಂಭದಲ್ಲಿ ಸೋಮೇಶ್ವರನು ಸಾರ್ವಭೌಮನಾದನೆಂತಲೂ, ಶಕ ೧೧೦೬ನೆಯ ಶೋಭನಕೃತ್ಸಂವತ್ಸರವು ಅವನ ಆಳಿಕೆಯ ೨ನೆಯ ವರ್ಷವೂ, ಕ್ರೋಧಿ ಸಂವತ್ಸರವು ೩ನೆಯ ವರ್ಷವೂ, ವಿಶ್ವಾವಸು ೪ನೆಯ ವರ್ಷವೂ, ಪರಾಭವವು ೫ನೆಯ ವರ್ಷವೂ, ಪ್ಲವಂಗ ಸಂವತ್ಸರವು ಅವನ ಆಳಿಕೆಯ ೬ನೆಯ ವರ್ಷವೂ ಆಗಿದ್ದವೆಂದು ಡಾ|| ಫ್ಲೀಟರು ನಿರ್ಣಯಿಸಿದ್ದಾರೆ†.

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೬೫.

† ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೬೩, ಅಡಿಟಿಪ್ಪಣಿ ೪ ಮತ್ತು ಪು. ೪೬೪, ಅಡಿಟಿಪ್ಪಣಿ ೬.

ಈ ನಾಲ್ಕನೆಯ ಸೋಮೇಶ್ವರ ಅಥವಾ ವೀರಸೋಮೇಶ್ವರನು ೧೧೬೩ರಿಂದ ೧೧೮೯ರ ವರೆಗೆ ಆಳಿದನೆಂದು ಮೇಲೆ ಬರೆದಿರುತ್ತೇವಷ್ಟೇ. ೧೧೬೩ರಿಂದ ೧೧೮೨ರ ವರೆಗೆ ೧೯ ವರ್ಷ ರಾಜ್ಯಭಾರವು ಕಳಚುರಿಯರ ಕಯ್ಯಲ್ಲಿದ್ದುದರಿಂದ ಇವನು ನ್ಯಾಯತಃ ಸಾರ್ವಭೌಮನಾಗಿದ್ದನೇ ಹೊರತು ಕಾರ್ಯತಃ ಸಾರ್ವಭೌಮನಾಗಿದ್ದಿಲ್ಲ. ಮುಂದೆ ವಿಶೇಷ ವಾಗಿ ದಂಡನಾಯಕ ಬಮ್ಮರಸನ ನೆರವಿನಿಂದ ಕಳಚುರಿಯರನ್ನು ಮುರಿಬಡಿದು, ತನ್ನ ಪಿತ್ರಾರ್ಜಿತ ರಾಜ್ಯವನ್ನು ಮರಳಿ ದೊರಕಿಸಿ, ಏಳು ವರ್ಷಗಳ ವರೆಗೆ ಆಳಿದನು. ಆದರೆ ಇಬ್ಬರ ನ್ಯಾಯ ಮೂರನೆ ಯವರಿಗಾಯ ಎಂಬ ಗಾದೆಯಂತೆ ಕಳಚುರಿಯರೊಡನೆ ಕಡಿದಾಡಿ, ಹಣ್ಣಾದ ಚಾಳುಕ್ಯರನ್ನು ಸೋಲಿಸಿ, ಅವರ ಸಾಮ್ರಾಜ್ಯದ ದಕ್ಷಿಣ ಭಾಗವನ್ನು ಹೊಯ್ಸಳರೂ, ಉತ್ತರ ಭಾಗವನ್ನು ದೇವಗಿರಿ ಯಾದವರೂ ಸೆಳೆದುಕೊಂಡುದರಿಂದ ೨೦೦ ವರ್ಷ ಘನತೆಯಿಂದ ಆಳಿದ ಕಲ್ಯಾಣದ ಚಾಳುಕ್ಯ ಮನೆತನವು ಹೆಸರು ಹೇಳದೆ ಹೋಯಿತು (೧೧೮೯).

೪ ನೆಯ ಸೋಮೇಶ್ವರ ಅಥವಾ ವೀರಸೋಮೇಶ್ವರನನ್ನು ಶಿಲಾ ಲೇಖಗಳಲ್ಲಿ ಚಾಳುಕ್ಯ ಚಕ್ರವರ್ತಿ, ಚಾಳುಕ್ಯ ಪ್ರತಾಪ ಚಕ್ರವರ್ತಿ ಎಂದು ಕರೆದಿರುತ್ತಾರೆ. ಇವನ ರಾಣಿ ಯಾರಾಗಿದ್ದಳೆಂಬುದಾಗಲಿ, ಇವನಿಗೆ ಗಂಡು ಹೆಣ್ಣುಮಕ್ಕಳು ಎಷ್ಟಿದ್ದರೆಂಬುದಾಗಲಿ, ೧೧೮೯ರ ಮುಂದೆ ಇವನ ಹಾಡು ಏನಾಯಿತೆಂಬುದಾಗಲಿ ಗೊತ್ತಾಗುವುದಿಲ್ಲ.

ಈ ವೀರಸೋಮೇಶ್ವರನ ಆಳಿಕೆಯಲ್ಲಿ ಕೆಳಗೆ ಬರೆದ ಮಂಡಲೇ ಶ್ವರರು ಬೇರೆ ಬೇರೆ ಪ್ರಾಂತಗಳನ್ನು ಆಳುತ್ತಿದ್ದರು :—

೧. ಮಂತ್ರಿಯೂ ದಂಡನಾಯಕನೂ ಆದ ಬ್ರಹ್ಮನು ಇವನ ಮುಖ್ಯ ಸಾಹಾಯಕನೂ ಸೇನಾಪತಿಯೂ ಆಗಿದ್ದನು. ಇವನು ಒಮ್ಮೆ ಒಂದು ಕೋರೆಯಿಲ್ಲದ ಆನೆಯನ್ನು ಏರಿ, ಕೋರೆಯಿದ್ದ ೬೦ ಆನೆಗಳನ್ನು ಕೊಂದನೆಂತಲೂ, ಇವನು ತನ್ನ ರಾಹುತರ ದಂಡಿನಿಂದ ಹೊಯ್ಸಳ ೨ನೆಯ ಬಲ್ಲಾಳನ ಆನೆಗಳುಳ್ಳ ದಂಡನ್ನು ಸೋಲಿಸಿ, ಅವನಿಂದ ರಾಜ್ಯವನ್ನು ಕಿತ್ತಿಕೊಂಡನೆಂತಲೂ ಧಾರವಾಡ ಜಿಲ್ಲಾ ಗದಗಿನ ೧೧೯೨ ನೆಯ ಇಸ್ವಿಯ ಶಿಲಾಲೇಖದಲ್ಲಿ ಬರೆದಿದೆ.

೨. ದಂಡನಾಯಕನಾದ ತೇಜರಾಜ ಅಥವಾ ತೇಜಮಯ್ಯ ಅಥವಾ ತೇಜುಗಿಯು ತನ್ನ ಕಯ್ಕೆಳಗಿನವರಾದ ಚಾಕಣ ಮತ್ತು ರೇವಣರೆಂಬ ದಂಡನಾಯಕರೊಡನೆ ಧರ್ಮಪುರ(ಡಂಬಳ)ವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ಮಾಸವಾಡಿ ಪ್ರಾಂತವನ್ನು ಆಳುತ್ತಿದ್ದನು (೧೧೮೪).

೩. ಮಹಾಪ್ರಧಾನನಾದ ಬಲ್ಲಯ್ಯಸಾಹಣಿಯು ತನ್ನ ಸಾಮಂತ ಸೇನಾಪತಿಯಾದ ರಾಮ ದಂಡನಾಯಕನು ಬೆಳ್ವೊಲದ ಪೆರ್ಗಡೆಯಾದ ಕೇಶವಭಟ್ಟಯ್ಯ ಇವರಿಬ್ಬರೊಡನೆ ವೀರಸೋಮೇಶ್ವರನ ಸಾಹಾಯಕನಾಗಿದ್ದನು (೧೧೮೫).

೪. ಮೇಲೆ ಹೇಳಿದ ತೇಜುಗಿಯ ಮಗನೂ ದಂಡನಾಯಕನೂ ಆದ ಭಾಯಿದೇವನು ಕುಂಡಿ ೩,೦೦೦ವನ್ನು ಆಳುತ್ತಿದ್ದನು (೧೧೮೬).

೫. ಮಹಾಮಂಡಲೇಶ್ವರ ಆಹವಮಲ್ಲ ಭೂತಿಗನ ಮಗನಾದ ಬರ್ಮನೆಂಬವನು ತೊರಗಲೆಯಲ್ಲಿದ್ದು ಲೋಕಾಪುರ ೧೨ನ್ನೂ, ಹೊಳಲುಗುಂಡ ೩೦ನ್ನೂ, ದೊಡ್ಡವಾಡ ಪಟ್ಟಣವನ್ನೂ, ನವಿಲುಗುಂದ ೪೦ನ್ನೂ, ತೊಳೆಲುನೂರು ೩೦ನ್ನೂ ಆಳುತ್ತಿದ್ದನು (೧೧೮೬).

೬. ಹಾನುಗಲ್ಲು ಕದಂಬ ಮನೆತನದ ಮಹಾಮಂಡಲೇಶ್ವರನಾದ ಕಾಮದೇವನು ಬನವಾಸಿ ೧೨,೦೦೦ವನ್ನೂ, ಪಾನುಗಲ್ಲ ೫೦೦ನ್ನೂ, ಪುಲಿಗೆರೆ ೩೦೦ನ್ನೂ ಆಳುತ್ತಿದ್ದನು (೧೧೮೯).

೭. ಗುತ್ತ ಮನೆತನದ ಮಹಾಮಂಡಲೇಶ್ವರನಾದ ೨ನೆಯ ವೀರವಿಕ್ರಮಾದಿತ್ಯನು ಗುತ್ತವೊಳಲಲ್ಲಿದ್ದು, ಬನವಾಸಿ ೧೨,೦೦೦ವನ್ನು ಆಳುತ್ತಿದ್ದನು (೧೧೮೮). ಬಾಸಿರಾಜನೆಂಬವನು ಇವನ ಮಹಾ ಪ್ರಧಾನನಾಗಿದ್ದನು.

ಹಾನುಗಲ್ಲಿನ ಈಶ್ವರನ ಗುಡಿಯಲ್ಲಿ ಕದಂಬ ಮಹಾಮಂಡಲೇಶ್ವರನಾದ ಕಾಮದೇವನ ಶಕ ೧೧೧೧ನೆಯ ಸೌಮ್ಯ ಸಂವತ್ಸರ ಉತ್ತರಾಯಣ ಸಂಕ್ರಾಂತಿಯು ಅಂದರೆ ೨೫ ದಶಂಬರ ೧೧೮೯ನೆಯ ಇಸ್ವಿಯ ಒಂದು ಶಿಲಾಲೇಖವಿರುತ್ತದೆ. ಇದೇ ಕಲ್ಯಾಣದ ಚಾಳುಕ್ಯ ಮನೆತನದ

ಸಾರ್ವಭೌಮತ್ವವನ್ನು ಸೂಚಿಸುವ ಕಟ್ಟಕಡೆಯ ಶಾಸನವೆಂದು ಹೇಳಬಹುದು. ಏಕಂದರೆ, ಅದೇ ತಿಥಿ(ಸೌಮ್ಯ ಸಂವತ್ಸರ ಉತ್ತರ ಸಂಕ್ರಾಂತಿ)ಯ ವಿಜಾಪುರ ಜಿಲ್ಲಾ ಮುತ್ತಿಗೆಯ ಶಿಲಾಲೇಖದಲ್ಲಿಯೂ, ಧಾರವಾಡ ಜಿಲ್ಲಾ ಅಣ್ಣಿಗೆರೆಯ ಶಿಲಾಲೇಖದಲ್ಲಿಯೂ ದೇವಗಿರಿ ಯಾದವ ಮನೆತನದ ಭಿಲ್ಲಮನು ಚಾಳುಕ್ಯ ಸಾಮ್ರಾಜ್ಯದ ಬಡಗಣ ಮತ್ತು ಮೂಡಣ ಪ್ರಾಂತಗಳನ್ನು ಹಿಡಿದುಕೊಂಡನೆಂದು ಬರೆದಿರುತ್ತದೆ. ಅದರಂತೆಯೇ ಶಕ ೧೧೧೯ ನೆಯ ಪರಿಧಾವಿ ಸಂವತ್ಸರ ಮಾರ್ಗಶೀರ್ಷ ಪುಷ್ಯಮಾಸಗಳ ಅಂದರೆ ೧೧೯೨ ನೆಯ ಇಸ್ವಿಯ ಧಾರವಾಡ ಜಿಲ್ಲಾ ಗದಗ ಬಳಗಾನೂರುಗಳ ಶಿಲಾಲೇಖದಲ್ಲಿಯೂ, ಮೈಸೂರು ಸಂಸ್ಥಾನ ಬಳಗಾವೆಯ ಶಿಲಾಲೇಖದಲ್ಲಿಯೂ ಹೊಯ್ಸಳ ೨ ನೆಯ ವೀರಬಲ್ಲಾಳನು ಸೋಮೇಶ್ವರನ ಸೇನಾಪತಿಯಾದ ಬ್ರಹ್ಮನನ್ನು ಪೂರ್ಣವಾಗಿ ಸೋಲಿಸಿ, ಚಾಳುಕ್ಯ ಸಾಮ್ರಾಜ್ಯದ ಎಲ್ಲ ತೆಂಕಣ ಪ್ರಾಂತಗಳನ್ನು ಕಸಿದುಕೊಂಡಿದ್ದನೆಂದು ಬರೆದಿದೆ. ಈ ಶಾಸನಗಳ ಆಧಾರದಿಂದ ೧೧೮೯ ನೆಯ ಇಸ್ವಿಯ ಕೊನೆಯಲ್ಲಿ ಹಾಸುಗಲ್ಲ ಕದಂಬರ ಪ್ರಾಂತದ ಹೊರತು ಉಳಿದ ಎಲ್ಲ ಚಾಳುಕ್ಯ ಸಾಮ್ರಾಜ್ಯವು ೪ ನೆಯ ಸೋಮೇಶ್ವರನ ಕಯ್ಬಿಟ್ಟಿತ್ತೆಂತಲೂ ಅವನು ಮುಂದೆ ಬಹಳ ದಿವಸ ಬಾಳಲಿಲ್ಲೆಂತಲೂ ಡಾ॥ ಫ್ಲೀಟರು ಊಹಿಸುತ್ತಾರೆ*.

೧೧೮೯ರಲ್ಲಿ ಇಷ್ಟು ವರ್ಷ ಅತಿವೈಭವದಿಂದ ನಮ್ಮ ತಾಯ್ನಾಡಿನಲ್ಲಿ ಮೆರೆದ ಚಾಳುಕ್ಯ ಸಾಮ್ರಾಜ್ಯವು ೨ ನೆಯ ಸಾರಿ ಅಳಿದರೂ ಚಾಳುಕ್ಯ ವಂಶವು ತೀರ ನಷ್ಟವಾಗಲಿಲ್ಲ. ಮುಂದೆ ೧೩ ನೆಯ ಮತ್ತು ೧೪ ನೆಯ ಶತಮಾನಗಳ ಶಿಲಾಲೇಖಗಳಲ್ಲಿ ಕೆಲ ಚಾಳುಕ್ಯರ ಹೆಸರುಗಳು ಕಂಡುಬರುತ್ತವೆ. ೧೨೫೦ರ ಸುಮಾರಕ್ಕೆ ಹೊಯ್ಸಳ ಮನೆತನದ ಅರಸನಾದ ವೀರಸೋಮೇಶ್ವರನು ಚಾಳುಕ್ಯ ಮನೆತನದ ದೇವಳ ಮಹಾದೇವಿ ಎಂಬವಳನ್ನು ಮದುವೆಯಾದನು. ಮುಂದೆ ಕಲ್ಯಾಣದ ಒಡೆಯನೆಂಬ ಬಿರುದುಳ್ಳ ಉತ್ತರ ಕೊಂಕಣದ ಮಹಾಮಂಡಲೇಶ್ವರನಾದ ಕಾಂವದೇವರಾಯನೆಂಬವನ ಮಹಾಮಾತ್ಯ ಮಹಾಜನಿಯಾದ

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೬೬.

ಕೇಶವನೆಂಬವನು ರತ್ನಾಗಿರಿ ಜಿಲ್ಲಾ ತೆರವಾಟಕ (ತೆರವಾನ) ಎಂಬ ಹಳ್ಳಿಯನ್ನು ಒಬ್ಬ ಬ್ರಾಹ್ಮಣನಿಗೆ ದಾನಕೊಟ್ಟನು (೧೨೬೦). ಈ ಕಾಂವ ದೇವರಾಯನು ದೇವಗಿರಿ ಯಾದವ ಅರಸನಾದ ಕೃಷ್ಣ ಅಥವಾ ರಾಮ ಚಂದ್ರನ ಮಹಾಮಂಡಲೇಶ್ವರನಾಗಿರಬಹುದೆಂದು ಡಾ॥ ಫ್ಲೀಟರು ಊಹಿಸುತ್ತಾರೆ*. ಕೊಲ್ಲಾಪುರದ ಅಂಬಾಭವಾನಿಯ ಗುಡಿಯಲ್ಲಿದ್ದ ಒಂದು ಶಿಲಾಲೇಖದಲ್ಲಿ ಕರ್ಣನೆಂಬವನ ಮಮ್ಮಗನೂ, ಎತುಗಿದೇವ ನೆಂಬವನ ಮಗನೂ ಆದ ಸೋವಂದೇವನು ತನ್ನ ಹೆಂಡತಿಯಾದ ಮಾಣಿಕ್ಯದೇವಿಯೊಡನೆ ರತ್ನಾಗಿರಿ ಜಿಲ್ಲಾ ಸಂಗಮೇಶ್ವರದಲ್ಲಿ ಆಳುತ್ತಿದ್ದನೆಂದು ಬರೆದಿದೆ. ಈ ಶಾಸನದಲ್ಲಿ ಕಾಲ ನಿರ್ದೇಶವಿಲ್ಲ. ಕಲ್ಯಾಣದ ಒಡೆಯನೆಂಬ ಬಿರುದುಳ್ಳ ಗೋವಿಂದರಾಯನ ಮಗನಾದ



ಹರಿಹರದ ಹರಿಹರೇಶ್ವರನ ಗುಡಿಯ ಮಹಾದ್ವಾರ

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೬೭.

ವೀರ ಸತ್ಯಾಶ್ರಯದೇವನೆಂಬವನು ಕಲ್ಯಾಣದಲ್ಲೇ ಸ್ವತಂತ್ರನಾಗಿ ಆಳುತ್ತಿದ್ದನೆಂದು ವಿರಜಿಯ ೧೩ನೆಯ ಅಥವಾ ೧೪ನೆಯ ಶತಮಾನದ ಶಿಲಾಲೇಖದಲ್ಲಿ ಬರೆದಿದೆ. ಅದೇ ಕಾಲದ ಬೆಂಗಳೂರಿನ ಒಂದು ಶಾಸನದಲ್ಲಿ ಕಲ್ಯಾಣದ ಒಡೆಯನಾದ ವೀರನೊಣಂಬನೆಂಬವನು ಅಲ್ಲಿ ಸ್ವತಂತ್ರನಾಗಿ ಆಳುತ್ತಿದ್ದನೆಂದು ಬರೆದಿದೆ. ಇದು ೧೩ನೆಯ ಅಥವಾ ೧೪ನೆಯ ಶತಮಾನದ ಶಾಸನವಾದರೂ ೪೪೪ನೆಯ ಇಸ್ವಿಯ ಶಾಸನವೆಂದು ಅದರಲ್ಲಿ ತಪ್ಪು ಲೇಖವಿದೆ. ಇವರೆಲ್ಲರು ಚಾಳುಕ್ಯ ಮನೆತನದವರಾಗಿದ್ದರೆಂಬುದಕ್ಕೆ ಸಂದೇಹವಿಲ್ಲದಿದ್ದರೂ ಇವರು ಯಾವ ಚಾಳುಕ್ಯ ಸಾರ್ವಭೌಮನ ವಂಶದವರಾಗಿದ್ದರೆಂಬುದು ಗೊತ್ತಾಗುವುದಿಲ್ಲ.

---

# ೬ನೆಯ ಅಧ್ಯಾಯ

## ದೇಶಕಾಲಸ್ಥಿತಿ

(ಶಕ ೮೯೫–೧೧೧೦ ; ಇಸ್ವಿ ೯೭೩–೧೧೮೯)

ಹಿಂದಿನ ೫ ಅಧ್ಯಾಯಗಳಲ್ಲಿ ನಮ್ಮ ತಾಯ್ನಾಡಿನ ರಾಜಕೀಯ ವರ್ಣನೆಯನ್ನು ಯಥಾಶಕ್ತಿ ಮಾಡಿರುತ್ತೇವಷ್ಟೇ. ಈ ಅಧ್ಯಾಯದಲ್ಲಿ ಅದರ ಮತ ಸಂಬಂಧಿಕ, ನೈತಿಕ, ಸಾಮಾಜಿಕ, ಔದ್ಯೋಗಿಕ, ಭಾಷಾತ್ಮಕ ಮುಂತಾದ ವರ್ಣನೆಯನ್ನು ಶಕ್ಯವಿದ್ದಷ್ಟು ಕೊಟ್ಟು ಈ ಭಾಗವನ್ನು ಮುಗಿಸುವೆವು.

ಈ ಕಾಲದೊಳಗೆ ಪ್ರಚಾರದಲ್ಲಿದ್ದ ಮತಗಳ ವಿಷಯವಾಗಿಯೂ ಸಾಮಾಜಿಕ ಸ್ಥಿತಿಯ ವಿಷಯವಾಗಿಯೂ ಡಾ॥ ಭಾಂಡಾರಕರರು ಬರೆಯುವುದೇನಂದರೆ :—

ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಅಂದರೆ ಶಕ ೮೯೫ ರಿಂದ ೧೧೧೦(೯೭೩–೧೧೮೮)ರ ವರೆಗೆ ಹಳೆ ಮತಗಳೂ ಹಳೆ ಸಾಮಾಜಿಕ ಸ್ಥಿತಿಯೂ ಇಲ್ಲದಂತೆ ಆಗಿ, ಹೊಸ ಮತಗಳೂ ಹೊಸ ವಿಚಾರಗಳೂ ಉದಯಕ್ಕೆ ಬಂದವು. ದಕ್ಷಿಣಾಪಥದಲ್ಲಿದ್ದ ಬೌದ್ಧ ಮತವು ಈ ಕಾಲಕ್ಕೆ ತೀರ ನಷ್ಟವಾಗಿ ಹೋದುದು ಮೊದಲನೆಯ ಸಂಗತಿಯಾಗಿತ್ತೆಂದು

ಹೇಳಬಹುದು. ತ್ರಿಭುವನಮಲ್ಲ ೨ನೆಯ (೬ನೆಯ) ವಿಕ್ರಮಾದಿತ್ಯನ ಆಳಿಕೆಯ ೧೯ನೆಯ ವರ್ಷದಲ್ಲಿ ಅಂದರೆ ಶಕ ೧೦೧೭ನೆಯ ಯುವ ಸಂವತ್ಸರದಲ್ಲಿ ೧೬ ಮಂದಿ ಪ್ರಮುಖರಾದ ವೈಶ್ಯರು ಒಟ್ಟುಗೂಡಿ ಧಾರವಾಡ ಜಿಲ್ಲಾ ಧರ್ಮವೊಳಲ(ಡಂಬಳ)ದಲ್ಲಿ ಒಂದು ಬೌದ್ಧವಿಹಾರವನ್ನು ಕಟ್ಟಿಸಿ, ಅದರ ಮತ್ತು ಲಕ್ಕುಂಡಿಯ ವಿಹಾರದ ಖರ್ಚಿಗಾಗಿ ಒಂದು ಹೊಲವನ್ನೂ ಕೆಲ ಹಣವನ್ನೂ ಕೊಟ್ಟರು. ಇದಲ್ಲದೆ ಶಕ ೧೦೩೨ (೧೧೧೦)ರಲ್ಲಿ ಕೊಲ್ಹಾಪುರದ ಶಿಲಾಹಾರ ಮನೆತನದ ಮಂಡಲೇಶ್ವರನು ಒಂದು ದೊಡ್ಡ ಕೆರೆಯನ್ನು ಕಡಿಸಿ, ಅದರ ಒಂಡೆಯ ಮೇಲೆ ಬುದ್ಧ ಶಿವ ಅರ್ಹತ ಈ ಮುವ್ವರ ಮೂರ್ತಿಗಳನ್ನು ಸ್ಥಾಪಿಸಿದನು. ಇದೇ ಕಾಲದಲ್ಲಿ ಲಿಂಗಾಯತ ಮತವು ಪ್ರಬಲವಾಗಿ ಜೈನ ಮತವನ್ನು ಕುಗ್ಗಿಸಿತು. ಆದ್ದರಿಂದ ಜೈನ ಮತವನ್ನು ಪೋಷಿಸಿದ ವ್ಯಾಪಾರಿಗಳು ಲಿಂಗಾಯತ ಮತವನ್ನು ಸ್ವೀಕರಿಸಿದರು. ಎಷ್ಟೋ ಜೈನ ಗುಡಿಗಳಲ್ಲಿ ಬ್ರಾಹ್ಮಣ ದೇವತೆಗಳು ಸ್ಥಾಪಿಸಲ್ಪಟ್ಟವೆಂಬ ಐತಿಹ್ಯವು ನಮ್ಮಲ್ಲಿ ಹಬ್ಬಿರುತ್ತದಷ್ಟೇ. ಈ ಬದಲಾವಣೆಯು ಇದೇ ಸುಮಾರಿನಲ್ಲಿ ಪ್ರಾರಂಭಿಸಿತೆಂದು ಹೇಳಬಹುದು.

ಇದೇ ಕಾಲದಲ್ಲಿ ಪೌರಾಣಿಕ ದೇವತೆಗಳ ಪೂಜೆಯು ಆರಂಭಿಸಿತು. ಬಾದಾಮಿ ಚಾಳುಕ್ಯರ ಕಾಲದಲ್ಲಿ ಯಜ್ಞಯಾಗಾದಿಗಳ ನೇಮಗಳು ಕ್ರಮಗೊಳಿಸಲ್ಪಟ್ಟಂತೆ ಈ ಕಾಲದಲ್ಲಿ ಬ್ರಾಹ್ಮಣರೂ ಅವರ ಅನುಯಾಯಿಗಳೂ ಧಾರ್ಮಿಕ ಮತ್ತು ಸಾಮಾಜಿಕ ನೇಮಗಳನ್ನು ಕ್ರಮಗೊಳಿಸಲಾರಂಭಿಸಿದರು. ಈ ವರೆಗೆ ಈ ನೇಮಗಳು ಪುರಾಣಗಳಲ್ಲಿಯೂ ಸ್ಮೃತಿಗಳಲ್ಲಿಯೂ ಬಿಡಿಬಿಡಿಯಾಗಿ ಹರವಿದ್ದವು, ಮತ್ತು ಒಂದಕ್ಕೊಂದು ವಿರುದ್ಧವಾಗಿದ್ದವು. ಈ ಕಾಲದಲ್ಲಿ ಕೆಲ ಪಂಡಿತರು ಹಿಂದಿನ ಸ್ಮೃತಿಗಳಿಗೆ ಟೀಕೆಯನ್ನು ಬರೆದು, ಈ ಅನ್ಯೋನ್ಯ ವಿರೋಧವನ್ನು ತೆಗೆದುಹಾಕಿದರು; ಮತ್ತೆ ಕೆಲವರು ಈ ನೇಮಗಳನ್ನೆಲ್ಲ ಒಟ್ಟುಗೂಡಿಸಿ ಅವುಗಳ ವಿರೋಧವನ್ನು ದೂರಮಾಡಿ ಹೊಸ ನಿಬಂಧಗಳನ್ನು ಬರೆದರು. ಈ ಕಾಲದ ಆದಿ ಭಾಗದಲ್ಲಿದ್ದ ಧಾರಾನಗರದ ಅರಸನಾದ **ಭೋಜನು** ಇಂತಹದೊಂದು ನಿಬಂಧವನ್ನು ಬರೆದನೆಂದು ಕಂಡುಬರುತ್ತದೆ. ಏಕೆಂದರೆ ಅವನ

ತರುವಾಯ ೨ನೆಯ (೬ನೆಯ) ವಿಕ್ರಮಾದಿತ್ಯನ ಆಶ್ರಯದಲ್ಲಿದ್ದ **ವಿಜ್ಞಾನೇಶ್ವರನು** ತನ್ನ ಧರ್ಮಶಾಸ್ತ್ರ ಗ್ರಂಥದಲ್ಲಿ ಧಾರೇಶ್ವರನ ಹೆಸರನ್ನು ಬರೆಯುತ್ತಾನೆ. ಉತ್ತರ ಕೊಂಕಣದ ಶಿಲಾಹಾರ ಮನೆತನದ ಅರಸನಾದ **ಅಪರಾರ್ಕನು** ಯಾಜ್ಞವಲ್ಕ್ಯಸ್ಮೃತಿಯ ಮೇಲೆ ಟೀಕೆಯನ್ನು ಬರೆದು ಆ ಗ್ರಂಥಕ್ಕೆ ಧರ್ಮಶಾಸ್ತ್ರನಿಬಂಧವೆಂಬ ಹೆಸರನ್ನು ಕೊಟ್ಟಿದ್ದಾನೆ. ಈ ಅಪರಾರ್ಕನು ಶಕ ೧೦೫೪ (೧೧೩೨) ಅಥವಾ ಶಕ ೧೧೦೪ (೧೧೮೨) ನೆಯ ಪ್ರಭವ ಸಂವತ್ಸರದಲ್ಲಿ ಇದ್ದನೆಂದು ತೋರುತ್ತದೆ. ಮುಂದೆ ೧೩ನೆಯ ಶತಮಾನದಲ್ಲಿ **ಹೇಮಾದ್ರಿಯೂ**



**ನಾಗ ನಾಗಿಣಿಯರ ಮೂರ್ತಿಗಳು**

೧೪ನೆಯ ಶತಮಾನದಲ್ಲಿ **ಸಾಯಣನೂ** ಈ ಕ್ರಮಗೊಳಿಸುವ ಕೆಲಸ ವನ್ನು ಮುಂದರಿಸಿದರು*.

ಪೂರ್ವಕಾಲದಲ್ಲಿ ನಮ್ಮ ತಾಯ್ನಾಡಿನೊಳಗೆ ಹಬ್ಬಿದ ಮತಗಳನ್ನು ಕುರಿತು ಲುಯಿರಾಯುಸರು ಬರೆಯುವುದೇನೆಂದರೆ:—

ಪ್ರಾಚೀನ ಕಾಲದಲ್ಲಿ ಕರ್ನಾಟಕದೊಳಗೆ ನಾಗರಹಾವಿನ ಪೂಜೆಯು ವಿಶೇಷವಾಗಿ ಹಬ್ಬಿತ್ತು. ಈಗಲಾದರೂ ದಕ್ಷಿಣ ಕರ್ನಾಟಕದ ಪ್ರತಿಯೊಂದು ಹಳ್ಳಿಯಲ್ಲಿ ಕಲ್ಲಿನಲ್ಲಿ ಕಟೆದ ನಾಗರಹಾವಿನ ಮೂರ್ತಿಗಳಿದ್ದು ಜನರು ಅವುಗಳನ್ನು ಪೂಜಿಸುತ್ತಾರೆ†. ಒಬ್ಬ ಸಾತವಾಹನ ಮನೆತನದ ಅರಸನ ಮಗಳ ಹೆಸರು ನಾಗಶ್ರೀಯಾಗಿತ್ತೆಂತಲೂ ಆಕೆಯು ಒಂದು ನಾಗನ ಮೂರ್ತಿಯನ್ನು ದಾನಕೊಟ್ಟಳೆಂತಲೂ ಬನವಾಸಿಯ ೨ನೆಯ ಶತಮಾನದ ಶಿಲಾಲೇಖದಲ್ಲಿ ಬರೆದಿದೆ. ಮೈಸೂರು ಸಂಸ್ಥಾನ ಸಿವಮೊಗ್ಗೆ ಜಿಲ್ಲಾ ಸಿಕಾರಪುರ ತಾಲೂಕಿಗೆ ಮೊದಲು ನಾಗರಖಂಡವೆಂಬ ಹೆಸರಿತ್ತು. ಮುಂದೆ ಮಂಡಲೇಶ್ವರರಾದ ಸೇಂದ್ರಕರೂ ಸಿಂದರೂ ಸೆನವಾರರೂ ಸಾಂತರೂ ನಾಗವಂಶದವರಾಗಿದ್ದರೆಂದು ಕಂಡು ಬರುತ್ತದೆ. ಚೋಳ ಅರಸನಾದ ರಾಜಾಧಿರಾಜನು ನಾಗವಂಶದ ಒಬ್ಬ ಅರಸುಕುವರಿಯನ್ನು ಮದುವೆಮಾಡಿಕೊಂಡಿದ್ದನು. ಮಹಾಭಾರತದ ಜನ್ಮೇಜಯರಾಯನು ಸರ್ಪಯಾಗವನ್ನು ಮಾಡಿದನು. ವಿಜಯನಗರದ ಸಾರ್ವಭೌಮನಾದ ೨ನೆಯ ಹರಿಹರನ ಕೀರ್ತಿಯನ್ನು ಪಾತಾಳ ಲೋಕದ ನಾಗಕನ್ನಿಕೆಯರು ಹೊಗಳಿದರೆಂದು ಮೈಸೂರು ಸಂಸ್ಥಾನ ಸೀರೆಯ ೯೫ನೆಯ ಸಂಬರಿನ ಶಾಸನವು ಹೇಳುತ್ತದೆ.

ನಮ್ಮ ತಾಯ್ನಾಡಿನಲ್ಲಿ ಬೌದ್ಧ ಮತವು ಎಂದೂ ಹೆಚ್ಚಾಗಿ ಹಬ್ಬಲಿಲ್ಲ. ಅದನ್ನು ಹಬ್ಬಿಸಲಿಕ್ಕೆ ಅಶೋಕನು ಮಾಡಿದ ಪ್ರಯತ್ನವು

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೨೨೮, ೨೨೯.

† ಉತ್ತರ ಕರ್ನಾಟಕದಲ್ಲಿ ಪ್ರತಿಯೊಬ್ಬ ಸಿರಿವಂತ ಬ್ರಾಹ್ಮಣನ ಮನೆಯ ಹಿತ್ತಲದೊಳಗೆ ಒಂದು ಕಲ್ಲಿನ ನಾಗರ ಮೂರ್ತಿಯಿರುತ್ತದೆ. ಅದನ್ನು ಹೆಂಗಸರು ಶ್ರಾವಣ ಶುದ್ಧ ಚೌತಿಯ ದಿವಸ ಪೂಜಿಸುತ್ತಾರೆ. ಮರುದಿವಸ ಮಣ್ಣಿನ ಮೂರ್ತಿಯನ್ನು ಗಂಡಸರು ಪೂಜಿಸುತ್ತಾರೆ.

ಯಶಸ್ವಿಯಾಗಲಿಲ್ಲ. ೧೦೫೫ ರಲ್ಲಿ ಒಂದು ಬೌದ್ಧವಿಹಾರವು ಮೈಸೂರು ಸಂಸ್ಥಾನ ಬಳಗಾವಿಯಲ್ಲಿ ಕಟ್ಟಲ್ಪಟ್ಟಿತೆಂದು ಸಿಕಾರಪುರದ ೧೭೦ ನೆಯ ನಂಬರಿನ ಶಾಸನದಲ್ಲಿ ಬರೆದಿದೆ.

ಜೈನ ಮತವು ಮಾತ್ರ ನಮ್ಮ ತಾಯ್ನಾಡಿನಲ್ಲಿ ೩ ನೆಯ ಶತಮಾನಕ್ಕಿಂತ ಮೊದಲೇ ಬೇರೂರಿ ಪ್ರಬಲವಾಗುತ್ತ ನಡೆಯಿತು. ೨ನೆಯ ಶತಮಾನದಲ್ಲಿ ಸಮಂತಭದ್ರನು ಜೈನ ಮತವನ್ನು ಕರ್ನಾಟಕದಲ್ಲಿ ಬಹಳವಾಗಿ ಬೆಳಿಸಿದನು. ಮುಂದೆ ೮ ನೆಯ ಮತ್ತು ೯ ನೆಯ ಶತಮಾನಗಳಲ್ಲಿ ಅಕಲಂಕನು ಕಂಚಿಯಲ್ಲಿ ಬೌದ್ಧರನ್ನು ಸೋಲಿಸಿದ್ದರಿಂದ ಅವರು ಸಿಂಹಳದ್ವೀಪಕ್ಕೆ ಹೊರಟುಹೋದರೆಂದು ಶ್ರವಣಬೆಳ್ಗೊಳದ ೫೪ ನೆಯ ನಂಬರಿನ ಶಾಸನದಲ್ಲಿ ಬರೆದಿದೆ. ಗಂಗರೂ, ರಾಷ್ಟ್ರಕೂಟರೂ, ಕಳಚುರಿಯರೂ, ಆರಂಭದ ಹೊಯ್ಸಳರೂ, ಪುನ್ನಾಟರೂ, ಶಾಂತರರೂ, ಚಂಗಾಲ್ವರೂ, ಕೊಂಗಾಲ್ವರೂ ಈ ಮತಕ್ಕೆ ಹೆಚ್ಚುಕಡಮೆ ಪ್ರಮಾಣದಿಂದ ಆಶ್ರಯಕೊಟ್ಟರು. ಮುಂದೆ ೧೦೦೪ ರಲ್ಲಿ ಚೋಳರು ಕರ್ನಾಟಕದ ಕೆಲಭಾಗವನ್ನು ಗೆದ್ದುದರಿಂದಲೂ, ೧೧೧೭ ರಲ್ಲಿ ಹೊಯ್ಸಳ ಅರಸನು ವಿಶಿಷ್ಟಾದ್ವೈತ ಮತವನ್ನು ಸ್ವೀಕರಿಸಿದ್ದರಿಂದಲೂ, ೧೧೬೭ ರಲ್ಲಿ ಕಳಚುರಿ ಅರಸನ ಕೊಲೆಯಾದ್ದರಿಂದಲೂ ಜೈನ ಮತವು ಬಹಳವಾಗಿ ಕಳೆಗುಂದಿತು. ಆದ್ದರಿಂದ ನಿರಾಶ್ರಿತರಾದ ಜೈನರು ಶಿವ ಬ್ರಹ್ಮ ವಿಷ್ಣು ಬುದ್ಧರಂತೆ ತಮ್ಮ ಜಿನನು ಸರ್ವವ್ಯಾಪಿಯಾದ ದೇವರೆಂದು ಹೇಳತೊಡಗಿದರೆಂದು ೧೧೫೧ ನೆಯ ಇಸ್ವಿಯ ತುಮಕೂರಿನ ೯ ನೆಯ ಶಾಸನದಲ್ಲಿ ಬರೆದಿದೆ. ಈ ಮಾರ್ಪಾಡಿನ ಮೂಲಕ ಸಣ್ಣ ದೊಡ್ಡ ಅರಸರು ಮಾಹೇಶ್ವರೀ, ಜೈನ, ಬೌದ್ಧ, ವೈಷ್ಣವ ಈ ನಾಲ್ಕೂ ಪಂಥದವರಿಗೆ ಆಶ್ರಯ ಕೊಡಲಾರಂಭಿಸಿದರು..........

ಪ್ರಾಚೀನ ಕಾಲದಲ್ಲಿ **ಶಿವನೇ** ಬ್ರಾಹ್ಮಣರ ಮುಖ್ಯ ದೇವನಾಗಿದ್ದನು. ವಾಮನಾವತಾರವಾದ ಬಳಿಕ ಕೆಲವರು ಶಿವನನ್ನೂ ಮತ್ತು ಕೆಲವರು ವಿಷ್ಣುವನ್ನೂ ಪೂಜಿಸತೊಡಗಿದರು. ಮುಂದೆ ಈ ಭೇದಭಾವವು ಅಳಿದು ಹೋಗಿ, ಶಿವ ವಿಷ್ಣು ಇವರಿಬ್ಬರು ಒಂದೇ ಎಂತಲೂ ಶಿವನ ರೂಪವನ್ನು ವಿಷ್ಣುವೂ ವಿಷ್ಣುವಿನ ರೂಪವನ್ನು ಶಿವನೂ

ಧರಿಸುತ್ತಾನೆಂಬ ತಿಳಿವಳಿಕೆಯು ಜನರಲ್ಲಿ ಹಬ್ಬಿದ್ದರಿಂದ **ಹರಿಹರೇಶ್ವರನ** ಮೂರ್ತಿಗಳು ಅಲ್ಲಲ್ಲಿ ತಲೆದೋರಲಾರಂಭಿಸಿದವು*. ಮುಂದೆ ದೇವರ ಏಕರೂಪತೆಯ ವಿಚಾರವು ದಿನ ದಿನಕ್ಕೆ ಹೆಚ್ಚೆಚ್ಚು ಬೆಳೆದು, ಬೇರೆ ಬೇರೆ ಮತದವರು ಹೇಳುವ ಹೆಸರುಗಳು ಒಬ್ಬ ದೇವರವೇ ಇರುತ್ತವೆಂಬ ತಿಳಿವಳಿಕೆಯು ಜನರಲ್ಲಿ ಹಬ್ಬಿತೆಂದು ಕಂಡುಬರುತ್ತದೆ. ಏಕೆಂದರೆ ಮೈಸೂರು ಸಂಸ್ಥಾನ ಬೇಲೂರಿನ ಒಂದು ೧೪ನೆಯ ಶತಮಾನದ



ಬೇಲೂರ ಚನ್ನಕೇಶವನ ಗುಡಿ

---

* ಶಕ ೧೦೪೫ರ ಹರಿಹರದ ಒಂದು ಶಾಸನವು ಹರಿಹರೇಶ್ವರನನ್ನು ಕೆಳಗೆ ಬರೆದಂತೆ ವರ್ಣಿಸುತ್ತದೆ:—

ಹರಿಯಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಳ್ವರ್ಕೆಲಂಬರ್ ಹರನಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಳ್ವರ್ಕೆಲಂಬರ್ನರರಾ ಸಂದೇಹಮಂ ಪಿಂಗಿಸಲತಿಶಯದಿಂ ಕೂಡಲೂರಲ್ಲಿ ಶೋಭಾಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ ಕೂರ್ತು ರಕ್ಷಿಕ್ಕೆ ಸಮ್ಮಂ|ಸಂದ ಶಿವಂಗೆ ವಿಷ್ಣುರೂಪಮದಾದುದು ವಿಷ್ಣುವಿಂಗೆ ಪೆಂಪೊಂದಿ ಸೆಗಳೆ ಪೆತ್ತ ಶಿವರೂಪಮದಾದುದು ವೇದವಾಕ್ಯದಿಂದೆಂದದನೆಯೆ ನಿಶ್ಚಯಿಸುವಂತಿರೆ ಕೂಡಲೊಳೇಕಮೂರ್ತಿಯಿಂ ನಿಂದ ಜಗಂನುತಂ ಹರಿಹರಂ ಪರಿರಕ್ಷಿಸುತಿರ್ಕೆ ಧಾತ್ರಿಯಂ ||

ಕೊನೆಯ ಶಾಸನದಲ್ಲಿ ಭಿನ್ನ ಮತದವರು ಹೇಳುವ ದೇವರ ಹೆಸರುಗಳು ಒಬ್ಬ ದೇವನವೇ ಇರುತ್ತವೆಂದು ಸ್ಪಷ್ಟವಾಗಿ ಬರೆದಿದೆ*.

**ಲಕುಳೀಶ**ನೆಂಬ ಒಬ್ಬ ಮಹಾಸಾಧುವು ಕ್ರಿಸ್ತ ಶಕದ ೧ನೆಯ ಶತಮಾನದಲ್ಲಿ ಶೈವಮತೋಪದೇಶಕನಾಗಿದ್ದನು. ಇವನಾಗಲಿ ಇವನ ಶಿಷ್ಯನಾಗಲಿ ಎಂದು ಮೈಸೂರು ಸಂಸ್ಥಾನ ಬಳಗಾವಿಯಲ್ಲಿ ತಳವೂರಿದ ನೆಂಬುದು ಗೊತ್ತಾಗುವುದಿಲ್ಲ. ಇವನ ಮತಗ್ರಂಥಕ್ಕೆ ಲಾಕುಳಾಗಮ, ಲಾಕುಳಾಮ್ನಾಯ, ಲಾಕುಳಸಮಯ ಎಂಬ ಹೆಸರುಗಳಿದ್ದವು. ೧೦, ೧೧, ೧೨ನೆಯ ಶತಮಾನಗಳಲ್ಲಿ ನಮ್ಮ ತಾಯ್ನಾಡಿನೊಳಗೆ ಈ ಮತವು ವಿಶೇಷವಾಗಿ ಪ್ರಬಲವಾಯಿತು. ಮೈಸೂರು ಸಂಸ್ಥಾನ ಸಿಕಾರಪುರದ ಅಯ್ದಾರು ಶಾಸನಗಳು ಬಲ್ಲಿಗಾವೆಯ ಕೇದಾರೇಶ್ವರನ ಮಾಹಾತ್ಮ್ಯವನ್ನೂ ಕೇದಾರೇಶ್ವರ ಮಠದ ಮುಖ್ಯಸ್ಥರ ಪಾಂಡಿತ್ಯ ತಪೋಬಲಗಳನ್ನೂ ವರ್ಣಿಸುತ್ತವೆ. ೧೨ನೆಯ ಶತಮಾನದ ಮಧ್ಯಭಾಗ ದಲ್ಲಿ ಕೇದಾರೇಶ್ವರ ಮಠದ ಗುರುವಾಗಿದ್ದ ವಾಮಶಕ್ತಿ ಯತಿಯು ರಾಜಗುರುದೇವನಾಗಿದ್ದನೆಂತಲೂ ಅವನ ವಿದ್ವತ್ತೆಗೂ ತಪೋಬಲಕ್ಕೂ ಜನರು ಮೆಚ್ಚಿದ್ದರೆಂತಲೂ ಸಿಕಾರಪುರದ ೯೨ನೆಯ ಮತ್ತು ೯೬ ನೆಯ ಶಾಸನಗಳಲ್ಲಿ ಬರೆದಿದೆ. ಈ ಮತದ ಯತಿಗಳ ಹೆಸರಿನ ಮುಂದೆ ಶಕ್ತಿ ಶಬ್ದವು ಯಾವಾಗಲೂ ಇರುತ್ತದೆ. ಪಾಶುಪತ ಮತವೂ ಕಾಲಾ ಮುಖ ಮತವೂ ಈ ಲಾಂಗುಳೀಶ್ವರ ಮತದ ಶಾಖೆಗಳಾಗಿದ್ದವೆಂದು ರಾಯಸ ಸಾಹೇಬರು ಅಭಿಪ್ರಾಯಪಡುತ್ತಾರೆ†.

ಶ್ರೀಮಚ್ಛಂಕರಾಚಾರ್ಯರು ಸ್ಥಾಪಿಸಿದ ಶೃಂಗೇರಿಯ ಅದ್ವೈತ ಮಠವು ಈ ಕಾಲದಲ್ಲಿ ಯಥಾಪ್ರಕಾರವಾಗಿ ನಡೆದಿತ್ತು. ೧೧ನೆಯ ಶತಮಾನದಲ್ಲಿ ವಿಶಿಷ್ಟಾದ್ವೈತಮತವೂ ೧೨ನೆಯ ಶತಮಾನದಲ್ಲಿ

---

* ಯಂ ಶೈವಾ ಸಮುಪಾಸತೆ ಶಿವ ಇತಿ ಬ್ರಹ್ಮೇತಿ ವೇದಾಂತಿನೋ।
ಬೌದ್ಧಾಬುದ್ಧ ಇತಿ ಪ್ರಮಾಣಪಟವಾಃ ಕರ್ತೇತಿ ನೈಯ್ಯಾಯಿಕಾಃ ॥
ಅರ್ಹಶ್ಚೇತಿ ಜೈನಶಾಸನಮತಿಃ ಕರ್ಮೇತಿ ಮಿಮಾಂಸಕಾಃ।
ಸೋಯಂವೋ ವಿದಧಾತು ವಾಂಛಿತಫಲಂ ಶ್ರೀ ಕೇಶವೇಶಃ ಸದಾ ॥

† ಶಾಸನಗಳಿಂದ ಗೊತ್ತಾಗುವ ಮೈಸೂರು ಕೊಡಗು ಪ್ರಾಂತಗಳು, ಪುಟ ೨೦೬.

ಜಂಗಮ, ಶಿವಾಚಾರ ಅಥವಾ ಲಿಂಗಾಯತ ಮತವೂ ತಲೆದೋರಿದವು. ವಿಶಿಷ್ಟಾದ್ವೈತ ಮತಸ್ಥಾಪಕರಾದ ಶ್ರೀಮದ್ರಾಮಾನುಜಾಚಾರ್ಯರು ಹೊಯ್ಸಳ ಅರಸನಾದ ಬಿಟ್ಟಿದೇವನನ್ನು ತಮ್ಮ ಮತಾನುಯಾಯಿಯಾಗಿ ಮಾಡಿಕೊಂಡು, ಕಾವೇರೀ ತೀರದಲ್ಲಿದ್ದ ಅಷ್ಟಗ್ರಾಮಗಳನ್ನು ಉಂಬಳಿಯಾಗಿ ಪಡೆದು, ಮೇಲುಕೋಟೆಯಲ್ಲಿ ಯತಿರಾಜ ಮಠವನ್ನು ಸ್ಥಾಪಿಸಿ, ತಮ್ಮ ಮತವನ್ನುಪದೇಶಿಸಲಿಕ್ಕೆ ತಮ್ಮ ೫೨ ಮಂದಿ ಶಿಷ್ಯರಿಗೆ ಹೇಳಿದರು. ವೀರಶೈವ ಮತೋದ್ಧಾರಕನಾದ ಬಸವೇಶ್ವರನು ಸಾರ್ವಭೌಮನಾದ ಬಿಜ್ಜಳನ ಮಂತ್ರಿಯಾದ್ದರಿಂದ ಅವನು ತನ್ನ ಅಧಿಕಾರ ಸಂಪತ್ತುಗಳನ್ನು ಲಿಂಗಾಯತ ಮತವನ್ನು ಹಬ್ಬಿಸಲಿಕ್ಕೆ ಉಪಯೋಗಿಸಿದನು. ಈ ಎರಡು ಹೊಸ ಮತಗಳ ಅಪ್ಪಳಿಕೆಯಿಂದ ಜೈನಮತವು ಸೊರಗಿ ಕಡ್ಡಿಯಾಯಿತು*.

ಈ ಕಾಲದಲ್ಲಿ ವಾಜಪೇಯ ಅಗ್ನಿಷ್ಟೋಮ ಯಜ್ಞಗಳು ನಾಮಶೇಷವಾಗಿದ್ದವು. ಕಲ್ಯಾಣದ ಚಾಳುಕ್ಯ ಸಾರ್ವಭೌಮರೊಳಗೆ ಒಬ್ಬನಾದರೂ ಅಶ್ವಮೇಧ ಯಜ್ಞವನ್ನು ಮಾಡಲಿಲ್ಲ. ಆದರೆ ಚೋಳ ಅರಸನಾದ ರಾಜಾಧಿರಾಜನು ೧೧ ನೆಯ ಶತಮಾನದಲ್ಲಿ ಒಂದು ಅಶ್ವಮೇಧ ಯಜ್ಞವನ್ನು ಮಾಡಿದನೆಂದು ಬೆಂಗಳೂರು ಜಿಲ್ಲಾ ದೇವನಹಳ್ಳಿಯ ೭೫ ನೆಯ ನಂಬರಿನ ಶಾಸನದಲ್ಲಿ ಬರೆದಿದೆ.

**ರಾಜ್ಯಭಾರಕ್ರಮ**—ಪ್ರಜೆಗಳನ್ನು ಮಕ್ಕಳಂತೆ ಪಾಲಿಸುವುದೇ ಪ್ರಾಚೀನ ಕಾಲದಿಂದ ನಮ್ಮ ಅರಸರ ಮುಖ್ಯ ಧ್ಯೇಯವಾಗಿತ್ತು. ೧೧ ನೆಯ ಮತ್ತು ೧೨ ನೆಯ ಶತಮಾನಗಳ ಶಾಸನಗಳಲ್ಲಿ ಸಾರ್ವಭೌಮರೂ ಅರಸರೂ ಮಂಡಲೇಶ್ವರರೂ ಸಾಮಂತರೂ ದುಷ್ಟನಿಗ್ರಹ ಶಿಷ್ಟಪರಿಪಾಲನವನ್ನು ಮಾಡುತ್ತ ಸುಖಸಂಕಥಾವಿನೋದದಿಂದ ರಾಜ್ಯವಾಳುತ್ತಿದ್ದರೆಂದು ಬರೆದಿದೆ. ಮೊದಲು ಪ್ರಧಾನ, ದಂಡನಾಯಕ, ಭಂಡಾರಿ ಎಂಬ ಮೂರು ಮಂದಿ ಮಂತ್ರಿಗಳು ಮಾತ್ರ ಇದ್ದರು.

* ಈ ಎರಡು ಮತಗಳ ವಿಷಯವಾಗಿದ್ದ ಹೆಚ್ಚಿನ ಸಂಗತಿಗಳನ್ನು ತಿಳಿಕೊಳ್ಳಲಿಚ್ಛಿಸುವವರು 'ಧರ್ಮಸ್ಥಾಪಕರೂ ಧರ್ಮಸುಧಾರಕರೂ' ಎಂಬ ಪುಸ್ತಕವನ್ನು ನೋಡಬಹುದು. ಪುಟ ೨೯—೩೮, ೪೪—೫೧.

ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಇವರ ಸಂಖ್ಯೆಯು ಎಂಟಕ್ಕೆ ಬಂತು. ಮಹಾಪ್ರಧಾನ, ಹಿರಿ ಸಂಧಿವಿಗ್ರಹಿ, ಸೇನಾಧಿಪತಿ, ಕಡಿತವೆರ್ಗಡೆ, ಮನೆವೆರ್ಗಡೆ, ವಿದ್ಯಾಪತಿ, ಅಂತಃಪುರಾಧ್ಯಕ್ಷ, ಹಿರಿಲಾಳ ಕನ್ನಡ ಸಂಧಿ ವಿಗ್ರಹಿ, ಬಾಣಸವೆಗ್ಗಡೆ, ಕನ್ನಡ ಸಂಧಿವಿಗ್ರಹಿ—ಮುಂತಾದ ರಾಜಾಧಿ ಕಾರಿಗಳೂ ರಾಜಸಭೆಯನ್ನು ಅಲಂಕರಿಸುತ್ತಿದ್ದುದಲ್ಲದೆ ಸಾಮ್ರಾಜ್ಯ ಪ್ರಜಾಪಾಲನ ಕಾರ್ಯದಲ್ಲಿ ಸಾರ್ವಭೌಮರಿಗೆ ನೆರವಾಗುತ್ತಿದ್ದರು. ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಭೂಮಿಯ ತೆರಿಗೆಯ ಹೊರತು ಸುಂಕಗಳಿಂದ ಹಣವು ಭಾಂಡಾರಕ್ಕೆ ಬರುತ್ತಿತ್ತು. ವಡ್ಡರಾವುಳ, ಮೇಲ್ಪಟ್ಟೆಯ ವಡ್ಡರಾವುಳ, ಪೆಜ್ಜುಂಕ, ಪನ್ನಾಯ, ಅಚ್ಚುಪನ್ನಾಯ —ಮುಂತಾದ ಸುಂಕಗಳ ಪ್ರಕಾರವಾಗಲಿ ಎತ್ತುವ ಕ್ರಮವಾಗಲಿ ಗೊತ್ತಾಗುವುದಿಲ್ಲ.

೬ ನೆಯ ವಿಕ್ರಮಾದಿತ್ಯನ ಮತ್ತು ಅವನ ಮಗನ ಆಳಿಕೆಯಲ್ಲಿ ಸಾಮ್ರಾಜ್ಯದೊಳಗೆ ಸುಖಶಾಂತತೆಗಳು ಹಬ್ಬಿದ್ದವು. ಅರಿನೃಪರ ದಾಳಿಗಳಾಗಲಿ ವಿಜಯದಂಡಯಾತ್ರೆಗಳಾಗಲಿ ಮಂಡಲೇಶ್ವರರ ಬಂಡಾಯಗಳಾಗಲಿ ಇದ್ದಿದ್ದಿಲ್ಲ. ಕಳವು ಕೊಲೆ ಸುಲಿಗೆ ಬಡಿದಾಟಗಳ ಸುದ್ದಿಯೇ ಇದ್ದಿಲ್ಲ. ಪ್ರಜೆಗಳು ತಂತಮ್ಮ ಮನೆಗಳ ಕಿಡಿಕೆ ಬಾಗಿಲು ಗಳನ್ನು ತೆರೆದಿಟ್ಟು ನಿಶ್ಚಿಂತರಾಗಿ ಮಲಗುತ್ತಿದ್ದರೆಂದು ಬಿಹ್ಲಣ ಕವಿಯು ಬರೆಯುತ್ತಾನೆ*.

**ಸಾಮಾಜಿಕ ಸ್ಥಿತಿ**—ಈ ಕಾಲದಲ್ಲಿ ಬ್ರಾಹ್ಮಣರು ಲಿಂಗಾಯತ ರಾಗುತ್ತಿದ್ದರು, ಜೈನಬೌದ್ಧರು ಬ್ರಾಹ್ಮಣರಾಗುತ್ತಿದ್ದರು. ಅದ್ವೈತರು ವಿಶಿಷ್ಟಾದ್ವೈತಿಗಳೂ ಪಾಶುಪತ ಮತಸ್ಥರೂ ಆಗುತ್ತಿದ್ದರು. ಈ ಷಣ್ಮತಸ್ಥರೊಳಗೆ ಆ ಕಾಲಕ್ಕೆ ಊಟದ ವ್ಯವಹಾರವಾಗಲಿ ಮದು ವೆಯ ಸಂಬಂಧವಾಗಲಿ ನಡೆಯುತ್ತಿದ್ದಿಲ್ಲೆಂದು ಹೇಳಲಿಕ್ಕೆ ನಮಗೆ ಆಧಾರವೇನೂ ಇಲ್ಲ. ಭಿನ್ನಮತದವರೊಳಗೆ ಮದುವೆಯಾದಾಗ

---

* ಜನೈರವಜ್ಞಾತಕವಾಟಮುದ್ರೈಃ ಕ್ಷಪಾಸುರಕ್ಷಾವಿಮುಖೈರಸುಪ್ಯತ್ ।
**ಕರಾ ವಿಶಂತಿ ಸ್ಮ ಗವಾಕ್ಷವರ್ತ್ಮಸು ಕ್ಷಪಾಪತೇಶ್ಛಿದ್ರಪಥೈರ್ನ ತಸ್ಕರಾಃ ॥**
— ವಿಕ್ರಮಾಂಕದೇವ ಚರಿತ

ಹೆಂಡತಿಯು ಗಂಡನ ಮತವನ್ನು ಸ್ವೀಕರಿಸುತ್ತಿದ್ದಳೋ ಇಲ್ಲೋ ಗೊತ್ತಾಗುವುದಿಲ್ಲ.

ಈ ಕಾಲದಲ್ಲಿ ನಮ್ಮ ತಾಯ್ನಾಡಿನ ಹೆಂಗಸರು ಶಕ್ತಿವಂತರೂ ಕಲಿತವರೂ ಹೆಚ್ಚು ಸ್ವಾತಂತ್ರ್ಯವುಳ್ಳವರೂ ಆಗಿದ್ದರು. ೬ನೆಯ ವಿಕ್ರಮಾದಿತ್ಯನ ಆಶ್ರಯದಲ್ಲಿದ್ದ ಕಾಶ್ಮೀರದೇಶದ ಪ್ರಸಿದ್ಧ ಕವಿಯಾದ ಬಿಹ್ಲಣನು ಕರ್ನಾಟಕದ ಹೆಂಗಸರು ಚೆಲುವೆಯರು ಆಗಿದ್ದರೆಂದು ಬರೆಯುತ್ತಾನೆ*. ಚಾಳುಕ್ಯ ಸಾರ್ವಭೌಮರ ಅಕ್ಕತಂಗಿಯಂದಿರೂ ರಾಣಿಯರೂ ಬೇರೆ ಬೇರೆ ಪ್ರಾಂತಗಳ ಮಂಡಲೇಶ್ವರಿಯರಾಗಿ ಆಳಿದ ಉದಾಹರಣೆಗಳು ಹಲವು ದೊರೆಯುತ್ತವೆ. ೨ನೆಯ ಜಯಸಿಂಹನ ಅಕ್ಕನಾದ **ಅಕ್ಕಾದೇವಿಯು** ಕಿಸುಕಾಡು ೭೦ರ ಮಹಾಮಂಡಲೇಶ್ವರಿಯಾಗಿ ಎಷ್ಟೋ ದಿವಸ ಆಳಿದಳು. ಈಕೆಯು ಒಮ್ಮೆ ಬಂಡುಗಾರನಾದ ಗೋಕಾವಿಯ ಕೊತವಾಲನ ಮೇಲೆ ದಂಡೆತ್ತಿಹೋಗಿ ಅವನನ್ನು ಮುರಿಬಡಿದಳು (೧೦೪೭). ವಿಜಾಪುರ ಜಿಲ್ಲಾ ಹುನಗುಂದ ತಾಲೂಕು **ಅರಸಿಬೀದಿ**(ವಿಕ್ರಮಪುರ)ಯೇ ಈಕೆಯ ರಾಜಧಾನಿಯಾಗಿತ್ತು. ಮೊದಲನೆಯ ಸೋಮೇಶ್ವರನ ರಾಣಿಯರಾದ **ಮೈಲಾಲದೇವಿ, ಕೇತಲದೇವಿ, ಹೊಯ್ಸಳದೇವಿ** ಈ ಮುವ್ವರು ಬನವಾಸಿ, ಪೊನ್ನವಾಡ, ಕಲ್ಯಾಣ ಪ್ರಾಂತಗಳನ್ನು ಅನುಕ್ರಮವಾಗಿ ೧೦೫೩, ೧೦೫೪ನೆಯ ಇಸ್ವಿಗಳಲ್ಲಿ ಆಳುತ್ತಿದ್ದರು. ೬ನೆಯ ವಿಕ್ರಮಾದಿತ್ಯನ ಕೆಲ ರಾಣಿಯರು ಬೇರೆ ಬೇರೆ ಊರುಗಳಲ್ಲಿ ಆಳುತ್ತಿದ್ದರೆಂದು ಅವನ ಚರಿತ್ರದಲ್ಲಿ ಬರೆದಿದ್ದೇವೆ.

೧೨ನೆಯ ಶತಮಾನದಲ್ಲಿ ನಮ್ಮ ತಾಯ್ನಾಡಿನಲ್ಲಿ ಸ್ತ್ರೀ ವಿದ್ಯಾಭ್ಯಾಸವು ಪ್ರಬಲವಾಗಿತ್ತೆಂದು ತೋರುತ್ತದೆ. ಹೊಯ್ಸಳ ಅರಸರೂ

---

* ಸಾಮಾಸೋರ್ವೀಪತಿಷು ವಿಮುಖಃ ಶೇಖರೋಸೌ ಬುಧಾನಾಂ।
ಯಾತಸ್ತಸ್ಯಾಂ ಕಕುಭಿಶನಕೈಃ ಕೌತುಕೀ ದಕ್ಷಿಣಸ್ಯಾಂ॥
ಯಲ್ಲೀಲಾಕ್ಷಿಕುಚತಟಭುವಾಂ ಬ್ರೂಮಹೆ ಕಿಂ ಗುರುತ್ವಂ।
ಯಾಸಾಂ ಶಿಷ್ಯಸ್ತ್ರಿಬುವನ ವಿಜಯಿಾ ಜೃಂಭತೆ ಪಂಚಬಾಣಃ॥
—ವಿ.ಚ., ಸಂ. ೧೮, ಶ್ಲೋ. ೧೦೧

ಬಸವನ ಅನುಯಾಯಿಗಳಾದ ವೀರಶೈವರೂ ಈ ವಿದ್ಯಾಭ್ಯಾಸಕ್ಕೆ ಹೆಚ್ಚು ಉತ್ತೇಜನಕೊಟ್ಟರು. **ಕಂತಿ**ಯೆಂಬ ಹೆಸರುವಾಸಿಯಾದ ಕಬ್ಬಿಗಿತಿಯು ಹೊಯ್ಸಳ ಬಲ್ಲಾಳರಾಜನ ಆಸ್ಥಾನದಲ್ಲಿದ್ದಳು. ಬಸವೇಶ್ವರನ ಹೆಂಡತಿಯಾದ **ನೀಲಮ್ಮ,** ಅಕ್ಕಗಳ ಪೀಠಿಕೆಯನ್ನು ಬರೆದ **ಮಹಾದೇವಿಯಕ್ಕ,** ಮೋಳಿಗೆಯ ಮಾರಯ್ಯನ ಹೆಂಡತಿಯಾದ **ಮಹಾದೇವಿ**—ಮುಂತಾದವರು ವಚನಗಳನ್ನು ಬರೆದಿರುತ್ತಾರೆ.

೨ನೆಯ ಸೋಮೇಶ್ವರನ ಆಳಿಕೆಯಲ್ಲಿ ನಮ್ಮ ತಾಯ್ನಾಡಿನೊಳಗೆ ೧೮ ಅಗ್ರಹಾರಗಳಿದ್ದವೆಂತಲೂ ಅವುಗಳನ್ನು ಗಂಗಮನೆತನದ ಉದಯಾದಿತ್ಯನೆಂಬುವನು ಆಳುತ್ತಿದ್ದನೆಂತಲೂ ಹಿಂದೆ ಬರೆದಿರುತ್ತೇವಷ್ಟೇ. ಈ ೧೮ ಅಗ್ರಹಾರಗಳು ಯಾವವೆಂಬುದು ಇನ್ನೂ ಗೊತ್ತಾಗಿಲ್ಲ. ಧಾರವಾಡ ಜಿಲ್ಲೆಯಲ್ಲಿ ಹೂಲಿ, ನರಗುಂದ, ಡಂಬಳ ಈ ಮೂರು ಊರುಗಳಲ್ಲಿ ಅಗ್ರಹಾರಗಳಿದ್ದವೆಂದು ಡಾ॥ ಫ್ಲೀಟರು ಬರೆಯುತ್ತಾರೆ*. ವಿಜಾಪುರ ಜಿಲ್ಲೆಯೊಳಗೆ ಅಯ್ಹೊಳೆ ಹೊನ್ನವಾಡ ಸಯ್ಯಡಿಗಳಲ್ಲಿಯೂ ಮೈಸೂರು ಸಂಸ್ಥಾನದಲ್ಲಿ ಬಲ್ಲಿಗಾವೆ, ಶ್ರಿಂಗೇರಿ, ಅರಸಿಕೆರೆ, ನಗರಹಳ್ಳಿ (ದಾಮೋದರ ಅಗ್ರಹಾರ), ತಾಲುಗುಂಡಗಳಲ್ಲಿಯೂ ಅಗ್ರಹಾರಗಳಿದ್ದವೆಂದು ಕಂಡುಬರುತ್ತದೆ. ಉಳಿದ ಎಂಟು ಅಗ್ರಹಾರಗಳು ಎಲ್ಲಿದ್ದವೆಂಬುದು ಇನ್ನೂ ನಿಶ್ಚಯವಾಗಿ ಗೊತ್ತಾಗಿಲ್ಲ.

೧೧ನೆಯ ಮತ್ತು ೧೨ನೆಯ ಶತಮಾನಗಳಲ್ಲಿ ನಮ್ಮ ತಾಯ್ನಾಡಿನಲ್ಲಿ ವಿಶೇಷವಾಗಿ ಮಲ್ನಾಡಿನಲ್ಲಿ ಆಕಳಗಳ ಕಳವುಗಳು ಆಗಿಂದಾಗ ಆಗುತ್ತಿದ್ದವೆಂದು ಹಲವು ಕಡೆಯಲ್ಲಿದ್ದ ವೀರಗಲ್ಲುಗಳಿಂದ ತಿಳಿದು ಬರುತ್ತದೆ. ಕಳವಾದ ಹಳ್ಳಿಯವರು ಕಳವು ಮಾಡಿ ಒಯ್ದವರೊಡನೆ ಕಡಿದಾಡಿ ತಮ್ಮ ದನಗಳನ್ನು ಬಿಡಿಸಿಕೊಂಡು ಬರುತ್ತಿದ್ದರು. ಈ ಜಗಳದಲ್ಲಿ ಜೀವದ ಹಂಗುದೊರೆದು ಕಾದಿ ಸತ್ತವರ ವೀರಗಲ್ಲುಗಳಲ್ಲಿ ಅವರನ್ನು ಅಪ್ಸರೆಯರು ಕರೆದುಕೊಂಡುಹೋದರೆಂದು ವರ್ಣಿಸಿರುತ್ತದೆ. ಆ ಕಾಲದ ನಮ್ಮ ಪೂರ್ವಜರು ದೇಶಾಭಿಮಾನಿಗಳಾಗಿದ್ದರಿಂದ

---

* ಮುಂ. ಇ. ಗ್ಯಾ., ಸಂ. ೧, ಭಾ. ೨, ಪು. ೪೪೩, ಅಡಿಟಿಪ್ಪಣಿ ೪.

ಸಾವಿಗೆ ಎಷ್ಟು ಮಾತ್ರವು ಅಂಜುತ್ತಿದ್ದಿಲ್ಲ ಮತ್ತು ಉಳಿದ ಜನರೂ ರಾಜಾಧಿಕಾರಿಗಳೂ ಸತ್ತವರ ಕುಟುಂಬ ಸಂರಕ್ಷಣಾರ್ಥವಾಗಿ ಭೂಮಿ ಯನ್ನು ಉಂಬಳಿಯಾಗಿ ಕೊಡುತ್ತಿದ್ದರು. ಇಂತಹ ಇನಾಮುಗಳಿಗೆ ನೆತ್ತರಕೊಡಿಗೆ ಎನ್ನುತ್ತಿದ್ದರು.

೧೧, ೧೨ ನೆಯ ಶತಮಾನಗಳಲ್ಲಿ ನಮ್ಮ ತಾಯ್ನಾಡಿನೊಳಗೆ ವ್ಯಾಪಾರವು ವಿಪುಲವಾಗಿ ನಡೆಯುತ್ತಿತ್ತೆಂತಲೂ ಕೋಟ್ಯಾಧೀಶರಾದ ಬ್ರಾಹ್ಮಣ ವೈಶ್ಯ ವ್ಯಾಪಾರಿಗಳು ಬಡಗಲಲ್ಲಿ ಗುಜರಾಥದ ವರೆಗೂ, ತೆಂಕ ಲಲ್ಲಿ ಸಿಂಹಳ ದ್ವೀಪದ ವರೆಗೂ, ಮೂಡಲು ಪಡುವಲುಗಳಲ್ಲಿ ಕಡಲಿನ ವರೆಗೂ ಎತ್ತುಗಳಿಂದಲೂ ಸಮುದ್ರದ ಆಚೆಯ ಪ್ರದೇಶಗಳಿಗೆ ಹಡಗು ಗಳಿಂದಲೂ ಸರಕುಗಳನ್ನು ಕಳಿಸಿ, ಕುದುರೆ ಮುಂತಾದವುಗಳನ್ನು ಪರದೇಶಗಳಿಂದ ತರಿಸುತ್ತಿದ್ದರೆಂತಲೂ ಶಾಸನಗಳಿಂದ ಕಂಡುಬರುತ್ತದೆ. ಒಬ್ಬ ಮಾರೆಯನೆಂಬವನ ಮಕ್ಕಳಾದ **ಚಟ್ಟಿಸೆಟ್ಟಿ**, ದಾಸಿಸೆಟ್ಟಿ ಎಂಬ ವರು ನೀರ ಮೇಲೆಯೂ ನೆಲದ ಮೇಲೆಯೂ ವ್ಯಾಪಾರಮಾಡು ತ್ತಿದ್ದರೆಂತಲೂ ೧೧೮೮ರಲ್ಲಿ ಚಟ್ಟಿಸೆಟ್ಟಿಯು ೩।೪ ಕೆರೆಗಳನ್ನು ಕಡಿಸಿದ್ದ ಲ್ಲದೆ, ಬಾಣಾವರದಲ್ಲಿ ಒಂದು ಈಶ್ವರದೇವಾಲಯವನ್ನು ಕಟ್ಟಿಸಿದ ನೆಂತಲೂ ಅರಸಿಕೆರೆಯ ೨೨ ನೆಯ ನಂಬರಿನ ಶಾಸನದಲ್ಲಿ ಬರೆದಿದೆ.

**ರೀತಿ ನಡತೆಗಳು**—ಅತಿಪುರಾತನ ಕಾಲದಿಂದ ಜೈನರೊಳಗೆ ಅತಿವಿಪತ್ತು ಬಂದಾಗ ಸಲ್ಲೇಖನ(ನಿರಾಹಾರ)ದಿಂದ ಪ್ರಾಣಬಿಡುವ ಪದ್ಧತಿಯಿತ್ತು. ಕೆಟ್ಟ ಜ್ವರದಿಂದ ಪೀಡಿತನಾದ ೧ ನೆಯ ಸೋಮೇಶ್ವ ರನು ೧೦೬೮ರಲ್ಲಿ ತುಂಗಭದ್ರೆಯಲ್ಲಿ ಮುಳಗಿ ಸತ್ತನೆಂದು ಹಿಂದೆ ಬರೆ ದಿರುತ್ತೇವೆ. ೧೧, ೧೨ ನೆಯ ಶತಮಾನಗಳಲ್ಲಿ ಇಂತಹ ಉದಾಹರಣೆಗಳು ವಿರಳವಾಗಿದ್ದವೆಂದು ಹೇಳಬಹುದು. ಆದರೆ ಸತಿಹೋಗುವ ಪದ್ಧತಿಯು ಈ ಕಾಲದಲ್ಲಿ ಪ್ರಚಾರದಲ್ಲಿತ್ತೆಂದು ಬರೆಯಲಿಕ್ಕೆ ಅಡ್ಡಿಯಿಲ್ಲ. ೧೦೫೭ ರಲ್ಲಿ ದೇಕಬ್ಬೆ ಎಂಬ ಸಾಧ್ವಿಯು ಸತಿಹೋದಳೆಂದು ಮೈಸೂರು ಜಿಲ್ಲಾ ಹೆಗ್ಗಡದೇವನಕೋಟೆಯ ೧೮ ನೆಯ ಶಾಸನದಲ್ಲಿ ಬರೆದಿದೆ. ಗಂಡಂದಿರು ಸತ್ತ ಕೂಡಲೆ ಹೆಂಡಂದಿರು ಸತಿಹೋಗುವಂತೆ, ೧೦, ೧೧, ೧೨ ನೆಯ ಶತಮಾನಗಳಲ್ಲಿ ತಂತಮ್ಮ ಒಡೆಯರು ಸತ್ತ ಕೂಡಲೆ

ಸೇವಕರೂ ಅನುಯಾಯಿಗಳೂ ಆತ್ಮಹತ್ಯಮಾಡಿಕೊಂಡ ಉದಾಹರಣೆಗಳನ್ನು ದಾವಣಗೆರೆಯ ೧೧೯ರ ಶಾಸನವೂ ಅರ್ಕಲಗೂಡಿನ ೫, ೨೭ನೆಯ ಸಂಬರಿನ ಶಾಸನಗಳೂ ಹೊನ್ನಳ್ಳಿಯ ೪೭ನೆಯ ಸಂಬರಿನ ಶಾಸನವೂ ಕೊಡುತ್ತವೆ. ಸತಿಹೋದ ಪತಿವ್ರತಿಯರ ಸ್ಮರಣಾರ್ಥವಾಗಿ ಕೊರೆಯಿಸಿದ ಶಿಲಾಲೇಖಗಳು ನಮ್ಮ ತಾಯ್ನಾಡಿನ ಎಲ್ಲ ಭಾಗಗಳಲ್ಲಿಯೂ ಸಿಕ್ಕುತ್ತವೆ. ಅವುಗಳಿಗೆ ಮಾಸ್ತಿ (ಮಹಾಸತಿ) ಕಲ್ಲುಗಳೆಂದು ವಾಡಿಕೆಯಾಗಿ ಕರೆಯುತ್ತಾರೆ.

ಆ ಕಾಲದಲ್ಲಿ ಅಂದರೆ ೧೦, ೧೧, ೧೨ನೆಯ ಶತಮಾನಗಳಲ್ಲಿ ಸ್ವಾಮಿಭಕ್ತಿಯು ಶಿಖರಕ್ಕೆ ಮುಟ್ಟಿತ್ತೆಂದು ಹೇಳಬಹುದು. ಸ್ವಾಮಿಭಕ್ತಿಯು ಪ್ರಾಣಕ್ಕಿಂತ ಬಹಳ ಹೆಚ್ಚಿನದೆಂಬ ತಿಳಿವಳಿಕೆಯು ಆ ಕಾಲದ ಜನರಲ್ಲಿ ಹಬ್ಬಿತ್ತು. ಆದ್ದರಿಂದ ಸೇವಕರು ತಂತಮ್ಮ ಒಡೆಯರ ಅಭೀಷ್ಟಸಿಧ್ಯರ್ಥವಾಗಿ ಪ್ರಾಣಕೊಡಲಿಕ್ಕೆ ಸಿದ್ಧರಾಗಿದ್ದರು. ತಂತಮ್ಮ ಒಡೆಯರಿಗೆ ಗಂಡುಮಕ್ಕಳಾಗಬೇಕೆಂತಲೂ ಕಾಳೆಗಗಳಲ್ಲಿ ಗೆಲವು ಬರಬೇಕೆಂತಲೂ ಜನರು ಹರಕೆಬೇಡಿಕೊಂಡು, ತಮ್ಮ ಬಯಕೆಯು ಪೂರೈಸಿದ ಬಳಿಕ ಪ್ರಸಿದ್ಧವಾಗಿ ತಂತಮ್ಮ ಶಿರಚ್ಛೇದ ಮಾಡಿಸಿಕೊಳ್ಳುತ್ತಿದ್ದರೆಂದು ಸೊರಬದ ೪೭೯, ಸಿಕಾರಪುದ ೨೪೬, ೨೪೯, ಗೋರಿಬಿದನೂರಿನ ೪೧ ಈ ಶಿಲಾಲೇಖಗಳಿಂದ ತಿಳಿದುಬರುತ್ತದೆ.

ಯುದ್ಧದಲ್ಲಿ ಶೌರ್ಯ ಧೈರ್ಯ ಸಾಹಸಗಳನ್ನು ಹೆಚ್ಚಾಗಿ ತೋರಿಸಿದವರಿಗೂ ಸಾರ್ವಜನಿಕ ಹಿತದ ದೊಡ್ಡ ದೊಡ್ಡ ಕೆಲಸಗಳನ್ನು ಮಾಡಿದವರಿಗೂ ಆ ಕಾಲದ ಸಾರ್ವಭೌಮರೂ ಅರಸರೂ ಅವರವರು ಮಾಡಿದ ಮಹಾಕಾರ್ಯ ಸೂಚಕವಾದ ಶಬ್ದಗಳುಳ್ಳ **ಪಟ್ಟ**ವೆಂಬ ಚಿನ್ನದ ತಗಡನ್ನು ಕೊಡುತ್ತಿದ್ದರು. ಈ ಪಟ್ಟವನ್ನು ಪಡೆದವರು ಅದನ್ನು ತಮ್ಮ ಹಣೆಯ ಮೇಲೆ ಧರಿಸುತ್ತಿದ್ದರು. ೧೦೦೫ರಲ್ಲಿ ಚೋಳರಸನು **ಕ್ಷತ್ರಿಯಶಿಖಾಮಣಿ ಕೊಂಗಾಳ್ವ** ಎಂಬ ಶಬ್ದಗಳುಳ್ಳ ಪಟ್ಟವನ್ನು ಪಂಚಮಹಾರಾಯನೆಂಬವನಿಗೆ ಕೊಟ್ಟನೆಂದು ಕೊಡಗಿನ ೪೬ನೆಯ ಸಂಬರಿನ ಶಾಸನದಲ್ಲಿಯೂ, ೧೦೯೬ರಲ್ಲಿ ಚಾಳುಕ್ಯ ಸಾರ್ವಭೌಮನಾದ ತ್ರೈಲಪದೇವನು ತನ್ನ ಜಯಶಾಲಿಯಾದ ಎರೆಯಮ್ಮ

ನೆಂಬ ದಳವಾಯಿಗೆ **ರಾಜ್ಯಸಮುದ್ಧರಣಮ್** ಎಂಬ ಶಬ್ದಗಳುಳ್ಳ ಪಟ್ಟವನ್ನು ಕೊಟ್ಟನೆಂದು ಸಾಗರದ ೮೦ ನೆಯ ನಂಬರಿನ ಶಾಸನ ದಲ್ಲಿಯೂ ಬರೆದಿದೆ.

**ಶಿಲ್ಪಕಲಾ**—ನಮ್ಮ ಪೂರ್ವಜರು ಬಹು ಪುರಾತನ ಕಾಲದಿಂದ ಶಿಲ್ಪಕಲೆಯಲ್ಲಿ ಪ್ರವೀಣರಾಗಿದ್ದರಷ್ಟೇ. ಕಲ್ಯಾಣದ ಚಾಳುಕ್ಯರ ಕಾಲದಲ್ಲಿಯಾದರೂ ಅವರ ಕಲೆಯು ಬೆಳೆಯುತ್ತ ನಡೆದಿತ್ತು. ಕಲ್ಲುಗಳ ಮೇಲೆ ಅಕ್ಷರಗಳನ್ನು ಕೊರೆಯುವುದರಲ್ಲಿಯೂ ತಾಮ್ರದ ತಗಡಿನ ಮೇಲೆ ಅಕ್ಷರಗಳನ್ನು ಕೆತ್ತುವುದರಲ್ಲಿಯೂ ಕಲ್ಲಿನ ಮೂರ್ತಿಗಳನ್ನು ಕಟೆಯುವುದರಲ್ಲಿಯೂ ಗುಡಿಗಳನ್ನೂ ಅರಮನೆಗಳನ್ನೂ ಕಟ್ಟುವುದ ರಲ್ಲಿಯೂ ಆ ಕಾಲದ ಶಿಲ್ಪಿಗರು ಅತಿಕುಶಲರಾಗಿದ್ದರು. ೧೦೬೭ರಲ್ಲಿದ್ದ ರುದ್ರನೆಂಬ ರೂವಾರಿಯು (ಶಿಲ್ಪಿಗನು) ಆನೆ ಸಿಂಹ ಗಿಳಿ ಮುಂತಾದ ಪ್ರಾಣಿಗಳ ಆಕಾರವುಳ್ಳ ಸುಂದರವಾದ ಅಕ್ಷರಗಳನ್ನು ಕಲ್ಲಿನ ಮೇಲೆ ಕೊರೆಯುವುದರಲ್ಲಿ ಹೆಸರುವಾಸಿಯಾಗಿದ್ದನೆಂದು ಚಿತ್ರದುರ್ಗದ ೪೭ ನೆಯ ಶಾಸನದಲ್ಲಿ ಬರೆದಿದೆ*. ೧೧೫೯ರಲ್ಲಿ ಮಲ್ಲೋಜನೆಂಬ ಶಿಲ್ಪಿಗನು ಒಂದು ತಾಡವೋಲೆಯ ಪುಟದ ಮೇಲೆ ಮಹಾಭಾರತದ ಗೋಗ್ರಹಣದ ಕಥೆಯನ್ನು ಸುಂದರವಾಗಿ ಬರೆದು ಎಲ್ಲರ ಸ್ತುತಿಗೆ ಪಾತ್ರನಾದನೆಂದು ಅರಸಿಕೆರೆಯ ೧೪೧ ನೆಯ ಶಾಸನದಲ್ಲಿ ಬರೆದಿದೆ. ೧೧೩೯ರಲ್ಲಿ ಬಾವಣ ರಾವಣ ಎಂಬಿಬ್ಬರು "ನಿಜ ಶಿಲ್ಪಕುಳ ಕಳಂಕಮಂ ಕಳೆಯಲೆಂದು ಕುಸುಮೇಶ್ವರ ದೇವರ ಪ್ರತಿಷ್ಠೆಯಂ ಮಾಡಿ"ದರೆಂದು ಸಿಕಾರಪುರದ ೧೧೨ ನೆಯ ನಂಬರಿನ ಶಾಸನದಲ್ಲಿ ಬರೆದಿದೆ. ಈ ಕಳಂಕವು ಯಾವದಾ ಗಿತ್ತೆಂಬುದು ಗೊತ್ತಾಗುವುದಿಲ್ಲ. ಶಿಲ್ಪಿಗರು ಮೂರ್ತಿಗಳನ್ನು ಕಟೆದು ಬಹಳ ಹಣ ಗಳಿಸುತ್ತಾರೆ ಹೊರತು ದೇವತಾ ಪ್ರತಿಷ್ಠಾಪನೆಗೆ ಹಣ ವೆಚ್ಚ ಮಾಡುವುದಿಲ್ಲೆಂಬುದೇ ಈ ಕಳಂಕವಾಗಿರಬಹುದೆಂದು ತೋರು ತ್ತದೆ.

---

* ಆನೆಯ ಸಿಂಘದ ಗಿಳಿಗಳ ನಾನಾ ರೂಪುಗಳನಕ್ಕರಂಗಳೊಳೆಸೆಯಲು ತಾನಳವಡಿ ಸುವನೆಸೆದದೇಂ ನಿಂದಿತೆಮುರು.ದ ತೊಡಳೆ ಬರವಣದೊಳ್ ||

—ಕರ್ನಾಟಕ ಶಾಸನ ಸಂಗ್ರಹ, ಸಂ. ೧೧, ಪು. ೭೧

ಬಾದಾವಿ ಚಾಳುಕ್ಯರು ಕಟ್ಟಿಸಿದಂತೆ ಅವರ ವಂಶಜರಾದ ಕಲ್ಯಾಣದ ಚಾಳುಕ್ಯರು ಯಾವ ಗುಡಿಗಳನ್ನೂ ಕಟ್ಟಿಸಿದಂತೆ ತೋರುವುದಿಲ್ಲ. ಆದರೆ ಅವರ ಮಹಾಮಂಡಲೇಶ್ವರರಾದ ಹೊಯ್ಸಳರ ನಾಡಿನಲ್ಲಿ ಕೆಳಗೆ ಬರೆದ ಹೆಸರುವಾಸಿಯಾದ ಗುಡಿಗಳು ಕಟ್ಟಲ್ಪಟ್ಟವು:—

| | ಗುಡಿಗಳ ಹೆಸರು | ಕಾಲ | ಸ್ಥಳ |
|---|---|---|---|
| ೧. | ಚನ್ನಕೇಶವ | ೧೧೧೭ | ಬೇಲೂರು |
| ೨. | ಹೊಯ್ಸಳೇಶ್ವರ | ೧೧೪೧ | ಹಳೆಬೀಡು (ದ್ವಾರಸಮುದ್ರ) |
| ೩. | ಬ್ರಹ್ಮೇಶ್ವರ | ೧೧೭೧ | ಕಿಕ್ಕೇರಿ |
| ೪. | ಬೂಚೇಶ್ವರ | ೧೧೭೩ | ಕೋರವಂಗಳ |

ಹೊಯ್ಸಳ ಬಿಟ್ಟಿಗನು ಶ್ರೀರಾಮಾನುಜಾಚಾರ್ಯರ ಶಿಷ್ಯನಾದ ಬಳಿಕ ಬೇಲೂರಿನಲ್ಲಿ ಚನ್ನಕೇಶವ ಅಥವಾ ವಿಜಯನಾರಾಯಣನ ಗುಡಿಯನ್ನು ಕಟ್ಟಿಸಿರಬಹುದೆಂದು ತೋರುತ್ತದೆ. ಹೊಯ್ಸಳೇಶ್ವರ ಗುಡಿಯು ಕರ್ನಾಟಕದ ರಾಷ್ಟ್ರೀಯ ಕಟ್ಟಡವಾಗಿತ್ತೆಂತಲೂ ಅದು ಹೊಯ್ಸಳರ ಆಳಿಕೆಯಲ್ಲಿ ಬಹುಕಾಲ ಕಟ್ಟಲ್ಪಟ್ಟರೂ ಮುಗಿಯಲಿಲ್ಲೆಂತಲೂ ರಾಯಿಸ ಸಾಹೇಬರು ಬರೆಯುತ್ತಾರೆ*. ಕಿಕ್ಕೇರಿಯ ಬ್ರಹ್ಮೇಶ್ವರ ಗುಡಿಯನ್ನು ಬಿಚ್ಚಯ್ಯನೆಂಬ ಹೊಯ್ಸಳ ಸಾಮಂತನ ಹೆಂಡತಿಯಾದ ಬಸವೆನಾಯಕಿತಿ ಎಂಬವಳು ಕಟ್ಟಿಸಿದಳೆಂದು ಮೈಸೂರು ಜಿಲ್ಲಾ ಕೃಷ್ಣರಾಜಪೇಟೆಯ ೫೩ ನೆಯ ಶಾಸನವು ಹೇಳುತ್ತದೆ. ಹೊಯ್ಸಳ ನರಸಿಂಹನ ಲೆಕ್ಕಿಗನಾದ ಬೂಚಯ್ಯ ಅಥವಾ ಬೂಚಿರಾಜನೆಂಬ ಒಬ್ಬ ಬ್ರಾಹ್ಮಣನು ಈ ಬೂಚೇಶ್ವರ ಗುಡಿಯನ್ನು ಕಟ್ಟಿಸಿದನೆಂದು ಹಾಸನದ ೭೧ ನೆಯ ಶಾಸನದಿಂದ ಕಂಡುಬರುತ್ತದೆ.

**ಸಾಹಿತ್ಯ**—ಕಲ್ಯಾಣದ ಚಾಳುಕ್ಯರ ಆಳಿಕೆಯಲ್ಲಿ ಕರ್ನಾಟಕ ಸಾಹಿತ್ಯದ ಸೇವೆಯನ್ನು ಜೈನರೂ ಬ್ರಾಹ್ಮಣರೂ ಲಿಂಗಾಯತರೂ ಮಾಡಿದರು. ಅದರ ವಿವರವು ಕೆಳಗೆ ಬರದಂತೆ:—

**೧.** ಈ ಕಾಲದ ಮೊದಲನೆಯ ಗ್ರಂಥಕಾರನು **ಚಾವುಂಡರಾಯ**ನಾಗಿದ್ದನು (೯೭೮). ತಾನು ಬ್ರಹ್ಮ ಕ್ಷತ್ರಿಯ ವಂಶದಲ್ಲಿ ಹುಟ್ಟಿದವ

---

* **ಶಾಸನಗಳಿಂದ ತಿಳಿದುಬರುವ ಮೈಸೂರು ಕೊಡಗು ಪ್ರಾಂತಗಳು, ಪುಟ ೧೯೪.**

ನೆಂತಲೂ ರಾಚಮಲ್ಲ ಸತ್ಯವಾಕ್ಯನೆಂಬ ಗಂಗರಸನು (೯೭೫–೯೮೭?) ತನ್ನ ಪರಮ ಸ್ವಾಮಿಯಾಗಿದ್ದನೆಂತಲೂ ತಾನು ಅವನ ಸೇನಾನಾಯಕ ಮಂತ್ರಿಯಾಗಿದ್ದನೆಂತಲೂ ಅಪರಿಮಿತ ಧನವ್ಯಯಮಾಡಿ ಶ್ರವಣ ಬೆಳ್ಗೊಳದಲ್ಲಿ ಗೋಮಟೇಶ್ವರ ಪ್ರತಿಷ್ಠೆಯನ್ನು ಮಾಡಿದ್ದರಿಂದ ತನ್ನ ಔದಾರ್ಯಕ್ಕೆ ಮೆಚ್ಚಿ ರಾಚಮಲ್ಲನು ತನಗೆ **ರಾಯ** ಎಂಬ ಬಿರುದನ್ನು ಕೊಟ್ಟನೆಂತಲೂ ಗೋವಿಂದರಾಜನನ್ನು ಬೆಂಕೊಂಡು ರಾಚಯ್ಯನನ್ನು ಕೊಂದುದರಿಂದ ತನ್ನ ಕೀರ್ತಿಯು ಹೆಚ್ಚಿತೆಂತಲೂ ಹೇಳಿಕೊಳ್ಳುತ್ತಾನೆ, ಮತ್ತು ಯಾವ ಯಾವ ಗುಣಗಳಿಂದ ತನಗೆ ಯಾವ ಯಾವ ಬಿರುದುಗಳು ಬಂದವೆಂಬುದನ್ನು ಕೆಳಗೆ ಬರೆದಂತೆ ವಿವರಿಸುತ್ತಾನೆ:—

"ಆಳ್ದನ ಬೆಸದಿಂ ಖೇಡಗ ಕಾಳೆಗದೊಳ್ ವಜ್ಜಳದೇವನಂ ಗೆಲ್ದ ಸಾಹಸದಿಂ ಸಮರಧುರಂಧರಂ; ಗೋನೂರ ಬಯಲೊಳ್ ಬಂದೊಡ್ಡಿದ ನೊಳಂಬರ ಕಾಳೆಗದೊಳ್ ಜಗದೇಕವೀರನ ಮುಂತೆ ತನ್ನ ಬಲಮಂ ಮೆಱೆದುದಱಿಂ ವೀರಮಾರ್ತಂಡಂ; ಉಚ್ಚಂಗಿಯ ಕೋಟೆಯೊಳ್ ರಾಜಾದಿತ್ಯನೊಳ್ ಒರ್ವನೆ ರಣಮಂ ಮೆಱೆದುದಱಿಂದೆ ರಣರಂಗ ಸಿಂಗಂ; ಬಾಗೆಯೂರ ಕೋಟೆಯೊಳ್ ತ್ರಿಭುವನವೀರನಂ ಕೊಂದು ಗೋವಿಂದರನಂ ಪುಗಿಸುದುದಱಿಂ ವೈರಿಕುಲ ಕಾಲದಂಡಂ; ನೃಪ ಕಾಮನ ಕೋಟೆಯೊಳ್ ರಾಜ, ಬಾಸ, ಸಿವರ, ಕೂಣಾಂಕ ಮೊದಲಾದ ಕಲಿಗಳಂ ಒಂದೆ ಮೆಯ್ಯೊಳ್ ಪೆಣೆದಿಱಿದುದಱಿಂ ಭುಜವಿಕ್ರಮಂ; ತನ್ನ ತಮ್ಮನಂ ನಾಗವರ್ಮನಂ ಕೊಂದ ಪಗೆಗೆ ಚಲದಂಕ ಗಂಗನುಂ ಗಂಗರ ಭಟನುಮೆನಿಸಿದ ಮುದುರಾಚಯ್ಯನುಂ ಕೊಂದುದಱಿಂ ಸಮರ ಪರಶುರಾಮಂ; ಜಟ್ಟಿಗರಸಟ್ಟಿದ ದಂಡಿನೊಳ್ ನಿಷ್ಕಂಟಕಂ ಮಾಡಿದುದಱಿಂ ಪ್ರತಿಪಕ್ಷರಾಕ್ಷಸಂ; ವೀರಭಟ ಕೋಟೆಯುಂ ತವೆ ಕೊಂದುದಱಿಂ ಭಟಮಾರಿ; ನಿಃಶಂಕಾದಿ ಗುಣ ಪರಿರಕ್ಷಣೈಕಕಾರಣನಪ್ಪುದಱಿಂ ಗುಣಮಂಕಾರಂ; ಸತ್ಯ ತ್ಯಾಗಾದಿ ಸಮನ್ವಿತನಪ್ಪುದಱಿಂ ಸಮ್ಯಕ್ತ್ವರತ್ನಾಕರಂ; ಪರಾಂಗನಾ ಪರದ್ರವ್ಯ ಪರಾಙ್ಮುಖನಪ್ಪುದಱಿಂ ಶೌಚಾಭರಣಂ; ಪರಿಹಾಸದೊಳಂ ಸೂನೃತ ವಚನಮಪ್ಪು

ದಱಿಂ ಸತ್ಯಯುಧಿಷ್ಠಿರಂ; ಅತಿಪ್ರಚಂಡ ವೀರ ಮಾಂಡಲಿಕ ಶಿಖಂಡ ಮಂಡನ ಮಣಿಯಪ್ಪುದಱಿಂ ಸುಭಟಚೂಡಾಮಣಿ*."

ಈ ಚಾವುಂಡರಾಯನು ಕವಿ ರನ್ನನ ಪೋಷಕನಾಗಿದ್ದುದಲ್ಲದೆ ತ್ರಿಷಷ್ಟಿ ಲಕ್ಷ ಮಹಾಪುರಾಣ ಅಥವಾ ಚಾವುಂಡರಾಯ ಪುರಾಣವೆಂಬ ಗದ್ಯ ಗ್ರಂಥವನ್ನು ಬರೆದನು. ಇದು ಜೈನರ ೨೪ ಮಂದಿ ತೀರ್ಥಂಕರರ ಚರಿತವು. ಶಕ ೯೦೦ ನೆಯ ಈಶ್ವರ ಸಂವತ್ಸರ ಫಾಲ್ಗುಣ ಶುದ್ಧ ೮ ಮಿಯ ಸೋಮವಾರ ದಿವಸ ಈ ಪುರಾಣವು ಬರೆಯಲ್ಪಟ್ಟಿತೆಂದು ಈ ಗ್ರಂಥದ ಕೊನೆಯ ಶ್ಲೋಕದಿಂದ ಕಂಡುಬರುತ್ತದೆ†.

೨. **ಕಮಲಾದಿತ್ಯ**ನೆಂಬುವನು ಬೆಳಗಾವಿ ಜಿಲ್ಲಾ (?) ಸೊಗಲದ ಒಂದು ಶಾಸನವನ್ನು ಬರೆದಿರುತ್ತಾನೆ. ಕಲ್ಯಾಣದ ಚಾಳುಕ್ಯ ಮನೆತನದ ಮೊದಲನೆಯ ಸಾರ್ವಭೌಮನಾದ ಸೂರ್ಮಡಿ ತೈಲನ ಆಳಿಕೆಯಲ್ಲಿ ಕಂಚಿಯಬ್ಬೆ ಎಂಬವಳು ಸುವರ್ಣಾಕ್ಷಿ ದೇವಾಲಯಕ್ಕೆ ದತ್ತಿಯನ್ನು ಬಿಟ್ಟಳೆಂದು ಈ ಶಾಸನದಲ್ಲಿ ಬರೆದಿದೆ. ಈ ಕಮಲಾದಿತ್ಯನು ಯಾವ ಗ್ರಂಥವನ್ನೂ ಬರೆದಂತೆ ತೋರುವುದಿಲ್ಲ. ಇವನು ಬ್ರಾಹ್ಮಣನಾಗಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ.

೩. **ಮೊದಲನೆಯ ನಾಗವರ್ಮ** (೯೯೦)—ಛಂದೋಂಬುಧಿ, ಕರ್ನಾಟಕಕಾದಂಬರಿ ಎಂಬೆರಡು ಗ್ರಂಥಗಳನ್ನು ಇವನು ಬರೆದನು. ಇವನು ರಕ್ಕಸ ಗಂಗನ ಆಳಿಕೆಯಲ್ಲಿ ಅಜಿತಸೇನದೇವನ ಶಿಷ್ಯನೂ ಚಾವುಂಡರಾಯನ ಆಶ್ರಿತನೂ ಆಗಿದ್ದನೆಂದು ಕವಿಚರಿತೆಕಾರರು ನಿರ್ಣಯಿಸಿದ್ದಾರೆ. ಇವನು ವೆಂಗಿ ವಿಷಯ ಸಪ್ತ ಗ್ರಾಮಗಳಲ್ಲಿದ್ದ ವೆಣ್ಣಮಯ್ಯ ಪೋಳಕಬ್ಬೆ ಎಂಬ ಬ್ರಾಹ್ಮಣ ದಂಪತಿಗಳ ಹಿರಿಮಗನು. ಇವನಿಗೆ ಕವಿರಾಜಹಂಸ, ಬುಧಾಬ್ಜವನ ಕಳಹಂಸ, ಕಂದ ಕಂದರ್ಪ,

* ಕರ್ನಾಟಕ ಕವಿಚರಿತೆ, ಸಂ. ೧, ಪು. ೪೭.

† ನವಶತ ಸಂಖ್ಯೆಯಾಗೆ ಶಕಕಾಲ ಸಮಂ ನೆಗೞ್ದೀಶ್ವರಾಬ್ದಮು।
ತ್ಸವಕರಮಾಗೆ ಫಾಲ್ಗುಣ ಸಿತಾಷ್ಟಮಿ ರೋಹಿಣಿ ಸೋಮವಾರಮೆಂ ॥
ಬಿವು ಶುಭದಂಗಳಾಗೆ ಪರಮೋತ್ಸವದಿಂ ಗುಣರತ್ನಭೂಷಣಂ।
ಕವಿಜನಶೇಖರಂ ಬರೆದು ಪುಸ್ತಕಕೇಱಿಸಿದಂ ಪುರಾಣಮಂ ॥

ನೆಗೞ್ತೆಗೋಜ ಎಂಬ ಬಿರುದುಗಳಿದ್ದವು. ಜನರು ವಾಡಿಕೆಯಾಗಿ ಇವನನ್ನು ನಾಕಿ ಎಂತಲೂ ಸಯ್ಯಡಿಯಾತನೆಂತಲೂ ಕರೆಯುತ್ತಿದ್ದರು. ಸಯ್ಯಡಿಯು ಕಿಸುಕಾಡು ನಾಡಿನಲ್ಲಿ ಒಂದು ಅಗ್ರಹಾರವಿತ್ತೆಂದು ದುರ್ಗಸಿಂಹ ಪಂಚತಂತ್ರದಿಂದ ತಿಳಿದುಬರುತ್ತದೆ. ಇವನ ಗ್ರಂಥಗಳಲ್ಲಿದ್ದ ಕೆಲವು ವಾಕ್ಯಗಳಿಂದ ಇವನು ಯುದ್ಧವೀರನಾಗಿದ್ದನೆಂದು ಕಂಡುಬರುತ್ತದೆ.

**೪. ರನ್ನ** (೯೯೩)—ಇವನು ಬಳೆಗಾರರಾದ ಜಿನವಲ್ಲಭೇಂದ್ರ ಅಬ್ಬಲಬ್ಬೆ ಎಂಬವರಿಂದ ೯೪೯ರಲ್ಲಿ ಮುದುವೊಳಲ(ಮುಧೋಳ)ಲ್ಲಿ ಹುಟ್ಟಿದನು. ಜಕ್ಕಿ, ಶಾಂತಿ ಎಂಬವರಿಬ್ಬರು ಇವನ ಹೆಂಡಂದಿರು. ಇವನಿಗೆ ರಾಯನೆಂಬ ಮಗನೂ ಅತ್ತಿಮಬ್ಬೆ ಎಂಬ ಮಗಳೂ ಇದ್ದರು. ಇವನ ಗುರು ಅಜಿತಸೇನಾಚಾರ್ಯ; ಮತ್ತು ಇವನ ಮೊದಲನೆಯ ಆಶ್ರಯದಾತನು ಚಾವುಂಡರಾಯನು. ಕಲ್ಯಾಣದ ಚಾಳುಕ್ಯ ಮನೆತನವನ್ನು ಸ್ಥಾಪಿಸಿದ ತೈಲಪನು (೯೭೩–೯೯೭) ರನ್ನನಿಗೆ ಕವಿಚಕ್ರವರ್ತಿ ಎಂಬ ಬಿರುದನ್ನು ಕೊಟ್ಟನು. ಮುಂದೆ ಇವನು ತೈಲಪನ ಮಗನಾದ ಸತ್ಯಾಶ್ರಯನ (೯೯೭–೧೦೦೯) ಆಸ್ಥಾನ ಕವಿಯಾದನು. ಇವನಿಗೆ ಕವಿರತ್ನ, ಅಭಿನವಕವಿಚಕ್ರವರ್ತಿ, ಕವಿಕುಂಜರಾಂಕುಶ, ಕವಿಚಕ್ರವರ್ತಿ, ಉಭಯ ಕವಿ ಎಂಬ ಬಿರುದುಗಳಿದ್ದವು.

ಎರಡನೆಯ ತೀರ್ಥಂಕರನಾದ ಅಜಿತನಾಥನ ಚರಿತೆಯಾದ ಅಜಿತಪುರಾಣವನ್ನು ಕವಿಚಕ್ರವರ್ತಿ ರನ್ನನು ಶಕ ೯೧೫ನೆಯ ವಿಜಯ ಸಂವತ್ಸರ(೯೯೩)ದಲ್ಲಿ ಬರೆದನು. ಈ ಗ್ರಂಥದ ಒಂದು ಪದ್ಯದಿಂದ* ಇವನು ಪರಶುರಾಮ ಚರಿತ, ಚಕ್ರೇಶ್ವರ ಚರಿತ ಎಂಬ ಮತ್ತೂ ಎರಡು ಗ್ರಂಥಗಳನ್ನು ಬರೆದನೆಂದು ಕಂಡುಬರುತ್ತದೆ. ಆದರೆ ಈ ಗ್ರಂಥಗಳು ಇನ್ನೂ ನಮಗೆ ದೊರೆತಿಲ್ಲ. ಸಾಹಸಭೀಮವಿಜಯ ಅಥವಾ ಗದಾ

* ಕರಮೆಸೆದುವು ರತ್ನತ್ರಯ।
ಪರಿಕಲ್ಪದ ಪರಶುರಾಮ ಚರಿತಂ ಚಕ್ರೇ ॥
ಶ್ವರ ಚರಿತಮಜಿತತೀರ್ಥೇ।
ಶ್ವರ ಚರಿತಂ ರನ್ನನಿಂದೆ ಭುವನತ್ರಯದೊಳ್॥ —ಅಜಿತಪುರಾಣ

ಯುದ್ಧ ಎಂಬುದೇ ಇವನ ಎರಡನೆಯ ಉಪಲಬ್ಧವಾದ ಚಂಪೂ ಗ್ರಂಥವು. ತನ್ನ ಆಶ್ರಯದಾತನಾದ ಸತ್ಯಾಶ್ರಯನನ್ನು "ಭೀಮನೊಳ್ ಪೋಲಿಸಿ ಪೇೞ್ದೆನೀ ಗದಾಯುದ್ಧಮಂ" ಎಂತಲೂ, "ವನರುಹ ಭವನೆನಿಸಿದ ದಂಡನಾಯಕಂ ಕೇಶಿ ತಿರ್ದೆ ಪೇೞ್ದಂ" ಎಂತಲೂ ಕವಿಯು ಹೇಳುತ್ತಾನೆ. ಆದರೆ ಈ ಕೇಶಿ ಯಾರೆಂಬುದು ಗೊತ್ತಾಗುವುದಿಲ್ಲ. ಈ ಚಂಪೂ ಗ್ರಂಥದ ಕಾಲವು ವಾದಗ್ರಸ್ತ ವಿಷಯವಾಗಿದ್ದರೂ ಇದು ೯೮೨ರಲ್ಲಿ ಬರೆಯಲ್ಪಟ್ಟಿತೆಂದು ಊಹಿಸಬಹುದು. ಈ ಗ್ರಂಥದಲ್ಲಿ ಕವಿಯ ಪ್ರತಿಭಾಶಕ್ತಿಯೂ ವಾಕ್ಪ್ರೌಢಿಮೆಯೂ ಉತ್ಕೃಷ್ಟವಾಗಿ ಕಂಡು ಬರುತ್ತವೆ. ಕವಿಯು ಶೃಂಗಾರ ಕರುಣಾ ರಸಗಳನ್ನೂ ವಿಶೇಷವಾಗಿ ವೀರ ರಸವನ್ನೂ ಅತ್ಯುತ್ತಮವಾಗಿ ವರ್ಣಿಸಿರುತ್ತಾನೆ.

**೫. ಗಜಗ** ಅಥವಾ **ಗಜಾಂಕುಶ** (೧೦೦೦?)—ಇವನನ್ನು ಮಲ್ಲಿಕಾರ್ಜುನ, ನಯಸೇನ, ದುರ್ಗಸಿಂಹ, ಶ್ರೀಧರಾಚಾರ್ಯ, ರುದ್ರಭಟ್ಟ, ಆಂಡಯ್ಯ, ಕೇಶಿರಾಜ ಮುಂತಾದವರು ಹೊಗಳುವುದರಿಂದ ಇವನು ದೊಡ್ಡ ಕವಿಯಾಗಿರಲಿಕ್ಕೆ ಬೇಕು. ಆದರೆ ಇವನ ಗ್ರಂಥಗಳಾವವೂ ಇನ್ನೂ ದೊರೆತಿಲ್ಲ.

**೬. ಮನಸಿಜ** (೧೦೦೦?)—ಇವನನ್ನು ಶ್ರೀಧರಾಚಾರ್ಯ, ರುದ್ರಭಟ್ಟ, ಕೇಶಿರಾಜ ಮುಂತಾದವರು ಸ್ತುತಿಸುತ್ತಿದ್ದರೂ ಇವನ ಗ್ರಂಥಗಳಾವವೂ ಸಿಕ್ಕಿಲ್ಲ.

**೭. ಚಂದ್ರಭಟ್ಟ** (೧೦೦೦?)—ರುದ್ರಭಟ್ಟ, ಕೇಶಿರಾಜ ಮುಂತಾದವರು ಇವನನ್ನು ಹೊಗಳುತ್ತಿದ್ದರೂ ಇವನ ಗ್ರಂಥಗಳಾವವೂ ದೊರೆತಿಲ್ಲ.

**೮. ಕಪ್ಪಣಭಟ್ಟ** (೧೦೩೨?)—ಕಲ್ಯಾಣದ ಚಾಳುಕ್ಯ ಮನೆತನದ ಸಾರ್ವಭೌಮನಾದ ೧ನೆಯ ಜಯಸಿಂಹನ ಕಾಲದ ೧೦೩೨ನೆಯ ಇಸ್ವಿಯ ಸೊರಬದ ಶಾಸನದ ಕೊನೆಯಲ್ಲಿ—"ಶ್ರೀಮತ್ಕವಿರಾಜವಲ್ಲಭ ಕಪ್ಪಣಭಟ್ಟರ ಲಿಖಿತಂ" ಎಂದು ಬರೆದುದರಿಂದ ಇವನು ದೊಡ್ಡ ಕವಿಯಾಗಿರಲಿಕ್ಕೆ ಬೇಕು. ಇವನ ಗ್ರಂಥಗಳಾವವೂ ದೊರೆತಿಲ್ಲ.

೯. **ನಾರಾಯಣಭಟ್ಟ** (೧೦೪೦)—ಇವನು ತೆಲಗು ಭಾರತ ವನ್ನು ಬರೆದ ನನ್ನಯ್ಯಭಟ್ಟನ ಸಾಹಾಯಕನಾಗಿದ್ದನೆಂತಲೂ ಕನ್ನಡ ದಲ್ಲಿ ಕವಿಯಾಗಿದ್ದನೆಂತಲೂ ಕವೀಭ ವಜ್ರಾಂಕುಶವೆಂಬ ಬಿರುದನ್ನು ಧರಿಸಿದ್ದನೆಂತಲೂ ಒಂದು ಶಾಸನ ಪದ್ಯದಿಂದ ತಿಳಿದುಬರುತ್ತದೆ. ಇವನ ಗ್ರಂಥಗಳಾವವೂ ಸಿಕ್ಕಿಲ್ಲ.

೧೦. **ಏಚಮ** (೧೦೪೧)—೯೬೩ನೆಯ ಶಕದ ಒಂದು ಶಾಸನ ದಲ್ಲಿ "ಭರತಾಗಮಲತೆ ಧರೆಯೊಳ್ ಪಲ್ಲವಿಸಿತೀಗಳೇಚಮನಿಂದಂ" ಎಂದು ಬರೆದಿದೆ. ಇವನ ಭರತಶಾಸ್ತ್ರವು ಇನ್ನೂ ದೊರೆತಿಲ್ಲ.

೧೧. **ಶ್ರೀಧರಾಚಾರ್ಯ** (೧೦೪೯)—ಇವನು ಧಾರವಾಡ ಜಿಲ್ಲಾ ನರಗುಂದದಲ್ಲಿದ್ದ ಒಬ್ಬ ಜೈನಕವಿ. ಇವನು—೧. ಜಾತಕತಿಲಕ, ೨. ಚಂದ್ರಪ್ರಭ ಚರಿತೆ ಎಂಬ ೨ ಗ್ರಂಥಗಳನ್ನು ಬರೆದನು. ಚಂದ್ರಪ್ರಭ ಚರಿತೆಯು ಇನ್ನೂ ದೊರೆತಿಲ್ಲ. ತಾನು ವಿಪ್ರಕುಲೋತ್ತಮನೆಂತಲೂ ಚಾಳುಕ್ಯ ಸಾರ್ವಭೌಮನಾದ ಆಹವಮಲ್ಲ(೧೦೪೨–೧೦೬೮)ನ ಆಳಿಕೆಯಲ್ಲಿ ತಾನು ಗ್ರಂಥವನ್ನು ಬರೆದನೆಂತಲೂ ಜಾತಕತಿಲಕದಲ್ಲಿ ಹೇಳುತ್ತಾನೆ. ಕನ್ನಡದಲ್ಲಿ ಜ್ಯೋತಿಷವನ್ನು ಬರೆದವರೊಳಗೆ ಇವನೇ ಮೊದಲನೆಯವನು.

೧೨. **ಶಾಂತಿನಾಥ** (೧೦೬೮)—ಇವನು ಭುವನೈಕಮಲ್ಲ (೧೦೬೮–೧೦೭೬)ನ ಪಸಯಿತನಾದ ಲಕ್ಷ್ಮನೃಪನ ಕಯ್ಕೆಳಗೆ ಮಂತ್ರಿ ಯಾಗಿದ್ದನು. ಇವನು ಜೈನಕವಿ. ಸುಕುಮಾರಚರಿತವೆಂಬ ಪುಸ್ತಕ ವನ್ನು ಬರೆದನು. ಇದು ಒಬ್ಬ ರಾಜಕುಮಾರನ ಚರಿತ್ರವು.

೧೩. **ನಾಗವರ್ಮಾಚಾರ್ಯ** (೧೦೭೦)—ಇವನು ಭುವನೈಕ ಮಲ್ಲ(೧೦೬೮–೧೦೭೬)ನ ಮಹಾಪ್ರಧಾನನಾದ ಉದಯಾದಿತ್ಯನ ರಾಯಭಾರಿಯಾದ ಭಾಸ್ಕರನೆಂಬುವನ ತಮ್ಮನು. ಇವನು ದೊಡ್ಡ ಪಂಡಿತನೂ ಅದ್ವೈತಿಯೂ ಆಗಿದ್ದನು. ಇವನು ಚಂದ್ರಚೂಡಾಮಣಿ ಶತಕ ಅಥವಾ ಜ್ಞಾನಸಾರವೆಂಬ ಕಾವ್ಯವನ್ನು ಬರೆದನು. ಈ ಕಾವ್ಯವು ಮತ್ತೇಭವೃತ್ತದಲ್ಲಿದ್ದು ವೈರಾಗ್ಯವನ್ನು ವರ್ಣಿಸುತ್ತದೆ. ಇದರ

ಬಂಧವು ಲಲಿತವಾಗಿಯೂ ಗಂಭೀರವಾಗಿಯೂ ಇದೆ. ಇವನಿಗೆ **ಗುಣಗಳ್ಳ** ಎಂಬ ಬಿರುದಿತ್ತು. ಸಿಕಾರಪುರದ ೧೨೯ ನೆಯ ಶಾಸನವು ಇವನ ಮಹಾತ್ಮೆಯನ್ನು ಕೆಳಗೆ ಕೊಟ್ಟಂತೆ ವರ್ಣಿಸುತ್ತದೆ:—

ತ್ರಿಪದಿ ॥ ನುಡಿವ ತತ್ವದ ಮಾತಂ ಬಿಡಲಾರನೇನುಮಂ।
ನುಡಿವಳಿಯಂತೆ ನಡೆವಳಿಯೆನಿಸಿದಂ।
ನುಡಿದಂತೆ ಗಂಡಂ ಗುಣಗಳ್ಳಂ ॥

**೧೪–೧೫. ಹಿರಿಯಣ್ಣ**(೧೦೭೫)ನು ಸೊರಬದ ೨೬೨ ನೆಯ ಶಾಸನವನ್ನು ಬರೆದನು, ಮತ್ತು **ಬ್ರಹ್ಮ**(೧೦೭೯)ನೆಂಬುವನು ಮದನ ತಿಲಕವೆಂಬ ಗ್ರಂಥವನ್ನು 'ತಿರ್ದಿದ'ನೆಂದು ತಿಳಿದುಬರುತ್ತದೆ. ಇವರ ವಿಷಯವಾಗಿ ಮತ್ತಾವ ಸಂಗತಿಯೂ ಗೊತ್ತಾಗುವುದಿಲ್ಲ.

**೧೬. ಚಂದ್ರರಾಜ**(೧೦೭೯)ನು ಮದನತಿಲಕವೆಂಬ ಗ್ರಂಥವನ್ನು ಬರೆದನು. ಇವನು ಬೇರೆ ಗ್ರಂಥಗಳನ್ನು ಬರೆದಂತೆ ಲೇಖವಿದ್ದರೂ ಅವಾವವು ಇನ್ನೂ ದೊರೆತಿಲ್ಲ. ತಾನು 'ವಿಪ್ರಕುಲಲಲಾಮು'ನೆಂದೂ, ಚಾಳುಕ್ಯ ಜಯಸಿಂಹದೇವನ ಮಹಾ ಸಾಮಂತನಾದ ಮಾಚನು ತನ್ನ ಪೋಷಕನೆಂದೂ ಇವನು ಹೇಳಿಕೊಂಡಿದ್ದಾನೆ. ಮದನತಿಲಕವು ಚಿಕ್ಕ ಚಂಪೂ ಗ್ರಂಥವಾಗಿದ್ದು, ಇದರಲ್ಲಿ ಮಾಚಿರಾಜನು ತನ್ನ ಹೆಂಡತಿಗೆ ಕಾಮತತ್ವವನ್ನು ಹೇಳುತ್ತಾನೆ. ಇದರ 'ಪ್ರತಿಪದ್ಯವೂ ಶಬ್ದಾಲಂಕಾರ ಚಿತ್ರಿತವಾಗಿಯೂ ರಚನಾ ಕೌಶಲ್ಯ ವ್ಯಂಜಕವಾಗಿಯೂ ಇದೆ. ಇದಲ್ಲದೆ ಎಷ್ಟೋ ಪದ್ಯಗಳು ಚಕ್ರಾದಿ ಬಂಧ ರೂಪವಾಗಿವೆ. ಇದು ಚಿತ್ರಕವಿತೆಯಾದರೂ ಇದರಲ್ಲಿ ಲಾಲಿತ್ಯವಾಗಲಿ ರಸಪುಷ್ಟಿಯಾಗಲಿ ಕಡಮೆಯಾಗಿಲ್ಲ. ಈತನ ಕವಿತಾಶಕ್ತಿಯು ಆಶ್ಚರ್ಯಕರವಾಗಿದೆ. ಇವನು ಈ ಗ್ರಂಥವನ್ನು "ಪೇೞ್ದಿನೆಸೆಯ ಪೊಸಗನ್ನಡದಿಂ" ಎಂದು ಬರೆಯುವುದರಿಂದ ಈ ಕಾಲಕ್ಕೆ ಹೊಸಗನ್ನಡವು ತಲೆಯೆತ್ತಿತೆಂದು ಹೇಳಬಹುದು.

**೧೭–೨೦. ಕರ್ಪರಸ** (೧೦೮೪), **ದಾಮರಾಜ** (೧೦೮೫), ಸೇನಬೋವ **ಮಾದಿಮಯ್ಯ** (೧೦೯೮), **ಶಂಖವರ್ಮ** (೧೧೦೦)—

ಕರ್ಪರಸನು ಧಾರವಾಡ ಜಿಲ್ಲಾ ನರಗುಂದ ಹತ್ತರಿದ್ದ ಹದಳಿಯ ಶಾಸನವನ್ನು ಬರೆದಿರುತ್ತಾನೆ. ಇವನು ಬ್ರಾಹ್ಮಣ ಕವಿ. ದಂಡನಾಯಕ ನಾದ ಕಾಳಿದಾಸಭಟ್ಟನು ಇವನ ಮಾವನಾಗಿದ್ದನು. ಚಂದ್ರರಾಜನು ಇವನ ತಂದೆಯಾಗಿದ್ದರೂ ಆಗಿರಬಹುದು. ದಾಮರಾಜನು ಜೈನ ಕವಿ. ಇವನು ೬ನೆಯ ವಿಕ್ರಮಾದಿತ್ಯ(೧೦೭೬-೧೧೨೬)ನ ಸಾಮಂತ ಗಂಗ ಪೆರ್ಮಾಡಿಯ ಮಹಾಪ್ರಧಾನ ಹೆಗ್ಗಡೆನೊಕ್ಕಯ್ಯನ ಆಶ್ರಿತನಾಗಿ ದ್ದನು. ೧೦೯೪ರ ಒಂದು ಶಾಸನದಲ್ಲಿ ಮಾದಿಮಯ್ಯನು ಕಾವ್ಯ ನಾಟಕ ಕಾರನಾಗಿದ್ದನೆಂದು ಬರೆದಿದೆ. ರುದ್ರಭಟ್ಟನು 'ಸಂದ ಶಂಖವರ್ಮನ ಬಗೆ' ಎಂದು ಶಂಖವರ್ಮನನ್ನು ಹೊಗಳಿರುವುದರಿಂದ ಇವನು ಪ್ರಸಿದ್ಧ ಕವಿಯಾಗಿರಲಿಕ್ಕೆ ಬೇಕು. ಈ ನಾಲ್ಕೂ ಜನರ ಗ್ರಂಥಗಳಾವವೂ ಇನ್ನೂ ದೊರೆತಿಲ್ಲ.

**೨೧. ನಾಗಚಂದ್ರ** (೧೧೦೦)—ಇವನು ವಿಜಯಪುರ(ವಿಜಾಪುರ)ದಲ್ಲಿ ಒಂದು ಮಲ್ಲಿನಾಥ ಜಿನಾಲಯವನ್ನು ಕಟ್ಟಿಸಿ, ತನ್ನ ಮಲ್ಲಿನಾಥ ಪುರಾಣವನ್ನು ಬರೆದನೆಂದು ಆ ಪುರಾಣದ ಒಂದು ಪದ್ಯದಿಂದ ಕಂಡುಬರುತ್ತದೆ. ಇವನಿಗೆ **ಅಭಿನವಪಂಪ** ಎಂಬ ಮತ್ತೊಂದು ಹೆಸರಿತ್ತು. ಇವನಿಗೆ ಭಾರತೀಕರ್ಣಪೂರ, ಕವಿತಾಮನೋಹರ, ಸಾಹಿತ್ಯ ವಿದ್ಯಾಧರ, ಸಾಹಿತ್ಯ ಸರ್ವಜ್ಞ, ಸೂಕ್ತಿಮುಕ್ತಾವತಂಸ ಎಂಬ ಬಿರುದು ಗಳಿದ್ದವು. ರಾಮಚಂದ್ರಚರಿತಪುರಾಣ (ಪಂಪ ರಾಮಾಯಣ), ಮಲ್ಲಿ ನಾಥಪುರಾಣ ಎಂಬೆರಡು ಇವನ ಗ್ರಂಥಗಳು ಅಚ್ಚಾಗಿವೆ. ರಾಜಾವಳಿ ಕಥೆಯ ಕರ್ತನಾದ ದೇವಚಂದ್ರನು (೧೮೩೮) ಜಿನಮುನಿತನಯ, ಜಿನಾಕ್ಷರಮಾಲೆ ಮುಂತಾದ ಬೇರೆ ಗ್ರಂಥಗಳನ್ನು ಇವನು ಬರೆದನೆಂದು ಹೇಳುತ್ತಾನೆ. ಈ ಮಾತು ನಿಜವೋ ಭ್ರಮವೋ ಗೊತ್ತಾಗುವುದಿಲ್ಲ. ಈಗ ಅಚ್ಚಾದ ಜಿನಮುನಿತನಯವು ನಾಗಚಂದ್ರ ರಚಿತವಾದುದಲ್ಲೆಂದು ಕವಿಚರಿತಕಾರರು ನಿರ್ಣಯಿಸುತ್ತಾರೆ. ಇವನ ಜಿನಾಕ್ಷರಮಾಲೆಯು ಇನ್ನೂ ದೊರೆತಿಲ್ಲ.

ನಾಗಚಂದ್ರನು ಹೊಯ್ಸಳ ೧ನೆಯ ಬಲ್ಲಾಳನ ಆಶ್ರಯದಲ್ಲಿದ್ದ ನೆಂದು ಕಂಡುಬರುತ್ತದೆ. ಕಂತಿ-ಪಂಪನ ಸಮಸ್ಯೆಗಳೆಂಬ ಕೆಲ ಪದ್ಯ

ಗಳಿರುತ್ತವಷ್ಟೇ. ಅವುಗಳಿಂದ ಇವರಿಬ್ಬರೊಳಗೆ ಸಂವಾದವಾಯಿತೆಂದು ತಿಳಿದುಬರುತ್ತದೆ. ಈ ವಿಷಯವಾಗಿ ದೇವಚಂದ್ರನು ಬರೆಯುವುದೇ ನೆಂದರೆ:—"ದೋರರಾಯಂ ಆಸ್ಥಾನದ ಕನ್ನಡ ಸಂಸ್ಕೃತ ಮಹಾಕವಿ ಗಧಿಪಂ ಪಂಪ ಕವಿಯಂ ಕಳುಹಲ್ ಆತಂ ಬಂದು ವಿದ್ಯೆಯಿಂ ಸಾವಿರ ಪ್ರಶ್ನೆಯಂ ಕೇಳಲ್ ಆಕೆ (ಕಬ್ಬಿಗಿತಿಯಾದ ಕಂತಿ) ಉತ್ತರಮಂ ಕುಡಲ್ ಆಕೆಯಂ ರಾಜಸಭೆಗೆಯ್ದಿಸೆ ವಿದ್ವತ್ಸಮೂಹದೊಳಧಿಕ ಕವೀಶ್ವರಿಯಾಗಿರ್ದಳ್."

ನಾಗಚಂದ್ರನು ತನ್ನ ಚಂಪೂರೂಪವಾದ ರಾಮಾಯಣದ ಕಥೆ ಯನ್ನು ಜೈನ ಸಂಪ್ರದಾಯಕ್ಕನುಸರಿಸಿ ಬರೆಯುತ್ತಾನೆ. ಇದಕ್ಕೂ ವಾಲ್ಮೀಕಿ ರಾಮಾಯಣಕ್ಕೂ ಕೆಲ ಹೆಚ್ಚು ಕಡಮೆಗಳುಂಟು: ೧. ರಾಮನ ತಾಯಿ ಅಪರಾಜಿತೆ, ಶತ್ರುಘ್ನನ ತಾಯಿ ಸುಪ್ರಭೆ. ೨. ಪಂಪ ರಾಮಾ ಯಣದಲ್ಲಿ ವಿಶ್ವಾಮಿತ್ರನ ಪ್ರಸ್ತಾಪವೇ ಇಲ್ಲ. ೩. ಹನುಮಂತ ಸುಗ್ರೀವಾದಿಗಳು ಕಪಿಗಳಾಗಿರದೆ ಕಪಿಧ್ವಜಗಳಾಗಿದ್ದರು. ೪. ರಾಮನ ಬಣ್ಣ ಬಿಳಿಯದು, ಲಕ್ಷ್ಮಣನದು ಕರಿಯದು. ೫. ಇವರಿಬ್ಬರು ಕಾರಣ ಪುರುಷರು. ೬. ರಾಮನಿಗಿಂತ ಲಕ್ಷ್ಮಣನೇ ಹೆಚ್ಚಿನವನು. ೭. ಲಕ್ಷ್ಮಣನು ಬಹು ಪತ್ನೀಕನು. ೮. ಲಕ್ಷ್ಮಣನೇ ರಾವಣನನ್ನು ಕೊಂದವನು. ೯. ಲವಾಂಕುಶರು ಹುಟ್ಟಿದ ಬಳಿಕ ಸೀತೆಯು ಅಗ್ನಿ ಪ್ರವೇಶಮಾಡಿ ಜಿನದೀಕ್ಷೆಯನ್ನು ಸ್ವೀಕರಿಸಿದಳು. ಈ ಕಾವ್ಯದ ಬಂಧವು ಬಹು ಲಲಿತವಾಗಿಯೂ ಮನೋಹರವಾಗಿಯೂ ಇದೆ.

ಮಲ್ಲಿನಾಥ ಪುರಾಣವು ೧೯ ನೆಯ ತೀರ್ಥಂಕರನಾದ ಮಲ್ಲಿನಾಥನ ಚರಿತೆ. ಇದಾದರೂ ಚಂಪೂ ಗ್ರಂಥವು. ಇದರಲ್ಲಿ ೧೪ ಆಶ್ವಾಸಗಳಿದ್ದು ಕವಿಯು ತನ್ನ ವರ್ಣನಾಶಕ್ತಿಯನ್ನು ಉತ್ಕೃಷ್ಟವಾಗಿ ತೋರಿಸುತ್ತಾನೆ. ಉದಾಹರಣಾರ್ಥವಾಗಿ ಇವನ ಚಂದ್ರೋದಯದ ವರ್ಣನೆಯ ಒಂದು ಪದ್ಯವನ್ನು ಕೆಳಗೆ ಕೊಡುತ್ತೇವೆ:—

ದಾಂಗುಡಿವಿಟ್ಟು ದಳ್ಳಿಸುವ ಕೆಂದಳದಿಂದೊದೆತ್ತಿ ಲಕ್ಷ್ಮಿ ಕಾ।
ಮಂಗೆ ಮಗಂಗೆ ಶೈಶವ ನಿರೀಕ್ಷಣ ಕೇಳಿಗೆ ನೇತ್ರ ಸೂತ್ರದಿಂ॥

ದಿಂಗಡಲೆಂಬ ಸಜ್ಜೀವನೆಯೊಳ್ ತೆರೆದೊಟ್ಟಿಲ ಮೇಲೆ ಕೆಂಬರ।
ಲ್ದಿಂಗಣಗಟ್ಟಿದಂತುದಯಶೈಲ ಶಿಖಂಡದೊಳಿಂದುಮಂಡಲಂ ॥

**೨೨. ಕಂತಿ** (೧೧೦೦)—ಈಕೆಯು ಜೈನ ಮತದವಳು ಮತ್ತು ಅಭಿನವಪಂಪನ ಸಮಕಾಲೀನಳು. ಈಕೆಯು ಹೆಸರುವಾಸಿಯಾದ ೧ನೆಯ ಕನ್ನಡ ಕಬ್ಬಿಗಿತಿಯಾಗಿದ್ದಳೆಂದು ಹೇಳಬಹುದು. ಈಕೆಯು ಹೊಯ್ಸಳ ಬಲ್ಲಾಳರಾಯನ ಸಭೆಯಲ್ಲಿದ್ದಳೆಂದು ಮೇಲೆ ಬರೆದಿದ್ದೇವೆ. ಈಕೆಯು ಬಾವಿಯಲ್ಲಿ ಬಿದ್ದಾಗ ಅಭಿನವಪಂಪನು ಕೇಳಿದ ಸಾವಿರ ಪ್ರಶ್ನೆಗಳಿಗೆ ಈಕೆ ಉತ್ತರಕೊಟ್ಟಳೆಂತಲೂ ಅಭಿನವಪಂಪನು ಒಮ್ಮೆ ಸತ್ತಿರುವಂತೆ ನಟಿಸಿದಾಗ ಈಕೆಯು ಅವನ ಕವಿತಾ ಚಾತುರ್ಯವನ್ನು ಹೊಗಳಿದಳೆಂತಲೂ* ದೇವಚಂದ್ರನು ಬರೆಯುತ್ತಾನೆ. ಈಕೆ ಯಾವ ಕಾವ್ಯವನ್ನು ಬರೆದಳೆಂಬುದು ಇನ್ನೂ ಗೊತ್ತಾಗಿಲ್ಲ.

**೨೩-೨೪. ಹಂಪೆಯ ಮಾದಿರಾಜ, ಕವಿತಾವಿಲಾಸ** (೧೧೦೦)—ರಾಘವಾಂಕನು (೧೧೬೫) ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಹಂಪೆಯ ಮಾದಿರಾಜನನ್ನು ಸುಕವಿ ಎಂದು ಕರೆಯುತ್ತಾನೆ; ಮತ್ತು ದುರ್ಗಸಿಂಹನು ತನ್ನ ಪಂಚತಂತ್ರದಲ್ಲಿ ಕವಿತಾವಿಲಾಸನನ್ನು ಹೊಗಳುತ್ತಾನೆ. ಆದರೆ ಇವರ ಗ್ರಂಥಗಳಾವವೂ ಇನ್ನೂ ಸಿಕ್ಕಿಲ್ಲ.

**೨೫. ವಾದಿಕುಮುದಚಂದ್ರ** (೧೧೦೦) — ಇವನು ಜೈನ ಕವಿಯು. ಮಾಘಣಂದಿ ಸಿದ್ಧಾಂತ ಚಕ್ರವರ್ತಿಯ ಮಗನು. ಇವನು ಜಿನಸಂಹಿತೆಯೆಂಬ ಪ್ರತಿಷ್ಠಾಕಲ್ಪಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದು

---

* ಕಲ್ಲೊ ಸರ್ಗಂ ಕೊಯ್ದೊಣಗಿದ।
ಪುಲ್ಲೆಲ್ಲಂ ಚಿಗುರ್ಗುಮಡವಿಗಿಡದ ಮರಂಗಳ್ ॥
ಪಲ್ಲವಿಕುಮಮ್ ಕವಿಗಜ।
ಮಲ್ಲನ ಪಂಪುಗನ ಕಾವ್ಯರಸತಾಮೃತದಿಂ ॥
ಇನ್ನೇಕೆ ದೋರನೋಲಗ।
ಮಿನ್ನೇಕೆ ಕವಿತ್ವವಾದ ತರ್ಕ ಸಮಸ್ಯಂ ॥
ಇನ್ನೇಕೆ ಬಲ್ವಿಚಾರಂ।
ಚನ್ನಿಗ ಕವಿ ಪಂಪರಾಜನಱಿದ ಬೞಿಕ್ಕಂ ॥

ಚತುರ್ವಿಧ ಪಾಂಡಿತ್ಯ ಚಕ್ರವರ್ತಿ ಎಂದು ತನ್ನನ್ನು ಹೊಗಳಿಕೊಳ್ಳುತ್ತಾನೆ.

**೨೬-೨೮. ಮಲ್ಲಿಕಾರ್ಜುನಭಟ್ಟ** (೧೧೦೨), **ಅಚರಾಜ, ಮಲ್ಲಿದೇವ** (೧೧೦೪)—ಮಲ್ಲಿಕಾರ್ಜುನಭಟ್ಟನು ಬ್ರಾಹ್ಮಣ ಕವಿಯಾಗಿದ್ದನು. ಇವನು ಸಿಕಾರಪುರದ ೯೮, ೯೯ ನೆಯ ಶಾಸನಗಳನ್ನೂ ಭಾವುದಾಜಿಯವರ ಪುಸ್ತಕದ ೪೮ ನೆಯ ಶಾಸನವನ್ನೂ ಬರೆದಿದ್ದಾನೆ. ಇವನು ಗೊಬ್ಬೂರಿನವನಾಗಿರಬಹುದು. ಇವನು ಅವಧಾರಣೆಯಲ್ಲಿಯೂ ಕವಿತ್ವದಲ್ಲಿಯೂ ಸಮರ್ಥನಾಗಿದ್ದನೆಂದು ಇವನು ಬರೆದ ಶಾಸನಗಳಿಂದ ಕಂಡು ಬರುತ್ತದೆ. ಇವನು ಒಬ್ಬ ಅಧಿಕಾರಿಯಾಗಿದ್ದರೂ ಆಗಿರಬಹುದು. ಅಚರಾಜ ಮಲ್ಲಿದೇವರು ಅಬಲೂರಿನಲ್ಲಿದ್ದ ೧೧೦೪ ನೆಯ ಇಸ್ವಿಯ ಒಂದು ಶಾಸನವನ್ನು ಬರೆದರು. "ಸುಕರ ಕವಿಯುಪ್ಪಚರಾಜನುಂ ಸಹಜ ಕವಿ ಮಲ್ಲಿದೇವನುಂ ಬರೆದರ್" ಎಂದು ಈ ಶಾಸನದ ಕೊನೆಯಲ್ಲಿ ಬರೆದಿದೆ. ಈ ಮುವ್ವರು ಬರೆದ ಗ್ರಂಥಗಳಾವವು ಸಿಕ್ಕಿಲ್ಲ.

**೨೯. ನಯುಸೇನ** (೧೧೧೨)—ಇವನು ಧಾರವಾಡ ಜಿಲ್ಲಾ ಮುಳಗುಂದದ ಜೈನ ಕವಿಯು. ನರೇಂದ್ರಸೇನಮುನಿಯು ಇವನ ಗುರುವಾಗಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ. "ಸುಕವಿನಿಕರ ಪಿಕಮಾಕಂದ," ಸುಕವಿ ಜನಮನಃಪದ್ಮಿನೀ ರಾಜಹಂಸ, ದಿಗಂಬರದಾಸ, ನೂತ್ನ ಕವಿತಾವಿಲಾಸ ಎಂಬ ಬಿರುದುಗಳು ಇವನಿಗಿದ್ದವು. ಕನ್ನಡ ಗ್ರಂಥಕಾರರು ಸಂಸ್ಕೃತ ಪದಗಳನ್ನು ಯಥೇಚ್ಛವಾಗಿ ಉಪಯೋಗಿಸಕೂಡದೆಂದು ಇವನು ಕೆಳಗಿನ ಪದ್ಯಗಳಲ್ಲಿ ಹೇಳುತ್ತಾನೆ:—

ಪೊಸಗನ್ನಡದಿಂ ವ್ಯಾವ।ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮುಂ ಚಿಂ ॥
ತಿಸಿ ಕೂಡಲಾಱದಕ್ಕಟ।ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ॥

ಸಕ್ಕದಮಂ ಪೇಳ್ವೊಡೆ ನೆಱೆ। ಸಕ್ಕದಮಂ ಪೇಳ್ಗೆ ಶುದ್ಧ ಕನ್ನಡದೊಳ್ ತಂ॥
ದಿಕ್ಕುವುದೆ ಸಕ್ಕದಂಗಳ। ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ॥

ನಯಸೇನನು ತನ್ನ ಧರ್ಮಾಮೃತವೆಂಬ ಗ್ರಂಥವನ್ನು ಮುಳಗುಂದದಲ್ಲಿ ೧೧೧೨ರೊಳಗೆ ಬರೆದನು. ಇದು ಅಚ್ಚಾಗಿದೆ. ಇದರಲ್ಲಿ ಜಿನಮತದ ಎಲ್ಲ ಸಾರವು ಕೊಡಲ್ಪಟ್ಟಿದೆ*. ಇದರಲ್ಲಿ ೧೪ ಆಶ್ವಾಸಗಳಿವೆ. ಅವುಗಳಲ್ಲಿ—೧. ಜಿನದರ್ಶನ ಮಾಹಾತ್ಮೆ, ಆದರ್ಶನದ ಅಂಗಗಳಾದ, ೨. ನಿಶ್ಶಂಕೆ, ೩. ನಿಷ್ಕಾಂಕ್ಷೆ, ೪. ನಿರ್ವಿಚಿಕಿತ್ಸೆ, ೫. ಅಮೂಢದೃಷ್ಟಿತ್ವ, ೬. ಉಪಗೂಹನ, ೭. ಸ್ಥಿತಿಕಾರಣ, ೮. ವಾತ್ಸಲ್ಯ, ೯. ಧರ್ಮಪ್ರಭಾವನೆಗಳೂ, ೧೦. ಅಹಿಂಸಾವ್ರತ, ೧೧. ಸತ್ಯವ್ರತ, ೧೨. ಅಸ್ತೆಯವ್ರತ, ೧೩. ಸುಬ್ರಹ್ಮವ್ರತ, ೧೪. ನಿಷ್ಪರಿಗ್ರಹವ್ರತ ಎಂಬ ೫ ಅಣುವ್ರತಗಳೂ ವರ್ಣಿಸಲ್ಪಟ್ಟಿವೆ.

ನಯಸೇನನ ಮತದಂತೆ ಸಂಬೋಧನಕ್ಕೆ ದೀರ್ಘವುಂಟೆಂದು ನಾಗವರ್ಮನು (೧೧೪೫) ತನ್ನ ಕರ್ನಾಟಕ ಭಾಷಾಭೂಷಣದ ೧೨ನೆಯ ಸೂತ್ರದಲ್ಲಿ ಹೇಳುತ್ತಾನೆ. ಆದ್ದರಿಂದ ನಯಸೇನನು ಒಂದು ಕನ್ನಡ ವ್ಯಾಕರಣವನ್ನು ಬರೆದಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ. ಆದರೆ ಈ ಊಹೆಗೆ ಮತ್ತಾವ ಆಧಾರಗಳು ದೊರೆತಿಲ್ಲ.

**೩೦. ರಾಜಾದಿತ್ಯ** (೧೧೨೦)—ಇವನು ಜೈನಕವಿ. ಕುಂಡಿಮಂಡಳದ ಪೂವಿನಬಾಗಿಯೇ ಇವನ ಊರು. ಕನಕಮಾಲೆಯೆಂಬುವಳು ಇವನ ಹೆಂಡತಿಯಾಗಿದ್ದಳು. ಇವನಿಗೆ ರಾಜವರ್ಮ, ಭಾಸ್ಕರ, ಬಾಚ, ಬಾಚರಾಜ ಎಂಬ ಹೆಸರುಗಳೂ, ಗಣಿತವಿಳಾಸ, ಒಜೆಬೆಡಂಗ, ಪದ್ಯವಿದ್ಯಾಧರ ಎಂಬ ಬಿರುದುಗಳೂ ಇದ್ದವು. ಇವನು ಹೊಯ್ಸಳ ವಿಷ್ಣುವರ್ಧನನ ಆಸ್ಥಾನ ಪಂಡಿತನಾಗಿದ್ದನೆಂದು ತೋರುತ್ತದೆ. ಇವನು ವ್ಯವಹಾರಗಣಿತ, ಕ್ಷೇತ್ರಗಣಿತ, ವ್ಯವಹಾರರತ್ನ, ಜೈನಗಣಿತ ಸೂತ್ರೋ

* ಜಿನಮತದೊಳೆನಿತು ಸಾರಮು। ದನಿತುಂ ಲೇಸಾಗಿ ತೋರ್ಪುದು॥

ದಾಹರಣ, ಚಿತ್ರಹಸುಗೆ, ಲೀಲಾವತಿ ಎಂಬ ಗ್ರಂಥಗಳನ್ನು ಸುಬೋಧ ವಾಗಿ ಬರೆದುದರಿಂದ ಗಣಿತಶಾಸ್ತ್ರ ಪ್ರವೀಣನೂ ಕವಿತಾ ಪ್ರೌಢಿಮೆ ಯುಳ್ಳವನೂ ಆಗಿದ್ದನೆನ್ನಲಿಕ್ಕೆ ಅಡ್ಡಿಯಿಲ್ಲ.

**೩೧. ಮೌಕ್ತಿಕಕವಿ** (೧೧೨೦)—ಇವನು ಜೈನ ಕವಿಯು. ಚಂದ್ರನಾಥಾಷ್ಟಕವೆಂಬ ಲಕ್ಷ್ಮಿಯ ಸ್ತುತಿಯನ್ನು ಬರೆದಿದ್ದಾನೆ. ಇದರಲ್ಲಿ ೯ ವೃತ್ತಗಳಿದ್ದು ಪ್ರತಿಯೊಂದು ವೃತ್ತವು ಚಂದ್ರನಾಥ ಎಂದು ಮುಗಿಯುತ್ತದೆ.

**೩೨–೩೩. ಮಾದಿರಾಜ** (೧೧೨೩), **ಮಹಾಪ್ರಭು ಕೇಶಿರಾಜ** (೧೧೨೪)—ದಾವಣಗೆರೆಯ ೨ ನೆಯ ಶಾಸನವನ್ನು 'ಕವಿ ಮಾದಿರಾಜಂ' ಬರೆದನೆಂತಲೂ ಚನ್ನಗಿರಿಯ ೬೧ ನೆಯ ಶಾಸನವನ್ನು ಸರಸ್ವತೀ ಕಂಠಾ ವತಂಸನಾದ ಕೇಶಿರಾಜನು ಬರೆದನೆಂತಲೂ ಆಯಾ ಶಾಸನಗಳಿಂದ ತಿಳಿದು ಬರುತ್ತದೆ. ಇವರಿಬ್ಬರು ಯಾವ ಗ್ರಂಥಗಳನ್ನು ಬರೆದರೆಂಬುದು ಗೊತ್ತಾಗುವುದಿಲ್ಲ. ಚನ್ನಗಿರಿ ಶಾಸನವು ಕೇಶಿರಾಜನನ್ನು ಕೆಳಗೆ ಬರೆದಂತೆ ವರ್ಣಿಸುತ್ತದೆ:—

ಪುರುಷಾರ್ಥದ ಕಣಿ ಸತ್ಯದ। ಕರು ಪೆರ್ಮೆಯ ನೆರ್ಮವೆಂದು
ವಿಬುಧಾಗ್ರಣಿಗಳ್ ॥
ಕರವುಲಿವ್ತಿಯಿಂದ ಪೊಗಟಿಲ್। ಧರೆಗೆಸೆದಂ ಕೇಶಿರಾಜನೂರ್ಜಿತ
ತೇಜಂ ॥

**೩೪. ಕೀರ್ತಿವರ್ಮ** (೧೧೨೫)—ಇವನು ಚಾಳುಕ್ಯ ಸಾರ್ವ ಭೌಮನಾದ ೧ ನೆಯ ಸೋಮೇಶ್ವರ ಕೇತಲದೇವಿಯರ ಮಗನೂ ಶಕ ಕರ್ತನಾದ ವಿಕ್ರಮಾಂಕನ ತಮ್ಮನೂ ದೇವಚಂದ್ರಮುನಿಯ ಶಿಷ್ಯನೂ ಆಗಿದ್ದನು. ಇವನು ಗೋವೈದ್ಯವೆಂಬ ಗ್ರಂಥವನ್ನು ಬರೆದನು. ಇದರ ಕೆಲಭಾಗವು ಪದ್ಯಾತ್ಮಕವಾಗಿಯೂ ದೊಡ್ಡ ಭಾಗವು ಗದ್ಯಾತ್ಮಕ ವಾಗಿಯೂ ಇರುತ್ತದೆ. ಇವನು ಕವಿತಾಬ್ಧಿಚಂದ್ರಮ, ವೈದ್ಯರತ್ನ, ಕೀರ್ತಿವಿಳಾಸ ಎಂದು ತನ್ನನ್ನು ಹೊಗಳಿಕೊಳ್ಳುತ್ತಾನೆ.

**೩೫. ಬ್ರಹ್ಮಶಿವ** (೧೧೨೫)—ಇವನು ಪೊಟ್ಟಣಗೆರೆಯವನು, ಸಿಂಗರಾಜನ ಮಗನು, ವೀರಣಂದಿಮುನಿಯ ಶಿಷ್ಯನು. ಇವನು ಶೈವ

ಮತವನ್ನು ಅಸಾರವೆಂದೆಣಿಸಿ, ಜೈನನಾದಂತೆ ಕಂಡುಬರುತ್ತದೆ. ಇವನಿಗೆ ಕವಿಚಕ್ರವರ್ತಿಯೆಂಬ ಬಿರುದನ್ನು ಯಾವ ರಾಜನು ಕೊಟ್ಟನೆಂಬುದು ಗೊತ್ತಾಗುವುದಿಲ್ಲ. ಇವನು ಸಮಯಪರೀಕ್ಷೆ, ತ್ರೈಲೋಕ್ಯಚೂಡಾಮಣಿ ಸ್ತೋತ್ರ ಎಂಬೆರಡು ಗ್ರಂಥಗಳನ್ನು ಬರೆದನು. ಯಾವ ಕವಿಯೂ ಇವನನ್ನು ಹೊಗಳಿಲ್ಲ. ಇವನು ತನ್ನ ಗ್ರಂಥಗಳಲ್ಲಿ ಪರಮತದವರನ್ನು ಹಳಿಯುತ್ತಾನೆ.

**೩೬-೩೯. ವಿಷ್ಣುದಂಡಾಧಿಪ** (೧೧೪೦), **ಸಾಂತಮಹಂತ** (೧೧೩೭), **ಹರಿಪಾಲ** (೧೧೪೦), **ಹಂಸರಾಜ** (೧೧೪೦)–ಚಿಕ್ಕಮಗಳೂರಿನ ೧೩೭ನೆಯ ಶಾಸನದಿಂದಲೂ ನಾಗಮಂಗಲದ ೨೮ನೆಯ ಶಾಸನದಿಂದಲೂ ಮೊದಲಿನ ಇಬ್ಬರು ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಕವಿಗಳಾಗಿದ್ದಂತೆ ತೋರುತ್ತದೆ. ಭಾಷಾಭೂಷಣ, ಶಬ್ದಮಣಿದರ್ಪಣಗಳ ಸೂತ್ರಗಳಲ್ಲಿ ಕಡೆಯ ಇಬ್ಬರ ಪ್ರಯೋಗಗಳು ಉದಾಹರಿಸಲ್ಪಟ್ಟಿವೆ. ಆದರೆ ಈ ನಾಲ್ಕು ಜನರು ಯಾವ ಗ್ರಂಥಗಳನ್ನು ಬರೆದರೆಂಬುದು ಗೊತ್ತಾಗುವುದಿಲ್ಲ.

**೪೦. ಕರ್ಣಪಾರ್ಯ** (೧೧೪೦)—ಇವನು ಜೈನ ಕವಿ. ಕಲ್ಯಾಣಕೀರ್ತಿಯು ಇವನ ಗುರು. ಜೀಮೂತವಾಹನ ಮನೆತನದ ಲಕ್ಷ್ಮಣರಾಜನು ಇವನ ಆಶ್ರಯದಾತನು. ಇವನು—೧. ನೇಮಿನಾಥಪುರಾಣ, ೨. ಮಾಳವೀಮಾಧವ, ೩. ವೀರೇಶಚರಿತ ಎಂಬ ೩ ಗ್ರಂಥಗಳನ್ನು ಬರೆದನು. ಇವುಗಳೊಳಗೆ ನೇಮಿನಾಥಪುರಾಣವು ಮಾತ್ರ ನಮಗೆ ದೊರೆತಿದೆ. ಇದು ೨೨ನೆಯ ತೀರ್ಥಂಕರನಾದ ನೇಮಿನಾಥನ ಚರಿತವು. ಇದು ೧೪ ಆಶ್ವಾಸಗಳುಳ್ಳ ಚಂಪೂ ಗ್ರಂಥವು. ಇದರಲ್ಲಿ ಕೃಷ್ಣಾವತಾರ ಕಥೆಯೂ ಪಾಂಡವರ ಚರಿತ್ರೆಯೂ ಭಾರತ ಯುದ್ಧವೂ ವರ್ಣಿಸಲ್ಪಟ್ಟಿವೆ. ತನ್ನ ಪೋಷಕನಾದ ಲಕ್ಷ್ಮೀಧರರಾಜನನ್ನು ಕವಿಯು ವಿಷ್ಣುವಿಗೆ ಹೋಲಿಸಿ ಹೊಗಳುತ್ತಾನೆ.

**೪೧. ೨ನೆಯ ನಾಗವರ್ಮ** (೧೧೪೫)—ಇವನ ಹೆಸರು ನಾಕಿಗ. ತಂದೆಯ ಹೆಸರು ದಾಮೋದರ. ಇವನು ಚಾಳುಕ್ಯ ಸಾರ್ವ

ಭೌಮನಾದ ಪೆರ್ಮಾಜಗದೇಕಮಲ್ಲ(೧೧೩೮–೪೯)ನ ಕಟಕೋಪಾಧ್ಯಾಯನಾಗಿದ್ದನು. ಇವನು ೧೩ನೆಯ ಶತಮಾನದ ಆರಂಭದಲ್ಲಿದ್ದ ಜನ್ನಕವಿಯ ಗುರುವಾಗಿದ್ದನು. ತನಗಿದ್ದ ಪೂರ್ವ ಕವಿಗಳ ಸಂಬಂಧವನ್ನು ಹೇಳುವಾಗ ಜನ್ನನು ಜಿನಪುರಾಣಗಳನ್ನು ಬರೆದವರೊಳಗೆ ನಾಗವರ್ಮನು ಒಬ್ಬನಾಗಿದ್ದನೆಂದು ಸೂಚಿಸುತ್ತಾನೆ. ಇದು ನಿಜವಾಗಿದ್ದರೆ ನಾಗವರ್ಮನ ಜಿನಪುರಾಣವು ನಮಗೆ ಇನ್ನೂ ದೊರೆತಿಲ್ಲೆಂದು ಹೇಳಬಹುದು. ಇವನಿಗೆ ಅಭಿನವಶರ್ವವರ್ಮ, ಕವಿಕರ್ಣಪೂರ, ಕವಿತಾಗುಣೋದಯ, ಕವಿಕಂಠಾಭರಣ ಎಂಬ ಬಿರುದುಗಳಿದ್ದವು.

ಇವನು ಬರೆದ ೧. ಕಾವ್ಯಾವಲೋಕನ, ೨. ಕರ್ನಾಟಕ ಭಾಷಾಭೂಷಣ, ೩. ವಸ್ತುಕೋಶ ಎಂಬ ಮೂರು ಗ್ರಂಥಗಳು ಉಪಲಬ್ಧವಾಗಿವೆ. ಕಾವ್ಯಾವಲೋಕನವು ಅಲಂಕಾರ ಗ್ರಂಥವು. ಇದರಲ್ಲಿ ೫ ಅಧಿಕರಣಗಳು:—೧. ಶಬ್ದಸ್ಮೃತಿ, ೨. ಕಾವ್ಯಮಲವ್ಯಾವೃತ್ತಿ, ೩. ಗುಣವಿವೇಕ, ೪. ರೀತಿಕ್ರಮ ರಸನಿರೂಪಣ, ೫. ಕವಿಸಮಯ—ಇವೆ. ಕರ್ನಾಟಕ ಭಾಷಾಭೂಷಣವು ವ್ಯಾಕರಣ ಗ್ರಂಥವು. ಇದರಲ್ಲಿದ್ದ ೨೮೦ ಸಂಸ್ಕೃತ ಸೂತ್ರಗಳು ೧೦ ಪರಿಚ್ಛೇದಗಳಲ್ಲಿ ವಿಭಾಗಿಸಲ್ಪಟ್ಟಿವೆ. ಇದು ನಮ್ಮ ತಾಯ್ನುಡಿಯ ೧ನೆಯ ವ್ಯಾಕರಣವು. ವಸ್ತುಕೋಶದಲ್ಲಿ ೩ ಕಾಂಡಗಳು—೧. ಏಕಾರ್ಥ ಕಾಂಡ, ೨. ನಾನಾರ್ಥ ಕಾಂಡ. ೩. ಸಾಮಾನ್ಯ ಕಾಂಡ—ಇರುತ್ತವೆ. ಇದೇ ನಮಗೆ ದೊರೆತಿರುವ ಕನ್ನಡದ ಮೊದಲನೆಯ ನಿಘಂಟವು.

ನೃಪತುಂಗ ನಾಗವರ್ಮರು ಹೇಳುವ ದಕ್ಷಿಣೋತ್ತರ ಮಾರ್ಗಗಳು ವೈದರ್ಭ ಗೌಡಮಾರ್ಗಗಳೇ ಹೊರತು ಕನ್ನಡದ ಮಾರ್ಗಗಳಲ್ಲ.

**೪೨. ದುರ್ಗಸಿಂಹ** (೧೧೪೫)—ಇವನು ಬ್ರಾಹ್ಮಣ ಕವಿ. ಕಿಸುಕಾಡು ನಾಡಿನೊಳಗೆ ಸಯ್ಯಡಿಯೆಂಬ ಅಗ್ರಹಾರದಲ್ಲಿದ್ದ ಈಶ್ವರಾರ್ಯ ರೇವಕಬ್ಬೆ ಎಂಬವರ ಮಗನು; ಚಾಳುಕ್ಯ ಸಾರ್ವಭೌಮನಾದ ಜಗದೇಕಮಲ್ಲನ ಸಂಧಿವಿಗ್ರಹ ಮಂತ್ರಿಯಾಗಿದ್ದು ಶಿವ ವಿಷ್ಣು

ವರ ಗುಡಿಗಳನ್ನು ಕಟ್ಟಿಸಿದ್ದಲ್ಲದೆ, ವಸುಭಾಗಭಟ್ಟನ ಪಂಚತಂತ್ರವನ್ನು ಕನ್ನಡಿಸಿದನು. ಇವನು ತನ್ನ ಗುಣಗಳನ್ನು ಹೇಳಿಕೊಂಡ ಪದ್ಯಗಳಲ್ಲಿ ಒಂದು ಪದ್ಯವನ್ನು ಮಾದರಿಯಾಗಿ ಕೆಳಗೆ ಕೊಡುತ್ತೇವೆ:—

ಅಱಿವಿಂಗಾಕರವೊಳ್ಗುಣಕ್ಕೆ ಕಣಿ ಶೌಚಕ್ಕಾಸ್ಪದಂ ಜಾಣ್ಮಸ।
ಕ್ಕೆಱಿವಟ್ಟೊಳ್ನುಡಿಗಾರ್ಮವಾಯತಿಗಡರ್ಪಾರ್ಪಿಂಗೆ ಲೀಲಾ
ಗೃಹಂ ॥
ಗುಱಿ ಧರ್ಮಕ್ಕೆ ವಿನೀತ ವೃತ್ತಿಗೆ ತವರ್ ಸತ್ಯಕ್ಕಧಿಷ್ಠಾನಮೆಂ।
ದಱಿತಂ ಕೆಯ್ಮುಗೆ ಕೂರ್ತು ಕೀರ್ತಿಸುವುದುರ್ವೀಮಂಡಲಂ
ದುರ್ಗನಂ ॥

ದುರ್ಗಸಿಂಹನ ಪಂಚತಂತ್ರದಲ್ಲಿ—೧. ಭೇದ ಪ್ರಕರಣ, ೨. ಪರೀಕ್ಷಾವ್ಯಾವರ್ಣ, ೩. ವಿಶ್ವಾಸ ಪ್ರಕರಣ, ೪. ವಂಚನಾ ಪ್ರಕರಣ, ೫. ಮಿತ್ರಕಾರ್ಯ ಪ್ರಕರಣ—ಎಂಬ ೫ ತಂತ್ರಗಳಿವೆ. ಇವನ ಬಂಧವು ಪ್ರೌಢವಾಗಿಯೂ ಪ್ರಾಸಬದ್ಧವಾಗಿಯೂ ಇರುತ್ತದೆ.

**೪೩–೪೬. ಸುಕರ ಸುಕವಿಕಂಠಾಭರಣ** (೧೧೪೫), **ಮಧುಸೂದನದೇವ** (೧೧೪೭), **ಕವಿ ಕಾಳಿದಾಸ** (೧೧೪೭), **ಮುಖ್ಯ ಪಂಡಿತ** (೧೧೪೭)—ಸೊರಬದ ೧೩೮ ನೆಯ ಶಾಸನದಲ್ಲಿ ಒಬ್ಬ ಎಕ್ಕಲ ದೇವನೆಂಬವನು ಸುಕರ ಸುಕವಿಕಂಠಾಭರಣಾದ್ಯನೇಕ ಕವಿಜನ ಪ್ರಿಯನಾಗಿದ್ದನೆಂದು ಬರೆದಿದೆ. ಮಧುಸೂದನದೇವನೆಂಬ ಬ್ರಾಹ್ಮಣನು ಉದ್ದಾಮ ಕವಿಯಾಗಿದ್ದನೆಂದು ದಾವಣಗೆರೆಯ ೪೧ ನೆಯ ಶಾಸನದಿಂದ ಕಂಡುಬರುತ್ತದೆ. ಚಿಕ್ಕಮಗಳೂರಿನ ೧೪೦ ನೆಯ ಶಾಸನದಲ್ಲಿ—"ಪೆಂಪನೆ ತಾಳ್ದಲ್ ಕವಿ ಕಾಳಿದಾಸನೆ ವಲಂ ಧನ್ಯಂ ಪೆಱರ್ ಧನ್ಯರೇ" ಎಂದು ಬರೆದಿದೆ. ಲಕ್ಷ್ಮೇಶ್ವರದ ಒಂದು ಶಾಸನದಲ್ಲಿ "ಶ್ರೀಮತ್ಕರ್ನಾಟಕ ಸುಕವಿ ಮುಖ್ಯ ಪಂಡಿತರ ಕವಿತೆ" ಎಂದು ಬರೆದಿದೆ. ಆದರೆ ಈ ನಾಲ್ವರು ಯಾವ ಗ್ರಂಥವನ್ನು ಬರೆದರೆಂಬುದು ಇನ್ನೂ ಗೊತ್ತಾಗಿಲ್ಲ.

**೪೭. ಮೇಘಚಂದ್ರ** (೧೧೪೮)—ಇವನು ಜೈನ ಕವಿಯಾಗಿದ್ದು ಪೂಜ್ಯಪಾದರ ಸಮಾಧಿ ಶತಕಕ್ಕೆ ೧೧೪೮ ರಲ್ಲಿ ಒಂದು ಟೀಕೆಯನ್ನು ಬರೆದನು.

**೪೮. ಉದಯಾದಿತ್ಯ** (೧೧೫೦)—ಇವನು ಯಾರೆಂಬುದು ಇನ್ನೂ ಗೊತ್ತಾಗಿಲ್ಲ. ಇವನಿಗೆ ಕವಿರತ್ನಶೇಖರ, ರಾಜಸುಕವಿ ರತ್ನಾಭರಣ ಮುಂತಾದ ಬಿರುದುಗಳಿದ್ದುವು. ೭೨ ಪದ್ಯಗಳುಳ್ಳ ಉದಯಾದಿತ್ಯಾಲಂಕಾರವೆಂಬ ಒಂದು ಚಿಕ್ಕ ಗ್ರಂಥವು ಮಾತ್ರ ನಮಗೆ ದೊರೆತಿದೆ. ಈತನ ಬಂಧವು ಪ್ರೌಢವಾಗಿದೆ. ಉತ್ಪ್ರೇಕ್ಷೆಯ ಲಕ್ಷಣ ಹೇಳುವ ಇವನದೊಂದು ಪದ್ಯವನ್ನು ಕೆಳಗೆ ಕೊಡುತ್ತೇವೆ:—

ಇರೆ ವಸ್ತುವೊಂದು ತನ್ನಯ।
ಪರಿಯಿಂ ಬೇಱೊಂದನದಱೊಳುತ್ಪ್ರೇಕ್ಷಿಸುವಾ।
ಪರಿಯುತ್ಪ್ರೇಕ್ಷಾಲಂಕೃತಿ।
ಬಿರಿದುವು ನಗುವಂತೆ ಬಿರಯಿಯಂ ಮಲ್ಲಿಗೆಗಳ್ ॥

**೪೯. ಸುಮನೋಬಾಣ** (೧೧೫೦)—ಇವನ ಹೆಸರು ಶಂಕರ. ಇವನ ಹೆಂಡತಿಯ ಹೆಸರು ಗಂಗಾ. ಇವರಿಬ್ಬರ ಮಗನೇ ಜನ್ನ ಕವಿಯು. ಇವರಿಬ್ಬರ ಅಳಿಯನೇ ಮಲ್ಲಿಕಾರ್ಜುನ ಕವಿಯು. ಇವರಿಬ್ಬರ ಮಗಳ ಮಗನೇ ಶಬ್ದಮಣಿದರ್ಪಣಕಾರನಾದ ಕೇಶಿರಾಜನು. ಇವನು ಸ್ಮಾರ್ತನಾಗಿದ್ದು ಮುಂದೆ ಜೈನ ಮತವನ್ನು ಸ್ವೀಕರಿಸಿರಬಹುದು. ಇವನು ಹೊಯ್ಸಳ ನರಸಿಂಹ(೧೧೪೧–೧೧೭೩)ನ ಕಟಕೋಪಾಧ್ಯನಾಗಿದ್ದನೆಂದು ತೋರುತ್ತದೆ. ತನ್ನ ಅನಂತನಾಥ ಪುರಾಣದ ಒಂದು ಪದ್ಯದಲ್ಲಿ ಜನ್ನನು ಇವನನ್ನು ಜಿನ ಪುರಾಣ ಕರ್ತೃಗಳೊಳಗೆ ಸೇರಿಸಿದ್ದರಿಂದ ಸುಮನೋಬಾಣನು ಒಂದು ಜೈನ ಪುರಾಣವನ್ನು ಬರೆದಿರಲಿಕ್ಕೆ ಬೇಕು. ಆದರೆ ಇವನ ಗ್ರಂಥಗಳಾವವೂ ನಮಗೆ ಇನ್ನೂ ದೊರೆತಿಲ್ಲ.

**೫೦. ಚಾವುಂಡರಾಯ** (೧೧೫೦)—ಇವನು ಬ್ರಾಹ್ಮಣ ಕವಿಯಾಗಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ. ಇವನು ಲೋಕೋಪಕಾರ ಎಂಬ ಗ್ರಂಥವನ್ನು ಬರೆದನು. ಈ ಗ್ರಂಥದ ೫, ೬ ಆಶ್ವಾಸಗಳು ಮಾತ್ರ ದೊರೆತಿವೆ. ಆಶ್ವಾಸದ ಕೊನೆಯಲ್ಲಿ "ಶ್ರೀಮತ್ಕವಿಳಾಸ ತನೂಜಂ" ಎಂದು ಬರೆದುದರಿಂದ ಕವಿಳಾಸವು ಕವಿತಾವಿಳಾಸದ ಅಥವಾ ಕಲಾವಿಳಾಸದ ತಪ್ಪುರೂಪವಾಗಿರಲಿಕ್ಕೆ ಬೇಕು.

ಕವಿತಾವಿಳಾಸನೆಂಬ ಕವಿಯು ೧೧೦೦ ರಲ್ಲಿದ್ದನು. ಆದರೆ ಕಲಾವಿಳಾಸನೆಂಬವನು ಎಂದಿದ್ದನೆಂಬುದು ತಿಳಿಯುವುದಿಲ್ಲ. ಲೋಕೋಪಕಾರದಲ್ಲಿ ಉದಕಾರ್ಗಳ ವರ್ಣನೆಯೂ ಸಾಮುದ್ರಿಕ ಲಕ್ಷಣಗಳೂ ಕಂದ ಪದ್ಯಗಳಲ್ಲಿ ವರ್ಣಿಸಲ್ಪಟ್ಟಿವೆ.

**೫೧. ಜಗದ್ದಳ ಸೋಮನಾಥ** (೧೧೫೦)—ಇವನು ಜೈನಕವಿಯಾಗಿದ್ದು ಕರ್ನಾಟಕ ಕಲ್ಯಾಣಕಾರಕವೆಂಬ ಗ್ರಂಥವನ್ನು ಬರೆದನು. ಅದನ್ನು ಸುಮನೋಬಾಣ ಕವಿಯೂ ಅಭಯಚಂದ್ರ ಸಿದ್ಧಾಂತಿಯೂ ತಿದ್ದಿದರೆಂದು ಹೇಳುತ್ತಾನೆ. ಇದರ ಸಂಪೂರ್ಣ ಗ್ರಂಥವು ಇನ್ನೂ ದೊರೆತಿಲ್ಲ. ಸಿಕ್ಕ ಅಸಮಗ್ರ ಪ್ರತಿಯಲ್ಲಿ ಷೋಡಶ ಜ್ವರ, ಅತಿಸಾರ ಗ್ರಹಿಣೀ, ರಕ್ತಪಿತ್ತ, ಕ್ಷಯ, ಉದರ ಗುಲ್ಮಗಳ ನಿದಾನ ಚಿಕಿತ್ಸೆಗಳು ಹೇಳಲ್ಪಟ್ಟಿವೆ. ಗೋವೈದ್ಯ ಬಿಟ್ಟರೆ ಇದು ಮೊದಲನೆಯ ವೈದ್ಯ ಗ್ರಂಥವು. ಮಾದರಿಯಾಗಿ ಒಂದು ಪದ್ಯವನ್ನು ಕೆಳಗೆ ಕೊಡುತ್ತೇವೆ:—

ಬೆರಸುವುದುಬಿಸಿಘೃತಮುಂ ಶ।
ರ್ಕರೆಯುಂ ನೆಲ್ಲಿಯುಮನಮದುರ್ ವಳ್ಳಿಯುಪುಡಿಯುಂ ॥
ಪಿರಿದೆನಿಪ ರಕ್ತಪಿತ್ತದ।
ಭರಮಂ ಪರಿಹರಿಕುಮಬೀಗಿದಮೃತಾಮಳಕಂ ॥

**೫೨. ಸಕಲೇಶಮಾದರಸ** (೧೧೫೦)—ಇವನು ವೀರಶೈವ ಕವಿಯಾಗಿದ್ದು ೧೧೩ ವಚನಗಳನ್ನು ಬರೆದಿದ್ದಾನೆ. ಇವನ ತಂದೆಯೂ ಕಲ್ಲಕುರಿಕೆಯ ದೊರೆಯೂ ಆದ ಮಲ್ಲರಸನು ವಿರಕ್ತನಾಗಿ ಶ್ರೀಶೈಲಕ್ಕೆ ಹೋದ ಬಳಿಕ ಕೆಲಕಾಲದ ಮೇಲೆ ಇವನು ಅವನನ್ನು ಕಾಣಲಿಕ್ಕೆ ಹೋಗಲು, ತಂದೆಯು ಧರ್ಮಸ್ಥಾಪನೆಗಾಗಿ ಹುಟ್ಟುವ ಬಸವನಿಗೆ ನೆರವಾಗೆಂದು ಹೇಳಿ ಹಿಂದಕ್ಕೆ ಕಳುಹಿದನಂತೆ. ಇವನ ಮಗ ಮಾಯಿದೇವ, ಮೊಮ್ಮಗ ಕೆರೆಯಪದ್ಮರಸನು. ಇವನದೊಂದು ವಚನವನ್ನು ಮಾದರಿಗಾಗಿ ಕೆಳಗೆ ಕೊಡುತ್ತೇವೆ:—

"ಜನ ಮೆಚ್ಚಿ ಶುದ್ಧನಲ್ಲದೆ, ಮನ ಮೆಚ್ಚಿ ಶುದ್ಧನಲ್ಲಯ್ಯಾ; ವೇಷದಲ್ಲಧಿಕನಲ್ಲದೆ, ಭಾಷೆಯಲ್ಲಧಿಕನಲ್ಲಯ್ಯಾ; ನುಡಿಯ ಜಾಣನಲ್ಲದೆ,

ನಡೆಯ ಜಾಣನಲ್ಲಯ್ಯಾ; ಧನ ದೊರೆಯದಿರ್ದೊಡೆ ನಿಃಪ್ರಿಯನಲ್ಲದೆ, ಧನ ದೊರೆತು ನಿಃಪ್ರಿಯನಲ್ಲಯ್ಯಾ; ಏಕಾಂತದ್ರೋಹಿ, ಗುಪ್ತ ಪಾತಕ ಯುಕ್ತಿಹೀನಂಗೆ ಸಕಲೇಶ್ವರದೇವ ಎಂತೊಲಿವ'' (೩೫೬).

**೫೩. ವೀರಣಂದಿ** (೧೧೫೩)—ಇವನು ಜೈನ ಕವಿಯಾಗಿದ್ದು ತನ್ನ ಸಂಸ್ಕೃತ ಆಚಾರಸಾರಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದಾನೆ.

**೫೪. ಶಾಂತಿವರ್ಮ** (೧೧೬೦)—ರುದ್ರಭಟ್ಟನು ಇವನ ನಯವನ್ನು ಹೊಗಳುವುದರಿಂದ ಇವನು ದೊಡ್ಡ ಕವಿಯಾಗಿರಲಿಕ್ಕೆ ಬೇಕು. ಆದರೆ ಇವನು ಯಾವ ಗ್ರಂಥಗಳನ್ನು ಬರೆದನೆಂಬುದು ಇನ್ನೂ ಗೊತ್ತಾಗಿಲ್ಲ.

**೫೫. ವೃತ್ತವಿಲಾಸ** (೧೧೬೦)—ಇವನು ಜೈನ ಕವಿಯಾಗಿದ್ದು ೧. ಧರ್ಮಪರೀಕ್ಷೆ, ೨. ಶಾಸ್ತ್ರಸಾರ ಎಂಬೆರಡು ಗ್ರಂಥಗಳನ್ನು ಬರೆದಿದ್ದಾನೆ. ಆದರೆ ಶಾಸ್ತ್ರಸಾರದ ಪ್ರತಿಯು ಇನ್ನೂ ದೊರೆತಿಲ್ಲ. ಧರ್ಮಪರೀಕ್ಷೆಯಲ್ಲಿ—''ಮುನ್ನಿನ ಚಾರು ಸಂಸ್ಕೃತದ ಧರ್ಮಪರೀಕ್ಷೆಯಂ ಸನ್ನುತಮಾಗೆ ಎಲ್ಲರಱಿವಂತುಟು ಕನ್ನಡದಿಂ ಪೇೞ್ದಿಂ'' ಎಂದು ಹೇಳುತ್ತಾನೆ. ಇದು ಚಂಪೂ ಗ್ರಂಥವಾಗಿದ್ದು ಇದರಲ್ಲಿ ೧೦ ಆಶ್ವಾಸಗಳಿರುತ್ತವೆ.

**೫೬. ಬಸವ** (೧೧೬೦)—ಇವನು ವಿಜಾಪುರ ಜಿಲ್ಲಾ ಇಂಗಳೇಶ್ವರ ಬಾಗೆವಾಡಿಯಲ್ಲಿ ಹುಟ್ಟಿದನು. ಇವನ ಅಜ್ಜನು ಲಿಂಗಭಟ್ಟನೆಂಬುವನು. ಭೂಮಿದೇವಾಗ್ರಣಿಯಾದ ಮಂಡಿಗೆ ಮಾದಿರಾಜನು ಇವನ ತಂದೆ; ಮಾದಾಂಬಿಕೆ ಎಂಬುವಳು ಇವನ ತಾಯಿ. ಚನ್ನಬಸವನ ತಾಯಿಯಾದ ನಾಗಾಂಬಿಕೆಯೇ ಇವನ ಒಡಹುಟ್ಟಿದವಳು. ಸಾರ್ವಭೌಮನಾದ ಬಿಜ್ಜಳ(೧೧೫೬–೧೧೬೭)ನ ಮಂತ್ರಿಯಾದ ಬಲದೇವನೇ ಇವನ ಸೋದರಮಾವನು. ಬಸವನು ೮ ವರ್ಷದವನಾಗಲು ಮಾದಿರಾಜನು ಅವನ ಮುಂಜಿಯನ್ನು ಮಾಡಲೆಳಸಿದನು. ಅದಕ್ಕೊಡಂಬಡದೆ ಬಸವನು ತನ್ನ ಸೋದರಮಾವನಿದ್ದ ಕಲ್ಯಾಣಕ್ಕೆ ಓಡಿಹೋಗಿ, ಸೋದರಮಾವನ ಮಗಳಾದ ಗಂಗಾಂಬಿಕೆಯನ್ನು ಮದುವೆಮಾಡಿಕೊಂಡು ಬಲ

ದೇವನು ಸತ್ತ ಬಳಿಕ ತಾನೇ ಬಿಜ್ಜಳನ ಮಂತ್ರಿಯಾದನು (೧೧೬೦ ?). ತನ್ನ ಅಧಿಕಾರಬಲದಿಂದ ಬಸವನು ವೀರಶೈವ ಮತವನ್ನು ಬೆಳಿಸ ತೊಡಗಲು ಬಿಜ್ಜಳನು ಸಿಟ್ಟಿಗೆದ್ದು, ಅವನನ್ನು ಮುರಿಯಲಿಕ್ಕೆ ತಗುಳಿದನು. ಆದರೆ ಆ ಪ್ರಯತ್ನವು ಕಯ್ಗೂಡಲಿಲ್ಲ. ಬಳಿಕ ಕೆಲ ಜಂಗಮರು ಬಿಜ್ಜಳನನ್ನು ಕೊಂದುದರಿಂದ ಬಸವನು ಕಲ್ಯಾಣವನ್ನು ಬಿಟ್ಟು ಓಡಿ ಹೋದನು. ಬಿಜ್ಜಳನ ಮಗನಾದ ಮುರಾರಿ ಸೋಯಿದೇವನು ಅವನನ್ನು ಬೆನ್ನಟ್ಟಿ ಉಳವಿಯನ್ನು ಮುತ್ತಲು, ಬಸವನು ಗತ್ಯಂತರ ಕಾಣದೆ ಬಾವಿಯಲ್ಲಿ ಬಿದ್ದು ಸತ್ತನೆಂದು ಜೈನರು ಬರೆಯುತ್ತಾರೆ. ಬಸವನು ನಂದೀಶ್ವರನ ಅವತಾರವೆಂದೂ ವಿಜಾಪುರ ಜಿಲ್ಲಾ ಕೂಡಲಸಂಗಮೇಶ್ವರನಲ್ಲಿ ಐಕ್ಯನಾದನೆಂದೂ ಲಿಂಗಾಯತರು ನಂಬುತ್ತಾರೆ. ಬಸವನು ಅಲ ಪವಾಡಗಳನ್ನು ಮಾಡಿದನಂತೆಯೂ ೯೬೦ ಷಟ್ಸ್ಥಳ ವಚನಗಳನ್ನೂ, ೩೪ ಶಿಖಾರತ್ನ ವಚನಗಳನ್ನೂ, ೬೪ ಕಾಲಜ್ಞಾನ ವಚನಗಳನ್ನೂ, ಮಂತ್ರಗೋಪ್ಯವೆಂಬ ವೀರಶೈವ ಸಿದ್ಧಾಂತದ ಹಾಡನ್ನೂ ಹೇಳಿದನೆಂತಲೂ ಲಿಂಗಾಯತ ಗ್ರಂಥಗಳು ತಿಳಿಸುತ್ತವೆ. ಮಾದರಿಗಾಗಿ ಒಂದು ಷಟ್ಸ್ಥಳ ವಚನವನ್ನು ಕೆಳಗೆ ಕೊಡುತ್ತೇವೆ:—

"ಉಳ್ಳವರು ಶಿವಾಲಯವ ಮಾಡಸೀಯರು. ನಾನೇ ಮಾಡುವೆ ಬಡವನಯ್ಯ. ಎನ್ನ ಕಾಲೇ ಕಂಭ. ದೇಹವೇ ದೇಗುಲ. ಶಿರವೇ ಹೊನ್ನಗಳಸ ನೋಡಯ್ಯ, ಕೂಡಲ ಸಂಗಮದೇವಯ್ಯ ಕೇಳಯ್ಯ ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವುಂಟೇ" (೩೭೩.)

**೩೭. ಚೆನ್ನಬಸವ** (೧೧೬೦)—ಇವನು ಬಸವೇಶ್ವರನ ಸೋದರಳಿಯನೆಂದು ಮೇಲೆ ಬರೆದಿದ್ದೇವೆ. ಇವನು—೧. ಷಟ್ಸ್ಥಳ ವಚನ, ೨. ಕರಣಹಸುಗೆ, ೩. ಮಿಶ್ರಾರ್ಪಣ, ೪. ಸೊನ್ನಲಿಗೆಯ ಸಿದ್ಧರಾಮನಿಗೆ ಉಪದೇಶಿಸಿದ ಪದಮಂತ್ರಗೋಪ್ಯ, ೫. ಇಪ್ಪತ್ತೇಳು ಹಾಡುಗಳುಳ್ಳ ಮಂತ್ರಗೋಪ್ಯ, ೬. ಕಾಲಜ್ಞಾನ, ೭. ರುದ್ರಭಾರತದ ಸೃಷ್ಟಿ ಎಂಬ ವೀರಶೈವ ಮತವನ್ನು ಪ್ರತಿಪಾದಿಸುವ ೭ ಗ್ರಂಥಗಳನ್ನು ಬರೆದಿದ್ದಾನೆ.

**೫೮. ಪ್ರಭುದೇವ** (೧೧೬೦)—ಇವನಿಗೆ ಅಲ್ಲಮ ಎಂಬ ಹೆಸರೂ ಮಾಯಾ ಕೋಳಾಹಳ ಎಂಬ ಬಿರುದೂ ಇದ್ದವು. ನಿರಹಂಕಾರ ಸುಜ್ಞಾನಿಯರು ಇವನ ತಂದೆತಾಯಿಗಳಾಗಿದ್ದರೆಂತಲೂ, ಬನವಾಸಿಯ ನೃಪನ ಮಗಳಾದ ಮಾಯೆಯ ಮೋಹಕ್ಕೆ ಇವನು ಒಳಗಾಗಲಿಲ್ಲೆಂತಲೂ, ಇವನು ಸೊನ್ನಲಿಗೆಗೆ ಹೋಗಿ, ಸಿದ್ಧರಾಮನಿಗೆ ಶಿವತತ್ವವನ್ನುಪದೇಶಿಸಿ, ಅವನೊಡನೆ ಕಲ್ಯಾಣಕ್ಕೆ ಹೋಗಿ ಬಸವನಿಂದ ಸತ್ಕೃತನಾಗಿ ಶೂನ್ಯ ಪೀಠವನ್ನೇರಿ ಶ್ರೀಶೈಲಕ್ಕೆ ಹೋಗಿ, ಮಹಾದೇವಿಗೆ ನಿರ್ವಾಣ ಪದವಿಯನ್ನುಪದೇಶಿಸಿ, ಅಲ್ಲಿಂದ ಹೊರಟು, ಕದಳಿಯಲ್ಲಿ ಬಯಲಾದನೆಂತಲೂ, ಚೆನ್ನಬಸವ ಪುರಾಣ, ಪ್ರಭುಲಿಂಗಲೀಲೆ ಎಂಬ ಗ್ರಂಥಗಳಲ್ಲಿ ಹೇಳಿದೆ. ಇವನು ಷಟ್ಸ್ಥಳ ಜ್ಞಾನಚಾರಿತ್ರ, ಶೂನ್ಯ ಸಂಪಾದನೆ, ಮಂತ್ರಗೋಪ್ಯ, ಸೃಷ್ಟಿಯ ವಚನ, ಬೆಡಗಿನ ವಚನ, ಮಂತ್ರ ಮಾಹಾತ್ಮ್ಯ, ಕಾಲಜ್ಞಾನ ವಚನ ಎಂಬ ಗ್ರಂಥಗಳನ್ನು ಬರೆದನು.

**೫೯. ಮಡಿವಳಮಾಚಯ್ಯ** (೧೧೬೦)—ವೀರಶೈವ ಕವಿಯಾದ ಮಾಚಯ್ಯನು ವಿಜಾಪುರ ಜಿಲ್ಲಾ ಹಿಪ್ಪರಿಗೆಯವನಾಗಿದ್ದನು. ಇವನು ಕಲ್ಯಾಣಕ್ಕೆ ಹೋಗಿ ಅಲ್ಲಿ ಜಂಗಮರ ಬಟ್ಟೆಗಳನ್ನು ಒಗೆದು ಜೀವನ ಮಾಡಿಕೊಂಡಿದ್ದನು. ಒಂದು ದಿನ ಒಗೆದ ಅರಿವೆಗಳನ್ನು ತರುವಾಗ ಒಬ್ಬ ಭವಿ(ಜೈನ)ಯು ಅವನ್ನು ಮುಟ್ಟಲು, ಮಾಚಯ್ಯನು ಸಿಟ್ಟಾಗಿ ಅವನನ್ನು ಹೊಡೆದು ಕೊಂದನು. ಈ ಸುದ್ದಿಯನ್ನು ಕೇಳಿ ಬಿಜ್ಜಳನು ಮಾಚಯ್ಯನನ್ನು ಕೊಲ್ಲಬೇಕೆಂದು ಅಪ್ಪಣೆಕೊಡಲು, ಬಸವನು ಸಿಟ್ಟಿಗೆದ್ದು ಶಿವಶರಣರ ಮಹಿಮೆಯನ್ನರಿಯದೆ ಏಕೆ ದುಡುಕುತ್ತಿ ಎನಲು, ಬಿಜ್ಜಳನು ರೇಗಿ ಮಾವುತರನ್ನು ಕರಿಸಿ, ಮಾಚಯ್ಯನನ್ನು ಆನೆಯಿಂದ ತುಳಿಸಿ ಕೊಲ್ಲಬೇಕೆಂದು ಹುಕುಮು ಮಾಡಿದನು. ಮಾಚಯ್ಯನು ಆನೆಯೊಡನೆ ಕಾದಿ ಅದನ್ನೇ ಕೊಂದುಬಿಟ್ಟನೆಂದು ಬಸವಪುರಾಣದಲ್ಲಿ ಬರೆದಿದೆ. ಇವನು ೧೦೦ ವಚನಗಳನ್ನು ಹೇಳಿದ್ದು ಅವುಗಳಲ್ಲಿ ಅರ್ಕೇಶ್ವರ ಲಿಂಗವೆಂಬ ಅಂಕಿತವಿದೆ.

**೬೦. ಸಿದ್ಧರಾಮ** (೧೧೬೦)—ಇವನು ಸೊನ್ನಲಿಗೆಯಲ್ಲಿದ್ದ ಮುದ್ದಗೌಡನಿಂದ ೬೦ ವರ್ಷದ ಮುದುಕಿಯಾದ ಸುಗ್ಗವ್ವೆಯ ಬಸುರಿ

ಸಿಂದ ಹುಟ್ಟಿ, ಚೆನ್ನಬಸವನಿಂದ ಲಿಂಗದೀಕ್ಷೆಯನ್ನು ಪಡೆದು, ಸೊನ್ನಲಿಗೆಯಲ್ಲಿ ಒಂದು ಕೆರೆಯನ್ನು ಕಟ್ಟಿಸಿ, ಅದರ ನಡುವೆ ಒಂದು ಸಮಾಧಿಯನ್ನು ಮಾಡಿಸಿ ಅದರಲ್ಲಿ ಬಯಲಾದನು. ಇವನು ವಚನಗಳನ್ನೂ, ಮಿಶ್ರ ಸ್ತೋತ್ರದ ತ್ರಿವಿಧಿಯನ್ನೂ, ಬಸವಸ್ತೋತ್ರದ ತ್ರಿವಿಧಿಯನ್ನೂ, ಅಷ್ಟಾವರಣ ತ್ರಿವಿಧಿಯನ್ನೂ, ಕಾಲಜ್ಞಾನ ವಚನಗಳನ್ನೂ ಬರೆದನು. ಮಾದರಿಗಾಗಿ ಇವನದೊಂದು ವಚನವನ್ನು ಕೊಡುತ್ತೇವೆ:—

"ಸಂಸಾರವೆಂಬ ಸರ್ಪನ ಅಣಲೊಳಗಿಹೆನಯ್ಯಾ. ಆವಾಗ ನುಂಗೀತೆಂದಱಿಯೆ. ಆವಾಗ ಉಗುಳೀತೆಂದಱಿಯೆನಯ್ಯಾ. ಅದರ ಬಾಯಿಂದೆನ್ನ ತೆಗೆದು ಕಾಯಯ್ಯಾ ಕಪಿಲ ಸಿದ್ಧಮಲ್ಲಿಕಾರ್ಜುನ" (೩೯೯).

**೬೧. ಕೊಂಡಕೇಶಿರಾಜ** (೧೧೬೦)—ಇವನು ಕೊಂಡಗುಳಿಯಲ್ಲಿ ಷಡಕ್ಷರ ಮಂತ್ರ (ಓಂ ನಮಃ ಶಿವಾಯ)ವನ್ನು ಜಪಿಸುತ್ತಿದ್ದಾಗ ಕಲ್ಯಾಣದ ಪೆರ್ಮಾಡಿರಾಜನು ಇವನನ್ನು ಕರಿಸಿ ತನ್ನ ಮಂತ್ರಿ ದಣ್ಣಾಯಕನನ್ನು ಮಾಡಿಕೊಂಡು, ಮುಂದೆ ಕೊಂಡಿಯರ ಮಾತು ಕೇಳಿ ಇವನನ್ನು ಕೆಲಸದಿಂದ ದೂರಮಾಡಿದನೆಂದು ಭೈರವೇಶ್ವರ ಕಾವ್ಯದಲ್ಲಿ ಬರೆದಿದೆ. ಇವನು ಶಿವಪುರದಲ್ಲಿ ದಿನಾಲು ೮ ಶ್ಲೋಕಗಳಿಂದ ಶಿವನನ್ನು ಸ್ತುತಿಸುತ್ತಿದ್ದು, ಬಳಿಕ ಬಸವೇಶ್ವರನೊಡನೆ ಸಂಗಮೇಶ್ವರಕ್ಕೆ ಹೋದನೆಂದು ಉಳಿದ ಗ್ರಂಥಗಳು ಹೇಳುತ್ತವೆ. ಆದರೆ ಮೈಸೂರು ಸಂಸ್ಥಾನ ಸಿಕಾರಪುರದ ೧೧೯, ೧೨೩ ಶಾಸನಗಳಿಂದ ಇವನು ಬಿಜ್ಜಳನ ಮತ್ತು ಅವನ ಮಗನ ಕಾಲದಲ್ಲಿ ಬನವಾಸಿ ೧೨,೦೦೦ದ ಮಹಾಮಂಡಲೇಶ್ವರನೂ, ಮಹಾಪರಾಕ್ರಮಶಾಲಿಯಾದ ದಂಡನಾಯಕನೂ ಆಗಿದ್ದನೆಂದು ತಿಳಿದುಬರುತ್ತದೆ. ಇವನ ಷಡಕ್ಷರ ಅಥವಾ ಮಂತ್ರ ಮಹತ್ವದ ೧೦೦ ಕಂದಗಳು ದೊರೆತಿವೆ. ಅವುಗಳೊಳಗಿನ ಒಂದು ಪದ್ಯವನ್ನು ಮಾದರಿಗಾಗಿ ಕೆಳಗೆ ಕೊಡುತ್ತೇವೆ:—

ತಱಿಯಲ್ಮೋಹದ ಕಿಚ್ಚಂ।
ಪಱಿಯಲ್ಭವಪಾಶಮಂ ಮನೋಜನ ಬಿಲ್ಲಂ ॥

ಮುಱಿಯುಲ್ಮಾಯೆಯು ಬೇರಂ।
ಕೊಱೆಯುಲ್ಪವೋಂ ಶಿವಾಯೆಂಬ ಪದಂ ॥

**೬೨. ಸೊಡ್ಡಳ ಬಾಚರಸು** (೧೧೬೦)—ಇವನು ಬಿಜ್ಜಳನ ಕಾಲದಲ್ಲಿ ಕರಣಿಕನಾಗಿದ್ದು ಸರಕಾರದ ಹಣವನ್ನು ಅಪಹರಿಸಿದನೆಂದು ಕೊಂಡೆಯರು ಬಿಜ್ಜಳನಿಗೆ ತಿಳಿಸಲು, ಬಸವೇಶ್ವರನು ೧೧ ದಿವಸ ಸೂರ್ಯಗತಿಯನ್ನು ನಿಲ್ಲಿಸಿ, ಲೆಕ್ಕ ಪೂರ್ತಿಮಾಡಿ ತೋರಿಸಿದನಂತೆ. ಇವನು ವಚನಗಳನ್ನು ಬರೆದಿದ್ದಾನೆ. ಮಾದರಿಗಾಗಿ ಒಂದನ್ನು ಕೆಳಗೆ ಕೊಡುತ್ತೇವೆ:—

ಗಂಡನುಳ್ಳ ಹೆಂಡಿರ ಕಂಡು ಅಳಪದಿರಾ ಮನವೇ।
ಬಂದ ಬಸಿಱನು ಉಂಡ ಮಲೆಯನು ಕಂಡು ಮಱುಗದಿರಾ
ಮನವೇ ॥
ಉದ್ದಂಡತನದಲಿ ನಡೆದ ಭಂಡರನು ಹುಱಿಗೊಂಡ।
ದಲ್ಲಿಕ್ಕದೆ ಬಿಡುವನೆ ನಮ್ಮ ದೇವರಾಯ ಸೊಡ್ಡಳ ॥ ೪೧೦ ॥

**೬೩. ಮಹಾದೇವಿಯಕ್ಕ** (೧೧೬೦)—ಇವಳು ಉಡುತಡಿ ಎಂಬ ಊರವಳಾಗಿದ್ದು ಅಲ್ಲಿಯ ದೊರೆಯು ಇವಳನ್ನು ಮದುವೆಮಾಡಿಕೊಳ್ಳಲೆಣಿಸಲು ಅವನನ್ನು ಭವಿಯೆಂದು 'ಪರಿಹರಿಸಿ' ವಿರಕ್ತಳಾಗಿ ಕಲ್ಯಾಣದಲ್ಲಿ ಬಸವನೊಡನೆ ಇದ್ದಳು. ಈಕೆಯು ವಚನಗಳನ್ನೂ ಯೋಗಾಂಗ ತ್ರಿವಿಧಿಯನ್ನೂ ಸೃಷ್ಟಿಯ ವಚನಗಳನ್ನೂ ಅಕ್ಕಗಳ ಪೀಠಿಕೆಯನ್ನೂ ಬರೆದಿದ್ದಾಳೆ. ಮಾದರಿಗಾಗಿ ಈಕೆಯ ಒಂದು ವಚನವನ್ನು ಕೊಡುತ್ತೇವೆ:—

"ಒಮ್ಮೆ ಕಾಮನ ಕಾಲಹಿಡಿವ; ಮತ್ತೊಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವ; ಸುಡಲಿ ವಿರಹವ. ನಾನಾರಿಗೆ ಧೃತಿಗೆಡುವೆ? ಚನ್ನ ಮಲ್ಲಿಕಾರ್ಜುನದೇವನೆನ್ನನೊಲ್ಲದ ಕಾರಣ ಎಲ್ಲರಿಗೆ ಹಂಗುಗಿತ್ತಿಯಾದೆನವ್ವಾ" (೪೧೩).

**೬೪. ಘಟ್ಟಿವಾಳಯ್ಯಾ** (೧೧೬೦)—ಇವನು ತನ್ನ ಮಹಿಮೆಯನ್ನು ಬಸವನ ಹೆಂಡತಿಯಾದ ನೀಲಮ್ಮನಿಗೆ ಹೇಳಿದನಂತೆ.

ಇವನು ೫೬ ವಚನಗಳನ್ನೂ, ೩೯೩ ಕಾಲಜ್ಞಾನ ವಚನಗಳನ್ನೂ ಬರೆದಿದ್ದಾನೆ.

**೬೫. ಮೋಳಿಗೆಯ ಮಾರಯ್ಯ** (ಮೋಳಿಗಯ್ಯ) (೧೧೬೦)—ಇವನು ಬಂದರು ದೇಶದ ಮಾಂಡವ್ಯಪುರದ ದೊರೆಯಾಗಿದ್ದು, ಶಿವಭಕ್ತರನ್ನು ಪೂಜಿಸುತ್ತಿದ್ದನು. ಅವರನ್ನು ಬಸವನು ಕಲ್ಯಾಣಕ್ಕೆ ಕರೆದೊಯ್ಯಲು ಮೋಳಿಗಯ್ಯನು ಸಿಟ್ಟಿಗೆದ್ದು, ಅವನನ್ನು ಕೊಲ್ಲಲಿಕ್ಕೆ ಇಬ್ಬರು ಬಂಟರನ್ನು ಕಲ್ಯಾಣಕ್ಕೆ ಕಳುಹಿದನು. ಅವರು ಕೊರಳೊಳಗೆ ಬದನೆಕಾಯಿಗಳನ್ನು ಕಟ್ಟಿಕೊಂಡು ಬಸವನ ಮನೆಯೊಳಗೆ ಶಿವಭಕ್ತರೊಡನೆ ಕುಳಿತಾಗ, ಬದನೆಕಾಯಿಗಳು ಲಿಂಗವಾದ್ದನ್ನು ಕೇಳಿ ಮೋಳಿಗಯ್ಯನಿಗೆ ವೈರಾಗ್ಯ ಹುಟ್ಟಿದ್ದರಿಂದ, ಅವನು ತನ್ನ ದೊರೆತನವನ್ನು ಬಿಟ್ಟು ಕಲ್ಯಾಣಕ್ಕೆ ಹೋಗಿ ಕಟ್ಟಿಗೆ ಮಾರಿ ಜಂಗಮಕ್ಕೆ ನೀಡತೊಡಗಿದನಂತೆ. ಇವನು ೨೩೦ ವಚನಗಳನ್ನು ಬರೆದಿದ್ದಾನೆ.

**೬೬. ಮಹಾದೇವಿ** (೧೧೬೦)—ಇವಳು ಮೋಳಿಗೆಯ ಮಾರಯ್ಯನ ಹೆಂಡತಿ. ಈಕೆ ೪೧ ವಚನಗಳನ್ನು ಬರೆದಿದ್ದಾಳೆ.

**೬೭. ಆಯ್ದಕ್ಕಿಯ ಮಾರಯ್ಯ** (೧೧೬೦)—ಇವನು ೫೪ ವಚನಗಳನ್ನು ಬರೆದಿದ್ದಾನೆ. ಮಾದರಿಗಾಗಿ ಒಂದು ವಚನವನ್ನು ಕೊಡುತ್ತೇನೆ:—

"ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು. ನಡೆಯಿಲ್ಲದ ನುಡಿ ಅಜ್ಞಾನಿಂಗೆ ಹಾಸಿ. ಕೊಡದೆ ತ್ಯಾಗಿಯೆನಿಸಿಕೊಂಬುದು ಮುಡಿಯಿಲ್ಲದ ಶೃಂಗಾರ. ದೃಢವಿಲ್ಲದ ಭಕ್ತಿ ಅಡಿಯೊಡೆದ ಕುಂಭದಲ್ಲಿ ಸುಜಲವ ತುಂಬಿದಂತೆ ಅಮಲೇಶ್ವರ ಲಿಂಗವ ಮುಟ್ಟಿದ ಭಕ್ತಿ" (೪೨೪).

**೬೮–೭೬. ಅಂಬಿಗರ ಚೌಡಯ್ಯ, ಕೋಲಶಾಂತಯ್ಯ, ಸುಲಿಯ ಚಂದಯ್ಯ, ಅಜಗಣ್ಣ, ನಿಜಗುಣದೇವ, ಅಮುಗಿದೇವಯ್ಯ, ಕಲಿದೇವಯ್ಯ, ಗಜೇಶ ಮಸಣಯ್ಯ, ನಿಮ್ಮಲಿಗೆಯ ಚೆನ್ನಯ್ಯ**—ಇವರು ವಚನಗಳನ್ನು ಬರೆದಿದ್ದಾರೆ.

**೭೭. ಮನುಮುನಿ ಗುಮ್ಮಟದೇವ** (೧೧೬೦)—ಇವನು ತನ್ನ ವಚನಗಳ ಆರಂಭದಲ್ಲಿ ತಾನು ಬಿಜ್ಜಳನ ಗುರುವೆಂದು ಹೇಳಿಕೊಳ್ಳುತ್ತಾನೆ. ಇವನು ಮೊದಲು ಜೈನನಿದ್ದು ಮುಂದೆ ವೀರಶೈವನಾಗಿರಬಹುದೆಂದು ಸಂಶಯುಬರುತ್ತದೆ. ಮಾದರಿಗಾಗಿ ಇವನದೊಂದು ವಚನವನ್ನು ಕೆಳಗೆ ಕೊಡುತ್ತೇವೆ:—

"ಕಣ್ಣಿನಲ್ಲಿ ನೋಡುವರೆ ತೊಗಲಿನವನಲ್ಲ; ಕೈಯಲ್ಲಿ ಹಿಡಿವರೆ ಮೈಯುವನಲ್ಲ; ಭಾವದಲ್ಲಿ ನೋಡುವರೆ ಬಯಲ ಸ್ವರೂಪ; ನಿನ್ನೊದಗ ಏತರಿಂದರಿವೆ? ಎನ್ನ ಭ್ರಾಂತಿನ ಬಲೆಗೆ ಸಿಕ್ಕಿಸಿ ಹೋದೆ ಗುಡಿಯು ಗುಮ್ಮಟನಾಥನೊಡೆಯ ಅಗಮ್ಮೇಶ್ವರ ಲಿಂಗ" (೪೮೪).

**೭೮–೮೧. ಹಡಪದ ಅಪ್ಪಣ್ಣ, ಬಿಜ್ಜಳದೇವಿ, ಕಾಳವ್ವೆ, ಬಾಚಿಕಾಯಕದ ಬಸವಪ್ಪ**—ಇವರು ವಚನಗಳನ್ನು ಬರೆದರು.

**೮೨. ನೈದುನ ರಾಮಯ್ಯ** (೧೧೬೦)—ಇವನು ಆಂಧ್ರನಾಡಿನವನಾಗಿದ್ದು ದೀವಳಿಗೆ ಹಬ್ಬಕ್ಕೆ ಶ್ರೀಶೈಲದಿಂದ ಈಶ್ವರ ಪಾರ್ವತಿಯರನ್ನು ಕರೆದುಕೊಂಡು ಬಂದನಂತೆ. ಇವನು ಕನ್ನಡದಲ್ಲಿ ಗೀತಿಗಳನ್ನು ಹಾಡಿದನಂತೆ.

**೮೩. ನೀಲಮ್ಮ** (೧೧೬೦)—ಇವಳು ಬಲದೇವನ ತಮ್ಮನಾದ ಸಿದ್ಧಣ್ಣ ಮಂತ್ರಿಯ ಮಗಳೂ ಬಸವನ ಹೆಂಡತಿಯೂ ಆಗಿದ್ದಳು. ಈಕೆ ಪ್ರಸಾದ ಸಂಪಾದನೆಯನ್ನೂ, ಒಂದು ಕಾಲಜ್ಞಾನವನ್ನೂ ಬರೆಸಳಂತೆ.

**೮೪. ಶೀಲವಂತಯ್ಯ** (೧೧೬೦)—ಇವನು ಜಟ್ಟಿಕಾಯಕದವನಾಗಿದ್ದು ಕಾಶೀಕ್ಷೇತ್ರದಲ್ಲಿ ಒಂದು ಮಠವನ್ನು ಕಟ್ಟಿಸಿ, ಅದರ ಕಂಬದಲ್ಲಿ ಮಾಯವಾದನೆಂದು ಕೆಳದಿನೃಪ ವಿಜಯದಲ್ಲಿ ಬರೆದಿದೆ. ಇವನು ಆತ್ಮಲಿಂಗ ಪ್ರಣವ ಸಂಯೋಗ ಸ್ಥಲದ ತ್ರಿವಿಧಿ ಅಥವಾ ಶೀಲವಂತಯ್ಯನ ತ್ರಿವಿಧಿ ಅಥವಾ ಗುರುಸ್ತೋತ್ರ ಎಂಬ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ೧೧೧ ಪದ್ಯಗಳಿವೆ.

**೮೫–೧೦೭. ಮರುಳದೇವನು** ಕಂದ ವಚನಗಳನ್ನು ಬರೆದಿದ್ದಾನೆ. **ಜೇಡರ ದಾಸಿಮಯ್ಯನು** (೧೦೪೦) ಚಾಳುಕ್ಯ ಜಯಸಿಂಹರಾಜ

ನನ್ನು ವೀರಶೈವನನ್ನಾಗಿ ಮಾಡಿದ್ದಲ್ಲದೆ ಕೆಲವಚನಗಳನ್ನು ಬರೆದಿದ್ದಾನೆ. **ಮೆರೆಮಿಂಡಯ್ಯ** (೧೧೦೦), **ಬಿಬ್ಬಿಬಾಚಯ್ಯ** (೧೧೫೦), **ಏಲೇಶ್ವರದ ಕೇತಯ್ಯ** (೧೧೫೦), **ಆದಯ್ಯ** (೧೧೫೦), **ಹಾವಿನ ಹಾಳ ಕಲ್ಲಯ್ಯ** (೧೧೫೦), **ಮಾದರ ದೂಳಯ್ಯ** (೧೧೫೦), **ಬಾಹೂರ ಬೊಮ್ಮಣ್ಣ** (೧೧೫೦), **ಪ್ರಸಾದಿ ಭೋಗಣ** (೧೧೬೦), **ಅರಿವಿನ ಮಾರಿತಂದೆ, ಮನಸಂದ ಮಾರಿತಂದೆ, ನಗೆಯ ಮಾರಿತಂದೆ, ಕಲ್ಯಾಣದ ವಚನ ಭಂಡಾರಿ ಶಾಂತರಸ, ಡಕ್ಕೆಯ ಬೊಮ್ಮಣ್ಣ, ಸಗರದ ಬೊಮ್ಮಣ್ಣ, ಅವಸಂದ ಕೇರಣ್ಣ, ತುರುಗಾಹಿ ರಾಮಣ್ಣ, ದಾಸೋಹದ ಸಂಗಣ್ಣ, ಗುಪ್ತ ಮಂಚಣ್ಣ, ಸುಂಕದ ಬಂಕಣ್ಣ, ಬಹುರೂಪಿ ಚೌಡಯ್ಯ, ಶಿವಲೆಂಕ ಮಂಚಣ್ಣ**—ಇವರೆಲ್ಲರೂ ವೀರಶೈವ ಕವಿಗಳಾಗಿದ್ದು ವಚನಗಳನ್ನು ಬರೆದಿದ್ದಾರೆ.

**೧೦೮. ಹರೀಶ್ವರ** (೧೧೬೫)—ಇವನಿಗೆ ಹರಿದೇವ, ಹರಿಹರ, ಹರಿಗ, ಹರಿ, ಹರಿಯಣ್ಣ ಪಂಡಿತ, ಹಂಪೆಯ ಹರೀಶ್ವರ ಎಂಬ ಹೆಸರುಗಳಿದ್ದುವು. ಇವನು ಆ ಕಾಲದ ಹಂಪೆಯ ಶಂಕರಾಚಾರ್ಯರ ಮಗನಾದ ಮಾದರಸನ ಮಗನೂ ಹೊಯ್ಸಳ ನರಸಿಂಹಬಲ್ಲಾಳ(೧೧೪೧–೧೧೭೩)ನ ಕರಣಿಕರ ಕುಲತಿಲಕನೂ ಆಗಿದ್ದನು. ಇವನು ವಿಷ್ಣು ಮೊದಲಾದ ಬೇರೆ ದೇವತೆಗಳಿಗೆ ಪೊಡಮಡುತ್ತಿದ್ದಿಲ್ಲೆಂತಲೂ, ಕೇವಲ ಶಿವೋಪಾಸಕನಾಗಿದ್ದನೆಂತಲೂ, ರಾಘವಾಂಕನು ಇವನ ಸೋದರಳಿಯನಾಗಿದ್ದನೆಂತಲೂ ಚೆನ್ನಬಸವಪುರಾಣ, ಭೈರವೇಶ್ವರ ಕಾವ್ಯಗಳಲ್ಲಿ ಬರೆದಿದೆ. ಇವನು—೧. ಗಿರಿಜಾಕಲ್ಯಾಣ, ೨. ಪಂಪಾಶತಕ, ೩. ಶಿವಗಣದ ರಗಳೆಗಳು, ೪. ಮುಡಿಗೆಯ ಅಷ್ಟಕ ಎಂಬ ಗ್ರಂಥಗಳನ್ನು ಬರೆದಿದ್ದು, ಅವು ದೊರೆದಿರುತ್ತವೆ. ಇವನ—೧. ರಕ್ಷಾಶತಕ, ೨. ಶಿವಾಕ್ಷರಮಾಲೆ ಎಂಬೆರಡು ಗ್ರಂಥಗಳು ಇನ್ನೂ ನಮಗೆ ಸಿಕ್ಕಿಲ್ಲ. ವೀರಶೈವ ಕವಿಗಳಲ್ಲಿ ಇವನೇ ಮೊದಲಿನ ದೊಡ್ಡ ಕವಿಯಾಗಿದ್ದನೆನ್ನಬಹುದು. ಇವನು ತನ್ನ ಗ್ರಂಥಗಳಲ್ಲಿ ಹಂಪೆಯ ವಿರೂಪಾಕ್ಷನನ್ನೇ ಬಹಳವಾಗಿ ಹೊಗಳಿದ್ದಾನೆ. ಇವನು "ಪ್ರಾಸ ವಿಷಯದಲ್ಲಿ ಐ, ಐ ಕುಳಕ್ಷಳ ವಿಚಾರವು ಅವಶ್ಯವಿಲ್ಲೆಂದು ಸಾರಿದನೆಂತಲೂ, ಇವನ ಬಂಧವು ಜೈನ ಶೈಲಿಯನ್ನು

ಅನುಸರಿಸಿದ್ದು ಲಲಿತವಾಗಿಯೂ ಮೃದುಮಧುರ ಗಂಭೀರವಾಗಿಯೂ ಇರುತ್ತದೆಂದೂ ಕವಿಚರಿತೆಕಾರರು ಅಭಿಪ್ರಾಯಪಡುತ್ತಾರೆ. ಇವನನ್ನು ಸರಸಕವಿ ಸಾರ್ವಭೌಮ, ಚತುರಕವಿ ಚತುರ್ಮುಖ, ಭಾವಕವಿ ಭಾಳಲೋಚನ, ಶಿವಯೋಗ ಚಕ್ರೇಶ್ವರ ಎಂದು ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಹೊಗಳುತ್ತಾನೆ.

**೧೦೯. ರಾಘವಾಂಕ** (೧೧೬೫)—ಇವನು ಪಂಪಾಪುರದ ಮಹಾದೇವಭಟ್ಟ ರುದ್ರಾಣಿಯರ ಮಗನೂ, ಹರೀಶ್ವರನ ಸೋದರಳಿಯನೂ ಶಿಷ್ಯನೂ ಆಗಿದ್ದನು. ಇವನ ಹರಿಶ್ಚಂದ್ರ ಕಾವ್ಯಕ್ಕೆ ಮೆಚ್ಚಿ ಪಂಪೆಯ ಅರಸನಾದ ದೇವರಾಜನು ಇವನಿಗೆ ಕವಿಶರಭಭೇರುಂಡನೆಂಬ ಪಾದದ ಪೆಂಡೆಯವನ್ನು ಕೊಟ್ಟನಂತೆ. ನರಸ್ತುತಿ ಮಾಡಿದ್ದು ತಪ್ಪೆಂದು ಹರೀಶ್ವರನು ಸಿಟ್ಟುಮಾಡಿದ್ದರಿಂದ ಇವನು—೧. ಸೋಮನಾಥ ಚರಿತೆ, ೨. ಸಿದ್ಧರಾಮ ಪುರಾಣ, ೩. ವೀರೇಶ್ವರ ಚರಿತೆ, ೪. ಶರಭಚಾರಿತ್ರ, ೫. ಹರಿಹರ ಮಹತ್ವ—ಎಂಬ ೫ ಗ್ರಂಥಗಳನ್ನು ಬರೆದನೆಂದು ಪದ್ಮರಾಜ ಪುರಾಣದಲ್ಲಿ ಹೇಳಿದೆ. ಆದರೆ ೩, ೪, ೫ ಈ ಮೂರು ಗ್ರಂಥಗಳು ಇನ್ನೂ ದೊರೆತಿಲ್ಲ. ಇವನ ಬಂಧವು ಪ್ರೌಢವಾಗಿಯೂ, ಅರ್ಥಗಾಂಭೀರ್ಯವುಳ್ಳದ್ದಾಗಿಯೂ, ದೇಶ್ಯಪದಭೂಯಿಷ್ಠವಾಗಿಯೂ ಇರುತ್ತದೆಂತಲೂ, ಷಟ್ಪದಿಯಲ್ಲಿ ಬರೆಯಲಿಕ್ಕೆ ಇವನೇ ಮೊದಲುಮಾಡಿದನೆಂಬ ವೀರಶೈವರ ಹೇಳಿಕೆಯು ವಾದಗ್ರಸ್ತವಾಗಿರುತ್ತದೆಂತಲೂ, ಇವನ ಕೆಲ ಪ್ರಯೋಗಗಳು ಶಬ್ದಮಣಿದರ್ಪಣಕ್ಕೆ ವಿರುದ್ಧವಾಗಿರುತ್ತವೆಂತಲೂ ಕವಿಚರಿತೆಗಾರರು ಅಭಿಪ್ರಾಯಪಡುತ್ತಾರೆ. ಹರಿಶ್ಚಂದ್ರ ಕಾವ್ಯದಲ್ಲಿ ಹರಿಶ್ಚಂದ್ರನ ಚರಿತ್ರವೂ, ಸೋಮನಾಥ ಚರಿತೆಯಲ್ಲಿ ಪುಲಿಗೆರೆಯ ಸೋಮಯ್ಯನ ಚರಿತ್ರವೂ, ಸಿದ್ಧರಾಮ ಪುರಾಣದಲ್ಲಿ ಸೊನ್ನಲಾಪುರದ ಸಿದ್ಧರಾಮನ ಚರಿತವೂ, ವೀರೇಶ ಚರಿತೆಯಲ್ಲಿ ವೀರಭದ್ರನು ದಕ್ಷಾಧ್ವರವನ್ನು ಧ್ವಂಸಮಾಡಿದ ಕಥೆಯೂ, ಶರಭ ಚಾರಿತ್ರದಲ್ಲಿ ಹಿರಣ್ಯಕಶ್ಯಪುವಿನ ನೆತ್ತರ ಕುಡಿದು ಮತ್ತನಾದ ನರಸಿಂಹನನ್ನು ವೀರಭದ್ರನು ಶರಭಾಕಾರದಿಂದ ದಂಡಿಸಿದ ಕಥೆಯೂ, ಹರಿಹರ ಮಹತ್ವದಲ್ಲಿ ಹಂಪೆಯ ಹರೀಶ್ವರನ ಮಾಹಾತ್ಮ್ಯವೂ ವರ್ಣಿಸಲ್ಪಟ್ಟಿವೆ.

**೧೧೦. ಕೆರೆಯ ಪದ್ಮರಸ** (೧೧೬೫)—ಇವನು ಹೊಯ್ಸಳ ನರಸಿಂಹಬಲ್ಲಾಳನ ದಂಡನಾಯಕನಾಗಿದ್ದನು. ಕಲ್ಲಕುರಿಕೆಯ ಮಾಯಿದೇವನು ಇವನ ತಂದೆ. ಗೌರಪ ದಂಡನಾಯಕನ ಅಕ್ಕನಾದ ಮಂಗತಿಯು ಇವನ ತಾಯಿ. ಗೌರಪನ ಮಗಳಾದ ಮಾದೇವಿಯು ಇವನ ಹೆಂಡತಿ. ಬೇಲೂರಿನಲ್ಲಿ ಒಂದು ಕೆರೆಯನ್ನು ಕಟ್ಟಿಸುವುದಕ್ಕೋಸ್ಕರ ಇವನು ಬಲ್ಲಾಳನಿಂದ ೧೨,೦೦೦ ಹೊನ್ನುಗಳನ್ನು ಇಸಕೊಂಡು ಒಬ್ಬ ಜಂಗಮನಿಗೆ ಕೊಟ್ಟುಬಿಟ್ಟನಂತೆ. ಮುಂದೆ ದೊರೆಯು ಕೆರೆಯಾಯಿತೇನು ಎಂದು ಕೇಳಲು ಅವನನ್ನು ಬೇಲೂರಿಗೆ ಕರಕೊಂಡು ಹೋಗಿ, ಶಿವನನ್ನು ಸ್ತುತಿಸಿ, ದೊರೆಗೆ ಕೆರೆಯನ್ನು ತೋರಿಸಿ, ಅಚ್ಚರಗೊಳಿಸಿದನಂತೆ. ಮತ್ತೊಮ್ಮೆ ತ್ರಿಭುವನತಾತನೆಂಬ ಒಬ್ಬ ಆಂಧ್ರ ಬ್ರಾಹ್ಮಣ ಪಂಡಿತನು ವಿಷ್ಣುವೇ ಪರದೈವವೆಂದು ವಾದಿಸುತ್ತ ದೋರಸಮುದ್ರಕ್ಕೆ ಬರಲು ಪದ್ಮರಸನು ದೋರಾಂಬುಧಿಯ ರಾಮಣ್ಣ, ಉಭಯಕವಿ ಶರಭ ಭೇರುಂಡ ರಾಘವ, ಹುಲಿಗೆರೆಯ ಮಾಯಿದೇವ ಪುರಾಣಭಟ್ಟ, ಅತಿರಸಿಕ ಕರ್ಣಾಭರಣ ಬುಧವರ, ಪದವಾಕ್ಯ ಪ್ರಮಾಣಜ್ಞ ದೇವರಸ ಪಂಡಿತ, ಹಂಪೆಯ ರಾಮಣ್ಣ ಅಥವಾ ರಾಮಿತಂದೆ, ಜಗದಾರಾಧ್ಯ ನಾಗಿದೇವ, ಅಷ್ಟಭಾಷಾಕವೀಶ್ವರ ಶಿವದಾಸ, ದಾವರಸ, ಶರಣಕವಿ, ಇವರೊಡನೆ ದೋರಸಮುದ್ರಕ್ಕೆ ಹೋಗಿ, ಶಿವಾದ್ವೈತ ಸಾಕಾರ, ಸಿದ್ಧಾಂತ ಸಾನಂದ ಚರಿತ್ರವೆಂಬ ಗ್ರಂಥವನ್ನು ರಚಿಸಿ, ತ್ರಿಭುವನತಾತನನ್ನು ಸೋಲಿಸಿ ಅವನನ್ನು ತನ್ನ ಶಿಷ್ಯನಾಗಿ ಮಾಡಿಕೊಂಡು, ಕಾಶಿಗೆ ಹೋಗಿ ವಿಶ್ವನಾಥನಲ್ಲಿ ಐಕ್ಯನಾದನು. ಇವನು ದೀಕ್ಷಾಬೋಧೆ ಎಂಬ ಗ್ರಂಥವನ್ನು ಬರೆದನು. ಅದರಲ್ಲಿ ರಗಳೆಗಳೂ ಕಂದಗಳೂ ಕೂಡಿ ೩೮೧ ಪದ್ಯಗಳಿವೆ.

**೧೧೧. ಬಾಲಚಂದ್ರ** (೧೧೭೦)—ಇವನು ಜೈನ ಕವಿಯಾಗಿದ್ದು ಜಿನಸ್ತುತಿಯನ್ನೂ, ಪ್ರಾಭೃತಕತ್ರಯ, ತತ್ವಾರ್ಥ, ಪರಮಾತ್ಮಪ್ರಕಾಶಿಕೆ ಮುಂತಾದ ಗ್ರಂಥಗಳಿಗೆ ಕನ್ನಡ ವ್ಯಾಖ್ಯಾನಗಳನ್ನೂ ಬರೆದಿದ್ದಾನೆ.

೧೧೨. **ನೇಮಿಚಂದ್ರ** (೧೧೭೦)—ಇವನು ಜೈನ ಕವಿ. ಹೊಯ್ಸಳ ವೀರಬಲ್ಲಾಳ(೧೧೭೩–೧೨೨೦)ನ ಆಸ್ಥಾನ ಕವಿಯಾಗಿದ್ದನು. ಈತನ ಮತ್ತೊಂದು ಹೆಸರು **ಅಂಗಿಕನೇಮಿ.** ಇವನಿಗೆ ಕವಿರಾಜಮಲ್ಲ, ಕಲಾಕಾಂತ, ಶೃಂಗಾರ ಕಾರಾಗೃಹ, ಸುಕವಿ ಕಂಠಾಭರಣ, ಭಾರತೀಚಿತ್ತಚೋರ ಮುಂತಾದ ಬಿರುದುಗಳಿದ್ದವು. ಲೀಲಾವತಿ, ಅರ್ಧನೇಮಿ ಇವೆರಡು ಇವನ ಗ್ರಂಥಗಳು. ಲೀಲಾವತಿಯು ೧೪ ಆಶ್ವಾಸಗಳುಳ್ಳ ಚಂಪೂ ಗ್ರಂಥವು. ಇದರ ಕಥೆಯು ಸುಬಂಧುವಿನ ವಾಸವದತ್ತೆಯನ್ನು ಕೆಲಮಟ್ಟಿಗೆ ಹೋಲುತ್ತದೆ. ಸಂಸ್ಕೃತ ಕಾದಂಬರಿಯ ಒಂದು ಓಲೆಯನ್ನು ಸುಟ್ಟು ಇದಕ್ಕೆ ಕಪ್ಪಿಟ್ಟರೆಂದು ದಂತಕಥೆಯುಂಟು. ಇವನ ಬಂಧವು ಗಂಭೀರವಾಗಿಯೂ ಶೃಂಗಾರರಸಭರಿತವಾಗಿಯೂ, ಹೃದಯಂಗಮವಾಗಿಯೂ ಇರುತ್ತದೆಂತಲೂ, ಇವನ ಪ್ರತಿಭೆಯೂ ಶಬ್ದಸಾಮಗ್ರಿಯೂ ವಾಗ್ಧೋರಣೆಯು ಅನ್ಯಾದೃಶವಾಗಿರುತ್ತದೆಂತಲೂ ಕವಿಚರಿತೆಕಾರರು ಅಭಿಪ್ರಾಯಪಡುತ್ತಾರೆ. ಹೊಯ್ಸಳ ವೀರಬಲ್ಲಾಳನ ಪ್ರಧಾನನೂ ಸಜ್ಜಿವಳ್ಳನೂ ಆದ ಪದ್ಮನಾಭನು ೨೨ನೆಯ ತೀರ್ಥಕರನ ಚರಿತವಾದ ನೇಮಿನಾಥಪುರಾಣವೆಂಬ "ಕೌಸ್ತುಭಕೆ ಸುಭಗ ವಲ್ಲಭನಾದಂ" ಎಂದು ಹೇಳುವುದರಿಂದ ಅವನೇ ಅದನ್ನು ಬರೆಯಿಸಿದನೆಂದು ಹೇಳಬಹುದು. "ಜಿನಕಥೆಯೊಳ್। ಸಂಧಿಸಿ ವಸುದೇವಾಚ್ಯುತ । ಕಂದರ್ಪರ ಕಥೆಗಳ ನಿತುಮಂ ವಿರಚಿಸುವೆಂ" ಎಂದು ಹೇಳಿ, ಕಂಸವಧೆಯ ವರೆಗೆ ೮ ಆಶ್ವಾಸಗಳನ್ನು ಮಾತ್ರ ಬರೆದುದರಿಂದ ಕವಿಯು ಗ್ರಂಥವನ್ನು ಮುಗಿಸದೆ ಸತ್ತನೆಂದು ಊಹಿಸಬಹುದು.

೧೧೩. **ಉರಿಲಿಂಗದೇವ** (೧೧೭೦)—ಇವನು ಹಿಂದೆ ಹೇಳಿದ ಶಿವಲೆಂಕ ಮಂಚಣ್ಣನ ಮಗನು. ಇವನು ೨೯ ವಚನಗಳನ್ನು ಬರೆದಿದ್ದಾನೆ.

೧೧೪–೧೧೮. **ಬಿಜ್ಜಯನಾಯಕ** (೧೧೭೨), **ಬೂಚಿರಾಜ** (೧೧೭೩), **ದೇವಪಾರ್ಯ** (೧೧೭೪), **ಶಾರದಿನಾಥಪಂಡಿತ** (೧೧೭೪), **ರೇವಣಮಂತ್ರಿ** (೧೧೭೫)—ಇವರು ಕವಿಗಳಾಗಿದ್ದರೆಂದು

ಶಾಸನಗಳಿಂದ ತಿಳಿದುಬಂದರೂ ಇವರ ಗ್ರಂಥಗಳಾವವು ಇನ್ನೂ ಸಿಕ್ಕಿಲ್ಲ.

**೧೧೯–೧೨೦. ಕೇಶವರಾಜ** ಮತ್ತು **ಚಾವಣ** (೧೧೮೦)—ಇವರಿಬ್ಬರು ಕೂಡಿ ರೇಚಣ ಚಮೂಪತಿಯ ಇಚ್ಛಾನುಸಾರವಾಗಿ ವರ್ಧಮಾನ ಪುರಾಣವನ್ನು ಬರೆಯಲಾರಂಭಿಸಿದರೆಂತಲೂ, ಮುಂದೆ ಕೇಶವರಾಜನ ಮಗನಾದ ಆಚಣ್ಣನು ಆ ಗ್ರಂಥವನ್ನು ಮುಗಿಸಿದನೆಂತಲೂ ತಿಳಿದುಬರುತ್ತದೆ.

**೧೨೧. ರುದ್ರಭಟ್ಟ** (೧೧೮೦? ೧೨೧೯?)*—ಇವನ ಹುಟ್ಟೂರಾಗಲಿ ಹೆತ್ತವರಾಗಲಿ ಇನ್ನೂ ಗೊತ್ತಾಗಿಲ್ಲ. ಇವನು ಬ್ರಾಹ್ಮಣ ಕವಿ; ಹೊಯ್ಸಳ ವೀರಬಲ್ಲಾಳನ ಮಂತ್ರಿಯಾದ ಚಂದ್ರಮೌಳಿಯೆಂಬುವನ ಆಶ್ರಯದಲ್ಲಿದ್ದು ತನ್ನ ಗ್ರಂಥಗಳನ್ನು ಬರೆದನು. ಇವನಿಗೆ ಕೃತಿಶಾರದಾಭ್ರಚಂದ್ರಾತಪ, ಕವಿರಾಜ ಎಂಬ ಬಿರುದುಗಳಿದ್ದುವು. ಇವನು ರಸಕಲಿಕೆ, ಜಗನ್ನಾಥವಿಜಯ ಎಂಬೆರಡು ಗ್ರಂಥಗಳನ್ನು ಬರೆದಿದ್ದರೂ ರಸಕಲಿಕೆಯು ಇನ್ನೂ ದೊರೆತಿಲ್ಲ. ಜಗನ್ನಾಥವಿಜಯವು ೧೮ ಆಶ್ವಾಸಗಳುಳ್ಳ ಚಂಪೂ ಗ್ರಂಥವಾಗಿದೆ. ಇವನ ಬಂಧವು ಪ್ರೌಢವಾಗಿಯೂ ಬಹಳ ಮಟ್ಟಿಗೆ ಜೈನ ಸರಣಿಯನ್ನು ಅನುಸರಿಸುವಂತಹದಾಗಿಯೂ ಇರುತ್ತದೆ.

**೧೨೨. ಉರಿಲಿಂಗಪೆದ್ದಿ** (೧೧೮೦)—ಇವನು ನಲ್ಲೂರಿ ಎಂಬ ಊರಿನವನು. ವಚನಗಳನ್ನು ಬರೆದಿದ್ದಾನೆ.

**೧೨೩. ಕುಮಾರ ಪದ್ಮರಸ** (೧೧೮೦)—ಇವನು ಕೆರೆಯ ಪದ್ಮರಸನ ಮಗನು. ಇವನನ್ನು ಶರಣಕವಿಯೆಂದು ಕರೆಯುತ್ತಿದ್ದರು. ಇವನು ಸ್ಕಂದಪುರಾಣದ ಕೆಲ ಭಾಗವನ್ನು ಕನ್ನಡಿಸಿ, ಸಾನಂದ ಚರಿತ್ರೆಯೆಂಬ ಷಟ್ಪದಿ ಗ್ರಂಥವನ್ನು ಬರೆದನು. ಸಾನಂದನೆಂಬ ಒಬ್ಬ ಋಷಿ

---

* ಮ॥ ರಾ॥ ಎ ವೆಂಕಟಸುಬ್ಬಯ್ಯನವರು ರುದ್ರಭಟ್ಟನು ೧೨೧೮–೧೯ರಲ್ಲಿ ಇದ್ದನೆಂದು ಅಭಿಪ್ರಾಯಪಡುತ್ತಾರೆ. ಪ್ರಬುದ್ಧ ಕರ್ನಾಟಕ, ಸಂ. ೮, ಸಂ. ೪, ಪು. ೧೧೩.

ಕುಮಾರನು ಪಂಚಾಕ್ಷರೀ ಮಂತ್ರದ ಮಹಿಮೆಯಿಂದ ನರಕದಲ್ಲಿದ್ದವರನ್ನು ಉದ್ಧರಿಸಿದನೆಂದು ಈ ಗ್ರಂಥದಲ್ಲಿ ವರ್ಣಿಸಿದೆ. ಇವನ ಬಂಧವು ಲಲಿತವಾಗಿದೆ.

೧೨೪. **ಬೊಪ್ಪಣಪಂಡಿತ** (೧೧೮೦)—ಇವನು ಜೈನ ಕವಿ. ಗೊಮ್ಮಟೇಶ್ವರನನ್ನು ೨೭ ವೃತ್ತಗಳಿಂದ ಸ್ತುತಿಸಿದ್ದಲ್ಲದೆ, ನಿರ್ವಾಣ ಲಕ್ಷ್ಮೀಪತಿ, ನಕ್ಷತ್ರಮಾಲಿಕೆ ಎಂಬ ೨೭ ವೃತ್ತಗಳನ್ನೂ ಹಲವು ನೀತಿಯ ಕಂದಗಳನ್ನೂ ಬರೆದಿದ್ದಾನೆ. ಇವನಿಗೆ ಸುಜನೋತ್ತಂಸ, ಕನ್ನಡಗವಿಬೊಪ್ಪ ಎಂಬ ಬಿರುದುಗಳಿದ್ದವು.

೧೨೫. **ಅಗ್ಗಳ** (೧೧೮೯)—ಇವನು ಜೈನ ಕವಿ. ಇವನ ಊರು ಇಂಗಳೇಶ್ವರ. ಇವನ ತಂದೆ ಶಾಂತೀಶ. ಇವನ ತಾಯಿ ಪೋಚಾಂಬಿಕೆ. ಶ್ರುತಿಕೀರ್ತಿ ತ್ರೈವಿದ್ಯರು ಇವನ ಗುರುಗಳು. ಇವನು ತನ್ನ ಗುರುವಿನ ಆಜ್ಞಾನುಸಾರವಾಗಿ ಚಂದ್ರಪ್ರಭಪುರಾಣವನ್ನು ಬರೆದನು. ಇದು ೮ನೆಯ ತೀರ್ಥಂಕರನಾದ ಚಂದ್ರಪ್ರಭನ ಚರಿತವು. ಇದರಲ್ಲಿ ೧೬ ಆಶ್ವಾಸಗಳಿರುತ್ತವೆ. ಈ ಗ್ರಂಥದ ಬಂಧವು ಅತಿಪ್ರೌಢವಾಗಿಯೂ ಸಂಸ್ಕೃತಪದ ಭೂಯಿಷ್ಠವಾಗಿಯೂ ಇರುತ್ತದೆ.

ಮೇಲಿನ ವಿವರಣೆಯಿಂದ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಕನ್ನಡದ ಸಾಹಿತ್ಯವು ವಿಶೇಷವಾಗಿ ಬೆಳೆಯಿತೆಂದು ಬರೆಯಲಿಕ್ಕೆ ಅಡ್ಡಿಯಿಲ್ಲ. ಸಾರ್ವಭೌಮರೂ, ಮಂತ್ರಿ ಸಾಮಂತ ದಂಡನಾಯಕರೂ ಕನ್ನಡ ಕವಿಗಳಿಗೆ ಉದಾರಾಶ್ರಯವನ್ನು ಇತ್ತುದಲ್ಲದೆ ತಾವೂ ಕನ್ನಡದ ಸಾಹಿತ್ಯದ ಸೇವೆಯನ್ನು ಕಯ್ಕೊಂಡರು. ೧ನೆಯ ಸೋಮೇಶ್ವರ ಕೇತಲದೇವಿಯರ ಮಗನಾದ ಕೀರ್ತಿವರ್ಮನೆಂಬ ರಾಜಕುಮಾರನು ಗೋವೈದ್ಯವೆಂಬ ಕನ್ನಡ ಗ್ರಂಥವನ್ನು ಬರೆದನು. ಚಾಳುಕ್ಯರು ಅಚ್ಚ ಕನ್ನಡಿಗರಾಗಿದ್ದರೆಂಬುದಕ್ಕೆ ಸಂದೇಹವಿಲ್ಲ.



# ಪರಿಶಿಷ್ಟ

## ಕಲ್ಯಾಣದ ಚಾಳುಕ್ಯರ ವಂಶಾವಳಿ

೪ನೆಯ ವಿಕ್ರಮಾದಿತ್ಯ
(ಬೊಂಥಾದೇವಿ)

|

೧. ನೂರ್ಮಡಿತೈಲ
(ಜಕ್ಕಲದೇವಿ)
೯೭೩–೯೯೭

|

೨. ಅಕಲಂಕಚರಿತ ಇರಿವಬೆಡಂಗ ಸತ್ಯಾಶ್ರಯ
(೯೯೭–೧೦೦೮)
(ಬಂಗಾರದವಳಾದ ಅಂಬಿಕೆ)

|

ಕುಂದಮರಸು

ದಶವರ್ಮ ಅಥವಾ ಯಶೋವರ್ಮ (ಭಾಗಲದೇವಿ)

|

೩. ತ್ರಿಭುವನಮಲ್ಲ
೫ ನೆಯ ವಿಕ್ರಮಾದಿತ್ಯ
(೧೦೦೯–೧೦೧೪)

೪. ಎರಡನೆಯ
ಅಯ್ಯಣಯ್ಯ
(೧೦೧೪–೧೦೧೫)

ಅಕ್ಕಾದೇವಿ
(ಒಬ್ಬ ಕದಂಬ
ಅರಸನನ್ನು ಮದುವೆ
ಯಾಗಿದ್ದಳು)
(೧೦೨೧–೧೦೫೦)

೫. ಜಗದೇಕಮಲ್ಲ
೨ ನೆಯ ಜಯಸಿಂಹ
(ಸುಗ್ಗಲದೇವಿ)
(೧೦೧೫–೧೦೪೨)

೬. ತ್ರೈಲೋಕ್ಯಮಲ್ಲ, ಆಹವಮಲ್ಲ ೧ ನೆಯ ಸೋಮೇಶ್ವರ
(೧. ಬಾಚಲದೇವಿ, ೨. ಚಂದಲಕಬ್ಬೆ, ೩. ಮೈಲಾಲದೇವಿ, ೪. ಹೊಯ್ಸಳದೇವಿ, ೫. ಕೇತಲದೇವಿ, ೧೦೪೨–೧೦೬೮)

ಹಮ್ಮಾ ಅಥವಾ ಅವ್ವಲದೇವಿ
(ಸೆವುಣದೇಶದ ಯಾದವ ಮನೆತನದ ೩ ನೆಯ ಭಿಲ್ಲಮನನ್ನು ಮದುವೆಯಾದಳು)

೭. ಭುವನೈಕಮಲ್ಲ
೨ ನೆಯ ಸೋಮೇಶ್ವರ
(೧೦೬೮–೧೦೭೬)

೮. ತ್ರಿಭುವನಮಲ್ಲ, ಪೆರ್ಮಾಡಿ
೬ ನೆಯ ವಿಕ್ರಮಾದಿತ್ಯ
(೧. ಸಾವಳದೇವಿ, ೨. ಲಕ್ಷ್ಮಾದೇವಿ, ೩. ಜಕ್ಕಲದೇವಿ, ೪. ಮಲ್ಲೆಯಮದೇವಿ, ೫. ಚಂದಲದೇವಿ, ೬. ಮಾಳಲದೇವಿ, ೭. ಎಂಗಲದೇವಿ ?)
(೧೦೭೬–೧೧೨೬)

೩ ನೆಯ ಜಯಸಿಂಹ
(೧೦೬೪–೧೦೮೧)

ವಿಷ್ಣುವರ್ಧನ
ವಿಜಯಾದಿತ್ಯ
(೧೦೬೪–೧೦೭೪)

ಕೀರ್ತಿವರ್ಮ
(೧೧೨೫)

ಜಯಕರ್ಣ
(೧೧೦೨–೧೧೨೩)

೯. ಭೂಲೋಕಮಲ್ಲ ೩ ನೆಯ ಸೋಮೇಶ್ವರ (೧೧೨೬–೧೧೩೮)

೧೦. ಹೆಮ್ಮಾಡಿದೇವ, ಪೆರ್ಮನೃಪ ಅಥವಾ ೨ನೆಯ
ಪೆರ್ಮಜಗದೇಕಮಲ್ಲ (೧೧೩೮–೧೧೪೯)

೧೧. ೩ ನೆಯ ಅಥವಾ ನೂರ್ಮಡಿತೈಲ (೧೧೫೦–೧೧೬೨)

೧೨. ೪ ನೆಯ ಅಥವಾ ವೀರಸೋಮೇಶ್ವರ (೧೧೬೩–೧೧೮೯)

ಮೈಳಾಲದೇವಿ
(ಗೋವೆಯ ಕದಂಬ ಮನೆತನದ ೨ ನೆಯ ಜಯಕೇಶಿಯನ್ನು ಮದುವೆಯಾಗಿದ್ದಳು.)

# ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರದ

## ಬೆಲೆ ಪಟ್ಟಿಯ ಪುರವಣಿ

---

### ೧ನೆ ವರ್ಗ—ಪದ್ಯ ಚಂಪೂ ಗ್ರಂಥಗಳು

| | ರೂ. | ಆ. | ಪೈ. |
|---|---|---|---|
| ೧. ಆರು ಶಾಸ್ತ್ರ ಟೀಕು (ನಿಜಗುಣಶಿವಯೋಗಿ) | ೮ | ೦ | ೦ |
| ೨. ಇಂಗ್ಲೀಷ್ ಗೀತಗಳು (ಶ್ರೀಕಂಠಯ್ಯ) | ೧ | ೮ | ೦ |
| ೩. ಕರ್ಣ ವೃತ್ತಾಂತ ಕಥೆ (ತಿರುಮಲಾರ್ಯ) | ೦ | ೧೦ | ೦ |
| ೪. ಕಿರಿಯ ಕಾಣಿಕೆ | ೧ | ೧೦ | ೦ |
| ೫. ಪದ್ಯಸಂಗ್ರಹ (ಬಾ. ಸಾ. ಮಂಡಲ) | ೦ | ೯ | ೦ |
| ೬. ಪಂಪ ಭಾರತ | ೨ | ೦ | ೦ |
| ೭. ಪಾರ್ವತೀಪರಿಣಯ (ಕನಮಡಿ) | ೦ | ೧೨ | ೦ |
| ೮. ಮೋಹನತರಂಗಿಣಿ (ಕನಕದಾಸ) | ೨ | ೧೨ | ೦ |
| ೯. ಯೋಗವಾಸಿಷ್ಠ | ೨ | ೮ | ೦ |
| ೧೦. ರಕ್ಷಾ ಶತಕ (ಹರೀಶ್ವರ) | ೦ | ೪ | ೦ |
| ೧೧. ಶ್ರೀ ಗುರುಚರಿತ್ರ (ಮುಡಕಟ್ಟಿ) | ೪ | ೦ | ೦ |
| ೧೨. ಶ್ರೀ ನರಸಿಂಹರಾಜ ಕರ್ನಾಟಕ ಛಂದೋರಾಜಂ | ೨ | ೦ | ೦ |
| ೧೩. ಸಮ್ಯಕ್ತ್ವ ಕೌಮುದಿ (ಮಂಗರಸ) | ೧ | ೧೨ | ೦ |
| ೧೪. ಸೌಂದರ ಪುರಾಣಂ (ಬೊಮ್ಮರಸ) | ೧ | ೮ | ೦ |
| ೧೫. ಹರಿಕಥಾಮೃತಸಾರ (ಜಗನ್ನಾಥದಾಸ) | ೦ | ೧೨ | ೦ |

### ೨ನೆ ವರ್ಗ—ಐತಿಹಾಸಿಕ ಗ್ರಂಥಗಳು

| | | | |
|---|---|---|---|
| ೧. ಅಕ್ಕಲಕೋಟ ಮಹಾರಾಜರು (ಕುಲಕರ್ಣಿ) | ೦ | ೮ | ೦ |
| ೨. ಅಪ್ಪಯ್ಯ ಸಮರ್ಥರ ಪುಣ್ಯಚರಿತ್ರೆ (ಮೂಡಭಟಕಳ) | ೦ | ೧೨ | ೦ |
| ೩. ಆಂಗ್ಲೇಯ ರಾಜ್ಯಭಾರ ಚರಿತ್ರೆ (ವೆಂಕಟರಾಮಯ್ಯ) | ೧ | ೨ | ೦ |
| ೪. ಕರ್ನಾಟಕ ಸಾಮ್ರಾಜ್ಯ ಸಂ. ೧ (ರಾ. ಹ. ದೇಶಪಾಂಡೆ) | ೨ | ೪ | ೦ |
| ೫. ,, ೨ ( ,, ) | ೨ | ೪ | ೦ |
| ೬. ಕರ್ನಾಟಕದ ಕೈಪಿಡಿ (ಭಾರದ್ವಾಜ) | ೧ | ೦ | ೦ |
| ೭. ಕರ್ನಾಟಕ ಕವಿಚರಿತ್ರೆ, ಸಂ. ೩ (ರಾ. ನರಸಿಂಹಾಚಾರ್ಯ) | ೪ | ೦ | ೦ |
| ೮. ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ | ೫ | ೫ | ೦ |
| ೯. ಗುರುಗೋವಿಂದಸಿಂಹ (ಕುಲಕರ್ಣಿ) | ೦ | ೧೨ | ೦ |
| ೧೦. ಜಕಣಾಚಾರ್ಯ | ೦ | ೧೪ | ೦ |
| ೧೧. ತ್ರಿಭುವನಮಲ್ಲ ವಿಕ್ರಮಾದಿತ್ಯ (ಕರಮರಕರ) | ೦ | ೪ | ೦ |
| ೧೨. ಬ್ರಹ್ಮಚೈತನ್ಯ ಮಹಾರಾಜರು (ಕರ್ಪೂರ) | ೦ | ೧೨ | ೦ |

| | ರೂ. | ಆ. | ಪೈ. |
|---|---|---|---|
| ೧೩. ಮೈಸೂರು ದೇಶದ ವಾಸ್ತುಶಿಲ್ಪ, ಭಾ. ೧ .. .. | ೫ | ೮ | ೦ |
| ೧೪. ಮುದ್ರಣ .. .. .. | ೨ | ೨ | ೦ |
| ೧೫. ಮೈಸೂರು ಮಹಾರಾಜರ ವಂಶಾವಳಿ, ಭಾ. ೧, ೨ .. | ೧ | ೮ | ೦ |
| ೧೬. ವಿಕ್ರಮಾರ್ಕಚರಿತಂ (ಸೀತಾರಾಮಶಾಸ್ತ್ರಿ) .. .. | ೧ | ೨ | ೦ |
| ೧೭. ಶ್ರೀಕೃಷ್ಣಾವಧೂತರು (ಕರ್ಪೂರ) .. .. | ೦ | ೮ | ೦ |
| ೧೮. ಶ್ರೀ ವಿದ್ಯಾರಣ್ಯಸ್ವಾಮಿಗಳು (ಹುಲಕವಿ) .. .. | ೧ | ೦ | ೦ |
| ೧೯. ಸಂತ ತುಕಾರಾಮ (ಕರ್ಪೂರ) .. .. | ೧ | ೦ | ೦ |
| ೨೦. ಹಿಂದೂದೇಶದ ಶಾಸನಪದ್ಧತಿ (ನಾಯಿಕ) .. .. | ೧ | ೨ | ೦ |

### ೩ನೆ ವರ್ಗ—ಪೌರಾಣಿಕ ಗ್ರಂಥಗಳು

| | | | |
|---|---|---|---|
| ೧. ಗುರುಕಥಾ ಕಲ್ಪತರು, ಭಾ. ೧, ೨ .. .. | ೨ | ೪ | ೦ |
| ೨. ತುಲಸೀರಾಮಾಯಣಾಮೃತ (ಗಳಗನಾಥ) .. .. | ೩ | ೦ | ೦ |
| ೩. ನವನಾಥ ಭಕ್ತಿಸಾರ (ಅಲಗೂರ) .. .. | ೨ | ೮ | ೦ |
| ೪. ಭಾಗವತಾಮೃತ (ಗಳಗನಾಥ) .. .. | ೩ | ೮ | ೦ |
| ೫. ಭೀಷ್ಮ ಚರಿತೆ (ಚ. ವಾಸುದೇವಯ್ಯ) .. .. | ೧ | ೧೦ | ೦ |
| ೬. ಶಿವಲೀಲಾಮೃತ ಕಥೆಗಳು (ಹೊನ್ನಾಪುರ ಮಠ) .. | ೦ | ೧೦ | ೦ |
| ೭. ಶ್ರೀ ಕಾಲಿಕಾದೇವಿ ಪುರಾಣ (ಚಿದಾನಂದಾವಧೂತ) .. | ೧ | ೪ | ೦ |
| ೮. ಶ್ರೀ ವಿಷ್ಣುಪುರಾಣ ಪ್ರಬಂಧಂ (ಚಿಕುಪಾಧ್ಯಾಯ) .. | ೩ | ೧೨ | ೦ |
| ೯. ಶ್ರೀ ಭಾಗವತ ಟೀಕು, ೧೦ ಸ್ಕಂಧ (ರಾಮಶೇಷಶಾಸ್ತ್ರಿ) .. | ೩೨ | ೮ | ೦ |
| ೧೦. ಸಚಿತ್ರ ಯಮಶಾಸನ (ಕಿತ್ತೂರ) .. .. | ೦ | ೧೨ | ೦ |

### ೪ನೆ ವರ್ಗ—ನಾಟಕಗಳು

| | | | |
|---|---|---|---|
| ೧. ಅಭಿಷೇಕ ನಾಟಕ (ಸುಂದರಶಾಸ್ತ್ರಿ) .. .. | ೦ | ೬ | ೦ |
| ೨. ಉತ್ತರರಾಮಚರಿತ್ರೆ (ಮುಳಬಾಗಲ) .. .. | ೦ | ೧೨ | ೦ |
| ೩. ಕಬೀರದಾಸ (ಗರುಡ) .. .. .. | ೧ | ೦ | ೦ |
| ೪. ಗಜರಾನಾಟಕ (ಹಂಪೀಹೊಳಿ) .. .. | ೧ | ೦ | ೦ |
| ೫. ಕೌಮುದೀನಾಟಕ ( ,, ) .. .. | ೧ | ೪ | ೦ |
| ೬. ಪತಿವಶೀಕರಣ (ಕೆರೂರ) .. .. .. | ೦ | ೧೨ | ೦ |
| ೭. ಪ್ರತಿಮಾನಾಟಕ (ಸೀತಾರಾಮಶಾಸ್ತ್ರಿ) .. .. | ೦ | ೧೪ | ೦ |
| ೮. ಭ್ರಾತೃಪ್ರೇಮ (ರಾಮಕೃಷ್ಣ) .. .. .. | ೦ | ೧೨ | ೦ |
| ೯. ಮೀರಾಬಾಯಿ (ಶ್ರೀನಿವಾಸಯ್ಯಂಗಾರ) .. .. | ೦ | ೮ | ೦ |
| ೧೦. ವಿಗಡ ವಿಕ್ರಮರಾಯ (ಸಂಸ) .. .. .. | ೧ | ೦ | ೦ |
| ೧೧. ಸ್ವಪ್ನವಾಸವದತ್ತ (ಅಳಸಿಂಗ್ರಾಚಾರ) .. .. | ೦ | ೧೪ | ೦ |
| ೧೨. ಸ್ವಾಮಿನಿಷ್ಠೆ (ರಾಮಕೃಷ್ಣ) .. .. .. | ೦ | ೧೧ | ೦ |

ನಮ್ಮಲ್ಲಿ ಇನ್ನೂ ಅನೇಕ ಪುಸ್ತಕಗಳು ದೊರೆಯುತ್ತವೆ.

3444—29. ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ.

3444-29. ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ